ಶ್ರೀ ಅರವಿಂದರ

# ಗೀತಾದರ್ಶನ

ಭಾಗ ೧

ಸಾರಸ  ವಿಹಾರ

ಪ್ರಕಾಶಕರು
ಸರಸ್ವತಿಪುರಂ, ಮೈಸೂರು-೯



ಶ್ರೀ ಅರವಿಂದರ

# ಗೀತಾದರ್ಶನ

## (ಗೀತಾತಾತ್ಪರ್ಯದೀಪಿಕೆ)

ಶ್ರೀ ಅರವಿಂದರ "Essays on the Gita" - First Series
ಗ್ರಂಥದ ಭಾವಾನುವಾದ

ಅನುವಾದಕರು:
ಅಗರಂ ವೆಂಕಟರಾಮು ಪಂಡಿತರು, ಎ. ವೆಂಕಟಸುಬ್ಬಯ್ಯ,
ಎ. ವೆಂಕಟರಾಂ



ಸಾರಸ ವಿಹಾರ, ಮೈಸೂರು - ೫

# ಪ್ರಕಾಶಕರ ಅರಿಕೆ

ಭಗವದ್ಗೀತೆ ಒಂದು ಲೋಕಪೂಜ್ಯವಾದ ಗ್ರಂಥ. ಅದು ಮೂಡಿದಂದಿನಿಂದ ಇಂದಿನ ತನಕ ಅದನ್ನು ಶ್ರದ್ಧೆಯಿಂದ ಅಭ್ಯಸಿಸಿ ಅಸಂಖ್ಯಾತ ಜನರು ಬೆಳಕು ಕಂಡಿದ್ದಾರೆ. ಅಲ್ಲದೆ ಮಹಾಮಹಾ ಪಂಡಿತರೂ, ಆಚಾರ್ಯರೂ ಪರಂಪರಾಗತವಾಗಿ ಅದಕ್ಕೆ ತಮ್ಮ ವ್ಯಾಖ್ಯಾನ, ಭಾಷ್ಯಗಳ ಕೈಂಕರ್ಯವನ್ನು ಸಲ್ಲಿಸಿ ಅದರ ಮಹತ್ತನ್ನು ಗುರುತಿಸಿದ್ದಾರೆ. ಶ್ರೀ ಮಹರ್ಷಿ ಅರವಿಂದರೂ ತಮ್ಮ ಕವಿಸಹಜವಾದ ದರ್ಶನದಿಂದ ಬರೆದ The Essays on the Gita ಎನ್ನುವ ಗ್ರಂಥ ಈ ಪರಂಪರೆಯಲ್ಲಿ ಒಂದು ಅಮೂಲ್ಯ ಕೃತಿಯಾಗಿರುವುದರ ಜೊತೆಗೆ ಧಾರ್ಮಿಕ ಸಾಹಿತ್ಯಕ್ಕೆ ಒಂದು ಅಪೂರ್ವವಾದ ಕೊಡುಗೆಯೂ ಆಗಿದೆ.

ಇಂತಹ ಮಹತ್ಕೃತಿಯನ್ನು ಶ್ರೀಗಳಾದ ಡಾ. ಎ. ವೆಂಕಟಸುಬ್ಬಯ್ಯ, ಡಾ. ಅಗರಂ ವೆಂಕಟರಾಮಾ ಪಂಡಿತ್ ಮತ್ತು ಶ್ರೀ. ಎ. ವೆಂಕಟರಾಂ ಅವರು ಅತ್ಯಂತ ಶ್ರದ್ಧೆಯಿಂದ, ಶ್ರಮವಹಿಸಿ ಕನ್ನಡಕ್ಕೆ ಅನುವಾದಮಾಡಿದ್ದಾರೆ. ಅದರಲ್ಲಿಯೂ ಅನುವಾದದ ಪ್ರಾರಂಭದ ಶುಭ ಸಂಕಲ್ಪದಿಂದ ಹಿಡಿದು ಕೃತಿ ಅಚ್ಚಾಗಿ ಬೆಳಕು ಕಾಣುವವರೆಗೂ ದುಡಿದಿರುವ ಕೀರ್ತಿ ಸಲ್ಲಬೇಕಾದದ್ದು ಡಾ. ಎ. ವೆಂಕಟರಾಮಾ ಪಂಡಿತರಿಗೆ. ತಮ್ಮ ವಾರ್ಧಕ್ಯದಲ್ಲಿ ದೇಹಶ್ರಮವನ್ನು ಸ್ವಲ್ಪವೂ ಲೆಕ್ಕಿಸದೆ ವಿಶೇಷವಾಗಿ ಹಣವನ್ನು ವ್ಯಯಮಾಡಿ ಈ ಉದ್ಯಮ ಕೊನೆಮುಟ್ಟುವಂತೆ ಮಾಡಿದ್ದಾರೆ. ಮತ್ತು ಪುಸ್ತಕವನ್ನು ನಮ್ಮ ಮಾಲೆಯಲ್ಲಿ ಪ್ರಕಟಿಸಲು ಅತ್ಯಂತ ಉದಾರತೆಯಿಂದ ಸಮ್ಮತಿಸಿ ನಮ್ಮನ್ನು ಉಪಕೃತರನ್ನಾಗಿ ಮಾಡಿದಾರೆ. ಕನ್ನಡಕ್ಕೆ ಅನುವಾದಿತವಾದ ಈ ಕೃತಿಯನ್ನು ನಾವು ಪ್ರಕಟಿಸಲು ಪಾಂಡಿಚೆರಿಯ ಅರವಿಂದಾಶ್ರಮದ ಕಾರ್ಯದರ್ಶಿಯವರು ನಾವು ಬೇಡಿದೊಡನೆ ಕೃಪೆಯಿಟ್ಟು ಅನುಮತಿ ನೀಡಿದ್ದಾರೆ. ಮತ್ತು ಶ್ರೀ ಅರವಿಂದರ ಭಾವಚಿತ್ರವನ್ನು ಕಳುಹಿಸಿ ಉಪಕಾರಮಾಡಿದ್ದಾರೆ. ಈ ಎಲ್ಲರಿಗೂ ನಾವು ಅತ್ಯಂತ ಕೃತಜ್ಞರಾಗಿದ್ದೇವೆ.

ಪ್ಲವ ಸಂವತ್ಸರ ಭಾದ್ರಪದ ಶುದ್ಧ ವಿನಾಯಕ
ಚತುರ್ಥಿ, ಬುಧವಾರ, ೧೩-೯-೧೯೬೧

ಪ್ರಕಾಶಕರು,
ಸಾರಸ ವಿಹಾರ, ಮೈಸೂರು-೪

# ಮುನ್ನುಡಿ

ಹಿಂದಿನ ಕಾಲದಲ್ಲಿ ಸತ್ಯಾನ್ವೇಷಿಗಳಾದ ಜನರು ಜ್ಞಾನಾರ್ಜನೆಯನ್ನು ಮಾಡುವುದಕ್ಕೆ ಮುಂಚಿತವಾಗಿಯೇ ಕೆಲವು ಶಿಕ್ಷಣವನ್ನು ಪಡೆಯುತ್ತಲಿದ್ದರು.




ಅಂದರೆ ಶಿಕ್ಷೆ, ವ್ಯಾಕರಣ, ಛಂದಸ್ಸು, ನಿರುಕ್ತ, ಜ್ಯೋತಿಷ ಮೊದಲಾದ ವೇದಾಂಗಗಳನ್ನೂ ಸಾಂಖ್ಯ, ಯೋಗ, ನ್ಯಾಯ, ವೈಶೇಷಿಕ, ಪೂರ್ವಮೀಮಾಂಸಾ, ಉತ್ತರ ಮೀಮಾಂಸಾ ಮುಂತಾದ ಷಡ್ದರ್ಶನಗಳನ್ನೂ ಅಭ್ಯಾಸ ಮಾಡುತ್ತಿದ್ದರು. ಈ ಶಾಸ್ತ್ರಗಳ ಮೇಲೆಯೇ ಬರುವ ಸಂದೇಹಗಳನ್ನು ತ್ರಿಮತಸ್ಥರಾದ ಮಹನೀಯ ಆಚಾರ್ಯರು ನಿವೃತ್ತಿಮಾಡಿ ಅವುಗಳಲ್ಲಿನ ಪರಸ್ಪರ ವಿರೋಧಗಳನ್ನು ಸಮನ್ವಯಮಾಡಿ ಅವರನ್ನು ಮೋಕ್ಷಮಾರ್ಗಕ್ಕೆ ಕರೆದೊಯ್ಯುತ್ತಿದ್ದರು. ಈ ಶಾಸ್ತ್ರಗಳಲ್ಲಿ ಇಲ್ಲದಂಥ, ಈಗಿನ ಕಾಲದ ನಮ್ಮ ವಿದ್ಯಾಭ್ಯಾಸ ಕ್ರಮದಿಂದ ಏಳುತ್ತಿರುವ, ತೊಡಕುಗಳಿಗೆ ಈ ಆಚಾರ್ಯರ ಗ್ರಂಥಗಳಿಂದ ಹೆಚ್ಚಿನ ಸಮಾಧಾನವು ದೊರಕದೇ ಇರುವುದು ಸಹಜವಾಗಿಯೇ ಇದೆ.

ಈಗ ಸುಮಾರು ೭೫ ವರ್ಷಗಳಿಂದಲೂ ಪಾಶ್ಚಾತ್ಯ ವಿದ್ವಾಂಸರು ಶ್ರೀಮದ್ಭಗವದ್ಗೀತೆಯನ್ನು ಅಧ್ಯಯನಮಾಡಿ ಅದರ ಆನಂದವನ್ನು ಸವಿದು, ಶಾಂತಿಯನ್ನು ಹೊಂದಿ, ಅನೇಕ ಗ್ರಂಥಗಳನ್ನು ರಚಿಸಿ ತಮ್ಮ ಮೆಚ್ಚಿಗೆಯನ್ನು ಪ್ರಪಂಚಕ್ಕೆ ತಿಳಿಸಿದಾಗ, ನಾವು ಎಚ್ಚೆತ್ತು ನಮಗೂ ಶ್ರೀಭಗವದ್ಗೀತೆಯನ್ನು ಅಧ್ಯಯನ ಮಾಡಬೇಕೆಂಬ ಆಕಾಂಕ್ಷೆಯೂ ಉತ್ಸಾಹವೂ ಉಂಟಾದುವು. ಬಹಳ ಶ್ರದ್ಧೆಯಿಂದ ನಾವು ಆ ಗ್ರಂಥವನ್ನು ಪಠಣಮಾಡಿ ಮನನಮಾಡಲು ತೊಡಗಿದಾಗ ನಮಗೆ ವಿಧವಿಧವಾದ ಸಂದೇಹಗಳು ಉತ್ಪನ್ನವಾಗುವವು. ಇವುಗಳಲ್ಲಿ ಕೆಲವನ್ನು ಮಾತ್ರ ಇಲ್ಲಿ ಉದಾಹರಿಸುತ್ತೇವೆ.

೧

**ಸಮೋಽಹಂ ಸರ್ವಭೂತೇಷು ನಮೇದ್ವೇಷ್ಯೋಽಸ್ತಿ ನಪ್ರಿಯಃ ।**
(ಭಗವದ್ಗೀತೆಯ ಅಧ್ಯಾಯ ೯, ಶ್ಲೋಕ ೨೯) ಇದರಲ್ಲಿ ಮೂರು ಅಂಶಗಳಿವೆ. (೧) ಸಮೋಹಂ ಸರ್ವಭೂತೇಸು (೨) ಮೇ ದ್ವೇಷ್ಯಃ ನ ಅಸ್ತಿ (೩) ಪ್ರಿಯಃ ನ ಅಸ್ತಿ.

(೧) ಅಂದರೆ ನಾನು ಎಲ್ಲಾ ಪ್ರಾಣಿಗಳಲ್ಲಿಯೂ ಸಮನಾಗಿದ್ದೇನೆ. (೨) ನಾನು ದ್ವೇಷಿಸುವನು ಯಾರೂ ಇಲ್ಲ. (೩) ನನಗೆ ಪ್ರಿಯನೂ ಯಾರೂ ಇಲ್ಲ.

ಈ ಶ್ಲೋಕವನ್ನು ನಾವು ಮನನಮಾಡಿ ಮುಂದುವರಿದರೆ—

**"ಸಂತುಷ್ಟಃ ಸತತಂ ಯೋಗೀ ಯತಾತ್ಮಾ ದೃಢನಿಶ್ಚಯಃ । ಮಯ್ಯರ್ಪಿತಮನೋಬುದ್ಧಿರ್ಯೋಮದ್ಭಕ್ತಃ ಸಮೇ ಪ್ರಿಯಃ ॥೧೪॥ ಯಸ್ಮಾನ್ನೋದ್ವಿಜತೇ ಲೋಕೋಲೋಕಾನ್ನೋದ್ವಿಜತೇ ಚ ಯಃ । ಹರ್ಷಾಮರ್ಷಭಯೋದ್ವೇಗೈರ್ಮುಕ್ತೋ ಯಃ ಸ ಚ ಮೇ ಪ್ರಿಯಃ ॥೧೫॥ ಅನಪೇಕ್ಷಃ ಶುಚಿರ್ದಕ್ಷ ಉದಾಸೀನೋ ಗತವ್ಯಥಃ । ಸರ್ವಾರಂಭ ಪರಿತ್ಯಾಗೀ ಯೋ ಮದ್ಭಕ್ತಃ ಸ ಮೇ ಪ್ರಿಯಃ ॥೧೬॥ ಯೋ ನ ಹೃಷ್ಯತಿ ನ ದ್ವೇಷ್ಟಿ ನ ಶೋಚತಿ ನ ಕಾಂಕ್ಷತಿ । ಶುಭಾಶುಭಪರಿತ್ಯಾಗೀ ಭಕ್ತಿಮಾನ್ ಯಃ ಸ ಮೇ ಪ್ರಿಯಃ ॥೧೭॥** (ಅ. ೧೨) ಇದನ್ನು ನಾವು ಒಪ್ಪಿಕೊಂಡರೂ ಕೂಡ ಮುಂದೆ,

**"ಯೇ ತು ಧರ್ಮ್ಯಾಮೃತಮಿದಂ ಯಥೋಕ್ತಂ ಪರ್ಯುಪಾಸತೇ । ಶ್ರದ್ದಧಾನಾ ಮತ್ಪರಮಾ ಭಕ್ತಾಸ್ತೇಽತೀವ ಮೇ ಪ್ರಿಯಾಃ"** (ಅ. ೧೨) ಪ್ರಿಯರಲ್ಲಿಯೂ ಅತ್ಯಂತ ಪ್ರಿಯನೆಂದು ಸಹ ಹೇಳಿರುತ್ತದೆ.

**"ತಾನಹಂ ದ್ವಿಷತಃ ಕ್ರೂರಾನ್ ಸಂಸಾರೇಷು ನರಾಧಮಾನ್ । ಕ್ಷಿಪಾಮ್ಯಜಸ್ರಮಶುಭಾನಾಸುರೀಷ್ವೇವ ಯೋನಿಷು । ಆಸುರೀಂ ಯೋನಿಮಾಪನ್ನಾಃ ಮೂಢಾ ಜನ್ಮನಿ ಜನ್ಮನಿ । ಮಾಮಪ್ರಾಪ್ಯೈವ ಕೌಂತೇಯ ತತೋ ಯಾಂತ್ಯಧಮಾಂ ಗತಿಂ ॥"** (ಅ ೧೬, ಶ್ಲೋ. ೧೯-೨೦) ನಾನು ಯಾರನ್ನೂ ದ್ವೇಷಿಸುವುದಿಲ್ಲವೆಂದು ಹೇಳಿದ್ದರೂ ಇಲ್ಲಿ, "ನನ್ನನ್ನು ದ್ವೇಷಿಸುವ ಕ್ರೂರ ದುಷ್ಟ ನರಾಧಮರನ್ನು ನಾನು ಸದಾ ಕಾಲವೂ ಆಸುರೀಯೋನಿಯಲ್ಲಿಯೇ ಹಾಕುತ್ತೇನೆ. ಆಸುರೀಯೋನಿಯನ್ನು ಹೊಂದಿದ ಆ ಮೂಢರು ಜನ್ಮಜನ್ಮದಲ್ಲಿಯೂ ನನ್ನನ್ನು ಹೊಂದದೆ ಅದಕ್ಕಿಂತ ಅಧಮ(ಕೀಳು)ವಾದ ಗತಿಯನ್ನು ಹೊಂದುತ್ತಾರೆ." ಇದು ದ್ವೇಷೋದ್ರೇಕದ ಮಾತಲ್ಲವೆಂದು ತಿಳಿಯುವುದು ಕಷ್ಟ.

## ೨. ಕರ್ಮ

**ಯೇಽಪ್ಯನ್ಯದೇವತಾಭಕ್ತಾ ಯಜಂತೇ ಶ್ರದ್ಧಯಾನ್ವಿತಾಃ । ತೇಽಪಿ ಮಾಮೇವ ಕೌಂತೇಯ ಯಜಂತ್ಯವಿಧಿಪೂರ್ವಕಂ ॥ ಅಹಂ ಹಿ ಸರ್ವಯಜ್ಞಾನಾಂ ಭೋಕ್ತಾ ಚ ಪ್ರಭುರೇವ ಚ ॥** (ಅ. ೯, ಶ್ಲೋ. ೨೩-೨೪) ಎಂದು ಹೇಳಿದೆ. ಇದನ್ನು ನಾವು ಶ್ರವಣಮಾಡಿ ಅರಗಿಸಿಕೊಂಡು ಮುಂದುವರಿದರೆ,

**ಯಾಂತಿ ದೇವವ್ರತಾ ದೇವಾನ್ ಪಿತೄನ್ ಯಾಂತಿ ಪಿತೃವ್ರತಾಃ ।**

**ಭೂತಾನಿ ಯಾಂತಿ ಭೂತೇಜ್ಯಾಃ ಯಾಂತಿ ಮದ್ಯಾಜಿನೋಽಪಿ ಮಾಂ ||** (ಅ. ೯, ಶ್ಲೋ. ೨೫) ಎಂದು ಹೇಳಿ ಹಾಗೂ, **ಕರ್ಮಣೈವ ಹಿ ಸಂಸಿದ್ಧಿ ಮಾಸ್ಥಿತಾ ಜನಕಾದಯಃ । ಲೋಕಸಂಗ್ರಹಮೇವಾಪಿ ಸಂಪಶ್ಯನ್ ಕರ್ತುಮರ್ಹಸಿ || ಯದ್ಯದಾಚರತಿಶ್ರೇಷ್ಠಸ್ತತ್ತದೇವೇತರೋಜನಃ । ಸ ಯತ್ಪ್ರಮಾಣಂ ಕುರುತೇ ಲೋಕಸ್ತದನುವರ್ತತೇ || ನಮೇ ಪಾರ್ಥಾಸ್ತಿ ಕರ್ತವ್ಯಂ ತ್ರಿಷು ಲೋಕೇಷು ಕಿಂಚನ । ನಾನವಾಪ್ತಮ ವಾಪ್ತವ್ಯಂ ವರ್ತ ಏವ ಚ ಕರ್ಮಣಿ । ಯದಿ ಹ್ಯಹಂ ನ ವರ್ತೇಯಂ ಜಾತು ಕರ್ಮಣ್ಯತಂದ್ರಿತಃ || ಮಮ ವರ್ತ್ಮಾನುವರ್ತಂತೇ ಮನುಷ್ಯಾಃ ಪಾರ್ಥ ಸರ್ವಶಃ || ಉತ್ಸೀದೇಯುರಿಮೇ ಲೋಕಾಃ ನ ಕುರ್ಯಾಂ ಕರ್ಮ ಚೇದಹಂ** (ಅ. ೩, ಶ್ಲೋ. ೨೦-೨೪) ಎಂದು ಬೋಧಿಸಿ ಕರ್ಮವನ್ನೇ ಆಚರಿಸಬೇಕೆಂದೂ, ಅದರಿಂದಲೇ ಪರಮಪುರುಷಾರ್ಥ ಸಿದ್ಧಿಯಾಗುವುದೆಂದೂ ವಿವರಿಸಿದೆ.

## ೩. ಜ್ಞಾನ

**ಅಜ್ಞಾನೇನಾವೃತಂ ಜ್ಞಾನಂ ತೇನ ಮುಹ್ಯಂತಿ ಜಂತವಃ** (ಅ. ೫, ಶ್ಲೋ. ೧೫) ಜ್ಞಾನವನ್ನು ಅಜ್ಞಾನವೆಂಬ ತೆರೆಯು ಮುಚ್ಚಿರುವುದರಿಂದ ನಮಗೆ ಮೋಹವು ಉಂಟಾಗುತ್ತದೆ. ಅದರಿಂದ ನಮಗೆ ಅನೇಕ ಸಂಶಯಗಳು ಉಂಟಾಗುತ್ತವೆ. **'ನ ಹಿ ಜ್ಞಾನೇನ ಸದೃಶಂ ಪವಿತ್ರಮಿಹ ವಿದ್ಯತೇ'** (ಅ. ೪, ಶ್ಲೋ. ೩೮) ಎಂದೂ ಹೇಳಿರುತ್ತದೆ. ಮೇಲಿನ ಹೇಳಿಕೆಯಿಂದ ನಮ್ಮ ಸಂಶಯವು ನಿವಾರಣೆಯಾದರೆ ನಮ್ಮ ಇಷ್ಟಾರ್ಥವು ಕೈಗೂಡುವುದು. " **ತಸ್ಮಾದಜ್ಞಾನಸಂಭೂತಂ ಹೃತ್‌ಸ್ಥಂ ಜ್ಞಾನಾಸಿನಾತ್ಮನಃ । ಛಿತ್ವೈನಂ ಸಂಶಯಂ ಯೋಗಮಾತಿಷ್ಠೋತ್ತಿಷ್ಠ ಭಾರತ ||** (ಅ. ೪. ಶ್ಲೋ ೪೨) " ಆದುದರಿಂದ ಅಜ್ಞಾನದಿಂದ ಮನಸ್ಸಿನಲ್ಲಿ ಹುಟ್ಟಿರುವ ಸಂಶಯವನ್ನು ಜ್ಞಾನವೆಂಬ ಖಡ್ಗದಿಂದ ಕಡಿದುಹಾಕಿ ಈ ಜ್ಞಾನಯೋಗವನ್ನು ಆಚರಿಸು, ಏಳು " ಎಂದು ಜ್ಞಾನದಿಂದಲೇ ಪರಮಪುರುಷಾರ್ಥವು ನಮಗೆ ದೊರಕುತ್ತದೆಯೆಂದು ಬೋಧಿಸುತ್ತದೆ.

## ೪. ಭಕ್ತಿ

**ಭಕ್ತ್ಯಾತ್ವನನ್ಯಯಾ ಶಕ್ಯಃ ಅಹಮೇವಂವಿಧೋಽರ್ಜುನ । ಜ್ಞಾತುಂ ದ್ರಷ್ಟುಂ ಚ ತತ್ತ್ವೇನ ಪ್ರವೇಷ್ಟುಂ ಚ ಪರಂತಪ ||** ( ಅ. ೧೧ ಶ್ಲೋ. ೫೪) ಭಕ್ತಿಯಿಂದಲೇ ಪರಮಪುರುಷಾರ್ಥವು ಲಭಿಸುತ್ತದೆಂದು ಭಗವಂತನು ಹೇಳಿರುತ್ತಾನೆ. ಈ ರೀತಿಯಾದ ತೊಡಕುಗಳು ನಮಗೆ ಈಗಿನ ವಿದ್ಯಾಭ್ಯಾಸ ಕ್ರಮದಿಂದ ಉಂಟಾಗಿವೆ.

ಈ ರೀತಿ ತೊಡಕುಗಳುಂಟಾಗುವುದಕ್ಕೆ ಮತ್ತೊಂದು ಮುಖ್ಯಕಾರಣವಿದೆ. ಒಂದು ವಿದ್ಯೆಯನ್ನು ಕಲಿಯಬೇಕಾದರೆ ಆ ವಿದ್ಯೆಯನ್ನು ಕಲಿಯಲು ತಕ್ಕ ಅರ್ಹತೆಯನ್ನು ನಾವು ಸಂಪಾದಿಸಿಕೊಳ್ಳಬೇಕು. ಎಲ್ಲಾ ಆಚಾರ್ಯರೂ ವೇದಾಂತಶಾಸ್ತ್ರವನ್ನು ತಿಳಿಯಲು ವಿವೇಕ, ವೈರಾಗ್ಯ, ಶಮಾದಿಷಟ್ಸಂಪತ್ತಿ, ಮುಮುಕ್ಷುತ್ವ ಇವುಗಳು ಆಗತ್ಯವೆಂಬುದನ್ನು ಉಪದೇಶಿಸುತ್ತಾರೆ. ಇವುಗಳಲ್ಲಿ ನಾವು ಯಾವುದನ್ನೂ ಹೊಂದಲಿಲ್ಲ. ಹೊಂದಲು ಪ್ರಯತ್ನಮಾಡಲೂ ಸಿದ್ಧರಾಗಿಲ್ಲ. ಇಂತಹವರಿಗೆ ಗೀತೆಯ ಬೋಧನೆಯನ್ನು ಹೇಳಲೇ ಕೂಡದು. ಗೀತೆಯಲ್ಲಿಯೇ ಭಗವಂತನು, "**ಇದಂ ತೇ ನ ಅತಪಸ್ಕಾಯ ನ ಅಭಕ್ತಾಯ ಕದಾಚನ।** (ಅ. ೧೮. ಶ್ಲೋ. ೬೭) ಎಂದು ಹೇಳಿರುತ್ತಾನೆ. ಇಂಗ್ಲೀಷಿನಲ್ಲಿಯು "Cast not pearls before swine" ಎಂಬ ವಾಕ್ಯವೂ ಇದೇ ಅರ್ಥವನ್ನು ಸೂಚಿಸುತ್ತದೆ.

**ನ ಅವಿರತಃ ದುಶ್ಚರಿತಾತ್ ನ ಅಶಾಂತಃ ನ ಅಸಮಾಹಿತಃ ನ ಅಶಾಂತಮಾನಸಃ ವಾ ಅಪಿ ಪ್ರಜ್ಞಾನೇನ ಏನಂ ಆಪ್ನುಯಾತ್**(ಕಠ.ಉ.) ದುರಭ್ಯಾಸ, ದುರ್ನಡತೆಗಳನ್ನು ಬಿಡದವನೂ, ಶಮಾದಿಗುಣವಿಲ್ಲದವನೂ, ಏಕಾಗ್ರ ಚಿತ್ತವಿಲ್ಲದವನೂ, ಮನಶ್ಶಾಂತಿ ಇಲ್ಲದವನೂ, ಬ್ರಹ್ಮವನ್ನು ಹೊಂದಲಾರನು; ಎಂದು ಹೇಳಿರುವಂತೆ ನಾವು ನಮ್ಮ ಕೆಟ್ಟ ಅಭ್ಯಾಸವನ್ನು ಬಿಡಬೇಕು. ಇದೂ ತಪಸ್ಸೇ, "ತಪ್ಯತೇ ಇತಿ ತಪಃ" ಅಂದರೆ ಸುಡುವುದು ಎಂದು ಅರ್ಥ. ಇದರಿಂದ ನಮಗೆ ಕಾಯಕ್ಲೇಶ ಉಂಟಾಗುವುದು. ಒಬ್ಬ ಇಂಗ್ಲಿಷ್ ಕವಿಯು "Thus at the flaming forge of Life, our fortunes must be wrought." ಹೀಗೆ ಯಾವ ವಿಧವಾದ ಕಷ್ಟವನ್ನು ಅನುಭವಿಸಲೂ ನಾವು ಸಿದ್ಧರಾಗಿಲ್ಲ. ಇದರಿಂದಲೇ ನಮಗೆ ಅನೇಕಬಗೆಯ ತೊಡಕುಗಳು ಉಂಟಾಗಿವೆ

ಮಹರ್ಷಿ ಅರವಿಂದರ ಗೀತಾವ್ಯಾಖ್ಯಾನ ಒಂದು ಭಾಷ್ಯರತ್ನ. ಬೇರೆ ಬೇರೆಯ ಶತಮಾನಗಳಲ್ಲಿ ಪ್ರತಿಭಾಶಾಲಿಗಳಾದ ಆಚಾರ್ಯರು ಭಗವದ್ಗೀತೆಗೆ ಭಾಷ್ಯ ಬರೆದಿರುವುದು ಸರ್ವವಿದಿತವಾಗಿದೆ. ಇಪ್ಪತ್ತನೆಯ ಶತಮಾನ ತಾನು ಪ್ರಸ್ಥಾನತ್ರಯಗಳಲ್ಲಿ ಒಂದಾದ ಗೀತೆಗೆ ಭಾಷ್ಯದ ಕಾಣಿಕೆಯನ್ನು ನೀಡುವುದರಲ್ಲಿ ಹಿಂದುಳಿಯಲಿಲ್ಲ. ಆಚಾರ್ಯವರೇಣ್ಯರ ಭಾಷ್ಯಗಳಿಗೆ ಸರಿಸಮನಾಗಿ ನಿಲ್ಲುವುದರ ಜತೆಗೆ ಆಧುನಿಕ ವಿಜ್ಞಾನಯುಗದ ಅಸಂಖ್ಯಾತ ಸಮಸ್ಯೆಗಳಿಗೆ ಸಮರ್ಪಕವಾದ ಪರಿಹಾರ ನೀಡುವ ಅಪೂರ್ವ ಗುಣವನ್ನು ಅರವಿಂದರ ಭಾಷ್ಯ ಒಳಗೊಂಡಿದೆ. ನಾವು ಮೇಲೆ ಸೂಚಿಸಿರುವ ಮತ್ತು ಸೂಚಿಸದೆ ಬಿಟ್ಟಿರುವ ಅನೇಕಾನೇಕ ವಿರೋ

ಥಾಭಾಸಗಳಿಗೆ ಈ ಭಾಷ್ಯ ಸುಂದರವಾದ ಸಮನ್ವಯವನ್ನು ನೀಡಿದೆ. ಇಲ್ಲಿ ಅದ್ಭುತವಾದ ವಿಚಾರಸರಣಿ ರಮ್ಯವಾದ ಕಾವ್ಯಭಾಷೆಯಲ್ಲಿ ಹರಿದಿದೆ. 'ದರ್ಶನ'ದ ಅನೇಕ ಹಿಮಾಚಲ ಶಿಖರಗಳೂ ಇಲ್ಲಿ ಕಾಣುತ್ತವೆ. ಇಂದಿನ ವಿಚಾರಯುಗದಲ್ಲಿ ಈ ಕೃತಿಯ ಅಭ್ಯಾಸವಿಲ್ಲದೆ ಭಗವದ್ಗೀತೆಯ ವ್ಯಾಸಂಗ ಅಪೂರ್ಣವಾಗಿಯೇ ಉಳಿಯುತ್ತದೆ.

ಇದನ್ನು ಓದಿ ಸವಿದ ನಾವು ನಮ್ಮ ಕನ್ನಡ ಬಂಧುಗಳಿಗೂ ಇದರ ಸವಿ ದೊರಕಲೆಂದು ಅನುವಾದಕ್ಕೆ ತೊಡಗಿದೆವು. ಒಂದು ಉದ್ಗ್ರಂಥವನ್ನು ಒಂದು ಭಾಷೆಯಿಂದ ಮತ್ತೊಂದು ಭಾಷೆಗೆ ಪರಿವರ್ತನೆ ಮಾಡುವುದು ಬಹಳ ಕಷ್ಟವೆಂಬ ವಿಷಯವನ್ನು ನಾವು ಹೊಸದಾಗಿ ತಿಳಿಯಬೇಕಾಗಿಲ್ಲ. ಕವಿಸಾರ್ವಭೌಮ ರವೀಂದ್ರ ನಾಥ ಟಾಗೋರರು ರಚಿಸಿದ ಇಂಗ್ಲೀಷ್ ಭಾಷೆಯ 'ಗೀತಾಂಜಲಿ' ಎಂಬ ಗ್ರಂಥಕ್ಕೆ ಪ್ರಪಂಚದಲ್ಲಿ ಗೌರವವಾದ 'ನೋಬೆಲ್ ಪ್ರೈಜ್' ದೊರೆತಿದೆ ಎಂಬ ವಿಷಯವು ಸರ್ವರಿಗೂ ತಿಳಿದಿರುತ್ತದೆ. ಈ ಭಾಷಾಂತರವನ್ನು ಬಂಗಾಲಿಯಲ್ಲಿರುವ ತಮ್ಮದೇ ಆದ ಗ್ರಂಥದಿಂದ ತರ್ಜುಮೆ ಮಾಡಿರುತ್ತಾರೆ. ಬಂಗಾಲಿ ಭಾಷೆಯ ಸೌಂದರ್ಯವೂ ಪ್ರಭಾವವೂ ಇದರಲಿಲ್ಲವೆಂದು ಅವರೇ ಹೇಳಿದ್ದಾರೆ. ಪರಿಸ್ಥಿತಿಯು ಹೀಗಿರುವಾಗ ಈ ಯುಗಪುರುಷ ಮಹಾಯೋಗಿಯಾಗಿರುವ ಶ್ರೀ ಅರವಿಂದರ ಗ್ರಂಥಗಳನ್ನು ನಾವು ಭಾಷಾಂತರಿಸುವಾಗ ಅದರ ಗಾಂಭೀರ್ಯವನ್ನು ತೋರಿಸಿಕೊಡುವುದು ಕಷ್ಟಸಾಧ್ಯ. ಕಾಳಿದಾಸನು ತನ್ನ ಕಾವ್ಯವನ್ನು ಬರೆಯುವಾಗ "ತಿತೀರ್ಷುರ್ದುಸ್ತರಂ ಮೋಹಾ ದುಡುಪೇನಾಸ್ಮಿ ಸಾಗರಂ" ಎಂದು ಹೇಳಿರುವಂತೆ ನಮ್ಮ ಪ್ರಯತ್ನವು ಕೂಡ ಈರೀತಿಯಾಗಿಯೇ ಇರುತ್ತದೆ. ಈ ಕಾರಣಗಳಿಂದ ಅರವಿಂದರ ಮೂಲಗ್ರಂಥದ ಅರ್ಥವು ನಮ್ಮ ಈ ಪ್ರಕಟಿತಗ್ರಂಥದಲ್ಲಿ ಪೂರ್ಣವಾಗಿ ಪ್ರತಿಬಿಂಬಿಸಿದೆಯೆಂದು ತಿಳಿಸಲು ನಾವು ಅಸಮರ್ಥರಾಗಿದ್ದೇವೆ. ಇದು ಭಾಷಾಂತರವಲ್ಲ, ಭಾವಾನುವಾದ.

ಈ ಪ್ರಕಟಣೆಗೆ ಬಹಳವಾಗಿ ಸಹಾಯಮಾಡಿದ ಮಹಾಸಾಹಿತಿಗಳಾದ ಪ್ರೊ|| ವಿ. ಕೃ. ಗೋಕಾಕ, ಪ್ರೊ|| ಸ. ಸ. ಮಾಳವಾಡ ಮತ್ತು ಪ್ರೊ|| ರಂ. ಶ್ರೀ. ಮುಗಳಿಯವರಿಗೂ ಈ ಗ್ರಂಥದ ಪ್ರಕಟಣೆಯ ಕಾಪಿರೈಟ್ ಮೊದಲಾದ ಎಲ್ಲಾ ಹಕ್ಕುಗಳನ್ನು ಪಡೆದಿರುವ ಸಾರಸವಿಹಾರ ಪ್ರಕಾಶನ ಸಂಸ್ಥೆಯವರಿಗೂ ಈ ಕಾರ್ಯದಲ್ಲಿ ಬಹುವಾಗಿ ಸಹಾಯಮಾಡಿದ ಶ್ರೀ ಆಗರಂ ರಂಗಯ್ಯನವರಿಗೂ, ಶ್ರೀ ಪಂಚಾಚಾರ್ಯ ಮುದ್ರಣಾಲಯ, ಶ್ರೀನಿವಾಸ ಮುದ್ರಣಾಲಯಗಳ

ಮಾಲೀಕರುಗಳಿಗೂ ಮತ್ತು ನಮಗೆ ಈ ಕಾರ್ಯದಲ್ಲಿ ಸಹಾಯನೀಡಿದ ಇತರರೆಲ್ಲರಿಗೂ ನಮ್ಮ ಕೃತಜ್ಞತೆಯನ್ನು ವಂದನಾಪೂರ್ವಕವಾಗಿ ಅರ್ಪಿಸುತ್ತೇವೆ.

ಈ ಕೃತಿಯನ್ನು ಭಾಗಶಃ 'ದಿವ್ಯಜ್ಯೋತಿ' ಪತ್ರಿಕೆಯಲ್ಲಿ ಪ್ರಕಟಿಸಿ ಉಪಕರಿಸಿದ ಶ್ರೀ ಎ. ವಾಸುದೇವಯ್ಯನವರಿಗೆ ನಾವು ವಿಶೇಷವಾಗಿ ಕೃತಜ್ಞರಾಗಿದ್ದೇವೆ. ಮುಖ್ಯವಾಗಿ ಈ ಗ್ರಂಥವನ್ನು ಪ್ರಕಟಿಸಲು ನಮಗೆ ಅನುಮತಿಯನ್ನು ನೀಡಿದ ಪಾಂಡಿಚೆರಿಯ ಯೋಗಿ ಅರವಿಂದಾಶ್ರಮ ಸಂಸ್ಥೆಯವರಿಗೆ ನಮ್ಮ ಹೃತ್ಪೂರ್ವಕವಾದ ವಂದನೆಗಳನ್ನು ಸಮರ್ಪಿಸುತ್ತೇವೆ.

ಅಗರಂ ವೆಂಕಟರಾಮ ಪಂಡಿತ
(ಅನುವಾದಕರ ಪರವಾಗಿ)
೨೪, ಸೋನಾರಬೀದಿ, ಚಾಮರಾಜಮೊಹಲ್ಲಾ,
ಮೈಸೂರು.

ಪ್ಲವ ಸಂ॥ ದ ಶ್ರಾವಣಶುಕ್ಲ ೧೫ (ಉಪಾಕರ್ಮ)
ತಾ॥ ೨೫—೮—೧೯೬೧



# ವಿಷಯಾನುಕ್ರಮಣಿಕೆ



ಡಾ || ಎ. ವೆಂಕಟಸುಬ್ಬಯ್ಯನವರು ಎ. ವೆಂಕಟರಾಂ ಅಗರಂ ವೆಂಕಟರಾಮ ಪಂಡಿತರು

|| ಶ್ರೀಃ ||

# ಶ್ರೀಮದ್ಭಗವದ್ಗೀತಾ

ಮಲನಿರ್ಮೋಚನಂ ಪುಂಸಾಂ ಜಲಸ್ನಾನಂ ದಿನೇದಿನೇ ।
ಸಕೃದ್ ಗೀತಾಂಭಸಿ ಸ್ನಾನಂ ಸಂಸಾರಮಲಮೋಚನಂ ॥
ಗೀತಾ ಸುಗೀತಾ ಕರ್ತವ್ಯಾ ಕಿಮನ್ಯೈಃ ಶಾಸ್ತ್ರವಿಸ್ತರೈಃ ।
ಯಾ ಸ್ವಯಂ ಪದ್ಮನಾಭಸ್ಯ ಮುಖಪದ್ಮಾತ್ ವಿನಿಃಸೃತಾ ॥

## ಗೀತಾತಾತ್ಪರ್ಯದೀಪಿಕೆ

### ಪ್ರಕರಣ ೧

### ಗೀತೆಯಿಂದ ನಾವು ಅಪೇಕ್ಷಿಸುವ ಪ್ರಯೋಜನ

ಒಂದು ಗ್ರಂಥವನ್ನು ಓದುವುದಕ್ಕೆ ಮುಂಚೆ ಆ ಗ್ರಂಥದ ಸ್ವರೂಪವೇನು, ಅದರಿಂದ ನಾವು ಯಾವ ಪ್ರಯೋಜನವನ್ನು ಅಪೇಕ್ಷಿಸುತ್ತೇವೆ, ಈ ಮೊದಲಾದ ವಿಷಯಗಳನ್ನು ಕುರಿತು ಕೆಲವು ಮಾತುಗಳನ್ನು ಹೇಳುವುದು ಹಿಂದಿನವರ ಸಂಪ್ರದಾಯ. ಇದಕ್ಕೆ ಅನುಬಂಧಚತುಷ್ಟಯವೆಂದು ಹೆಸರು. ಈ ಸಂಪ್ರದಾಯವನ್ನನುಸರಿಸಿ ನಾವೂ ಮೇಲೆ ಹೇಳಿರುವ ಎರಡು ವಿಷಯಗಳನ್ನು ಕುರಿತು ಕೆಲವು ಮಾತುಗಳನ್ನು ಬರೆಯುತ್ತೇವೆ.

ಸಾಕ್ಷಾತ್ ಭಗವಂತನಿಂದಲೆ, ಅಥವಾ ಅವನಿಂದ ಪ್ರೇರಿತರಾದ ಋಷಿಗಳಿಂದ ಅಥವಾ ಮಹಾಪುರುಷರಿಂದ, ಹೇಳಲ್ಪಟ್ಟಿರುವುವೆಂದು ಪ್ರಸಿದ್ಧಿಪಡೆದಿರುವ ಅನೇಕಗ್ರಂಥಗಳು ಈಗ ಈ ಲೋಕದಲ್ಲಿ ಪ್ರಚಾರದಲ್ಲಿವೆ. ಇಂತಹ ಗ್ರಂಥಗಳಿಗೆ ಆಮ್ನಾಯ, ನಿಗಮ, ವೇದ, ಶ್ರುತಿ, ಅಪೌರುಷೇಯಗ್ರಂಥ ಇವೆ ಮೊದಲಾದ ಹೆಸರುಗಳಿವೆ. ಇವುಗಳಲ್ಲಿ ಕೆಲವು ಮೊದಲಿನಿಂದ ಕೊನೆಯವರೆಗೂ, ಅಂದರೆ ಆಮೂಲಾಗ್ರವಾಗಿ ಭಗವಂತನಿಂದ ಪ್ರೇರಿತವಾಗಿರುವುವೆಂದೂ, ಇನ್ನು ಕೆಲವಲ್ಲಿ ಸ್ವಲ್ಪಭಾಗಗಳು ಮಾತ್ರ ಭಗವಂತ ಪ್ರೇರಿತವಾಗಿದ್ದು ಉಳಿದ ಭಾಗವು ಮಹಾಪುರುಷರಿಂದ ಹೇಳಲ್ಪಟ್ಟಿರುವವೆಂದೂ ದೃಢವಾಗಿ ನಂಬಲ್ಪಟ್ಟು, ಈ ಗ್ರಂಥಗಳ ಆಧಾರದ ಮೇಲೆ ಅನೇಕ ಮತಗಳೂ, ದರ್ಶನಗಳೂ, ಪಂಥಗಳೂ, ಸಮಾಜಗಳೂ ಸ್ಥಾಪಿತವಾಗಿವೆ. ಇನ್ನೂ ಬುದ್ಧಿಯು ಪಕ್ವವಾಗಿಲ್ಲದ ಅಥವಾ

ಬುದ್ಧಿಯೆ ಇಲ್ಲದ ಜನರು ಇಂತಹ ಗ್ರಂಥಗಳನ್ನು ಮಿತಿಮೀರಿದ ಶ್ರದ್ಧೆಯಿಂದ ಭದ್ರವಾಗಿ ಹಿಡಿದುಕೊಂಡು " ಈ ಗ್ರಂಥಮಾತ್ರವೆ ಭಗವಂತನಿಂದ ಹೇಳಲ್ಪಟ್ಟ ನಾಶರಹಿತವಾದ ದಿವ್ಯವಾಣಿ. ಇತರ ಗ್ರಂಥಗಳೆಲ್ಲವೂ ಕೃತಕ ಅಥವಾ ಅವುಗಳಲ್ಲಿ ಸ್ವಲ್ಪಭಾಗಮಾತ್ರ ಭಗವಂತನಿಂದ ಪ್ರೇರಿತವಾದುದು " ಎಂದೂ, " ಈ ದರ್ಶನವು ಒಂದೆ ಸಂಪೂರ್ಣವಾಗಿ ಯುಕ್ತಿಯುಕ್ತವಾದುದು. ಇತರ ದರ್ಶನಗಳೆಲ್ಲವೂ ಸಂಪೂರ್ಣವಾಗಿ ಯುಕ್ತಿಬಾಹಿರವಾಗಿರುವುವು ; ಅಥವಾ ಈ ದರ್ಶನಕ್ಕೆ ಅನುಸಾರವಾದ ಕೆಲವು ಭಾಗಗಳನ್ನು ಬಿಟ್ಟರೆ ಉಳಿದ ಭಾಗವೆಲ್ಲ ಅಸಾರವಾಗಿರುವುದು " ಎಂದೂ ವಾದಿಸುತ್ತಾರೆ. ವಿವೇಕವಿಲ್ಲದ ಬೇರೆ ಕೆಲವರು ವಿಜ್ಞಾನಶಾಸ್ತ್ರದಿಂದ ಕಂಡುಹಿಡಿಯಲ್ಪಟ್ಟ ವಿಷಯಗಳಿಗೂ ಕೂಡ ಇತರರು ಮತಗಳಿಗೆ ಕೊಡುವ ಪೂಜ್ಯಸ್ಥಾನವನ್ನು ಕೊಟ್ಟು, ಈ ದೃಷ್ಟಿಯಿಂದ ಅಧ್ಯಾತ್ಮಶಾಸ್ತ್ರವು ಮೌಢ್ಯವೆಂದೂ, ಕುರುಡುನಂಬಿಕೆಯೆಂದೂ, ತತ್ವಶಾಸ್ತ್ರವು ತಿರುಳಿಲ್ಲದ ಹರಟೆಯೆಂದೂ, ಅವುಗಳಲ್ಲಿ ಹೇಳಿರುವ ವಿಷಯಗಳಿಗೆ ಯಾವ ವಿಧವಾದ ಆಧಾರವೂ ಇಲ್ಲವೆಂದೂ ತಿರಸ್ಕರಿಸುತ್ತಾರೆ. ಪಕ್ವಬುದ್ಧಿಯುಳ್ಳ ಕೆಲವರು ಕೂಡ " ನನ್ನ ಸಿದ್ಧಾಂತವೆ ಶ್ರೇಷ್ಠವಾದುದು ; ನನಗಿರುವ ಅಧ್ಯಾತ್ಮಜ್ಞಾನವು ಬೇರೆಯಾರಿಗೂ ಇಲ್ಲ " ಎಂಬ ದುರಹಂಕಾರರೂಪವಾದ ಕತ್ತಲೆಯು ತಮ್ಮ ಜ್ಞಾನಜ್ಯೋತಿಯನ್ನು ಮಂಕುಮಾಡಲು ಅವಕಾಶಕೊಡುತ್ತಾರೆ. ಅನಂತರ ಆ ಜ್ಯೋತಿಯನ್ನು ಆವರಿಸಿರುವ ತಮಸ್ಸಿನಿಂದ ಮೋಹಗೊಂಡು ತಾವು ತಿಳಿದಿರುವುದು ಮಾತ್ರ ಸರಿಯೆಂಬ ದುರಭಿಮಾನದಿಂದ ದ್ವೇಷಬುದ್ಧಿಗೂ, ಅಸಹನೆಗೂ ಆಶ್ರಯವನ್ನಿತ್ತು ಶುಷ್ಕಕಲಹದಲ್ಲಿ ಭಾಗಿಗಳಾಗಿರುತ್ತಾರೆ. ಆದರೆ ಈಗ ಮನುಷ್ಯವರ್ಗಕ್ಕೆ ಅಹಂಕಾರವು ಸ್ವಲ್ಪ ಕಡಮೆಯಾಗಿ ತಿಳುವಳಿಕೆ ಬಂದಂತಿದೆ. ಭಗವಂತನ ಆಜ್ಞೆಯನ್ನು ಇವರು ಉಲ್ಲಂಘಿಸುತ್ತಾರೆಂದು, ನಮ್ಮ ಅಭಿಪ್ರಾಯಕ್ಕೆ ವ್ಯತಿರಿಕ್ತವಾಗಿ ನಡೆಯುವವರನ್ನು ನಾವು ಕೊಲ್ಲುವುದನ್ನು ಬಿಟ್ಟಿದ್ದೇವೆ. ನಮ್ಮಂತೆಯೆ ಯೋಚಿಸದೆ ಬೇರೆ ರೀತಿಯಲ್ಲಿ ಯೋಚಿಸುವವರು ಮಹಾಪರಾಧಿಗಳೆಂದು ನಾವು ಅವರನ್ನು ಅಷ್ಟಾಗಿ ದೂಷಿಸುವುದೂ ನಿಂದಿಸುವುದೂ ಇಲ್ಲ. ಸತ್ಯವೆಂಬುದು ಎಲ್ಲ ಕಡೆಗಳಲ್ಲಿಯೂ ಇರುವದೆಂದೂ, ನಮಗೆ ಮಾತ್ರ ಮೀಸಲಾಗಿಲ್ಲವೆಂದೂ ಒಪ್ಪಿಕೊಳ್ಳುವುದಕ್ಕೂ ಕೂಡ ನಾವು ಸಿದ್ಧರಾಗಿದ್ದೇವೆ. ಇತರ ಮತಗಳನ್ನೂ ದರ್ಶನಗಳನ್ನೂ " ಅವುಗಳಿಗೂ ನಮ್ಮದಕ್ಕೂ ಇರುವ ವ್ಯತ್ಯಾಸಗಳೇನು ? ಅವನ್ನು ಹುಡುಕಿ ಖಂಡಿಸೋಣ " ಎಂಬ ಮನೋಭಾವದಿಂದ ಮಾತ್ರ ವ್ಯಾಸಂಗಮಾಡುವುದು ಕಡಿಮೆ

ಯಾಗಿದೆ. ಅದಕ್ಕೆ ಬದಲಾಗಿ "ಇವೂ ಕೂಡ ಒಂದೇ ಆದ ಸತ್ಯವನ್ನು ಬೇರೆ ದೃಷ್ಟಿಕೋನಗಳಿಂದ ನೋಡಿ ವರ್ಣಿಸುತ್ತಿವೆ. ಆದುದರಿಂದ ಇವುಗಳನ್ನು ನಾವು ಸರಿಯಾಗಿ ತಿಳಿದುಕೊಂಡರೆ ಸತ್ಯದ ವಿಷಯವಾದ ಅರಿವು ಇನ್ನೂ ಹೆಚ್ಚು ವಿಶಾಲವಾಗುತ್ತದೆ; ಪರಿಪೂರ್ಣವಾಗುತ್ತದೆ" ಎಂಬ ಮನೋಭಾವವು ಬೆಳೆಯುತ್ತಿದೆ. ನಾನಾ ಮತಗಳೂ, ದರ್ಶನಗಳೂ ಪರಸ್ಪರ ಪೂರಕವೆಂದೂ, ಯಾವ ಒಂದು ಮತ ಮಾತ್ರದಿಂದ ಸತ್ಯದ ಅರಿವು ಸಂಪೂರ್ಣವಾಗಿ ಉಂಟಾಗಲಾರದೆಂದೂ ಕೆಲವರು ಮನಗಾಣುತ್ತಿದ್ದಾರೆ. "ಬೇರೆ ಮತಗಳಲ್ಲಿ ಸತ್ಯಾಂಶವೇನಿದೆ? ಇವುಗಳಿಂದ ನಮಗೆ ಯಾವ ಸಹಾಯ ಉಂಟಾಗುವುದು" ಎಂಬ ಉದ್ದೇಶದಿಂದ ಅವುಗಳನ್ನು ಪರೀಕ್ಷಿಸಲು ನಾವು ತೊಡಗಿದ್ದೇವೆ. ಇಷ್ಟಾದರೂ ನಮ್ಮ ಮತ ದರ್ಶನ ಒಂದರಲ್ಲಿ ಮಾತ್ರವೆ ಪರಮತತ್ತ್ವವಿರುವುದೆಂದೂ ಇತರ ಮತಗಳಿಗೆ ಈ ತತ್ತ್ವವು ಗೋಚರವಾಗಿಲ್ಲವೆಂದೂ ಅಥವಾ ಗೋಚರವಾಗಿದ್ದರೂ ಕೂಡ ಅಸ್ಪಷ್ಟವಾಗಿ ಕಾಣಬಂದುದರಿಂದ ಅಮುಖ್ಯವಾದ ಅಲ್ಪವಿಷಯಗಳನ್ನು ಮಾತ್ರ ವಿಚಾರ ಮಾಡುವವೆಂದೂ ನಂಬಿರುವವರಿದ್ದಾರೆ. ಅವರ ಮಟ್ಟದ ಜ್ಞಾನವಿಲ್ಲದ ಜನರನ್ನು ಈ ಮಟ್ಟವನ್ನು ಹೊಂದಿಸುವುದಕ್ಕೆ ಮಾತ್ರ ಆ ಮತಗಳು ಸಹಾಯಕವಾಗಿರುವವೆಂದು ಅವರು ಭಾವಿಸಿದ್ದಾರೆ. ಅನೇಕ ಜನಗಳ ಮನೋಭಾವವು ಹೀಗಿದೆ. ಈಗಲೂ ಕೂಡ ನಾವು ಒಪ್ಪುವ ಗ್ರಂಥವಲ್ಲಿ ಮೊದಲಿನಿಂದ ಕೊನೆಯವರೆಗೆ ಒಂದಕ್ಷರವನ್ನೂ ಪೂರ್ಣವಿರಾಮವನ್ನು ಕೂಡ ಬಿಡದೆ ಎಲ್ಲವೂ ಭಗವಂತನಿಂದ ಪ್ರೇರಿತವಾದುದೆಂದು ಘೋಷಿಸಿ, ಆ ಗ್ರಂಥವನ್ನು ಆಮೂಲಾಗ್ರವಾಗಿ ಗ್ರಹಿಸಬೇಕೆಂದು ಇತರರನ್ನು ಬಲಾತ್ಕಾರಪಡಿಸುವ ಸ್ವಭಾವವನ್ನು ನಾವು ಇನ್ನೂ ಬಿಟ್ಟಿಲ್ಲ.

ಆದುದರಿಂದ ವೇದ, ಉಪನಿಷತ್ತು ಅಥವಾ ಗೀತೆ ಇಂತಹ ಪ್ರಾಚೀನ ಸ್ಮೃತಿಗ್ರಂಥಗಳನ್ನು ನಾವು ವಿಚಾರಮಾಡುವದಕ್ಕೆ ಮೊದಲುಮಾಡುವಾಗ ಯಾವ ಭಾವನೆಯಿಂದ ನಾವು ಈ ಕಾರ್ಯವನ್ನು ಕೈಗೊಳ್ಳುವೆವೆಂಬುದನ್ನೂ, ಈ ವಿಚಾರದಿಂದ ಮಾನವವರ್ಗಕ್ಕೆ ಈಗಲೂ ಇನ್ನುಮುಂದೆಯೂ ಯಾವ ವಿಧವಾದ ಪ್ರಯೋಜನವನ್ನು ನಾವು ಆಶಿಸುತ್ತೇವೆವೆಂಬುದನ್ನೂ ಕುರಿತು ಕೆಲವು ಮಾತುಗಳನ್ನು ಹೇಳುವದು ಉಪಯುಕ್ತವಾಗಿರುವುದು.

(೧) ಏಕವೂ, ಸನಾತನವೂ ಆದ ಸತ್ಯವಸ್ತು ಒಂದಿರುವದೆಂಬುದರಲ್ಲಿ ಯಾವ ಸಂದೇಹವೂ ಇಲ್ಲ. ಎಲ್ಲರು ಹುಡುಕುತ್ತಿರುವದು ಅದನ್ನೆ. ಇತರ ಎಲ್ಲ ತಿಳಿವಳಿಕೆಗಳೂ ಈ ಸತ್ಯದ ಆಧಾರದ ಮೇಲೆಯೆ ಇದರ ಬಲದಿಂದಲೆ ನಿಂತಿರು

ವುವು ಮತ್ತು ಈ ಸತ್ಯದ ಪ್ರಕಾಶದಿಂದಲೆ ಈ ಎಲ್ಲ ತಿಳುವಳಿಕೆಗಳ ಪರಸ್ಪರ ಸಂಬಂಧವೂ ಮತ್ತು ಪ್ರಯೋಜನವೂ ಗ್ರಹಿಸಲ್ಪಡುವುದು. ಆದರೆ ಈ ಕಾರಣ ದಿಂದಲೆ ಈ ಸತ್ಯವನ್ನು ನಾವು ಒಂದೇ ಮಹಾವಾಕ್ಯದಲ್ಲಿ ಸಂಪೂರ್ಣವಾಗಿ ಅಳವಡಿಸುವುದಕ್ಕಾಗುವದಿಲ್ಲ. ಈ ಕಾರಣದಿಂದಲೆ ಈ ಸತ್ಯವಸ್ತುವು ಯಾವ ಒಂದು ದರ್ಶನದಲ್ಲಾಗಲಿ, ಆಮ್ನಾಯ ಗ್ರಂಥದಲ್ಲಾಗಲಿ ಸಕಲಾವಯವಸಹಿತ ವಾಗಿ ಸಂಪೂರ್ಣವಾಗಿ ವಿವರಿಸಲ್ಪಟ್ಟಿಲ್ಲ. ಯಾವ ಒಬ್ಬ ಋಷಿಯಿಂದಲಾಗಲಿ, ದರ್ಶನಪ್ರವರ್ತಕನಾದ ಆಚಾರ್ಯನಿಂದಲಾಗಲಿ, ಮಹಾಪುರುಷನಿಂದಲಾಗಲಿ, ಅವತಾರಪುರುಷನಿಂದಲಾಗಲಿ ಸರ್ವಕಾಲಕ್ಕೂ ಅನ್ವಯಿಸುವಂತೆ ಪರಿಪೂರ್ಣ ವಾಗಿ ಹೇಳಲ್ಪಟ್ಟಿಲ್ಲ. ಅದು ಸಾಧ್ಯವೂ ಅಲ್ಲ. ನಮ್ಮದಲ್ಲದ ಇತರ ದರ್ಶನಗಳನ್ನು ನಾವು ಆಗ್ರಹದಿಂದ ನಿರಾಕರಿಸುವ ಪಕ್ಷದಲ್ಲಿ ನಮಗೂ ಕೂಡ ಈ ಸತ್ಯವಸ್ತುವು ಗೋಚರವಾಗಿಲ್ಲವೆಂದು ಹೇಳಬೇಕು. ಏಕೆಂದರೆ ನಾವು ಯಾವುದನ್ನು ಆಗ್ರಹ ದಿಂದ ತಿರಸ್ಕರಿಸುತ್ತೇವೆಯೊ ಅದನ್ನು ನಾವು ತಿಳಿದುಕೊಳ್ಳಲಾರವೆಂದೂ, ಅದರಲ್ಲಿ ರುವ ಗುಣಗಳನ್ನು ಗ್ರಹಿಸಲಾರವೆಂದೂ ಒಪ್ಪಿಕೊಂಡಾಯಿತು.

(೨) ಈ ಸತ್ಯವು ಏಕವೂ ನಿತ್ಯವೂ ಆದಾಗ್ಯೂ, ಮನುಷ್ಯನ ಮನಸ್ಸಿನ ಮೂಲಕವಾಗಿ ಯಾವುದೋ ಒಂದು ಕಾಲದಲ್ಲಿ ಹೊರಕ್ಕೆ ಬರುತ್ತದೆ ಅಥವಾ ವ್ಯಕ್ತವಾಗುತ್ತದೆ. ಆದುದರಿಂದ ಪ್ರತಿಯೊಂದು ಶ್ರುತಿಗ್ರಂಥದಲ್ಲಿಯೂ ಎರಡು ವಿಧವಾದ ವಿಷಯಗಳು ಇದ್ದೇ ಇರಬೇಕು. ಆಯಾಕಾಲ ಮತ್ತು ದೇಶ ಇವು ಗಳಿಗೆ ಸಂಬಂಧಹೊಂದಿರುವ ಅನಿತ್ಯವಾದ ಅಂಶ ಒಂದು. ಸರ್ವಕಾಲಕ್ಕೂ ಸರ್ವ ದೇಶಕ್ಕೂ ಅನ್ವಯಿಸುವ ಶಾಶ್ವತವಾದ ನಾಶರಹಿತವಾದ ಅಂಶ ಒಂದು. ಅಲ್ಲದೇ, ಸತ್ಯವನ್ನು ವ್ಯಕ್ತಮಾಡುವಾಗ ಅದು ಹೊರಬೀಳುವ ರೂಪವೂ, ಅದರ ಸರ ಣಿಯೂ, ವಿಷಯಗಳ ಪೌರ್ವಾಪರ್ಯವೂ (ಇದು ಮುಂಚೆ, ಇದು ಆಮೇಲೆ ಎಂಬ ಕ್ರಮ) ಮಾನಸಿಕ ವೃತ್ತಿಯೂ, ಉಪಯೋಗಿಸಲ್ಪಟ್ಟ ಮಾತುಗಳೂ ಸಹ ಕಾಲಗತಿಗನುಸಾರವಾಗಿ ಬದಲಾವಣೆಯನ್ನು ಹೊಂದುತ್ತಿರುವುದರಿಂದ ಆಗಿನ ಅರ್ಥವನ್ನು ಈಗ ಕೊಡಲಾರವು. ಏಕೆಂದರೆ ಮನುಷ್ಯನ ಬುದ್ಧಿಯು ಯಾವಾ ಗಲೂ ಬದಲಾವಣೆಯನ್ನು ಹೊಂದುತ್ತಿರುವದು. ಅದು ಯಾವಾಗಲೂ ವಿಷಯ ಗಳನ್ನು ವಿಭಜಿಸುತ್ತಾ ಮತ್ತು ಒಟ್ಟುಗೂಡಿಸುತ್ತಾ ಇರುವುದರಿಂದ, ಈ ವ್ಯಷ್ಟಿ ಗಳನ್ನು (ವಿಭಾಗಗಳನ್ನು) ಅದು ಯಾವಾಗಲೂ ಬದಲಾಯಿಸಿ, ಹೊಸಹೊಸ ಸಮಷ್ಟಿಗಳನ್ನು (ಒಟ್ಟುಗೂಡಿಸುವಿಕೆ) ಮಾಡಬೇಕಾಗಿರುವುದು.

ಹಳೆಯ ಮಾತುಗಳನ್ನೂ, ಪ್ರತೀಕಗಳನ್ನೂ,(ಲಕ್ಷಣ)ಉದಾಹರಣೆಗಳನ್ನೂ ಬಿಟ್ಟು ಹೊಸದನ್ನು ಉಪಯೋಗಿಸಬೇಕಾಗುವುದು. ಒಂದುವೇಳೆ ಹಳೆಯದನ್ನೆ ಉಪಯೋಗಿಸಿದರೂ ಕೂಡ, ಅದರ ಅರ್ಥವೂ, ನಿಷ್ಕೃಷ್ಟವಾದ ಶಕ್ತಿಯೂ, ಲಕ್ಷಣವೂ ಯಾವಾಗಲೂ ಬದಲಾವಣೆಯನ್ನು ಹೊಂದುತ್ತಲೆ ಇರುವುದರಿಂದ, ಪ್ರಾಚೀನಗ್ರಂಥದ ವಾಕ್ಯಗಳು ಹಿಂದಿನ ಕಾಲದವರಿಗೆ ಏನು ಅರ್ಥವನ್ನು ಕೊಡುತ್ತಿದ್ದುವೊ ಅದೆ ಅರ್ಥವನ್ನು ನಮಗೆ ಕೊಡಬಲ್ಲವೆ ಎಂಬುದು ಬಹಳ ಸಂದೇಹಗ್ರಸ್ತವಾಗಿರುವುದು.

ಭಗವದ್ಗೀತೆಯ ಉಪದೇಶದಲ್ಲಿ ಸುಮಾರಾಗಿ ಎಲ್ಲ ಭಾಗವೂ ಎಲ್ಲ ಕಾಲಗಳಿಗೂ ದೇಶಗಳಿಗೂ ಅನ್ವಯಿಸುವಂತಹುದು; ಉಳಿದ ಸ್ವಲ್ಪಭಾಗವನ್ನು ಎಲ್ಲ ಕಾಲದೇಶಗಳಿಗೂ ಅನ್ವಯಿಸುವಂತೆ ಅರ್ಥಮಾಡಿದರೆ ಸರ್ವವ್ಯಾಪಕವೂ, ಅಶೋಷ್ಯವೂ ಆದ ಮೂಲತತ್ವಕ್ಕೆ ಸ್ವಲ್ಪವೂ ವಿರೋಧಬರುವದಿಲ್ಲ. ಹೀಗೆ ಮಾಡುವುದರಿಂದ ಆ ಉಪದೇಶವು ಹೆಚ್ಚು ವಿಶಾಲವೂ ಶಕ್ತಿಯುತವಾಗಿಯೂ ಆಗುವದು.

ಯಜ್ಞ, ಶಾಸ್ತ್ರ, ಚತುರ್ವರ್ಣ, ಕರ್ಮ ಮೊದಲಾದ ಪದಗಳಿಗೆ ನಾವು ತಿಳಿದುಕೊಂಡಿರುವ ಸಂಕುಚಿತ ಅರ್ಥಕ್ಕಿಂತ, ಎಲ್ಲ ದೇಶ ಮತ್ತು ಕಾಲಗಳಿಗೆ ಅನ್ವಯಿಸಬಹುದಾದ ವಿಶಾಲವಾದ ಅರ್ಥವನ್ನು ಗೀತೆಯು ಸೂಚಿಸುತ್ತದೆ. ಪುರಾತನಕಾಲದಿಂದಲೂ ನಮ್ಮಲ್ಲಿ ಬಳಕೆಯಲ್ಲಿರುವ ಯಜ್ಞ ಎನ್ನುವುದಕ್ಕೆ ದೇವತೆಗಳಿಗೂ ಮನುಷ್ಯವರ್ಗಕ್ಕೂ ಇರುವ ಒಂದುಬಗೆಯ ಪರಸ್ಪರ ವಿನಿಮಯ ಎಂಬ ಅರ್ಥವು ಗೀತೆಯಲ್ಲಿ ಸೂಚಿತವಾಗಿದೆ. ಈ ಅಭಿಪ್ರಾಯವು ಈಗಿನ ಕಾಲದಲ್ಲಿ ನಮ್ಮ ದೇಶದ ಜನಗಳಲ್ಲೂ ಇಲ್ಲ; ಇತರ ದೇಶದ ಜನಗಳಿಗೂ ಸಮಂಜಸವಾಗಿ ಕಾಣುವಂತಿಲ್ಲ. ಗೀತೆಯಲ್ಲಿ "ಯಜ್ಞ" ಎಂಬ ಪದವನ್ನು ನಮಗೂ ದೇವತೆಗಳಿಗೂ ಇರಬೇಕಾದ ಮಧುರಬಾಂಧವ್ಯವನ್ನು ಸೂಚಿಸುವ ಸಂಕೇತವೆಂದು ಅರ್ಥಮಾಡಬೇಕು; ಇಷ್ಟುಮಾತ್ರವಲ್ಲದೆ ಇದರ ಅರ್ಥವು ಇನ್ನೂ ಬಹಳ ವ್ಯಾಪಕವಾಗಿದೆ. ಇಲ್ಲಿ ಹೇಳಿರುವ ದೇವತೆಗಳು ಮತ್ತು ಯಜ್ಞ ಎಂಬುವುಗಳನ್ನು ಕೇವಲ ನಮ್ಮ ದೇಶಕ್ಕೆ ಮತ್ತು ನಮ್ಮ ಇತಿಹಾಸಪುರಾಣಗಳಿಗೆ ಅನ್ವಯಿಸದೆ, ಎಲ್ಲ ದೇಶಗಳಿಗೂ ಅನ್ವಯಿಸಬಹುದಾದುದರಿಂದಲೂ, ಅಶೋಷ್ಯವಾದ ಮತ್ತು ವಿಶಾಲವಾದ ತತ್ತ್ವಗಳನ್ನು ಒಳಗೊಂಡಿರುವುದರಿಂದಲೂ, ಯಜ್ಞವು ಮನಶ್ಶಾಸ್ತ್ರದ

ಸಹಾಯದಿಂದ ತಿಳಿಯಲು ಸಾಧ್ಯವಾದ ಒಂದು ಪ್ರಕೃತಿ ನಿಯಮವೆಂದು ನಾವು ಧಾರಾಳವಾಗಿ ತಿಳಿಯಬಹುದು.

"ಸೂರ್ಯರಶ್ಮಿ ನೀರನ್ನು ಆವಿಯನ್ನಾಗಿ ಮಾಡಿ ಮೋಡಗಳು ಉಂಟಾಗುತ್ತವೆ. ಆದರಿಂದ ಮಳೆ ಬೀಳುತ್ತದೆ. ಮಳೆಯಿಂದ ಸಸ್ಯಗಳೂ, ಸಸ್ಯಗಳಿಂದ ಆಹಾರವೂ, ಆಹಾರದಿಂದ ಶುಕ್ರಶೋಣಿತಗಳೂ ಮತ್ತು ಶುಕ್ರಶೋಣಿತಗಳಿಂದ ಜೀವಿಗಳೂ ಉತ್ಪತ್ತಿಯಾಗುತ್ತವೆ" ಹೀಗೆ ಮೇಲ್ಮಟ್ಟದ ಚೈತನ್ಯವನ್ನು ಪಡೆಯಲು ಅದಕ್ಕಿಂತ ಕೆಳಗಿನ ಮಟ್ಟದ ಚೈತನ್ಯವನ್ನು ಅರ್ಪಣೆಮಾಡುವುದು ಎಂಬ ಆಧುನಿಕವಿಚಾರಸರಣಿಗೂ, ಸದಾಚಾರದ ಅಭ್ಯಾಸಕ್ಕೋಸ್ಕರ ಕೆಟ್ಟ ಪದ್ಧತಿಗಳನ್ನು ಬಿಡುವುದಕ್ಕೂ, ಆತ್ಮಾರ್ಪಣೆ ಮಾಡಿಕೊಳ್ಳುವುದಕ್ಕೂ ಗೀತೆಯಲ್ಲಿ ಹೇಳಿರುವಂತೆ ಯಜ್ಞದ ಅರ್ಥವನ್ನು ಅನ್ವಯಿಸಿದರೆ ಈ ವಿಷಯಗಳು ಇನ್ನೂ ಹೆಚ್ಚು ವ್ಯಾಪಕವೂ ಪಾರಮಾರ್ಥಿಕತತ್ವಗಳನ್ನು ಒಳಗೊಂಡಂಥವುಗಳೂ ಆಗುವುವು.

ಇದೇ ರೀತಿ ಶಾಸ್ತ್ರಗಳಲ್ಲಿ ಹೇಳಿರುವ ಕರ್ಮಗಳು, ಚತುರ್ವರ್ಣಗಳ ಸ್ಥಾನಮಾನಗಳು, ಸ್ತ್ರೀಯರಿಗೆ ಮತ್ತು ಶೂದ್ರರಿಗೆ ಆಧ್ಯಾತ್ಮಿಕಸಾಧನೆಗೆ ಇರುವ ಅನರ್ಹತೆಗಳು ಇವುಗಳನ್ನು ಕೇವಲ ಸ್ಥೂಲದೃಷ್ಟಿಯಿಂದ ನೋಡಿದರೆ ಈ ವಿಷಯಗಳು ಸಂಕುಚಿತವಾಗಿಯೂ ಮತ್ತು ಆ ದೇಶ ಕಾಲಗಳಿಗೆ ಮಾತ್ರ ಅನ್ವಯಿಸುವಂತೆಯೂ ಕಾಣುತ್ತವೆ. ಆದರೆ ನಾವು ಕೇವಲ ಶಬ್ದಾರ್ಥಕ್ಕೆ ಗಮನ ಕೊಡದೆ ಅಂತರ್ಗತವಾಗಿರುವ ಭಾವವನ್ನು ಗಮನಿಸಿದರೆ ಈ ವಿಷಯಗಳು ಸಾರ್ವತ್ರಿಕವೂ ಅಶೋಷ್ಯವೂ ಆದ ಪಾರಮಾರ್ಥಿಕಸತ್ಯಗಳೆಂದು ಮನವರಿಕೆಯಾಗುತ್ತದೆ.

ಬಹಳ ಕೆಳಗಿನ ಹಂತದಲ್ಲಿರುವ ಮನುಷ್ಯರು ತಮ್ಮ ಆಸೆಗಳನ್ನು ಪೂರೈಸಿಕೊಳ್ಳುವುದನ್ನೆ ಜೀವನದ ಆದರ್ಶ ಮತ್ತು ಗುರಿಯನ್ನಾಗಿ ಮಾಡಿಕೊಳ್ಳುವುದನ್ನು ತಡೆಗಟ್ಟಿ, ಕೇವಲ ಸ್ವಾರ್ಥಕ್ಕಾಗಿ ದುಡಿಯುವುದನ್ನು ತಪ್ಪಿಸುವ ಉದ್ದೇಶಕ್ಕಾಗಿ, ಮಾನವವರ್ಗವು ತಾನೆ ವಿಧಿಸಿಕೊಂಡಿರುವ ಒಂದು ನಿಯಮವೆ ಶಾಸ್ತ್ರವೆಂದು ನಾವು ಗೀತೆಯಿಂದ ತಿಳಿಯಬಹುದು.

ನಾವು ಕೇವಲ ಬಾಹ್ಯರೂಪದಿಂದ ಚತುರ್ವರ್ಣವಿಭಾಗವನ್ನು ತಿಳಿಯುತ್ತೇವೆ. ಆದರೆ ಈ ಪಾರಮಾರ್ಥಿಕತತ್ವದ ರಹಸ್ಯವನ್ನು ಗೀತೆಯಲ್ಲಿ ಸೂಚಿಸಿದೆ. ಪ್ರತಿವ್ಯಕ್ತಿಗೂ ಹುಟ್ಟುವಾಗಲೆ ಕೆಲವು ಗುಣಗಳೂ ಮತ್ತು ಕೆಲವು ಕರ್ಮಗಳಲ್ಲಿ ಪ್ರವೃತ್ತಿಯೂ ಇರುತ್ತವೆ. ಅವನು ಬೆಳೆದ ಹಾಗೆಲ್ಲ ಈ ಗುಣಗಳೂ ಕರ್ಮಗಳೂ

ವ್ಯಕ್ತವಾಗುತ್ತವೆ. ಇದೆ ಗೀತೆಯಲ್ಲಿ ಹೇಳಿರುವ ಚಾತುರ್ವರ್ಣ್ಯದ ಮೂಲತತ್ತ್ವ. ಹೀಗೆ ಸ್ಥೂಲವಾಗಿ ನೋಡುವುದಕ್ಕೆ ಅರ್ಥವು ಎಷ್ಟು ಸಂಕುಚಿತವಾಗಿದ್ದರೂ ಕೂಡ—ಎಂದರೆ ಆ ಕಾಲಕ್ಕೆ ಮಾತ್ರವೆ ಮತ್ತು ಆ ದೇಶಕ್ಕೆ ಮಾತ್ರವೆ ಹೊಂದು ವಂತಹ ಅರ್ಥವಾಗಿದ್ದರೂ ಕೂಡ—ಆ ವಾಕ್ಯವನ್ನು ಸ್ವಲ್ಪ ಸೂಕ್ಷ್ಮವಾಗಿ ಪರಿ ಶೀಲಿಸಿದಲ್ಲಿ, ವ್ಯಾಪಕವಾದ—ಎಂದರೆ ಸರ್ವಕಾಲಕ್ಕೂ ಮತ್ತು ಎಲ್ಲ ದೇಶಗಳಿಗೂ ಅನ್ವಯಿಸಬಹುದಾದ—ಅರ್ಥವು ಅಡಗಿರುವುದು ನಮಗೆ ಗೋಚರವಾಗುತ್ತದೆ. ಹೀಗೆ ಗೀತೆಯಲ್ಲಿ ಎಲ್ಲ ಸಂದರ್ಭಗಳಲ್ಲಿಯೂ, ಮಾತುಗಳು ಎಷ್ಟು ಅಸ್ಪಷ್ಟವಾಗಿ ದ್ದರೂ, ಈ ವ್ಯಾಪಕವಾದ ಅರ್ಥವು ಯಾವಾಗಲೂ ಇದ್ದೆ ಇರುವುದು.

ಆಗಿನ ಕಾಲದಲ್ಲಿ ಬಳಕೆಯಲ್ಲಿದ್ದ ಮತ ಮತ್ತು ದರ್ಶನಗಳಿಗೆ ಸಂಬಂಧಿ ಸಿದ ಪದಗಳನ್ನು ಗೀತೆಯಲ್ಲಿ ಉಪಯೋಗಿಸಿರುವುದರಿಂದ, ಸ್ಪಷ್ಟವಾಗಿಯೊ ಅಸ್ಪಷ್ಟವಾಗಿಯೊ ಕಂಡುಬರುವ ಮತ ಮತ್ತು ದರ್ಶನಗಳ ಸಿದ್ಧಾಂತಗಳ ವಿಷಯದಲ್ಲೂ ನಾವು ಹೀಗೆಯೆ ವರ್ತಿಸಬೇಕು; ಎಂದರೆ ಅಲ್ಲಿ ಅಡಗಿರುವ ವ್ಯಾಪಕವಾದ ಅರ್ಥಕ್ಕೆ ಲಕ್ಷ್ಯಕೊಡಬೇಕು. ಹೀಗೆಯೆ ಗೀತೆಯಲ್ಲಿ ಸಾಂಖ್ಯದ ಪ್ರಸ್ತಾಪಬಂದಾಗ, ಈಗ ಪ್ರಚಾರದಲ್ಲಿರುವ " ಅನೇಕ ಪುರುಷರು ಮತ್ತು ಒಂದು ಪ್ರಕೃತಿ " ಎಂದು ನಿರೂಪಿಸುವ ನಿರೀಶ್ವರ ಸಾಂಖ್ಯಕ್ಕೂ "ಒಂದೇ ಪುರುಷನೆಂದು " ವೇದಾಂತದಲ್ಲಿರುವಂತೆ ಗೀತೆಯಲ್ಲಿ ಹೇಳಿರುವ ಸಾಂಖ್ಯಕ್ಕೂ ಇರುವ ಸಂಬಂಧ ವನ್ನು ಕುರಿತು ಪ್ರಕೃತಕ್ಕೆ ಬೇಕಾಗಿರುವ ಕೆಲವು ಮಾತುಗಳನ್ನು ಹೇಳಲಿಬೇಕಾ ಗಿದೆ. ಯೋಗದ ವಿಷಯದಲ್ಲಿಯೂ ಹೀಗೆಯೆ. ಗೀತೆಯಲ್ಲಿ ಹೇಳಿರುವ ಸರ್ವತೋ ಮುಖವೂ, ಸೂಕ್ಷ್ಮವೂ, ವಿಪುಲವೂ ಆದ ಯೋಗಕ್ಕೂ ಮತ್ತು ಪತಂಜಲಿ ಪ್ರೋಕ್ತವಾಗಿ ಲಕ್ಷಣಬದ್ಧವೂ, ಶಾಸ್ತ್ರೀಯವೂ, ನಿಷ್ಕೃಷ್ಟವೂ ಮತ್ತು ಒಂದರ ಮೇಲೊಂದಂತೆ ಎಂಟು ಹಂತಗಳುಳ್ಳದ್ದೂ ಆದ ಯೋಗಕ್ಕೂ ಇರುವ ಸಂಬಂಧ ವನ್ನು ಕುರಿತು ಪ್ರಕೃತಕ್ಕೆ ಬೇಕಾದಷ್ಟು ಮಾತ್ರ ಹೇಳುತ್ತೇವೆ.

ಗೀತೆಯ ಪ್ರಕಾರ ಸಾಂಖ್ಯ ಮತ್ತು ಯೋಗ ಇವೆರಡೂ ಒಂದೆ ವೇದಾಂತ ವೃಕ್ಷದ ಎರಡು ಶಾಖೆಗಳು; ತತ್ತ್ವಸಾಕ್ಷಾತ್ಕಾರವೆಂಬ ಒಂದೆ ಗುರಿಯುಳ್ಳ ಎರಡು ಮಾರ್ಗಗಳು. ತತ್ತ್ವಶಾಸ್ತ್ರವನ್ನೂ ವಿಭಜನೆಯ ನಿಯಮಗಳನ್ನೂ ಅನು ಸರಿಸುವ ಸಾಂಖ್ಯವು ಬುದ್ಧಿಗ್ರಾಹ್ಯವಾದ ಮಾರ್ಗ. ಯೋಗಮಾರ್ಗವು ಇದಕ್ಕೆ ಪ್ರತಿಯಾಗಿ ಅಂತಃಸ್ಫೂರ್ತಿಯಿಂದ ತಿಳಿಯಬಲ್ಲದಾಗಿಯೂ, ಭಕ್ತಿಗ್ರಾಹ್ಯವೂ, ನೀತಿಯ ನಿಯಮಗಳನ್ನು ಒಳಗೊಂಡಿರುವುದೂ, ವಿಭಜನೆಯಮಾರ್ಗಕ್ಕೆ ವಿರುದ್ಧ

ವಾದ ಸಂಯೋಜನಕ್ರಮವನ್ನು ಅನುಸರಿಸುವುದೂ, ಅನುಭವಗಳ ಮೂಲಕ ತಿಳುವಳಿಕೆಯನ್ನು ಕೊಡಬಲ್ಲುದಾಗಿಯೂ ಇದೆ. ಹೀಗೆ ಬೇರೆ ಬೇರೆ ಮಾರ್ಗಗಳಾದರೂ ಈ ಎರಡು ದರ್ಶನಗಳೂ ಒಂದೇ ಗುರಿಗೆ ಒಯ್ಯುವ ಸಾಧನಗಳೆಂದು ಗೀತೆಯಲ್ಲಿ ಹೇಳಿದೆ.

ಗೀತೆಯು ಯಾವುದಾದರೂ ಒಂದೆ ಮತಸಿದ್ಧಾಂತ ಅಥವಾ ಸಂಪ್ರದಾಯವನ್ನು ಬೋಧಿಸುವುದೆಂಬ ವಾದಗಳಿಗೆ ನಾವು ಗಮನ ಕೊಡಬೇಕಾಗಿಲ್ಲ. ಗೀತೆಯ ಮೂಲೋತ್ಪತ್ತಿಯು ಹೇಗಾದರೂ ಇರಲಿ, ಅದರ ಉಪದೇಶವು ಸರ್ವವ್ಯಾಪಕವಾಗುವಂತಹುದು.

ಗೀತೆಯ ತತ್ತ್ವದೃಷ್ಟಿಯಾಗಲಿ, ನಿರೂಪಣೆಯ ಕ್ರಮವಾಗಲಿ, ಅದರ ಶಾಶ್ವತವೂ ಮತ್ತು ಮುಖ್ಯವೂ ಆದ ಅಂಶವಲ್ಲ. ಈ ಅಂಶವು ಶ್ರೇಷ್ಠವಾದ ವಸ್ತ್ರದಲ್ಲಿರುವಂತೆ ಗೀತೆಯಲ್ಲಿ ಹಾಸುಹೊಕ್ಕಾಗಿ ಹೆಣೆಯಲ್ಪಟ್ಟಿರುವ ಸೂಕ್ಷ್ಮವೂ, ಗಂಭೀರವೂ, ಪ್ರಚೋದಕವೂ ಆದ ವಿಷಯರಾಶಿಯೆ ಆಗಿದೆ.

ಈ ವಿಷಯರಾಶಿಯು ತತ್ತ್ವಜ್ಞಾನಿಯು ಸ್ಪಷ್ಟೀಕರಿಸುವ ಕೇವಲ ಊಹೆಗಳಾಗಲಿ ಕಲ್ಪನೆಗಳಾಗಲಿ ಮಾತ್ರವಲ್ಲದೆ, ಅತ್ಯಂತ ಮೇಲಿನ ಮಟ್ಟಕ್ಕೇರಿದ ಮನಸ್ಸಿನಿಂದ ಪರೀಕ್ಷಿಸಲು ಸಾಧ್ಯವಾಗುವ, ಆಧ್ಯಾತ್ಮಿಕ ಅನುಭವದಿಂದ ಪಡೆದ ಶಾಶ್ವತವಾದ ಜ್ಞಾನವಾದುದರಿಂದ, ಜೀವನದ ರಹಸ್ಯವನ್ನು ತಿಳಿಯಬೇಕೆಂದು ತೀವ್ರವಾಗಿ ಪ್ರಯತ್ನಿಸುವವರಿಗೆ ಅವಶ್ಯಕವೂ, ಸರ್ವಕಾಲದಲ್ಲಿಯೂ ಉಪಯುಕ್ತವೂ ಪ್ರಮಾಣವೂ ಆದ ವಿಷಯವಾಗಿದೆ.

ಭಾಷ್ಯಕಾರರು ಹೇಳುವಂತೆ ಗೀತೆಯು ಯಾವ ಒಂದೆ ದರ್ಶನವನ್ನಾಗಲಿ ಯೋಗವನ್ನಾಗಲಿ ಪ್ರತಿಪಾದಿಸುವುದಿಲ್ಲ. ಗೀತೆಯ ಭಾಷೆಯನ್ನೂ ಅದರ ವಿಚಾರಗಳ ಜೋಡಣೆಯನ್ನೂ ನಾವು ಗಮನಿಸಿದರೆ, ಅದು ಯಾವುದಾದರೂ ಒಂದು ಪಂಥದವರ ಮನೋಧರ್ಮವನ್ನಾಗಲಿ, ಸತ್ಯದ ಒಂದು ಭಾಗವನ್ನು ಮಾತ್ರ ಸ್ಥಾಪಿಸಲು ಸತ್ಯದ ಇತರ ಭಾಗಗಳನ್ನು ಗಮನಿಸದೆ ವಾದಿಸುವ ತಾರ್ಕಿಕನ ಮನೋಧರ್ಮವನ್ನಾಗಲಿ, ಪ್ರತಿಬಿಂಬಿಸುವುದಿಲ್ಲವೆನ್ನುವುದು ಸ್ಪಷ್ಟವಾಗಿ ತಿಳಿಯುತ್ತದೆ. ಇದಕ್ಕೆ ಪ್ರತಿಯಾಗಿ, ಗೀತೆಯಲ್ಲಿ ಕಂಡುಬರುವ ಯೋಚನಾತರಂಗವು ವಿಶಾಲವೂ ಮತ್ತು ಸತ್ಯದ ಎಲ್ಲ ಸ್ವರೂಪಗಳನ್ನು ಒಳಗೊಂಡುದೂ ಆಗಿ, ಯಾವುದನ್ನೂ ಬಿಡದೆ ಎಲ್ಲವನ್ನೂ ಸಂಯೋಜನೆ ಮಾಡುವ ಮನಸ್ಸನ್ನೂ ತೀವ್ರವಾದ ಮತ್ತು ಬಹುಮುಖವಾದ ಅನುಭವಗಳನ್ನೂ ವ್ಯಕ್ತಪಡಿಸುತ್ತದೆ.

ನಮ್ಮ ದೇಶದ ಆಧ್ಯಾತ್ಮಿಕ ಶಾಸ್ತ್ರಗಳಲ್ಲಿ ಅಂತಿಮ ಗುರಿಯನ್ನು ಸಾಧಿಸಲು ಒಂದೆ ಮಾರ್ಗವನ್ನು ಕಡೆಯವರೆಗೂ ಏಕಾಗ್ರತೆಯಿಂದ ಅನುಸರಿಸುವ ಪ್ರತ್ಯೇಕ ಮತಸಂಪ್ರದಾಯಗಳು ವಿಫಲವಾಗಿರುವಂತೆ ಎಲ್ಲ ಪಂಥಗಳನ್ನೂ ಸಮನ್ವಯ ಮಾಡುವ ಅನೇಕ ಗ್ರಂಥಗಳಲ್ಲಿ ಗೀತೆಯು ಮುಖ್ಯವಾದ ಸ್ಥಾನವನ್ನು ಅಲಂಕರಿಸುತ್ತದೆ. ಇದು ವಿಭಜನೆಮಾಡುವುದಿಲ್ಲ—ಎಲ್ಲವನ್ನೂ ಸಮನ್ವಯಮಾಡಿ ಸಂಯೋಜನೆ ಮಾಡುತ್ತದೆ.

ಏಕವೂ ನಿರ್ವಿಕಾರವೂ ಶುದ್ಧವೂ ಮತ್ತು ಶಾಶ್ವತವೂ ಆದ ಚೈತನ್ಯವೆ ಈ ಪ್ರಪಂಚಕ್ಕೆ ಆಧಾರವೆಂದು ಗೀತಾಶಾಸ್ತ್ರವು ಹೇಳಿದರೂ ಇದನ್ನು ಶುದ್ಧವಾದ ಅದ್ವೈತವೆಂದು ಹೇಳಲಾಗುವುದಿಲ್ಲ; ಸೃಷ್ಟಿಯಲ್ಲಿ ಸರ್ವವ್ಯಾಪಿಯಾದ ತ್ರಿಗುಣಾತ್ಮಕವಾದ ಪ್ರಕೃತಿಯು ಮಾಯಾಸ್ವರೂಪವನ್ನು ವಿವರಿಸಿದ್ದಾಗ್ಯೂ ಇದು ಮಾಯಾವಾದವೂ ಅಲ್ಲ; ಜೀವಭೂತವಾದ ಶಾಶ್ವತವಾದ ಪರಾಪ್ರಕೃತಿಯನ್ನು ಉಳ್ಳವನೆಂದು ಪರಮಾತ್ಮನನ್ನು ವರ್ಣಿಸಿ ಮುಕ್ತನಾದ ಜೀವನು ಅವನಲ್ಲಿ ಐಕ್ಯವಾಗುವುದಕ್ಕಿಂತಲೂ ಅವನಲ್ಲೇ ವಾಸಮಾಡುವುದಕ್ಕೆ ಹೆಚ್ಚು ಪ್ರಾಧಾನ್ಯವನ್ನು ಕೊಟ್ಟರೂ ಇದು ವಿಶಿಷ್ಟಾದ್ವೈತವಲ್ಲ; ಸೃಷ್ಟಿಯು ಪ್ರಕೃತಿ ಮತ್ತು ಪುರುಷರಿಂದ ಸಂಭವಿಸಿದೆ ಎಂದು ನಿರೂಪಿಸಿದ್ದರೂ ಇದು ಸಾಂಖ್ಯವಲ್ಲ; ಪುರಾಣದಲ್ಲಿ ವಿಷ್ಣುವಿನ ಅವತಾರವೆಂದು ಹೇಳಿರುವ ಕೃಷ್ಣನನ್ನೆ ಪರಮೇಶ್ವರನೆಂದೂ, ನಿರ್ಗುಣವೂ ನಿರಂಜನವೂ ಆದ ಪರಬ್ರಹ್ಮವು ಸರ್ವಭೂತ ಮಹೇಶ್ವರನೂ ಎಲ್ಲ ಭೂತಗಳಿಗೂ ಮಿತ್ರನೂ ಆದ ಶ್ರೀಕೃಷ್ಣನಿಗಿಂತ ಶ್ರೇಷ್ಠವೆಂದು ಹೇಳದೆ ಇಬ್ಬರಿಗೂ ಸಮತ್ವವನ್ನು ಹೇಳಿದರೂ ಇದು ಶುದ್ಧಾದ್ವೈತ (ವಿಷ್ಣ್ವದ್ವೈತ)ವೂ ಅಲ್ಲ. ಹಿಂದೆ ಎಲ್ಲ ಬಗೆಯ ಸಿದ್ಧಾಂತಗಳನ್ನೂ ಉಪನಿಷತ್ತುಗಳು ಸಮನ್ವಯ ಮಾಡಿ ಒಟ್ಟುಗೂಡಿಸಿರುವಂತೆ ಗೀತೆಯೂ ಕೂಡ ಆಧ್ಯಾತ್ಮಿಕ ತತ್ತ್ವಗಳನ್ನು ಬುದ್ಧಿವಂತಿಕೆಯಿಂದ ಸಂಯೋಜನೆ ಮಾಡಿದೆ. ಉಪನಿಷತ್ತುಗಳಂತೆಯೆ ಗೀತೆಯೂ ಕೂಡ ಅದರ ಉಪದೇಶಗಳ ಸಾರ್ವತ್ರಿಕ ವ್ಯಾಪನೆಗೆ ಅಡ್ಡಿಯಾಗುವ ಯಾವ ಪೂರ್ವ ನಿರ್ದಿಷ್ಟ ಮಾರ್ಗಗಳನ್ನು ದೂರೀಕರಿಸುತ್ತದೆ. ವೇದಾಂತದ ಮೂರು ಮೂಲಸ್ತಂಭಗಳಲ್ಲಿ ಒಂದಾದ (ಪ್ರಸ್ಥಾನತ್ರಯ .......ಗೀತಾ, ಉಪನಿಷತ್ತುಗಳು, ಬ್ರಹ್ಮಸೂತ್ರಗಳು) ಗೀತೆಯು ತಮ್ಮ ಸಿದ್ಧಾಂತವನ್ನೆ ಪ್ರತಿಪಾದಿಸುವುದೆಂದೂ ಇತರ ಸಿದ್ಧಾಂತಗಳನ್ನು ನಿರಾಕರಿಸುವುದೆಂದೂ ಅನೇಕ ಭಾಷ್ಯಕಾರರು ವಾದಿಸಿದ್ದಾರೆ. ಆದರೆ ಈ ವಿಧವಾದ ಮನೋಭಾವವು ಗೀತೆಯ ಧೋರಣೆಗೆ ತೀರಾ

ವಿರೋಧವಾದುದು. ಗೀತೆಯು ಬೇರೆ ಬೇರೆ ಪಂಥಗಳಿಗೆ ಸೇರಿದ ಟೀಕಾಕಾರರ ವಾಗ್ಯುದ್ಧಕ್ಕೆ ಉಪಯೋಗಿಸಲು ಯೋಗ್ಯವಾದ ಆಯುಧವಲ್ಲ. ಗೀತೆಯು ಆಧ್ಯಾತ್ಮಿಕ ತತ್ತ್ವಗಳ ಮತ್ತು ಅನುಭವಗಳ ಭಂಡಾರದ ಒಂದು ದ್ವಾರ. ಈ ದ್ವಾರದಿಂದ ನಾವು ಪ್ರವೇಶಿಸಿದರೆ ಆ ಸರ್ವಶ್ರೇಷ್ಠವಾದ ಭಂಡಾರದ ಎಲ್ಲ ಭಾಗಗಳೂ ಗೋಚರವಾಗುತ್ತವೆ. ಕೆಲವು ತತ್ತ್ವಗಳನ್ನು ಮಾತ್ರ ನಿರೂಪಣೆ ಮಾಡಿ ಇತರ ಕೆಲವು ತತ್ತ್ವಗಳನ್ನು ಮರೆಮಾಡಿ ನಮ್ಮ ಸಮಗ್ರ ದೃಷ್ಟಿಯನ್ನು ಸಂಕೋಚಪಡಿಸುವುದಿಲ್ಲ; ವಿಶಾಲದೃಷ್ಟಿಯನ್ನು ಚಿಕ್ಕದಾಗಿ ಮಾಡುವುದಿಲ್ಲ.

ಬಹಳ ಹಿಂದಿನ ಕಾಲದಿಂದ ನಮ್ಮ ದೇಶದಲ್ಲಿ ಆಗಿರುವ ಜ್ಞಾನದ ಬೆಳವಣಿಗೆಯನ್ನು ಗಮನಿಸಿದರೆ ಬೇರೆ ಬೇರೆ ಬಗೆಯ ಅಭಿಪ್ರಾಯಗಳ ಜೋಡಣೆ ಮತ್ತು ಸಮನ್ವಯ ನಡೆದಿರುವುದು ತಿಳಿಯುತ್ತದೆ. ಮೊದಲು ಈ ವಿಧವಾದ ಸಂಯೋಜನೆ ವೇದದಲ್ಲಿ ಕಂಡುಬರುತ್ತದೆ. ಇದರಲ್ಲಿ ಮನುಷ್ಯನ—ಎಂದರೆ ಆಧ್ಯಾತ್ಮಿಕ ಜ್ಞಾನ, ಶಕ್ತಿ, ಆನಂದ, ಜೀವನ ಮತ್ತು ಭವ್ಯತೆಯ 'ಪರಮೋಚ್ಚ ವಾದ ಮತ್ತು ಅತ್ಯಂತ ವ್ಯಾಪಕವಾದ ದೃಷ್ಟಿಯುಳ್ಳ ಶಿಖರಕ್ಕೆ ಏರಿರುವ ಮನೋ ಮಯವಾದ ಪುರುಷನ—ಸ್ಥಿತಿಯೂ, ದೇವತೆಗಳ ದಿವ್ಯಾವಸ್ಥೆಯೂ ಒಂದೆ ಎಂದು ಹೇಳಿದೆ. ಈ ಸಂಯೋಜನೆಯು ಸ್ಥೂಲಪ್ರಪಂಚದ ವಸ್ತುಗಳನ್ನೆ ಪ್ರತೀಕಗಳನ್ನಾಗಿ ಟ್ಟುಕೊಂಡು ಅವುಗಳ ಮೂಲಕ ನಮ್ಮನ್ನು ಅವಾಙ್ಮಾನಸಗೋಚರವಾದ ಸೂಕ್ಷ್ಮ ಪ್ರಪಂಚಕ್ಕೆ ಒಯ್ಯುತ್ತದೆ. ವೈದಿಕ ಋಷಿಗಳ ಅನುಭವದ ಪ್ರಕಾರ ಈ ಸಮನ್ವ ಯದ ಪರಾಕಾಷ್ಠೆಯು ದಿವ್ಯವೂ ಅತೀಂದ್ರಿಯವೂ ಆನಂದಮಯವೂ ಆದ ಸ್ಥಿತಿ. ಈ ಸ್ಥಿತಿಯಲ್ಲಿ, ಬೆಳೆಯುತ್ತಿರುವ ಮನುಷ್ಯನ ಆತ್ಮವೂ ದೇವತೆಗಳ ನಿತ್ಯವಾದ ದಿವ್ಯಪೂರ್ಣತೆಯೂ ಸಂಪೂರ್ಣವಾಗಿ ಮಿಳಿತವಾಗಿ ಸಾಫಲ್ಯವನ್ನು ಹೊಂದುತ್ತವೆ.

ವೈದಿಕಋಷಿಗಳ ಈ ದಿವ್ಯಾನುಭವವು ಉಪನಿಷತ್ತುಗಳಲ್ಲಿರುವ ಆಧ್ಯಾ ತ್ಮಿಕ ಜ್ಞಾನದ ಉಜ್ವಲವಾದ ಮತ್ತು ಗಂಭೀರವಾದ ಸಮನ್ವಯಕ್ಕೆ ತಳಹದಿ ಯಾಗಿದೆ. ಆತ್ಮಾನ್ವೇಷಣೆಗೆ ಮಹತ್ವಪೂರ್ಣವೂ ಫಲಪ್ರದವೂ ಆದ ಈ ಕಾಲ ದಲ್ಲಿ ಶಾಶ್ವತವಾದ ಬ್ರಹ್ಮಜ್ಞಾನವನ್ನು ತಮ್ಮ ದಿವ್ಯ ಸ್ಫೂರ್ತಿಯಿಂದ ಪಡೆದು ಮೋಕ್ಷಹೊಂದಿದವರು ನೋಡಿದ ಮತ್ತು ಅನುಭವಿಸಿದ ವಿಷಯಗಳನ್ನೆಲ್ಲ ಸಂಗ್ರಹಿಸಿ ವೇದಾಂತವೆನ್ನಿಸಿಕೊಳ್ಳುವ ಉಪನಿಷತ್ತುಗಳು ಸಮನ್ವಯಮಾಡಿವೆ. ಗೀತೆಯು ಈ ವೇದಾಂತದ ಸಮನ್ವಯದ ಮುಖ್ಯ ತತ್ತ್ವಗಳನ್ನು ಆಧಾರವನ್ನಾಗಿ ಟ್ಟುಕೊಂಡು ಅಲ್ಲಿಂದ ಮುಂದಕ್ಕೆ ಹೋಗಿ ಮನುಷ್ಯನ ಆತ್ಮವು ಪರಬ್ರಹ್ಮನ

ಸಾಮೀಪ್ಯವನ್ನು ಹೊಂದಿ ಅದರಲ್ಲಿ ಐಕ್ಯವಾಗಲು ಪರಮಸಾಧಕಗಳಾದ ಭಕ್ತಿ, ಜ್ಞಾನ ಮತ್ತು ಕರ್ಮಗಳ ದಿವ್ಯ ಸಮನ್ವಯವನ್ನು ಮಾಡುತ್ತದೆ.

ಇದಲ್ಲದೆ ಇನ್ನೂ ಒಂದು ಸಮನ್ವಯವುಂಟು ; ಇದು ತಂತ್ರಗಳಿಗೆ ಸಂಬಂಧ ಪಟ್ಟಿದ್ದು. ಈ ಸಮನ್ವಯವು ಗೀತೆಯ ಸಮನ್ವಯದಷ್ಟು ಗಂಭೀರವೂ, ಆಧ್ಯಾತ್ಮಿಕ ದೃಷ್ಟಿಯಿಂದ ಶ್ರೇಷ್ಠವೂ ಅಲ್ಲ. ಆದಾಗ್ಯೂ ಕೆಲವು ವಿಷಯಗಳಲ್ಲಿ ಇದು ಗೀತೆಯ ಸಮನ್ವಯಕ್ಕಿಂತ ಮುಂದುವರೆದುದೂ ಶಕ್ತಿಯುತವೂ ಆಗಿದೆ. ಯಾಕೆಂದರೆ ಆಧ್ಯಾತ್ಮಿಕ ಜೀವನಕ್ಕೆ ಅಡ್ಡಿಮಾಡುವ ಪ್ರತಿಬಂಧಕಗಳನ್ನೂ ಸಹ ಸಾಧನಗಳನ್ನಾಗಿ ಮಾರ್ಪಡಿಸಿಕೊಂಡು ಅವುಗಳ ಮೂಲಕ ಹೆಚ್ಚು ವ್ಯಾಪಕವಾದ ಆಧ್ಯಾತ್ಮಿಕ ಸಿದ್ಧಿಗೆ ಸಹಾಯವನ್ನು ಹೊಂದಿ ನಮ್ಮ ನಿತ್ಯ ಜೀವನದ ಎಲ್ಲ ಅಂಶ ಗಳನ್ನೂ ಭಗವಂತನ ಲೀಲೆಯೆಂದು ಭಾವಿಸಿ ಆಧ್ಯಾತ್ಮಿಕಜೀವನದಲ್ಲಿ ಅಡಗುವಂತೆ ಈ ಸಮನ್ವಯವು ಮಾಡುತ್ತದೆ ಕೆಲವು ಅಂಶಗಳಲ್ಲಿ ಇದು ಗೀತೆಯ ಸಮನ್ವಯ ಕ್ಕಿಂತಲೂ ಸದ್ಯದಲ್ಲೇ ಅಧಿಕ ಫಲಪ್ರದವಾದುದು. ಏತಕ್ಕೆಂದರೆ ದಿವ್ಯವಾದ ಜ್ಞಾನ, ಭಕ್ತಿ, ಕರ್ಮಗಳಲ್ಲದೆ ರಾಜಯೋಗ ಹಠಯೋಗಗಳ ತತ್ತ್ವಗಳನ್ನೂ, ಇವುಗಳಲ್ಲಿ ಪ್ರೋಕ್ತವಾಗಿರುವ ದೈಹಿಕ ಮತ್ತು ಮಾನಸಿಕ ತಪಸ್ಸಿನಿಂದ ಸಿದ್ಧಿಸುವ ಸೂಕ್ಷ್ಮಲೋಕಗಳ ಪ್ರಜ್ಞೆಯನ್ನೂ ಅಗ್ರಸ್ಥಾನಕ್ಕೆ ತರುವುದು. ಈ ವಿಷಯಗಳಿಗೆ ಗೀತೆಯಲ್ಲಿ ಪ್ರಧಾನಸ್ಥಾನವನ್ನು ಕೊಟ್ಟಿಲ್ಲ; ಪ್ರಾಸಂಗಿಕವಾಗಿ ಸೂಚಿಸಲ್ಪಟ್ಟಿವೆ. ಅಲ್ಲದೆ ಬ್ರಹ್ಮಪರಿಪೂರ್ಣತೆಯನ್ನು ಮುಟ್ಟಲು ಮನುಷ್ಯನಿಗೆ ಸಾಮರ್ಥ್ಯ ವಿದೆಯೆಂಬ ವಿಷಯವನ್ನು ಈ ತಾಂತ್ರಿಕಸಮನ್ವಯವು ಸ್ಪಷ್ಟಪಡಿಸುತ್ತದೆ. ಈ ವಿಷಯವು ವೈದಿಕ ಋಷಿಗಳಿಗೆ ತಿಳಿದಿತ್ತು ; ನಡುವೆ ಈ ವಿಷಯವು ಮೂಲೆಗೆ ತಳ್ಳಲ್ಪಟ್ಟಿತ್ತು. ಆದರೆ ಈ ವಿಷಯ ಎಂತಹುದೆಂದರೆ ಮನೋ ವ್ಯಾಪಾರ, ಅನುಭವ ಮತ್ತು ಆಕಾಂಕ್ಷೆ ಇವುಗಳ ಮುಂದೆ ಮಾಡಬಹುದಾದ ಯಾವ ಸಮನ್ವಯದಲ್ಲಿಯೂ ಇದು ಪ್ರಧಾನಸ್ಥಾನವನ್ನು ಅಲಂಕರಿಸುತ್ತದೆ.

ಹೊಸ ಯುಗದ ಪ್ರಾರಂಭದಲ್ಲಿರುವ ನಾವು ಈ ವಿಧವಾದ ಹೊಸದಾದ ಮತ್ತು ವ್ಯಾಪಕವಾದ ಸಮನ್ವಯದ ಬೆಳವಣಿಗೆಯ ಹೊಸಲಿನಲ್ಲಿದ್ದೇವೆ. ಮೂರು ಮತಗಳಲ್ಲಿ ಯಾವ ಒಂದನ್ನೂ ಅನುಸರಿಸಬೇಕೆಂದಾಗಲಿ, ತಾಂತ್ರಿಕರಾಗಬೇಕೆಂ ದಾಗಲಿ, ಹಿಂದೆ ಇದ್ದ ಆಸ್ತಿಕ ಧರ್ಮಗಳಲ್ಲಿ ಯಾವುದಾದರೂ ಒಂದರ ಅನುಯಾಯಿಯಾಗಿರಬೇಕೆಂದಾಗಲಿ ಅಥವಾ ಗೀತೆಯ ಶ್ಲೋಕಗಳೆಂಬ ಚೌಕಟ್ಟನ್ನು ಮೀರಕೂಡದೆಂದಾಗಲಿ ಅಂತಹ ನಿರ್ಬಂಧಗಳು ಯಾವುವೂ ನಮಗೆ ಇಲ್ಲ. ಹಾಗೆ ಮಾಡಿದರೆ ನಮ್ಮ ಸ್ವಂತ ಅನುಭವ ಮತ್ತು ನಮ್ಮಲ್ಲಿ

ಹುದುಗಿರುವ ಸಾಮರ್ಥ್ಯಗಳನ್ನು ಉಪಯೋಗಿಸದೆ ಹಿಂದಿನವರ ಅನುಭವ ಮತ್ತು ಜ್ಞಾನಗಳ ಸಹಾಯದಿಂದ ನಮ್ಮ ಆಧ್ಯಾತ್ಮಿಕ ಜೀವನವನ್ನು ರೂಪಿಸಿಕೊಂಡಂತೆ ಆಗುತ್ತದೆ. ನಾವು ಹಿಂದಿನ ಯುಗದವರಲ್ಲ; ಬರಲಿರುವ ಉಜ್ಜ್ವಲ ಯುಗದ ಕಾಲಕ್ಕೆ ಸೇರಿದವರು. ಅನೇಕ ಹೊಸ ವಿಷಯಗಳು ನಮಗೆ ಗೋಚರವಾಗುತ್ತಿವೆ. ನಾವು ಈಗ ಹಿಂದೂದೇಶದ ಮತ್ತು ಪ್ರಪಂಚದ ಇತರ ದೇಶಗಳ ಆಸ್ತಿಕಮತಗಳ ಸಾರವನ್ನೂ ಬೌದ್ಧಮತದ ತತ್ತ್ವಗಳ ಬಗ್ಗೆ ಹೊಸದಾಗಿ ಬೆಳಕಿಗೆ ಬಂದಿರುವ ಅಂಶಗಳನ್ನೂ ಗ್ರಹಿಸಬೇಕಲ್ಲದೆ ಈಗಿನ ಕಾಲದ ಶಾಸ್ತ್ರಗಳ ಸಂಕುಚಿತವಾದರೂ ಪ್ರಭಾವವುಳ್ಳ ತತ್ತ್ವಗಳಿಗೂ ಸರಿಯಾದ ಸ್ಥಾನವನ್ನು ಕೊಡಬೇಕು. ಇದಲ್ಲದೆ ಬಹಳ ಪುರಾತನ ಕಾಲದಲ್ಲಿದ್ದ ಮತ್ತು ಸಾರರಹಿತವೆಂದು ಬದಿಗೊತ್ತಲ್ಪಟ್ಟಿದ್ದ ವಿಷಯಗಳು ಈಗ ಪುನಃ ಉಜ್ವಲವಾದ ರಹಸ್ಯಗಳ ರೂಪದಲ್ಲಿ ಪ್ರಕಾಶವನ್ನು ಬೀರುತ್ತಿವೆ. ಈ ವಿಷಯಗಳು ಮನುಷ್ಯನ ಸ್ಮೃತಿಯಿಂದ ಬಹುಕಾಲ ನಷ್ಟವಾಗಿದ್ದು ಈಗ ಪುನಃ ತೆರೆಯ ಹಿಂದಿನಿಂದ ಗೋಚರವಾಗುತ್ತಿವೆ. ಇವೆಲ್ಲವೂ ಒಂದು ಹೊಸದಾದ ವ್ಯಾಪಕವಾದ ಮತ್ತು ಮಹತ್ವಪೂರಿತವಾದ ಸಮನ್ವಯಕ್ಕೆ ಮುನ್ಸೂಚಕಗಳಾಗಿವೆ. ನಮಗೆ ಲಭಿಸಿರುವ ಎಲ್ಲ ಜ್ಞಾನದ ಒಂದು ನೂತನವೂ ಬಹಳ ವ್ಯಾಪಕವೂ ಆದ ಸಮನ್ವಯವು ಮುಂದಿನ ಜನಾಂಗದ ಬುದ್ಧಿಯ ಬೆಳವಣಿಗೆಗೂ ಆಧ್ಯಾತ್ಮಿಕ ಪ್ರಗತಿಗೂ ಬಹಳ ಅವಶ್ಯಕವಾಗಿದೆ. ಹಿಂದಿನ ಸಮನ್ವಯಗಳು ಯಾವರೀತಿ ಆದರ ಹಿಂದಿನ ಕಾಲದ ಸಮನ್ವಯಗಳನ್ನು ಆಧಾರವನ್ನಾಗಿಟ್ಟುಕೊಂಡು ಅಲ್ಲಿಂದ ಮುಂದಕ್ಕೆ ಸಂಯೋಜಿಸಲ್ಪಟ್ಟುವೊ ಅದೇರೀತಿ ಮುಂದೆ ಆಗಲಿರುವ ಸಮನ್ವಯವು ಇಲ್ಲಿಯವರೆಗಿದ್ದ ಎಲ್ಲಾ ಜ್ಞಾನಿಗಳ ಮತ್ತು ಮುಕ್ತರ ಆಧ್ಯಾತ್ಮಿಕ ತಿಳಿವಳಿಕೆ ಮತ್ತು ಅನುಭವಗಳ ಭದ್ರವಾದ ತಳಹದಿಯಮೇಲೆ ರಚಿಸಲ್ಪಡಬೇಕು. ಈ ಸಮನ್ವಯಕ್ಕೆ ಗೀತೆಯು ಬಹಳ ಮುಖ್ಯವಾದುದು.

ಗೀತೆಯ ವಿಚಾರಸರಣಿಯನ್ನು ಪಂಡಿತರು ಪರೀಕ್ಷೆ ಮಾಡುವಂತಾಗಲಿ ತತ್ತ್ವಶಾಸ್ತ್ರದ ಚರಿತ್ರೆಯಲ್ಲಿ ಗೀತೆಗೆ ಕೊಡಬೇಕಾದ ಸ್ಥಾನ ನಿರ್ಣಯ ದೃಷ್ಟಿಯಿಂದಾಗಲಿ ತರ್ಕಶಾಸ್ತ್ರಜ್ಞರ ವಿಭಜನೆಯ ದೃಷ್ಟಿಯಿಂದಾಗಲಿ ನಾವು ಗೀತೆಯ ಉಪದೇಶವನ್ನು ವಿಮರ್ಶಿಸುವುದಿಲ್ಲ. ಮಾನವಕೋಟಿಯು ಆಧ್ಯಾತ್ಮಿಕ ಅಭ್ಯುದಯದ ಮುಂದಿನ ಹಂತವನ್ನೇರಿ ಪೂರ್ಣತ್ವವನ್ನು ಹೊಂದಲು ಸಹಾಯ ಮಾಡುವ (ಜೀವಂತವೂ ಸಾರವತ್ತಾದುದೂ ಆದ) ತತ್ವವನ್ನು ಗೀತೆಯಲ್ಲಿ ಹುಡುಕುವುದೇ ನಮ್ಮ ಉದ್ದೇಶ.

# ಎರಡನೆಯ ಪ್ರಕರಣ

## ಭಗವಂತನಾದ ಗುರು

ಸಾಮಾನ್ಯವಾಗಿ ಪ್ರಪಂಚದ ಮತಗ್ರಂಥಗಳು ಕ್ರಿಸ್ತ, ಬುದ್ಧ, ಮೊಹಮದ್ ಮುಂತಾದ ಸಿದ್ಧಪುರುಷರ ಆಧ್ಯಾತ್ಮಿಕ ಜೀವನದ ಪರಿಣಾಮವಾಗಿರುವುವು; ಅಥವಾ ವೇದ ಉಪನಿಷತ್ತುಗಳಂತೆ ಕೇವಲ ತತ್ತ್ವಾನ್ವೇಷಣೆಗೆ ಮೀಸಲಾದ ಗ್ರಂಥಗಳಾಗಿರುವುವು. ಆದರೆ ಗೀತೆಯು ಆರೀತಿ ಇಲ್ಲ. ಇದರ ವೈಶಿಷ್ಟ್ಯವೇನೆಂದರೆ ಇದು ಒಂದು ಸ್ವತಂತ್ರಗ್ರಂಥವಲ್ಲ ಗೀತೆಯು ಒಂದು ಜನಾಂಗದ ದೇಶಗಳ ನಡುವೆ ನಡೆಯುವ ಯುದ್ಧಗಳು, ಅಲ್ಲಿಯ ಜನರು ಮತ್ತು ಅವರ ತತ್ವಗಳನ್ನು ಕುರಿತ ಇತಿಹಾಸದಲ್ಲಿ ಬರುವ ಒಂದು ಘಟನೆಯಾಗಿರುವುದು. ಇದರಲ್ಲಿ ಪ್ರಧಾನ ಪಾತ್ರದಲ್ಲಿ ಒಬ್ಬನ ಜೀವನದಲ್ಲಿ ಒಂದು ವಿಷಮಸನ್ನಿವೇಶವು ಒದಗಿದೆ. ಅವನ ಜೀವನದ ಅತಿ ಮುಖ್ಯವಾದ ಕಾರ್ಯವನ್ನು ಮಾಡುವ ಸಮಯವು ಒದಗಿದೆ. ಈ ಕಾರ್ಯವಾದರೋ ಘೋರವೂ ಹಿಂಸಾತ್ಮಕವೂ ಆಗಿದೆ. ಈ ಕಾರ್ಯದಿಂದ ಅವನು ವಿಮುಖನಾಗಬೇಕು. ಅಥವಾ ಕೊನೆಯವರೆಗೂ ನಿರ್ವಹಿಸಬೇಕು. ಬೇರೆ ಮಾರ್ಗವೇ ಅವನಿಗೆ ಉಳಿದಿಲ್ಲ. ಸರ್ವರಿಗೂ ಮಾನ್ಯವಾದ ಮಹಾಭಾರತದಲ್ಲಿ ಸೇರಿರುವುದರಿಂದ ಗೀತೆಯ ಉಪದೇಶಕ್ಕೆ ಹೆಚ್ಚಿನ ಗೌರವ ಬರುವುದೆಂಬ ಉದ್ದೇಶದಿಂದ ಅದು ಮಹಾಭಾರತದಲ್ಲಿ ಪ್ರಕ್ಷಿಪ್ತವಾಯಿತೆಂಬುದು ಆಧುನಿಕರಾದ ಕೆಲವು ವಿಮರ್ಶಕರ ಅಭಿಪ್ರಾಯ. ಈ ಅಭಿಪ್ರಾಯವು ಸಾಧುವೋ ಇಲ್ಲವೋ ಎಂಬ ವಿಚಾರವು ನಮಗೆ ಅಷ್ಟೇನೂ ಮುಖ್ಯವಾದುದಲ್ಲ. ನಮಗೇನೋ ಈ ಅಭಿಪ್ರಾಯಕ್ಕೆ ಸಹಾಯಕವಾದ ಆಧಾರಗಳು ಬಹಳ ಕಡಿಮೆಯೆಂದೂ ಇದಕ್ಕೆ ವಿರೋಧಕವಾದ ಕಾರಣಗಳು ಪ್ರಬಲವಾಗಿರುವುವೆಂದೂ ಕಾಣುತ್ತದೆ. ಒಂದು ವೇಳೆ ಈ ಅಭಿಪ್ರಾಯವು ನಿಜವಾಗಿದ್ದರೂ ಕೂಡ, ಗೀತೆಯ ಕರ್ತೃವು ಗೀತೆಯನ್ನು ಬಹಳ ಕುಶಲತೆಯಿಂದ ಮಹಾಭಾರತದಲ್ಲಿ ಹಾಸುಹೊಕ್ಕಾಗಿ ಹೆಣೆದಿರುತ್ತಾನೆ. ಅಲ್ಲದೆ ಗೀತೆಯು ಮಹಾಭಾರತದ ಒಂದು ಭಾಗವೆಂದು ಪದೇ ಪದೇ ಒತ್ತಿ ಹೇಳುತ್ತಾನೆ. ಗೀತೆಯ ಅಂತ್ಯದಲ್ಲಿ ಈ ವಿಷಯವನ್ನು ಹೇಳುವುದಲ್ಲದೆ ಅತಿ ಮುಖ್ಯವಾದ ತತ್ತ್ವಗಳನ್ನು ಉಪದೇಶಿಸುವಾಗಲೂ ಕೂಡ ಈ ವಿಷಯವನ್ನು ಪ್ರಸ್ತಾಪಿಸುತ್ತಾನೆ. ಆದುದರಿಂದ ಲೇಖಕನು ಒತ್ತಿ ಒತ್ತಿ ಹೇಳುವ ಈ

ವಿಷಯವನ್ನು ಒಪ್ಪಿಕೊಂಡು, ಗುರುಶಿಷ್ಯರಿಬ್ಬರೂ ಮಹಾಭಾರತದ ಯುದ್ಧದ ವಿಚಾರದಲ್ಲೇ ಮಗ್ನರಾಗಿದ್ದರೆಂದು ಅಂಗೀಕರಿಸಬೇಕು. ಆದುದರಿಂದ ಗೀತೆಯು ಕೇವಲ ಆಧ್ಯಾತ್ಮಿಕ ತತ್ತ್ವಗಳನ್ನಾಗಲಿ ನೀತಿಬೋಧೆಯನ್ನಾಗಲಿ ಮಾತ್ರ ಉಪದೇಶಮಾಡುವುದೆಂದು ನಾವು ತಿಳಿಯಬಾರದು. ನಿತ್ಯಜೀವನದಲ್ಲಿ ಈ ಆಧ್ಯಾತ್ಮಿಕ ತತ್ತ್ವಗಳನ್ನು ಮತ್ತು ನೀತಿಯನ್ನು ಅನ್ವಯಿಸುವಾಗ ಉಂಟಾಐವ ಜಟಿಲಸಮಸ್ಯೆಯ ನಿವಾರಣೆಗಾಗಿ ಗೀತೆಯು ಉಪದೇಶಿಸಲ್ಪಡುವುದೆಂದು ನಾವು ಗಮನದಲ್ಲಿಡಬೇಕು. ಗೀತೆಯ ಉಪದೇಶದ ಧೋರಣೆಯನ್ನು ನಾವು ಗ್ರಹಿಸಬೇಕಾದರೆ ಈ ಸಮಸ್ಯೆಯ ಸ್ವರೂಪವನ್ನೂ, ಕುರುಕ್ಷೇತ್ರದ ಯುದ್ಧದ ಅಂತರಾರ್ಥವನ್ನೂ, ಈ ಯುದ್ಧವು ಅರ್ಜುನನ ಮನಸ್ಸಿನ ಮೇಲೆ ಯಾವ ಪರಿಣಾಮವನ್ನುಂಟುಮಾಡಿತೆಂಬುದನ್ನೂ ಮೊದಲು ಗಮನಿಸಬೇಕು. ಹೊರ ನೋಟಕ್ಕೆ ಕಾಣದಿರುವಂತೆ ಯಾವ ಗೂಢಾರ್ಥವೂ ಕಷ್ಟಕರವಾದ ಸಮಸ್ಯೆಗಳೂ ಇಲ್ಲದೆ ಇರುವ, ಮತ್ತು ಸಾಮಾನ್ಯವಾದ ಜ್ಞಾನ ಮತ್ತು ಕರ್ಮಗಳಿಂದ ಸಾಧಿಸಲು ಆಗುವ ಒಂದು ಸಾಮಾನ್ಯವಾದ ಘಟನೆಗೋಸ್ಕರ ಅತಿ ಗಹನವಾದ ತತ್ತ್ವಗಳ ಉಪದೇಶವನ್ನು ಮಾಡುತ್ತಿರಲಿಲ್ಲ. ಗೀತೆಯನ್ನು ವಿಚಾರಮಾಡುವಾಗ ಆಧ್ಯಾತ್ಮಿಕದೃಷ್ಟಿಯಿಂದ ಗುರುತರವಾದ ಮೂರು ವಿಷಯಗಳಿವೆ. ಇವು ಮನುಷ್ಯನಿಗೂ ಅವನ ಆಧ್ಯಾತ್ಮಿಕ ಜೀವನಕ್ಕೂ ಇರುವ ಒತ್ತಾದ (ನಿಕಟವಾದ) ಸಂಬಂಧವನ್ನೂ ಇವುಗಳಿಗೆ ಸಂಬಂಧಪಟ್ಟ ಸಮಸ್ಯೆಗಳನ್ನೂ ರೂಪಿಸುವುವು. ಈ ವಿಷಯಗಳು ಯಾವುವೆಂದರೆ ಭಗವಂತನ ಗುರುರೂಪ, ಶಿಷ್ಯನೊಂದಿಗೆ ಅವನಿಗಿದ್ದ ಸಂಬಂಧದ ವೈಶಿಷ್ಟ್ಯ ಮತ್ತು ಉಪದೇಶಮಾಡಿದ ಸಮಯ (ವಿಶೇಷ). ಗುರುವು ಮನುಷ್ಯನಾಗಿ ಅವತರಿಸುವ ಸಾಕ್ಷಾತ್ ಭಗವಂತನೇ. ಶಿಷ್ಯನು ಆಗಿನ ಕಾಲದಲ್ಲಿದ್ದ ಜನಗಳಲ್ಲಿ ಶ್ರೇಷ್ಠನು. ಅಥವಾ ಈಗಿನ ಭಾಷೆಯಲ್ಲಿ ಹೇಳುವುದಾದರೆ ಆ ಯುಗದ ಮನುಷ್ಯರ ಪ್ರತಿನಿಧಿಯು. ಇವನು ಅವತರಿಸಿರುವ ಭಗವಂತನಿಗೆ ಅತ್ಯಂತ ಆಪ್ತನಾದ ಮಿತ್ರನೂ ಅವನ ಕೆಲಸಕ್ಕೆ ಮುಖ್ಯ ಸಾಧನವೂ ಆಗಿದ್ದನು. ಮತ್ತು ಅಪರಿಮೇಯವಾದ ಜ್ಞಾನರಾಶಿಯ ಆವರಣದ ಒಳಗಿನಿಂದ ಎಲ್ಲವನ್ನೂ ನಿಯಂತ್ರಣಮಾಡುವ ಪರಮಾತ್ಮನ ವಿನಾ (ಅದರಲ್ಲಿ) ಭಾಗವಹಿಸುವ ಇನ್ನು ಯಾರಿಗೂ ಅಗೋಚರವಾದ ಉದ್ದೇಶವುಳ್ಳ ಯುದ್ಧವೆಂಬ ಮಹಾಕಾರ್ಯದಲ್ಲಿ ಮುಖ್ಯ ಯೋಧನೂ ಆಗಿದ್ದನು. ಗೀತೆಯ ಉಪದೇಶದ ಸಮಯವು ಈ ಮಹಾಕಾರ್ಯದ ಜರುಗುವಿಕೆಯಲ್ಲಿ ಒಂದು ದಾರುಣವಾದ ವಿಷಮಸನ್ನಿವೇಶ. ಇದಕ್ಕೆ

ಸಂಬಂಧಿಸಿದ ವಿಷಾದವೂ, ಧರ್ಮಸಂಕಟವೂ ಘೋರಹಿಂಸೆಯೂ ಈ ಮನುಷ್ಯ ಪ್ರತಿನಿಧಿಯ ಮನಸ್ಸಿಗೆ ಬರಸಿಡಿಲಿನಂತೆ ಬಡಿದ ಕ್ಷಣ. ಮತ್ತು ಈ ಲೋಕದಲ್ಲಿ ಭಗವಂತನ ವ್ಯಾಪಾರ ಮತ್ತು ಮನುಷ್ಯನ ಜೀವನದ ಪ್ರಯೋಜನ, ಗತಿ ಮತ್ತು ಧ್ಯೇಯಗಳ ವಿಷಯದಲ್ಲಿ ದೊಡ್ಡ ಪ್ರಶ್ನೆಯನ್ನು ಮನಸ್ಸಿನಲ್ಲಿ ಎಬ್ಬಿಸಿದ ಕಾಲ.

ಭಗವಂತನ ಅವತಾರದಲ್ಲಿ ಎಂದರೆ ಮನುಷ್ಯವರ್ಗದಲ್ಲಿ ಭಗವಂತನ ಆವಿರ್ಭಾವ (ಕಾಣಿಸಿಕೊಳ್ಳುವಿಕೆ) ದಲ್ಲಿ ಭಗವಂತನು ಮನುಷ್ಯನ ಶರೀರವನ್ನು ಧರಿಸುವಿಕೆಯಲ್ಲಿ ಭರತಖಂಡದವರಿಗೆ ಪೂರ್ವಕಾಲದಿಂದಲೂ ನಂಬಿಕೆ ಇದೆ. ಪಾಶ್ಚಿಮಾತ್ಯರಲ್ಲಿ ಇಂತಹ ನಂಬಿಕೆಯು ಬೇರೂರಿಲ್ಲ. ಕಾರಣವೇನೆಂದರೆ ಕ್ರಿಸ್ತ ಮತದಲ್ಲಿ ಈ ವಿಷಯವು ಜನರ ಸಾಮಾನ್ಯ ಜೀವನಕ್ಕೂ ಜ್ಞಾನಯುಕ್ತಿಗಳಿಗೂ ಸಂಬಂಧಿಸಿದ ಕೇವಲ ಧರ್ಮತತ್ತ್ವವಾಗಿ ನಿರೂಪಿಸಲ್ಪಟ್ಟಿರುವುದು. ಭರತಖಂಡ ದಲ್ಲಾದರೋ ಈ ನಂಬಿಕೆಯು ವೇದಾಂತದರ್ಶನದಿಂದ ಸಹಜವಾಗಿ ಉದ್ಭವಿಸಿ ಜನಗಳ ಮನಸ್ಸಿನಲ್ಲಿ ಆಳವಾಗಿ ಬೇರೂರಿ ಚೆನ್ನಾಗಿ ಹೊರಹೊಮ್ಮಿದೆ.

ಸತ್ತೆಲ್ಲವೂ ಪರಮಾತ್ಮನ ಆವಿರ್ಭಾವ. ಏಕೆಂದರೆ ಸದ್ವಸ್ತುವು ಅವ ನೊಬ್ಬನೆ ಅಥವಾ ಉಳಿದ ವಸ್ತುಗಳೆಲ್ಲವೂ ಅವನ ನಿಜವಾದ ತೋರಿಕೆಯ ರೂಪಾಂತರ. ಚೇತನವುಳ್ಳ ಪ್ರತಿ ವಸ್ತುವೂ ನಾಮರೂಪವುಳ್ಳ ಪರಿಚ್ಛಿನ್ನ ವಸ್ತು ವಿನಲ್ಲಿ ಒಂದು ವಿಧದಲ್ಲಿ ಅಥವಾ ಒಂದು ಅಂಶದಲ್ಲಿ ಅಪರಿಚ್ಛಿನ್ನವಾದ ಅವನ ಅವತಾರವಾಗಿರುವುದು. ಆದರೆ ಈ ಆವಿರ್ಭಾವಕ್ಕೆ ದಟ್ಟವಾದ ಆವರಣವಿದೆ. ಪರಿಚ್ಛಿನ್ನವಾದ ಮತ್ತು ಅವಿದ್ಯೆಯಿಂದ ಕೊಂಚಮಟ್ಟಿಗೆ ಅಥವಾ ಸಂಪೂರ್ಣವಾಗಿ ಆವೃತವಾದ ಚೈತನ್ಯದಿಂದ ಭಗವಂತನ ದಿವ್ಯಚೈತನ್ಯದವರೆಗೂ ಅನೇಕ ಮಟ್ಟಗಳಿರುವುವು. ದೇಹವನ್ನು ಧರಿಸಿರುವ ಜೀವನೆಂಬ ಚೈತನ್ಯವು ಪರಮಾತ್ಮ ನೆಂಬ ತೇಜಸ್ಸಿನ ಒಂದು ಕಿಡಿಯು ಮನುಷ್ಯನ ಆತ್ಮವು ಆತ್ಮಜ್ಞಾನದ ಬೆಳಕಿ ನಲ್ಲಿ ವಿಕಾಸಹೊಂದುತ್ತಾ ಅವಿದ್ಯೆಯೆಂಬ ಕತ್ತಲನ್ನು ಭೇದಿಸಿ ಸ್ವಸ್ವರೂಪವನ್ನು ಹೊಂದುತ್ತದೆ. ಜಗತ್ತಿನ ನಾನಾರೂಪಗಳಲ್ಲಿ ತನ್ನ ಚೈತನ್ಯವನ್ನು ತುಂಬಿರುವ ಪರಮಾತ್ಮನೂ ಕೂಡ ಪ್ರಾಯಿಕವಾಗಿ ಜ್ಞಾನ, ಪ್ರೇಮ, ಆನಂದ ಮತ್ತು ವಿಭೂತಿಗಳ ನಾನಾ ಮಟ್ಟಗಳಲ್ಲಿ ಬಹುಮುಖವಾದ ವಿಕಾಸದಿಂದ ತಿಳಿಯ ಲ್ಪಡುತ್ತಾನೆ.

ಈಶ್ವರನ ಜ್ಞಾನ ಮತ್ತು ಶಕ್ತಿಗಳು ಅವತರಿಸಿ, ಕೆಳಕ್ಕಿಳಿದು, ಮೂರ್ತಿ ಗೊಂಡು, ಮನುಷ್ಯನ ದೇಹದಲ್ಲಿ ವ್ಯಕ್ತವಾಗಿ ಮನುಷ್ಯನಿಗೆ ಸಹಜವಾದ ಕಾರ್ಯ

ಗಳಲ್ಲಿ ತೊಡಗಿದಾಗ ಅವು ಸಾಮಾನ್ಯ ಮನುಷ್ಯನ ಜ್ಞಾನಶಕ್ತಿಗಳಿಗೆ ಶತಶಃ ಸಹಸ್ರಶಃ ಮಿಗಿಲಾದ ಪ್ರಮಾಣದಲ್ಲಿ ಮತ್ತು ಮುಖಗಳಲ್ಲಿ ಹೊರಹೊಮ್ಮುವುದಲ್ಲದೆ ತನ್ನದೇ ಆದ ಎಂದರೆ ಈಶ್ವರಭಾವಕ್ಕೆ ಸಹಜವಾದ ನಿತ್ಯತ್ವವನ್ನೂ ಅಪರಿಮಿತತ್ವವನ್ನೂ ಹೊಂದಿರುತ್ತವೆ. ಹೀಗೆ ಅಜನಾದ ಈಶ್ವರನು ಮನುಷ್ಯ ಸ್ವರೂಪವನ್ನು ಧರಿಸಿದ್ದರೂ ಕೂಡ ತನ್ನ ನಿಜಸ್ವರೂಪವನ್ನು ತಿಳಿದಿರುವುದೇ ಉಪಾಧಿಸಹಿತವಾದ ಆವಿರ್ಭಾವದ ಲಕ್ಷಣ. ಇದೇ ಪರಮಾತ್ಮನ ಸಂಪೂರ್ಣವಾದ ಮತ್ತು ಸ್ವೇಚ್ಛಾಪ್ರವೃತ್ತವಾದ ಇಳಿಯುವಿಕೆ. ಇದೇ ಪೂರ್ಣವಾದ ಅವತಾರ.

ಗೀತಾಶಾಸ್ತ್ರಕ್ಕೆ ಅತ್ಯಂತ ಸದೃಶವಾದ ವೈಷ್ಣವಸಂಪ್ರದಾಯವೊಂದರಲ್ಲಿ ಈ ಅವತಾರತತ್ತ್ವಕ್ಕೆ ಪ್ರಾಧಾನ್ಯವನ್ನು ಕೊಟ್ಟಿದೆ. ನರನಾರಾಯಣರೆಂಬ ಮೂರ್ತಿದ್ವಯದಲ್ಲಿ ಈಶ್ವರನಲ್ಲಿರುವ ಜೀವನಿಗೂ ಜೀವನಲ್ಲಿರುವ ಈಶ್ವರನಿಗೂ ಇರುವ ಸಂಬಂಧದ ನಿರೂಪಣೆ ಈ ಸಂಪ್ರದಾಯದಲ್ಲಿ ಬೇರೂರಿದೆ. ಈಶ್ವರನ ಸಹಚಾರಿಯಾದ ನರನು ಮನುಷ್ಯನ ಜೀವಾತ್ಮನು. ಈ ಜೀವಾತ್ಮನು "ಈಶ್ವರನೊಡನೆ ನಾನು ಸಂಬದ್ಧನಾಗಿದ್ದೇನೆ" ಎಂದು ತಿಳಿದು, ಗೀತೆಯಲ್ಲಿ ಹೇಳುವಂತೆ, ಈಶ್ವರನಲ್ಲಿ ಜೀವಿಸುವುದಕ್ಕೆ ಪ್ರಾರಂಭಿಸಿದಾಗ ಮಾತ್ರವೇ ಅವನಿಗೆ ತನ್ನ ಸ್ವರೂಪದ ಅರಿವು ಉಂಟಾಗುವುದು. ಮನುಷ್ಯನ ಹೃದಯದಲ್ಲಿರುವ ಪರಮಾತ್ಮನೇ ನಾರಾಯಣನು. ಇವನು ಗೋಚರವಾಗದೆ ಜೀವಾತ್ಮನ ಸಖನೂ ಪ್ರೇರಕನೂ ಗುರುವೂ ಆಗಿದ್ದಾನೆ. ಗೀತೆಯಲ್ಲಿ ಹೇಳಿರುವಂತೆ ಇವನು ಸರ್ವಭೂತಗಳಲ್ಲಿಯೂ ಇರುವ ಈಶ್ವರನು. ನಮ್ಮ ಹೃದಯಗುಹೆಯ ಆವರಣವು ಹೋಗಿ ಜೀವಾತ್ಮನಿಗೆ ಪರಮಾತ್ಮನ ಸಾಕ್ಷಾತ್ಕಾರವಾದಾಗ, ಜೀವಾತ್ಮನು ದಿವ್ಯನಾದವನ್ನು ಕೇಳಿದಾಗ, ಅವನಲ್ಲಿ ದಿವ್ಯತೇಜಸ್ಸು ಪ್ರವೇಶಿಸಿದಾಗ, ದಿವ್ಯಶಕ್ತಿಯು ಅವನನ್ನು ತುಂಬಿ ಹೊರಹೊಮ್ಮಿದಾಗ, ನರದೇಹವನ್ನು ಧರಿಸಿರುವ ಜೀವಾತ್ಮನಿಗೆ ಅಜನೂ ಶಾಶ್ವತನೂ ಆದ ಪರಮಾತ್ಮನಲ್ಲಿ ಐಕ್ಯವನ್ನು ಹೊಂದಲು ಸಾಧ್ಯವಾಗುತ್ತದೆ. ಆಗ ಅವನಿಗೆ ಈಶ್ವರನಲ್ಲಿ ವಾಸಮಾಡುವುದಕ್ಕೂ ತನ್ನ ಮನೋಬುದ್ಧಿಗಳನ್ನು ಈಶ್ವರನಲ್ಲಿ ಸೇರಿಸುವುದಕ್ಕೂ ಶಕ್ಯವಾಗುವುದು. ಇದನ್ನೇ ಗೀತೆಯು ಉತ್ತಮ ರಹಸ್ಯವೆಂದು ಹೇಳುತ್ತದೆ. ಮನುಷ್ಯನ ಹೃದಯದಲ್ಲಿ ಯಾವಾಗಲೂ ಇರುವ ಈಶ್ವರನು ಜೀವಾತ್ಮನ ಮನೋಬುದ್ಧಿಗಳನ್ನು ಸ್ವಲ್ಪ ಮಟ್ಟಿಗೆ ಅಥವಾ ಸಂಪೂರ್ಣವಾಗಿ ವ್ಯಾಪಿಸಿದಾಗ ಈ ಜೀವಾತ್ಮನು ನರರೂಪದಲ್ಲಿಯೇ ಲೋಕಕ್ಕೆ ನಾಯಕನೂ, ದೇಶಿಕನೂ, ಗುರುವೂ ಆಗುತ್ತಾನೆ.

ತಮ್ಮ ಮನೋಬುದ್ಧಿಗಳಿಂದಲೆ ವ್ಯವಹರಿಸುತ್ತ, ಈಶ್ವರನ ಜ್ಞಾನ, ಪ್ರೇಮ ಅಥವಾ ಶಕ್ತಿಯು ತಮ್ಮಲ್ಲಿದೆಯೆಂದೂ, ತಮ್ಮನ್ನು ನಿಯೋಜಿಸುತ್ತಿದೆಯೆಂದೂ ತಿಳಿದಿರುವ ಮನುಷ್ಯರಿಗಿಂತಲೂ ಮೇಲೆ ಹೇಳಿದ ಜೀವಾತ್ಮರು ಬೇರೆ ರೀತಿಯವರು. ಏತಕ್ಕೆಂದರೆ ಈ ಅವತಾರಪುರುಷರನ್ನು ಪ್ರೇರಿಸುವುದು ಇವರ ಸ್ವಂತ ಮನೋಬುದ್ಧಿಗಳಲ್ಲ; ಸರ್ವಾಂತರ್ಯಾಮಿಯಾದ ಸಾಕ್ಷಾತ್ ಈಶ್ವರನ ಅಪರಿಮೇಯವಾದ ಚೈತನ್ಯ. ಇಂತಹವರೆ ಅವತಾರ ಪುರುಷರು.

ಹೃದಯಸ್ಥನಾಗಿರುವ ಈಶ್ವರನು ಮನುಷ್ಯನಲ್ಲಿ ಸತತವಾಗಿರುವ ಅವತಾರ. ಈಶ್ವರನ ಶಕ್ತಿ ಜ್ಞಾನಾದಿಗಳು ಯಾವಾಗ ಬಾಹ್ಯಪ್ರಪಂಚದಲ್ಲಿ ವ್ಯಕ್ತವಾಗುವುವೊ ಆವಾಗ ಸತತವಾಗಿರುವ ಸ್ಥಿತಿಯಿಂದ ಪ್ರಕಟವಾದ ಅವತಾರವೆನ್ನಿಸಿಕೊಳ್ಳುವುದು.

ಅವತಾರದ ತತ್ತ್ವವನ್ನು ಈರೀತಿಯಾಗಿ ಗ್ರಹಿಸಿದರೆ ಈಗ ನಾವು ವಿಚಾರ ಮಾಡುತ್ತಿರುವ ಗೀತೆಯ ಅರ್ಥವನ್ನು ತಿಳಿಯುವುದಕ್ಕಾಗಲಿ ಅಥವಾ ಸಾಮಾನ್ಯ ಮನುಷ್ಯನು ನಿವೃತ್ತಿ ಮಾರ್ಗದಲ್ಲಿ ಜೀವನ ನಡೆಸುವುದಕ್ಕಾಗಲಿ ಅವತಾರದ ಬಾಹ್ಯ ವಿಚಾರಗಳು ಮುಖ್ಯವಲ್ಲವೆಂಬುದು ಸ್ಪಷ್ಟವಾಗುತ್ತದೆ. ಕ್ರಿಸ್ತನೆಂಬುವನು ನಿಜವಾಗಿಯೂ ಜೀವಿಸಿದ್ದನೆ ಎಂಬ ವಿಷಯವಾಗಿ ಯೂರೋಪಿನಲ್ಲಿ ನಡೆಯುತ್ತಿರುವ ವಿವಾದವು ಆಧ್ಯಾತ್ಮಿಕ ದೃಷ್ಟಿಯುಳ್ಳ ಭಾರತೀಯನಿಗೆ ನಿಷ್ಪ್ರಯೋಜನವೆಂದು ತೋರುವುದು. ಐತಿಹಾಸಿಕ ದೃಷ್ಟಿಯಿಂದ ಈ ವಿಷಯವು ಮುಖ್ಯವಾಗಿರಬಹುದು; ಮತದ ದೃಷ್ಟಿಯಿಂದ ಅದು ಅಷ್ಟೊಂದು ಮುಖ್ಯವಲ್ಲ. ಜೋಸೆಫ್ ಎಂಬ ಬಡಗಿಗೆ ಯೇಸುವು ಮಗನಾಗಿ ನಸರತ್‌ನಲ್ಲಿಯೊ ಬೆತ್ಲೆಹಂನಲ್ಲಿಯೊ ಹುಟ್ಟಿ ಬೆಳೆದು ಉಪದೇಶವನ್ನು ಮಾಡಿ ನಿಜವಾದ ಅಥವಾ ಸುಳ್ಳಾಗಿ ಆರೋಪಿಸಲ್ಪಟ್ಟ ರಾಜದ್ರೋಹಕ್ಕಾಗಿ ಮರಣದಂಡನೆಗೆ ಗುರಿಯಾದನೆಂಬ ವಿಚಾರದಿಂದ ನಮಗಾಗತಕ್ಕದ್ದೇನು? ನಮಗೆ ಮುಖ್ಯವಾಗಿರುವುದೇನೆಂದರೆ ಅವನ ಉಪದೇಶ ಪ್ರಭಾವದಿಂದ ನಿವೃತ್ತಿಮಾರ್ಗದಲ್ಲಿ ಮುಂದುವರೆದು, ಶಿಲುಬೆಗೆ ಏರಿಸುವುದು ಎಂಬ ಪ್ರತೀಕದಿಂದ ಸೂಚಿಸಲ್ಪಟ್ಟಿರುವ ಈಶ್ವರೈಕ್ಯವನ್ನು ಹೊಂದಿ, ಪ್ರಕೃತಿ ಬಂಧದಿಂದ ಬಿಡಿಸಿಕೊಂಡು, ಅಂತರಾತ್ಮನಾದ ಕ್ರಿಸ್ತನನ್ನು ನಮ್ಮ ಹೃದಯದಲ್ಲಿ ಸ್ವಂತಅನುಭವದಿಂದ ಸಾಕ್ಷಾತ್ಕಾರ ಮಾಡಿಕೊಳ್ಳುವುದು. ಕ್ರಿಸ್ತನು (ಎಂದರೆ ನರರೂಪಿಯಾದ ಈಶ್ವರನು) ನಮ್ಮ ಹೃದಯಾಂತರಾಳದಲ್ಲಿ ವಾಸಮಾಡುವುದಾದರೆ ಜುಡಿಯಾ ದೇಶದಲ್ಲಿ ಮೇರಿಯ ಮಗನೊಬ್ಬನು

ಬದುಕಿ ಬಾಳಿ ಕಷ್ಟಕ್ಕೀಡಾಗಿ ಮರಣವನ್ನು ಹೊಂದಿದನೆಂಬ ವಿಚಾರದಿಂದ ಎಳ್ಳಷ್ಟು ಪ್ರಯೋಜನವೂ ಇಲ್ಲ. ಹೀಗೆಯೆ ನಮಗೆ ಬೇಕಾಗಿರುವ ಕೃಷ್ಣನು ಈಶ್ವರನ ಅವತಾರವಾದ ಕೃಷ್ಣನೆ ಹೊರತು ಹಿಂದಿನ ಕಾಲದಲ್ಲಿ ಜೀವಿಸಿದ್ದ ನಾಯಕನೂ ಗುರುವೂ ಆದ ಕೃಷ್ಣನೆಂಬ ವ್ಯಕ್ತಿಯಲ್ಲ.

ಗೀತೆಯ ಉಪದೇಶಸಾರವನ್ನು ತಿಳಿದುಕೊಳ್ಳಲು ಪ್ರಯತ್ನ ಮಾಡುವಾಗ ನಮಗೆ ಪ್ರಕೃತವಾಗಿರುವುದು ಮಹಾಭಾರತದಲ್ಲಿ ವರ್ಣಿಸಲ್ಪಟ್ಟಿರುವ ಕುರುಕ್ಷೇತ್ರದ ರಣರಂಗದಲ್ಲಿ ಅರ್ಜುನನಿಗೆ ಗುರುವಾದ ನರದೇಹವನ್ನು ಧರಿಸಿದ್ದ ಕೃಷ್ಣರೂಪನಾದ ಈಶ್ವರ. ಕೃಷ್ಣನೆಂಬ ಒಬ್ಬ ವ್ಯಕ್ತಿಯು ವಾಸ್ತವವಾಗಿ ಜೀವಿಸಿದ್ದನೆಂಬುದರಲ್ಲಿ ಯಾವ ಸಂದೇಹವೂ ಇಲ್ಲ. ಮೊದಲನೆಯದಾಗಿ ಇವನ ಹೆಸರನ್ನು ಛಾಂದೋಗ್ಯ ಉಪನಿಷತ್ತಿನಲ್ಲಿ ಬ್ರಹ್ಮವೇತ್ತೃಗಳ ವಂಶದಲ್ಲಿ (ಗುರುಪರಂಪರೆಯಲ್ಲಿ) **ಕೃಷ್ಣಃ ದೇವಕೀಪುತ್ರಃ** ಎಂದಷ್ಟು ಮಾತ್ರ ಹೇಳಿದೆ. ಆದ್ದರಿಂದ ಆಕಾಲದಲ್ಲಿ ಇವನು ಪ್ರಸಿದ್ಧನಾಗಿದ್ದನೆಂದೂ, ಇವನ ವಿಚಾರವೆಲ್ಲವೂ ಆಗಿನ ಕಾಲದವರಿಗೆ ತಿಳಿದಿತ್ತೆಂದೂ ಊಹಿಸಬಹುದು. ಅದೆ ಉಪನಿಷತ್ತಿನಲ್ಲಿಯೆ ವಿಚಿತ್ರವೀರ್ಯನ ಮಗನಾದ ಧೃತರಾಷ್ಟ್ರನ ಹೆಸರನ್ನೂ ಹೇಳಿದೆ. ಮಹಾಭಾರತದಲ್ಲಿ ಇವರಿಬ್ಬರೂ ಪ್ರಧಾನ ಪಾತ್ರವನ್ನು ವಹಿಸಿರುವುದರಿಂದ ಮಹಾಭಾರತದ ಈ ಹೇಳಿಕೆಗೂ ಅಲ್ಲಿ ವರ್ಣಿತವಾದ ಕುರುಕ್ಷೇತ್ರದ ಯುದ್ಧಕ್ಕೂ ವಾಸ್ತವವಾದ ಹಿನ್ನೆಲೆಯಿತ್ತೆಂದೂ, ಮಹಾಭಾರತದ ಪ್ರಧಾನ ಪಾತ್ರಗಳೆಲ್ಲರೂ ನಿಜವಾಗಿ ಜೀವಿಸಿದ್ದ ವ್ಯಕ್ತಿಗಳೆಂದೂ ನಾವು ಊಹಿಸುವುದಕ್ಕೆ ನಾಕಾದಷ್ಟು ಅವಕಾಶವಿದೆ. ಕ್ರಿಸ್ತನ ಜನ್ಮಕ್ಕಿಂತ ಹಿಂದಿನಕಾಲದಲ್ಲಿಯೆ ಕೃಷ್ಣನೂ ಅರ್ಜುನನೂ ಪೂಜಿಸಲ್ಪಡುತ್ತಿದ್ದರೆಂಬುದು ನಮಗೆ ತಿಳಿದ ವಿಷಯ. ಗೀತೆಯ ಅನೇಕ ಅಂಶಗಳೂ ಮತ್ತು ಅದರಲ್ಲಿ ಕಂಡುಬರುವ ಭಕ್ತಿ, ಜ್ಞಾನ ಮತ್ತು ಕರ್ಮಗಳ ಸಂಯೋಜನೆಯ ಮೂಲತತ್ವವೂ ಯಾವ ಮತ ಮತ್ತು ಸಂಪ್ರದಾಯದಿಂದ ಗೀತೆಗೆ ಬಂದುವೊ ಆ ಸಂಪ್ರದಾಯದಲ್ಲಿ ಕೃಷ್ಣ ಮತ್ತು ಅರ್ಜುನರ ಪೂಜೆಯು ಅಂಗವಾಗಿತ್ತೆಂದು ಊಹಿಸುವುದಕ್ಕೆ ಅವಕಾಶವಿದೆ. ಅಷ್ಟೆ ಅಲ್ಲ; ಮೇಲೆ ಹೇಳಿದ ಕೃಷ್ಣನು ಈ ಮತ ಅಥವಾ ಸಂಪ್ರದಾಯದ ಸ್ಥಾಪಕನೊ ಪುನರುದ್ಧಾರಕನೊ ಅಥವಾ ಪೂರ್ವಾಚಾರ್ಯರಲ್ಲಿ ಒಬ್ಬನೊ ಆಗಿದ್ದನೆಂದೂ ಹೇಳಬಹುದು. ಗೀತೆಯ ರೂಪವು ಈಚಿನದಾಗಿದ್ದರೂ ಅದರಲ್ಲಿರುವ ವಿಷಯಗಳು ಈ ಕೃಷ್ಣನ ಉಪದೇಶವನ್ನು ಭಾರತೀಯರು ತಮ್ಮ ಮನಸ್ಸಿನಲ್ಲಿ ಗ್ರಹಿಸಿ ತಿಳಿದುಕೊಂಡ ವಿಷಯಗಳೆ

ಆಗಿವೆ. ಈ ಉಪದೇಶಕ್ಕೂ, ಕುರುಕ್ಷೇತ್ರದ ಯುದ್ಧಕ್ಕೂ ಮತ್ತು ಕೃಷ್ಣಾರ್ಜುನ ರಿಗೂ ಮಹಾಭಾರತದಲ್ಲಿ ಕಂಡುಬರುವ ಸಂಬಂಧವು ಬರೀ ಕಲ್ಪನೆಯೆಂದು ಹೇಳಲಾಗುವುದಿಲ್ಲ.

ಮಹಾಭಾರತದಲ್ಲಿ ಶ್ರೀಕೃಷ್ಣನು ಐತಿಹಾಸಿಕ ವ್ಯಕ್ತಿಯಂತೆಯೂ ಅವತಾರ ಪುರುಷನಂತೆಯೂ ಎರಡುವಿಧವಾಗಿಯೂ ನಿರೂಪಿಸಲ್ಪಟ್ಟಿದ್ದಾನೆ. ಶ್ರೀಕೃಷ್ಣ ನನ್ನು ಪೂಜಿಸುವ ಸಂಪ್ರದಾಯವೂ ಮತ್ತು ಅವನು ಅವತಾರಪುರುಷನೆಂಬ ಭಾವನೆಯೂ ಈ ಮಹಾಭಾರತವನ್ನು ಬರೆದ ಕಾಲದಲ್ಲಿ ಎಂದರೆ ಕ್ರಿಸ್ತಪೂರ್ವ ಸುಮಾರು ೫ ರಿಂದ ೧ನೆಯ ಶತಮಾನದ ಕಾಲದಲ್ಲಿಯೆ ಚೆನ್ನಾಗಿ ರೂಢಿಯಲ್ಲಿದ್ದಿರ ಬೇಕು. ಅಲ್ಲದೆ ಈ ಗ್ರಂಥದಲ್ಲಿ ಶ್ರೀಕೃಷ್ಣನು ಬೃಂದಾವನದಲ್ಲಿ ತನ್ನ ಬಾಲ್ಯ ವನ್ನು ಕಳೆದ ವಿಷಯವೂ ಸೂಚಿತವಾಗಿದೆ. ಈ ಬೃಂದಾವನ ಜೀವನದ ವೃತ್ತಾಂತವು ಆಧ್ಯಾತ್ಮಿಕ ಜೀವನದ ಮಹತ್ವಪೂರ್ಣವಾದ ಪ್ರತೀಕವೆಂದು ನಮ್ಮ ಪುರಾಣಗಳಲ್ಲಿ ವಿಸ್ತರಿಸಲ್ಪಟ್ಟು ಭಾರತೀಯರ ಮನಸ್ಸಿನ ಮೇಲೆ ಗುರುತರವಾದ ಪರಿಣಾಮವನ್ನು ಉಂಟು ಮಾಡಿದೆ. ಹರಿವಂಶದಲ್ಲಿಯೂ ಕೂಡ ಅದ್ಭುತವಾದ ಅನೇಕ ಘಟನೆಗಳನ್ನು ಒಳಗೊಂಡಿರುವ ಶ್ರೀಕೃಷ್ಣನ ಬಾಲ್ಯ ಜೀವನವು ವರ್ಣಿಸಲ್ಪಟ್ಟಿದೆ. ಒಂದುವೇಳೆ ಈ ವರ್ಣನೆಯೆ ಪುರಾಣಗಳಲ್ಲಿನ ನಿರೂಪಣೆಗಳಿಗೆ ಆಧಾರವಾಗಿರಬಹುದು.

ಐತಿಹಾಸಿಕ ದೃಷ್ಟಿಯಿಂದ ಈ ವಿಚಾರಗಳು ಗಮನಾರ್ಹವಾಗಿದ್ದರೂ ಪ್ರಕೃತ ನಮ್ಮ ಉದ್ದೇಶದ ದೃಷ್ಟಿಯಿಂದ ಇವು ಕೊಂಚವೂ ಉಪಯುಕ್ತವಲ್ಲ. ನಮಗೆಬೇಕಾಗಿರುವುದೇನೆಂದರೆ ಗೀತೆಯಲ್ಲಿ ನಿರೂಪಿತನಾಗಿರುವ ಗುರುರೂಪಿ ಯಾದ ಭಗವಂತ ಮತ್ತು ಮನುಷ್ಯನ ಮನಸ್ಸಿನಲ್ಲಿ ಜ್ಞಾನದ ಬೆಳಕನ್ನು ಬೀರುವ ಅವನ ಶಕ್ತಿ. ಅಜನೂ, ಅವ್ಯಯನೂ ಆಗಿದ್ದರೂ ಕೂಡ ಭಗವಂತನು ಪುನಃ ಪುನಃ ಅವತಾರ ಮಾಡುತ್ತಾನೆಂಬುದು—ಎಂದರೆ, ಅಪರಿಮೇಯವಾದ ತನ್ನ ಜ್ಞಾನವನ್ನು ಮಾಯೆಯಿಂದ ಪರಿಮಿತವಾದ ದೇಹದಲ್ಲಿ ವ್ಯಕ್ತಪಡಿಸಿ ಭೂಮಿಯಲ್ಲಿ ಜನ್ಮತಾಳುತ್ತಾನೆ ಎಂಬುದು—ಗೀತೆಯ ಕರ್ತೃವಿಗೆ ಸಮ್ಮತವಾದ ಅಭಿಪ್ರಾಯ. ಆದರೆ ಗೀತೆಯ ಕರ್ತೃವು ಇದನ್ನು ಅಷ್ಟು ಮುಖ್ಯವೆಂದು ಎಣಿಸಿಲ್ಲ. ಅವನ ದೃಷ್ಟಿಯಲ್ಲಿ ಮುಖ್ಯವಾದುದೇನೆಂದರೆ ಅಂತರ್ಯಾಮಿಯೂ, ಲೋಕಾತೀತನೂ, ಸರ್ವಲೋಕಮಹೇಶ್ವರನೂ, ಸಕಲ ಭೂತಗಳಿಗೆ ಉತ್ಪತ್ತಿಸ್ಥಾನನೂ, ಮನುಷ್ಯನ ಹೃದಯವಾಸಿಯೂ ಆದ ಪರಮಾತ್ಮನು, ಪ್ರಕಟವಾದ ಅವತಾರವಲ್ಲ; ಸತತವಾದ

ಅವತಾರ. "ಅಂತಶ್ಶರೀರಸ್ಥನಾದ ನನ್ನನ್ನು ಅಸುರ ಸ್ವಭಾವದವರು ಹಿಂಸಿಸುತ್ತಾರೆ" "ನರಾಧಮರು ತಮ್ಮ ದೇಹದಲ್ಲೂ ಇತರರ ದೇಹದಲ್ಲೂ ಇರುವ ನನ್ನನ್ನು ದ್ವೇಷಿಸುತ್ತಾರೆ" ಮತ್ತು "ಹೃದಯದಲ್ಲಿದ್ದುಕೊಂಡು ನಾನು ಅಜ್ಞಾನದಿಂದ ಉಂಟಾದ ತಮಸ್ಸನ್ನು ಜ್ಞಾನದೀಪದ ಬೆಳಕಿನಿಂದ ನಾಶಮಾಡುತ್ತೇನೆ" ಎಂದು ಗೀತೆಯಲ್ಲಿ ಹೇಳಲ್ಪಟ್ಟಿರುವ ಈಶ್ವರನು ಈ ಹೃದಯಸ್ಥನಾಗಿರುವ ಅಂತರಾತ್ಮನೆ. ಈ ಅಂತರಾತ್ಮನೆ, ಈ ನಿತ್ಯ ಅವತಾರನೆ ಮನುಷ್ಯರೂಪವನ್ನು ಧರಿಸಿ ಗೀತೆಯಲ್ಲಿ ಮನುಷ್ಯನಿಗೆ ಉಪದೇಶ ಮಾಡುತ್ತಾನೆ; ಜೀವನದ ಗುರಿಯನ್ನೂ, ಈಶ್ವರನ ವ್ಯಾಪಾರವನ್ನೂ ಸ್ಪಷ್ಟಪಡಿಸುತ್ತಾನೆ; ಮನುಷ್ಯನು ಸಂಸಾರದ ಮಾಯೆಯಲ್ಲಿ ಸಿಲುಕಿ ನರಳುತ್ತಿರುವಾಗ ಸರ್ವೇಶ್ವರನಾದ ತನ್ನ ಭರವಸೆಯನ್ನು ನೀಡಿ ಜ್ಞಾನವನ್ನು ಉಪದೇಶಿಸಿ ಅವನಿಗೆ ಮಾರ್ಗದರ್ಶಿಯಾಗುತ್ತಾನೆ. ದೇವಸ್ಥಾನದಲ್ಲಿ ಮನುಷ್ಯರೂಪವನ್ನುಳ್ಳ ಮೂರ್ತಿಗಳನ್ನು ಪೂಜಿಸುವಾಗಲೂ, ಅಥವಾ ಕೃಷ್ಣಜನ್ಮಾಷ್ಟಮಿ ಮೊದಲಾದ ಅವತಾರಗಳ ಜಯಂತಿಗಳನ್ನು ಆಚರಿಸುವಾಗಲೂ ಅಥವಾ ಯಾವ ಗುರುವಿನ ಮೂಲಕ ಈಶ್ವರನೆಂಬ ಲೋಕಗುರುವಿನ ವಾಣಿಯು ಹೊರಬೀಳುವುದೊ ಆ ಮಾನುಷಗುರುವನ್ನು ಭಜಿಸುವಾಗಲೂ ಭಾರತೀಯರು ಬೇರೆ ಬೇರೆ ಮತಗಳಿಗೆ ಸೇರಿದ್ದರೂ ಕೂಡ ಮೇಲೆ ಹೇಳಿದ ಅಂಶವನ್ನು ಮನಸ್ಸಿನಲ್ಲಿಟ್ಟುಕೊಂಡಿರುತ್ತಾರೆ. ಈ ಮಾರ್ಗಗಳಿಂದ ಅವರು ಒಳಗೆ ಹುದುಗಿರುವ ನಾದವನ್ನು ಪ್ರಬೋಧನೆಮಾಡುವುದಕ್ಕೂ, ರೂಪರಹಿತವಾದ ಆ ವಸ್ತುವನ್ನು ವ್ಯಕ್ತಮಾಡುವುದಕ್ಕೂ ಮತ್ತು ಭಗವಂತನ ಶಕ್ತಿ, ಜ್ಞಾನ ಮತ್ತು ಪ್ರೇಮಗಳನ್ನು ಸಾಕ್ಷಾತ್ಕರಿಸುವುದಕ್ಕೂ ಪ್ರಯತ್ನಪಡುತ್ತಾರೆ.

ಮಹಾಭಾರತದಲ್ಲಿ ಪ್ರಧಾನ ನಾಯಕನಲ್ಲದಿದ್ದರೂ ತೆರೆಯ ಹಿಂದಿನ ಸೂತ್ರಧಾರನೂ ಚಾಲಕನೂ ಆಗಿದ್ದ ಮನುಷ್ಯರೂಪಿಯಾದ ಶ್ರೀಕೃಷ್ಣನ ಪಾತ್ರವು ಇನ್ನೊಂದು ದೃಷ್ಟಿಯಿಂದಲೂ ಮುಖ್ಯವಾದುದು. ಅದರಲ್ಲಿ ವರ್ಣಿತವಾಗಿರುವ ಕಾರ್ಯವು ನಾನಾ ಜನಾಂಗಗಳಿಂದ ಮತ್ತು ನಾನಾ ಜನಗಳಿಂದ ಮಾಡಲ್ಪಟ್ಟದ್ದು. ಇವರಲ್ಲಿ ಕೆಲವರು ತಮಗೆ ಸ್ವಂತವಾಗಿ ಯಾವ ಲಾಭವೂ ಇಲ್ಲದೆ ಇರುವ ಕಾರ್ಯದ ಸಾಧನೆಯಲ್ಲಿ ಭಾಗಿಗಳಾಗಿದ್ದರು. ಇಂತಹವರಿಗೆ ಶ್ರೀಕೃಷ್ಣನು ನಾಯಕನಾಗಿದ್ದನು. ಕೆಲವರು ಈ ಕಾರ್ಯಕ್ಕೆ ವಿರೋಧಿಗಳಾದವರು. ಇವರಿಗೆ ಶ್ರೀಕೃಷ್ಣನು ವಿರೋಧಿಯಾಗಿದ್ದು ಇವರ ಪ್ರಯತ್ನಗಳನ್ನು ವಿಫಲಗೊಳಿಸಿ ಇವರನ್ನು ನಾಶಮಾಡಿದನು.

ಇವರಲ್ಲಿ ಕೆಲವರ ಕಣ್ಣಿಗಂತೂ ಇವನು ಎಲ್ಲ ವಿಧವಾದ ಪಾಪಗಳ ಪ್ರಚೋದಕನಂತೆಯೂ, ಸುವ್ಯವಸ್ಥಿತವಾದ ಲೋಕಸ್ಥಿತಿಯ ಧರ್ಮದ, ಸಚ್ಚಾರಿತ್ರದ ಮತ್ತು ಪುರಾತನ ಸಂಪ್ರದಾಯಗಳ ನಾಶಕನಂತೆಯೂ ಕಾಣುತ್ತಿದ್ದನು. ಇನ್ನು ಕೆಲವರು ಸಿದ್ಧಿಸಬೇಕಾದ ಫಲದ ಪ್ರತೀಕಗಳಂತಿದ್ದರು. ಇಂತಹವರಿಗೆ ಶ್ರೀಕೃಷ್ಣನು ಸಖನೂ, ಸಹಾಯಕನೂ, ಗುರುವೂ ಆಗಿದ್ದನು. ಕಾರ್ಯವು ಸಹಜರೀತಿಯಲ್ಲಿ ಮುಂದುವರಿಯುತ್ತಿರುವಾಗ ಅಥವಾ ಕಾರ್ಯನಿರ್ವಾಹಕರು ತಮ್ಮ ಶತ್ರುಗಳಿಂದ ಪೀಡಿಸಲ್ಪಟ್ಟು ಕಾರ್ಯದಲ್ಲಿ ಜಯಗಳಿಸಲು ಪೂರ್ವಾಂಗವಾದ ಕಷ್ಟಗಳನ್ನು ಅನುಭವಿಸುತ್ತಿರುವಾಗ ಅವತಾರಪುರುಷನಾದ ಶ್ರೀಕೃಷ್ಣನು ಪ್ರಕಟವಾಗಿ ಕಾಣಿಸಿಕೊಳ್ಳುವುದಿಲ್ಲ. ಅಥವಾ ಒಂದುವೇಳೆ ಕಾಣಿಸಿಕೊಂಡರೂ ಸಂತೈಸುವದಕ್ಕೂ ಸಹಾಯಮಾಡುವುದಕ್ಕೂ ಕಾಣಿಸಿಕೊಳ್ಳುತ್ತಾನೆ. ಆದರೆ ಕಾರ್ಯದ ಸ್ಥಿತಿಯು ವಿಷಮಿಸಿದಾಗ ಅವನ ಕೈವಾಡವು ತಪ್ಪದೆ ವೇದ್ಯವಾಗುತ್ತದೆ. ಆದರೆ ಎಷ್ಟು ಗೂಢರೀತಿಯಲ್ಲೆಂದರೆ ಕಾರ್ಯಕರ್ತೃಗಳು ತಮ್ಮಿಂದಲೆ ಎಲ್ಲವೂ ನಿರ್ವಹಿಸಲ್ಪಟ್ಟಿತೆಂದು ತಿಳಿದುಕೊಳ್ಳುತ್ತಾರೆ.

ಶ್ರೀಕೃಷ್ಣನ ಆಪ್ತಸಖನೂ ಮುಖ್ಯ ಸಾಧನನೂ ಆದ ಅರ್ಜುನನೂ ಕೂಡ ತಾನು ಕೇವಲ ಸಾಧನವೆಂಬುದನ್ನು ಅರಿಯದೆ ಹೋದನು. ಕೊನೆಗೆ ಅವತಾರ ಪುರುಷನಾದ ತನ್ನ ಮಿತ್ರನ ನಿಜಸ್ವರೂಪವನ್ನು ತಾನು ತಿಳಿದಿರಲಿಲ್ಲವೆಂದು ಒಪ್ಪಿಕೊಳ್ಳಬೇಕಾಯಿತು. ಶ್ರೀಕೃಷ್ಣನು ಭಗವಂತನ ಅವತಾರವೆಂಬುದನ್ನು ತಿಳಿಯದೆಯೆ ಅರ್ಜುನನು ಅವನ ದಿವ್ಯಜ್ಞಾನದಿಂದ ಸಲಹೆಗಳನ್ನೂ, ಅವನ ಅಪರಿಮಿತ ಶಕ್ತಿಯಿಂದ ಸಹಾಯವನ್ನೂ ಪಡೆದನು. ಅವನನ್ನು ಪ್ರೀತಿಸಿ ಅವನ ಪ್ರೀತಿಪಾತ್ರನಾದನು. ಇಷ್ಟಲ್ಲದೆ ಅವನನ್ನು ಪೂಜಿಸಿಯೂ ಇದ್ದನು. ಇಷ್ಟಾದರೂ ಕೂಡ ಅರ್ಜುನನು ಇತರರಂತೆ ತನ್ನ ಅಹಂಕಾರದಿಂದ ಪ್ರೇರಿತನಾಗಿಯೆ ಕೆಲಸವನ್ನು ಮಾಡಿದನು. ತನ್ನ ಮೌಢ್ಯಕ್ಕೆ ತಿಳಿದುಬರುವಂತೆಯೆ ಸಲಹೆ ಮತ್ತು ಸಹಾಯವನ್ನು ಸ್ವೀಕರಿಸಿದನು. ಕೊನೆಯ ವರೆಗೂ—ಅಂದರೆ ಧರ್ಮದ ಜಯವು ಕುರುಕ್ಷೇತ್ರದ ಘೋರಯುದ್ಧವನ್ನು ಅವಲಂಬಿಸಿದ್ದಾಗಲೂ ಕೂಡ--ತನ್ನ ಮುಖ್ಯ ಸಹಾಯಕರಿಗೂ ಭಗವಂತನು ತನ್ನ ನಿಜಸ್ವರೂಪವನ್ನು ತೋರಿಸಿರಲಿಲ್ಲ. ಆ ಸಮಯದಲ್ಲೂ ಕೂಡ ಅವನು ಯೋಧನೆಂದು ತೋರಿಸಿಕೊಳ್ಳದೆ ಯುದ್ಧದ ಜಯಾಪಜಯಗಳನ್ನು ನಿರ್ಣಯಿಸುವ ರಥದ ಸಾರಥಿಯಾಗಿ ತನ್ನ ಅವತಾರ ಸ್ವರೂಪವನ್ನು ತೋರ್ಪಡಿಸಿದನು.

ಈ ರೀತಿಯಾಗಿ ಶ್ರೀ ಕೃಷ್ಣನ ವ್ಯಕ್ತಿಯು ಮನುಷ್ಯವರ್ಗದೊಡನೆ ಭಗವಂತನ ವ್ಯಾಪಾರವನ್ನು ಚಿತ್ರಿಸುವ ಸಂಕೇತವಾಗಿದೆ. ನಾವು ಅಹಂಕಾರದಿಂದ ವಿಮೂಢರಾಗಿ ನಾವೆ ಕರ್ತೃಗಳೆಂದು ಭಾವಿಸುತ್ತೇವೆ ಮತ್ತು ಕಾರ್ಯದ ಸಿದ್ಧಿಗೆ ನಾವೆ ಕಾರಣರೆಂದು ಹೆಮ್ಮೆಪಡುತ್ತೇವೆ. ನಮ್ಮನ್ನು ಪ್ರೇರಿಸುವ ಶಕ್ತಿಯು ಕೆಲವು ವೇಳೆಗಳಲ್ಲಿ ಮಾತ್ರ ನಮ್ಮ ಅನುಭವಕ್ಕೆ ಬರುತ್ತದೆ. ಆಗಲೂ ಕೂಡ ಅದು ಅಸ್ಪಷ್ಟವಾಗಿದ್ದು ನಾವು ಅದನ್ನು ಮನುಷ್ಯಪ್ರಪಂಚಕ್ಕೆ ಸಂಬಂಧಿಸಿದ ಜ್ಞಾನ, ಆಕಾಂಕ್ಷೆ ಅಥವಾ ಶಕ್ತಿವಿಶೇಷವೆಂದು ತಿಳಿಯುತ್ತೇವೆ. ಹೀಗೆ ಅದರ ನಿಜಸ್ವರೂಪವನ್ನು ಅರಿಯದೆಯೆ ಅದರ ಅಸ್ತಿತ್ವವನ್ನು ಒಪ್ಪಿಕೊಂಡು ಅದನ್ನು ಪೂಜಿಸುತ್ತೇವೆ ಸಮಯವಿಶೇಷ ಬಂದಾಗಮಾತ್ರ ಆ ಸತ್ಯಸ್ವರೂಪಕ್ಕೂ ನಮಗೂ ಮಧ್ಯೆ ಇರುವ ತೆರೆಯು ಮುಂದೆ ನಿಂತುಕೊಂಡು ತೆರೆಯ ಹಿಂದೆ ಇರುವ ವಿಷಯದಲ್ಲಿ ನಮಗಿರುವ ಮೌಢ್ಯವನ್ನು ತಿಳಿಯುತ್ತೇವೆ. ಈ ಅವತಾರವ್ಯಕ್ತಿಯು ಕಾಣಿಸಿಕೊಳ್ಳುವ ಕಾರ್ಯರಂಗವು ಮನುಷ್ಯನ ಸಮಗ್ರಜೀವನವನ್ನೂ ಒಳಗೊಂಡಿರುವುದು. ಆಧ್ಯಾತ್ಮಿಕ ಜೀವನಮಾತ್ರವನ್ನಲ್ಲ; ನಮ್ಮ ಮನಸ್ಸೆಂಬ ಮೊಬ್ಬಾದ ಬೆಳಕಿನಲ್ಲಿ ಅಸ್ಪಷ್ಟವಾಗಿ ಕೆಲವು ಹೆಜ್ಜೆಗಳು ಮಾತ್ರ ಗೋಚರವಾಗುವ ಐಹಿಕಪ್ರಪಂಚದ ಗತಿಯನ್ನೂ ಒಳಗೊಂಡಿರುವುದು. ಈ ವಿಧವಾದ ಅವತಾರಪುರುಷನ ಕಾರ್ಯವು ಫಲಿಸುವ ಸಮಯದಲ್ಲಿ ಉಪದೇಶಿಸಲ್ಪಟ್ಟಿತೆಂಬುದೆ ಗೀತೆಯ ವೈಶಿಷ್ಟ್ಯವು. ಭರತಖಂಡದ ಇತರ ಯಾವ ಮತಗ್ರಂಥದಲ್ಲೂ ಕೊಡಲ್ಪಡದಂತಹ ಪ್ರಾಶಸ್ತ್ಯ ಮತ್ತು ಪ್ರಾಮುಖ್ಯವನ್ನು ಕರ್ಮಯೋಗಕ್ಕೆ ಗೀತೆಯಲ್ಲಿ ಕೊಟ್ಟಿರುವುದು ಗೀತೆಯ ವೈಶಿಷ್ಟ್ಯ. ಮಹಾಭಾರತದ ಕಥೆಯ ಇತರ ಸನ್ನಿವೇಶಗಳಲ್ಲೂ ಶ್ರೀಕೃಷ್ಣನು ಕರ್ಮದ ಆವಶ್ಯಕತೆಯನ್ನು ಕುರಿತು ಹೇಳಿದ್ದಾನೆ. ಆದರೆ ಅದರ ರಹಸ್ಯವೂ ಮಹತ್ವವೂ ನಿರೂಪಿಸಲ್ಪಟ್ಟಿರುವುದು ಗೀತೆಯಲ್ಲಿಯೆ.

ಜೀವಾತ್ಮ ಪರಮಾತ್ಮರ ಸಖ್ಯಕ್ಕೆ ಕೃಷ್ಣಾರ್ಜುನರು ಪ್ರತೀಕವಾಗಿರುವಂತೆ ಭಾರತೀಯ ದರ್ಶನದಲ್ಲಿ ಬೇರೆ ರೀತಿಗಳಲ್ಲಿಯೂ ಈ ಸಖ್ಯವು ವರ್ಣಿಸಲ್ಪಟ್ಟಿರುವುದು. ಒಂದೆ ರಥದಲ್ಲಿ ಕುಳಿತು ಸ್ವರ್ಗಲೋಕಕ್ಕೆ ಪ್ರಯಾಣಮಾಡುವ ಇಂದ್ರ ಕುತ್ಸರು ; ಉಪನಿಷತ್ತಿನಲ್ಲಿ ವರ್ಣಿತವಾಗಿರುವಂತೆ ಒಂದೆ ವೃಕ್ಷದಲ್ಲಿ ಕುಳಿತಿರುವ ಎರಡು ಪಕ್ಷಿಗಳು ಮತ್ತು ಜ್ಞಾನಾರ್ಜನೆಗಾಗಿ ಒಟ್ಟಿಗೆ ತಪಸ್ಸುಮಾಡುವ ನರ ನಾರಾಯಣರು. ಆದರೆ ಈ ಮೂರರಲ್ಲೂ ಜ್ಞಾನವೇ—ಎಂದರೆ, ಗೀತೆಯಲ್ಲಿ ಹೇಳಿರುವಂತೆ ಕರ್ಮದ ಪರಿಸಮಾಪ್ತಿ ರೂಪವಾದ ಜ್ಞಾನವೆ—ಪ್ರಧಾನವಾಗಿದೆ,

ಗೀತೆಯಲ್ಲಾದರೊ ಜ್ಞಾನಕ್ಕೆ ಸಾಧನಭೂತವಾದ ಕರ್ಮವೆ ಪ್ರಧಾನವಾಗಿದೆ. ಇಲ್ಲಿ ಜ್ಞಾನಸ್ವರೂಪಿಯಾದ ಭಗವಂತನು ಕರ್ಮಿಯಾಗಿ ತೋರಿಸಿಕೊಳ್ಳುತ್ತಾನೆ.

ಇಲ್ಲಿ ನರನಾದ ಅರ್ಜುನನೂ ಭಗವಂತನಾದ ಶ್ರೀಕೃಷ್ಣನೂ ಶಾಂತವಾದ ಆಶ್ರಮದಲ್ಲಿ ತಪಸ್ಸನ್ನಾಚರಿಸುತ್ತಿರುವ ಋಷಿಗಳಂತೆ ಕಂಡುಬರುವುದಿಲ್ಲ. ಆದರೆ ರಣರಂಗದಲ್ಲಿ ಶಸ್ತ್ರಾಸ್ತ್ರಗಳು ಹಾರಾಡುತ್ತಿರುವಾಗ ಯುದ್ಧರಥದಲ್ಲಿ ಕುಳಿತು ಹೋರಾಡುವ ಯೋಧನಾಗಿಯೂ ಸಾರಥಿಯಾಗಿಯೂ ಕಾಣಿಸಿಕೊಳ್ಳುತ್ತಾರೆ. ಗೀತೆಯ ಉಪದೇಷ್ಟೃವಾದ ಭಗವಂತನು ಜ್ಞಾನಪ್ರಪಂಚದಲ್ಲಿ ಗೋಚರವಾಗುವ ಈಶ್ವರನು ಮಾತ್ರವಲ್ಲ; ನಮ್ಮ ಸಕಲ ಕಾರ್ಯಕಲಾಪಗಳನ್ನೂ ಪ್ರೇರಿಸುವ ಹೃದಯಸ್ಥನಾದ ಈಶ್ವರನೂ ಆಗಿದ್ದಾನೆ. ಇವನಲ್ಲಿಯೇ ಮತ್ತು ಇವನಿಗೋಸ್ಕರ ವಾಗಿಯೇ ಮಾನವರೆಲ್ಲರೂ ಇದ್ದು ಸಂಸಾರದಲ್ಲಿ ಹೋರಾಡುತ್ತಾರೆ ಮಾನವ ಜೀವನದ ಅಂತಿಮ ಗುರಿಯೇ ಇವನಾಗಿದ್ದಾನೆ. ನಮಗೆ ತಿಳಿಯದಂತೆ ಇವನೇ ನಮ್ಮ ಕರ್ಮಗಳ ಮತ್ತು ಯಜ್ಞದ ಭೋಕ್ತೃವೂ ಪ್ರಭುವೂ ಆಗಿದ್ದಾನೆ. ಮತ್ತು ಸರ್ವಭೂತಗಳಿಗೂ ಸ್ನೇಹಿತನೂ ಆಗಿದ್ದಾನೆ.

# ಮೂರನೆಯ ಪ್ರಕರಣ

## ನರರೂಪಿಯಾದ ಶಿಷ್ಯ

ಈಗ ನಾವು ಗೀತಾಚಾರ್ಯನ ಸ್ವರೂಪವನ್ನು ವಿಮರ್ಶೆಮಾಡಿಯಾಯಿತು. ಅವನು ಮನುಷ್ಯನ ಅಂತರಾತ್ಮನಲ್ಲಿ ಅವತರಿಸಿರುವ ಶಾಶ್ವತನಾದ ಅವತಾರ ಪುರುಷ. ಸರ್ವಭೂತ ಹೃದಯಸ್ಥಿತ. ನಮಗೆ ಕಾಣದೆ ನಮ್ಮ ಕಾರ್ಯಗಳನ್ನೂ ಯೋಚನೆಗಳನ್ನೂ ಆಕಾಂಕ್ಷೆಗಳನ್ನೂ ಪ್ರೇರಿಸುವವ. ಮತ್ತು ನಮಗೆ ಕಾಣುವ ರೂಪಗಳ, ಶಕ್ತಿಗಳ ಮತ್ತು ಮನೋವೃತ್ತಿಗಳ ಹಿಂದೆ ಇರುವವ; ಮತ್ತು ಹಿಂದೆಯೆ ಇದ್ದುಕೊಂಡು ತನ್ನಲ್ಲಿಯೆ ಆವಿರ್ಭವಿಸಿರುವ ಜಗತ್ತಿನ ಸಮಸ್ತ ವ್ಯಾಪಾರವನ್ನೂ ನಡೆಸುವವ.

ನಮ್ಮ ಅಧ್ಯಾತ್ಮ ಮಾರ್ಗದ ಪ್ರಯತ್ನ ಮತ್ತು ಅನ್ವೇಷಣೆಗಳು ಫಲಿಸಿ ಸಾರ್ಥಕವಾಗಬೇಕಾದರೆ ನಾವು ಸತ್ಯವನ್ನು ಮುಚ್ಚಿರುವ ಆವರಣವನ್ನು ಭೇದಿಸಿ ಜೀವಾತ್ಮನ ಒಳಗಿರುವ ಪರಮಾತ್ಮನನ್ನು ಸೇರಬೇಕು; ನಮ್ಮ ಪೃಥಕ್

ಭಾವವನ್ನು (ನಾವು ಬೇರೆ ಎಂಬುದನ್ನು) ಸರ್ವಭೂತಮಹೇಶ್ವರನಲ್ಲಿ ಒಂದು ಮಾಡಬೇಕು; ನಮ್ಮ ವ್ಯಕ್ತಿತ್ವವನ್ನು ಸತ್ಯವಾದ ಈ ಪರಮಾತ್ಮನಿಗೆ ಅರ್ಪಿಸಬೇಕು; ಸರ್ವದಾ ನಾನಾಮುಖವಾಗಿ ಚದರಿ ಮತ್ತೆ ಒಮ್ಮುಖವಾಗುವ ಮನೋವ್ಯಾಪಾರಗಳನ್ನು ಅವನ ಅಖಂಡವಾದ ಜ್ಯೋತಿಗೆ ಸೇರಿಸಬೇಕು; ಚಂಚಲವೂ ಬಹುಮುಖವೂ ಆದ ನಮ್ಮ ಇಚ್ಛೆ ಮತ್ತು ಶಕ್ತಿಗಳನ್ನು ಅವನ ಅಪರಿಮಿತವೂ ಅಖಂಡವೂ ಆಗಿ ಬೆಳಗುವ ಇಚ್ಛೆಗೆ ಅರ್ಪಣೆಮಾಡಬೇಕು; ವ್ಯರ್ಥವೂ ಬಹಿರ್ಮುಖವೂ ಆದ ನಮ್ಮ ಆಸೆ ಮತ್ತು ಸಂಕಲ್ಪಗಳನ್ನು ತ್ಯಜಿಸಿ ಅವನ ಸಹಜವಾದ ಆನಂದದ ಪೂರ್ಣತ್ವಕ್ಕೆ ಅರ್ಪಿಸಿ ಸಾರ್ಥಕಗೊಳಿಸಬೇಕು. ಇತರರ ಎಲ್ಲ ಉಪದೇಶರತ್ನಗಳೂ ಈ ಲೋಕಗುರುವಿನ ಶಾಶ್ವತವಾದ ಜ್ಞಾನದ ಅಂಶಗಳು ಮತ್ತು ಖಂಡವಾದ ಪ್ರತಿಬಿಂಬಗಳು ಮಾತ್ರ ಆದುದರಿಂದ ಸಂಪೂರ್ಣವಾದ ಭಾಗವನ್ನು ಉಪದೇಶಿಸುವ ಈ ಗುರುವಿನ ವಾಣಿಗೆ ನಮ್ಮ ಜೀವಾತ್ಮನ ಕಿವಿ ತೆರೆಯಬೇಕು.

ಯುದ್ಧರಂಗದಲ್ಲಿ ಈ ಗುರುವಿನಿಂದ ಉಪದೇಶವನ್ನು ಪಡೆಯುವ ಅರ್ಜುನನು ಈ ಗುರುವಿಗೆ ಅನುರೂಪನಾದ ಶಿಷ್ಯ. ಇನ್ನೂ ಜ್ಞಾನವನ್ನು ಪಡೆಯದೆ ಇದ್ದಾಗ್ಯೂ ಇವನು ಅಂತರಾತ್ಮನೊಡನೆ ನಿಕಟವಾದ ಸಂಬಂಧವನ್ನು ಮಾಡಿಕೊಂಡು ಅವನನ್ನು ಹೆಚ್ಚಾಗಿ ಸಮೀಪಿಸಿದ್ದನು; ಮತ್ತು ಪ್ರಪಂಚದಲ್ಲಿ ಕಾರ್ಯಭಾರವನ್ನು ದಕ್ಷತೆಯಿಂದ ನಿರ್ವಹಿಸಿ ಈ ಜ್ಞಾನವನ್ನು ಪಡೆಯಲು ಅರ್ಹತೆಯನ್ನು ಹೊಂದಿದ್ದನು. ಹೀಗೆ ಇವನು ನಮ್ಮಂತಹ ಮನುಷ್ಯರ ಪ್ರತಿನಿಧಿಯಾಗಿದ್ದಾನೆ. ಗೀತೆಗೆ ಕೆಲವರು ಅರ್ಥಮಾಡುವ ಪ್ರಕಾರ ಗೀತೆ ಮಾತ್ರವಲ್ಲದೆ ಒಟ್ಟು ಮಹಾಭಾರತ ಗ್ರಂಥವೆ ಮನುಷ್ಯನ ಆಧ್ಯಾತ್ಮಿಕ ಜೀವನವನ್ನು ಚಿತ್ರಿಸುವ ಒಂದು ಉಪಾಖ್ಯಾನವಾಗಿದೆ. ಇದು ಹೊರಗಿನ ಪ್ರಪಂಚದ ನಮ್ಮ ಕೆಲಸಗಳಿಗೂ ಮತ್ತು ನಮ್ಮ ಜೀವನಕ್ಕೂ ಸಂಬಂಧಿಸಿಲ್ಲ. ಕೇವಲ ನಮ್ಮ ಅಂತರಂಗ ಜೀವನದ ಹೋರಾಟಕ್ಕೂ, ಅದರಲ್ಲಿ ಜಯಕ್ಕಾಗಿ ಕಾದಾಡುವ ಶಕ್ತಿಗಳಿಗೂ ಸಂಬಂಧಿಸಿದುದು ಎಂಬುದು ಕೆಲವರ ಅಭಿಪ್ರಾಯ. ಆದರೆ ಮಹಾಭಾರತದ ಸರಣಿಯೂ, ಅಲ್ಲಿ ಉಪಯೋಗಿಸಿರುವ ಪದಗಳೂ ಈ ವಿಧವಾದ ವ್ಯಾಖ್ಯಾನ ಕ್ರಮಕ್ಕೆ ಆಸರೆಯನ್ನು ಕೊಡುವುದಿಲ್ಲ. ಮತ್ತು ಈ ವ್ಯಾಖ್ಯಾನಕ್ರಮವನ್ನೆ ಪೂರ್ಣವಾಗಿ ಅನುಸರಿಸಿದರೆ ಗೀತೆಯಲ್ಲಿನ ಸರಳವೂ ಉದಾತ್ತವೂ ಆದ ಉಪದೇಶವನ್ನು ಕ್ಲಿಷ್ಟವೂ ಸಾರರಹಿತವೂ ಆದ ಗೊಂದಲವನ್ನಾಗಿ ಮಾರ್ಪಡಿಸುವುದು.

ವೇದದ ಭಾಷೆಯೂ ಮತ್ತು ಪುರಾಣಗಳ ಕೆಲವು ಭಾಗಗಳ ಭಾಷೆಯೂ ಸಾಂಕೇತಿಕವಾಗಿರುವುದೆಂಬುದು ಸ್ಪಷ್ಟ. ಎಂದರೆ ಉಪಯೋಗಿಸುವ ಪದಗಳ ಹಿಂದೆ ಗೂಢವಾಗಿರುವ ವಿಷಯುಗಳನ್ನು ಬಚ್ಚಿಟ್ಟಿರುವ ರೂಪಕಗಳಿಂದಲೂ ಪ್ರತೀಕಗಳಿಂದಲೂ ತುಂಬಿದೆ. ಗೀತೆಯ ಭಾಷೆಯಾದರೋ ಬಹಳ ಸ್ಪಷ್ಟವೂ, ಸರಳವೂ, ಋಜುವೂ ಆಗಿದೆ. ಮನುಷ್ಯನ ಜೀವನದಲ್ಲಿ ಬರುವ ಆಧ್ಯಾತ್ಮಿಕ ಮತ್ತು ಧಾರ್ಮಿಕ ತೊಡಕುಗಳನ್ನು ಬಿಡಿಸುವುದೆ ಅದರ ಉದ್ದೇಶ. ಇದರ ಸ್ಪಷ್ಟವಾದ ಭಾಷೆ ಮತ್ತು ಉಪದೇಶಗಳಲ್ಲಿ ಗೂಢಾರ್ಥವನ್ನು ಹುಡುಕಿಕೊಂಡು ನಮ್ಮ ಕಲ್ಪನೆಗೆ ಅನುಸಾರವಾಗಿ ಅದನ್ನು ತಿರುಗಿಸುವುದು ನ್ಯಾಯವಲ್ಲ. ಗೀತೆಯು ಮಹಾಭಾರತದಲ್ಲಿ, ಯುದ್ಧಸಮಯದಲ್ಲಿ ಉಪದೇಶಸಲ್ಪಟ್ಟಿತಾದ್ದರಿಂದ ಆ ಸನ್ನಿವೇಶಕ್ಕೆ ಹೊಂದುತ್ತದೆಯೆಂಬುದು ಸ್ಪಷ್ಟ. ಇಲ್ಲದಿದ್ದರೆ ಆ ಸನ್ನಿವೇಶದಲ್ಲಿ ಅದು ಉಪದೇಶಿಸಲ್ಪಡುತ್ತಲೆ ಇರಲಿಲ್ಲ. ಆದಾಗ್ಯೂ, ಈ ಉಪದೇಶವು ಅರ್ಜುನನಿಗೆ ಮಾತ್ರವಲ್ಲ. ಹಿಂದೆ ತಿಳಿಸಿರುವಂತೆ ಅರ್ಜುನನು ದೈವಸಂಕಲ್ಪದಿಂದ ಪ್ರೇರಿತನಾಗಿ ಜಗತ್ತಿನಲ್ಲಿ ಎಲ್ಲೆಲ್ಲೂ ನಡೆಯುತ್ತಿರುವ ಜನಗಳ ಮತ್ತು ಜನಾಂಗ್ಗಗಳ ಹೋರಾಟದಲ್ಲಿ ಭಾಗವಹಿಸಿದ ಮನುಷ್ಯನ ಪ್ರತಿನಿಧಿ. ಗೀತೆಯ ಅರ್ಜುನನು ಈ ಲೋಕದಲ್ಲಿ ಕರ್ಮನಿರತನಾಗಿ ಅದರ ಅನುಷ್ಠಾನದಲ್ಲಿ ಜೀವನದ ಅತ್ಯಂತ ವಿಷಮವಾದ ಕಠಿಣಪರಿಸ್ಥಿತಿಯಲ್ಲಿ ಸಿಕ್ಕಿಕೊಂಡು ಆಧ್ಯಾತ್ಮಿಕ ಜೀವನ ಮತ್ತು ಧರ್ಮಗಳಿಗೂ ತಾನು ನಿರತನಾಗಿರುವ ಕರ್ಮಕ್ಕೂ ನಡುವೆ ಎಷ್ಟು ಅಂತರ ವಿದೆಯೆಂಬುದನ್ನು ಮನಗಾಣುತ್ತಿರುವ ಮನುಷ್ಯನ ಪ್ರತೀಕವಾಗಿದ್ದಾನೆ.

ಅರ್ಜುನನು ಯುದ್ಧರಂಗದಲ್ಲಿ ರಥದಲ್ಲಿ ಕುಳಿತು ಯುದ್ಧಮಾಡುವವನು. ಶ್ರೀಕೃಷ್ಣನು ಅವನ ರಥವನ್ನು ನಡೆಸುವ ಸಾರಥಿ. ವೇದದಲ್ಲೂ ಕೂಡ ಉನ್ನತವಾದ ಒಂದು ಹೋಮವನ್ನು ಸಾಧಿಸುವುದಕ್ಕೋಸ್ಕರ ಜೀವಾತ್ಮನೂ ಪರಮಾತ್ಮನೂ ಒಂದೇ ರಥದಲ್ಲಿ ಕುಳಿತು ಯುದ್ಧಮಾಡುವುದಕ್ಕೋಸ್ಕರ ಹೊರಟಿರುವ ರೂಪಕವು ಕಂಡು ಬರುತ್ತದೆ. ಅಲ್ಲಾದರೆ ಇದು ಕೇವಲ ರೂಪಕ. ಅದರಲ್ಲಿ ಪರಮಾತ್ಮನು ಇಂದ್ರನಾಗಿ ಚಿತ್ರಿಸಲ್ಪಟ್ಟಿದ್ದಾನೆ. ಅವನು ಜ್ಯೋತಿರ್ಮಯವಾದ ಅಮರಲೋಕದ ಪ್ರಭುವಾಗಿದ್ದು, ಅನೃತ, ತಮಸ್ಸು, ಸಂಕಟ ಮತ್ತು ಮೃತ್ಯುಗಳೊಡನೆ ಹೋರಾಡುವ ಮನುಷ್ಯನ ಸಹಾಯಕ್ಕಾಗಿ ಮೇಲಿನ ಲೋಕದಿಂದ ಅವತರಿಸುವ ದಿವ್ಯಜ್ಞಾನದ ಶಕ್ತಿಯೂ ಆಗಿದ್ದಾನೆ. ಈ ಯುದ್ಧವು ನಡೆಯುವುದು ಮನುಷ್ಯನನ್ನು ಉತ್ತಮಲೋಕಕ್ಕೆ ಒಯ್ಯುವ

ಆಧ್ಯಾತ್ಮಿಕ ಮಾರ್ಗದಲ್ಲಿ ತಡೆಗಟ್ಟುವ ಅಸುರ ಶಕ್ತಿಗಳೊಡನೆ. ಪರಮ ಸತ್ಯದ ಜ್ಯೋತಿಯಿಂದ ದೇದೀಪ್ಯಮಾನವಾದ, ಪೂರ್ಣತೆಯನ್ನು ಕೊಡುವ ಆತ್ಮನನ್ನು ಪ್ರಜ್ಞಾಪೂರ್ವಕವಾಗಿ ಅಮೃತತತ್ವದ ಮಟ್ಟಕ್ಕೆ ಏರಿಸುವುದು ಮತ್ತು ಇಂದ್ರನನ್ನು ಅಧಿಪತಿಯಾಗಿ ಉಳ್ಳ ಉತ್ತಮಲೋಕವನ್ನು ಪಡೆಯುವುದು ಆ ಯುದ್ಧದ ಗುರಿ.

ಇಲ್ಲಿ ಜೀವಾತ್ಮನು ಕುತ್ಸನಾಗಿ ಚಿತ್ರಿಸಲ್ಪಟ್ಟಿದ್ದಾನೆ. ಆ ಹೆಸರೇ ಸೂಚಿಸುವಂತೆ ಈತನು ಯಾವಾಗಲೂ ಆರ್ಷೇಯಜ್ಞಾನವನ್ನು ಪಡೆಯಲು ಪ್ರಯತ್ನಿಸುತ್ತಾನೆ. ಇವನ ತಂದೆಯು ಅರ್ಜುನ ಅಥವಾ ಅರ್ಜುನಿ (ಬೆಳ್ಳಗಿರುವವನು); ಇವನ ತಾಯಿ ಶ್ವಿತ್ರಾ (ಬೆಳ್ಳಗಿರುವವಳು). ಇವನು ದಿವ್ಯಜ್ಞಾನದ ಅಖಂಡ ತೇಜಸ್ಸಿನಿಂದ ಬೆಳಗುವ ಜ್ಯೋತಿರ್ಮಯವಾದ ಸಾತ್ವಿಕ ಆತ್ಮ. ಇವರಿಬ್ಬರೂ (ಇಂದ್ರನೂ, ಕುತ್ಸನೂ) ಕುಳಿತಿರುವ ರಥವು ಪ್ರಯಾಣದ ಗುರಿಯನ್ನು—ಎಂದರೆ ಇಂದ್ರನ ಸ್ಥಾನವನ್ನು—ಮುಟ್ಟುವ ಹೊತ್ತಿಗೆ ಕುತ್ಸನು ತನ್ನ ದಿವ್ಯಸಖನಂತೆಯೆ ಆಗಿರುವನು. ಇವರ ಹೋಲಿಕೆಯು ಎಷ್ಟು ಪೂರ್ಣವಾಗಿದೆಯೆಂದರೆ ಇವರಿಬ್ಬರಿಗೆ ಇರುವ ಭೇದವು ಇಂದ್ರನ ಪತ್ನಿಯಾದ ಮತ್ತು ಸತ್ಯದೃಷ್ಟಿಯುಳ್ಳ ಶಚೀದೇವಿಗೆ ಮಾತ್ರ ಗೋಚರವಾಗುವುದು ಈ ಉಪಾಖ್ಯಾನವು ಮನುಷ್ಯನ ಆಧ್ಯಾತ್ಮಿಕ ಜೀವನವನ್ನು ಚಿತ್ರಿಸುವುದೆಂಬುದು ಸ್ಪಷ್ಟ. ವೃದ್ಧಿಯಾಗುತ್ತಿರುವಜ್ಞಾನದ ಬೆಳಕಿನಿಂದ ಮನುಷ್ಯನು ಶಾಶ್ವತವಾದ ಪರಮಾತ್ಮನ ಸಾರೂಪ್ಯವನ್ನು ಹೊಂದುವುದನ್ನು ಇದು ನಿರೂಪಿಸುತ್ತದೆ. ಆದರೆ ಗೀತೆಯು ಕರ್ಮದಿಂದ ಪ್ರಾರಂಭಿಸುವುದು. ಗೀತೆಯ ಅರ್ಜುನನು ಕರ್ಮಯೋಗಿ, ಜ್ಞಾನಯೋಗಿಯಲ್ಲ; ಯೋಧ, ಋಷಿಯಲ್ಲ; ಜ್ಞಾನಿಯೂ ಅಲ್ಲ.

ಗೀತೆಯಲ್ಲಿ ಶಿಷ್ಯನ ಈ ವೈಶಿಷ್ಟ್ಯವು ಮೊದಲಿನಿಂದ ಕೊನೆಯವರೆಗೂ ಸ್ಪಷ್ಟವಾಗಿ ಗೋಚರವಾಗುವುದು. ಎಣಿಕೆಗೆ ಮೀರಿರುವಷ್ಟು ಜನಗಳ ಕೊಲೆಯಲ್ಲಿ ತಾನು ಮುಖ್ಯಪಾತ್ರವನ್ನು ವಹಿಸಬೇಕಾಗಿದೆಯೆಂಬ ಅರಿವು ಅರ್ಜುನನಿಗಾದ ಕ್ಷಣದಲ್ಲಿ ಅವನ ಮನಸ್ಸಿನಲ್ಲಿ ಹುಟ್ಟಿದ ಆಲೋಚನೆಗಳಲ್ಲಿಯೂ ಈ ಘೋರಕಾರ್ಯದಿಂದ ವಿಮುಖನಾಗಬೇಕೆಂದು ಅವನನ್ನು ಪ್ರೇರಿಸಿದ ಮನೋಧರ್ಮದಲ್ಲಿಯೂ ಈ ವೈಶಿಷ್ಟ್ಯವು ಮೊದಲು ನಮ್ಮ ಮುಂದೆ ಎದ್ದು ನಿಲ್ಲುತ್ತದೆ. ಇವು ಒಬ್ಬ ತತ್ತ್ವಾನ್ವೇಷಕನ ಅಥವಾ ಆಧ್ಯಾತ್ಮಿಕದೃಷ್ಟಿಯುಳ್ಳವನ ಮುಂದೆ ಇಂತಹ ಸಮಸ್ಯೆ ಎದ್ದುಬಂದಾಗ ಅವನ ಮನಸ್ಸಿನಲ್ಲಿ ಹುಟ್ಟುವ ಆಲೋಚನೆ

ಮತ್ತು ಅವನ ಮನೋಧರ್ಮಕ್ಕಿಂತಲೂ ಬೇರೆಯಾಗಿರುವುವು. ಇವು ಕರ್ಮನಿರತನಾಗಿ ಫಲದಲ್ಲಿ ದೃಷ್ಟಿಯುಳ್ಳ ಮನುಷ್ಯನಿಗೆ ಸಹಜವಾಗಿರುವುವು. ಎಂದರೆ ತಾನೆ ಸ್ವಂತವಾಗಿ ಮೂಲತತ್ತ್ವಗಳಿಂದ ಮೊದಲುಮಾಡಿಕೊಂಡು ಧರ್ಮಚಿಂತನೆ ಮಾಡದೆ, ಶ್ರೇಷ್ಠವಾದ ಪೂರ್ವಾಚಾರ ಮತ್ತು ಸಂಪ್ರದಾಯಗಳನ್ನು ಆದರ್ಶಗಳನ್ನಾಗಿಟ್ಟುಕೊಂಡು ಅವಕ್ಕನುಸಾರವಾಗಿ ಸ್ವಂತ ಯೋಚನೆಯಿಲ್ಲದೆ ಜೀವನದ ಕಷ್ಟಗಳನ್ನು ಎದುರಿಸುತ್ತಾ ಆತ್ಮವಿಶ್ವಾಸದಿಂದ ಜೀವನಪಥವನ್ನು ನಡೆಸುತ್ತಿರುವ ಮನಸ್ಸಿಗೆ ಹಠಾತ್ತಾಗಿ ಅವನ ಆದರ್ಶಗಳೆಲ್ಲವೂ ಕುಸಿದುಬಿದ್ದು ತನ್ನಲ್ಲೂ, ಆಚಾರ ಸಂಪ್ರದಾಯಗಳಲ್ಲೂ ಇದ್ದ ವಿಶ್ವಾಸವು ಮಾಯವಾದಾಗ ಅವನ ಮನಸ್ಸಿನಲ್ಲಿ ಉಂಟಾಗುವ ಆಲೋಚನೆಗಳು. ಅರ್ಜುನನ ಮುಂದೆ ಬಂದುದು ಈ ವಿಷಮಸಮಸ್ಯೆ.

ಸಾಮಾನ್ಯ ಮನುಷ್ಯರಂತೆ ಅರ್ಜುನನು ಪ್ರಕೃತಿಯ ಮೂರು ಗುಣಗಳಿಗೆ ಎಂದರೆ ಮೂರು ವಿಧವಾದ ಶಕ್ತಿಗಳಿಗೆ ವಶನಾಗಿ ನಡೆಯುವವನು. ಎಂದರೆ ಇವನ್ನು ಬಿಟ್ಟು ಬೇರೆ ಮಾರ್ಗವಿದೆಯೆಂಬ ಅರಿವೆ ಇಲ್ಲದೆ ಇದರಲ್ಲೆ ಭರವಸೆ ಇಟ್ಟಿರುವವನು. ಆದರೆ ಅರ್ಜುನನಿಗೆ ಒಂದು ವಿಶೇಷ ಲಕ್ಷಣವಿದೆ; ಹೆಸರಿಗೆ ತಕ್ಕಂತೆ ಅವನು ಶುದ್ಧನಾಗಿಯೂ ಸಾತ್ತ್ವಿಕನಾಗಿಯೂ ಇದ್ದುಕೊಂಡು ಉಚ್ಚವಾದ ಮತ್ತು ಖಚಿತವಾದ ಧ್ಯೇಯಗಳನ್ನೂ ಸಂಕಲ್ಪಗಳನ್ನೂ ಇಟ್ಟುಕೊಂಡು ಅವಕ್ಕನುಸಾರವಾಗಿ ನಡೆಯುತ್ತಾ ಅಶುದ್ಧವಾದ ಕಾಮಸಂಕಲ್ಪಗಳನ್ನು ಅಡಗಿಸಿದ್ದವನು. ಅವನು ಆಸುರ ಅಥವಾ ರಾಜಸ ಸ್ವಭಾವದವನಲ್ಲ; ಕಾಮಗಳಿಗೆ ಅಧೀನನಲ್ಲ. ಯಾವಾಗಲೂ ಶಾಂತನಾಗಿ, ಸಂಯಮವನ್ನು ಎಳ್ಳಿನಷ್ಟೂ ಕಳೆದುಕೊಳ್ಳದೆ ತನ್ನ ಕರ್ತವ್ಯವನ್ನು ಆಚರಿಸುವುದನ್ನೂ, ತನ್ನ ಧರ್ಮಾಚಾರಗಳನ್ನೂ ತನ್ನ ಕಾಲದ ಶ್ರೇಷ್ಠಪುರುಷರ ಸಂಪ್ರದಾಯಗಳನ್ನೂ ನಿಷ್ಠೆಯಿಂದ ಅನುಸರಿಸುವುದನ್ನೂ ಕಲಿತಿದ್ದನು. ಇತರ ಮನುಷ್ಯರಂತೆ ಅರ್ಜುನನು ಸ್ವಾರ್ಥದಲ್ಲಿ ಆಸಕ್ತನು. ಆದರೆ ಇವನ ಸ್ವಾರ್ಥತೆಯು ಸಾತ್ತ್ವಿಕವಾದದ್ದು. ಎಂದರೆ ಕೇವಲ ತನ್ನ ಒಬ್ಬನ ಆಶೆ, ಭಾವನೆ ಮತ್ತು ಪ್ರಯೋಜನಗಳಿಗೆ ಮಾತ್ರ ಗಮನಕೊಡದೆ ಧರ್ಮನಿಯಮಗಳನ್ನೂ ಇತರರ ಹಿತವನ್ನೂ ಗಮನದಲ್ಲಿಟ್ಟಿದ್ದಾನೆ. ಶಾಸ್ತ್ರವನ್ನೆ ಪ್ರಮಾಣವನ್ನಾಗಿಟ್ಟುಕೊಂಡು ಅದಕ್ಕನುಸಾರವಾಗಿ ನಡೆದಿದ್ದಾನೆ. ಅವನ ಮನಸ್ಸಿನಲ್ಲಿ ಯಾವಾಗಲೂ ಇರುವುದು ಧರ್ಮದ ಯೋಚನೆಯೆ—ಅದರಲ್ಲೂ ಮುಖ್ಯವಾಗಿ ಆರ್ಯರ ಮುಖಂಡನೂ ಯೋಧನೂ ಆದ ತನಗೆ ಅನ್ವಯಿಸುವ

ಕ್ಷತ್ರಿಯಧರ್ಮದ ಯೋಚನೆ. ಈ ಧರ್ಮವನ್ನೆ ಯಾವಾಗಲೂ ಅನುಷ್ಠಾನ ಮಾಡುತ್ತಾ ತನ್ನ ಆಚಾರವೂ ಶೀಲವೂ ಧರ್ಮಕ್ಕನುಸಾರವಾದುದೆಂದು ದೃಢ ವಾಗಿ ನಂಬಿ ಇಲ್ಲಿಯವರೆಗೆ ಜೀವನವನ್ನು ನಡೆಸಿದ್ದಾನೆ. ಈಗ ಇದ್ದಕ್ಕಿದ್ದಂತೆ ಈ ಧರ್ಮವು ಅವನನ್ನು ಘೋರವೂ ಅನ್ಯಾಯ್ಯವೂ ಆದ ಕೊಲೆಗೆ ಕರ್ತೃವ ನ್ನಾಗಿ ಮಾಡಿದೆ; ಸುಸಂಸ್ಕೃತವಾದ ಆರ್ಯಜನಾಂಗಗಳನ್ನು ಅಳಿಸಿ ಅವರ ಶ್ರೇಷ್ಠ ಜನರನ್ನೆಲ್ಲಾ ಕೊಂದು, ಸುವ್ಯವಸ್ಥಿತವಾದ ಅವರ ನಾಗರೀಕತೆಯು ಅಸ್ತವ್ಯಸ್ತವಾಗಿ ಕುಸಿದು ಬೀಳುವಂತೆ ಮಾಡುವ ಮಹಾ ಅಂತರ್ಯುದ್ಧಕ್ಕೆ ತನ್ನನ್ನು ಒಯ್ದಿದೆಯೆಂಬುದನ್ನು ಅರಿಯುತ್ತಾನೆ.

ಹಿಂದೆ ಹೇಳಿರುವಂತೆ ಅರ್ಜುನನು ಫಲದಲ್ಲೆ ದೃಷ್ಟಿಯುಳ್ಳವನು. ಅಂತಹವರಿಗೆ ಸ್ವಾಭಾವಿಕವಾಗಿರುವಂತೆ ಇವನಿಗೆ ತನ್ನ ಭಾವ ವಿಕಾರಗಳಿಂದ ತಾನು ಮಾಡಬೇಕಾಗಿರುವ ಕರ್ಮಗಳ ನಿಜವಾದ ಸ್ವರೂಪದ ಅರಿವಾಯಿತು. ಅವನು ತನ್ನ ಸಾರಥಿಯೂ ಸಖನೂ ಆದ ಶ್ರೀಕೃಷ್ಣನಿಗೆ ಸೇನೆಗಳೆರಡರ ಮಧ್ಯೆ ತನ್ನ ರಥವನ್ನು ಸ್ಥಾಪಿಸಬೇಕೆಂದು ಹೇಳಿದಾಗ ಅವನ ಮನಸ್ಸಿನಲ್ಲಿ ಯಾವ ವಿಧವಾದ ಸಮಸ್ಯೆಯೂ ಇರಲಿಲ್ಲ. ಅಧರ್ಮಕ್ಕಾಗಿ ಹೋರಾಡುವ ಲಕ್ಷಾಂತರ ಯೋಧರನ್ನು ಯುದ್ಧದ ಹಬ್ಬದಲ್ಲಿ ಧರ್ಮದ ಸ್ಥಾಪನೆಗೋಸ್ಕರ ಕೊಲ್ಲುವುದಕ್ಕೆ ಮುಂಚೆ ಅವರನ್ನು ನೋಡಬೇಕೆಂಬ, ತಾನು ಅವರನ್ನು ಗೆಲ್ಲುವೆನೆಂಬುದರಲ್ಲಿ ಸಂಪೂರ್ಣ ಆತ್ಮವಿಶ್ವಾಸದೊಡನೆ ಕೂಡಿದ ಇಚ್ಛೆಮಾತ್ರ ಅವನಿಗಿತ್ತು. ಹೀಗೆ ನೋಡುವಾಗ ಈ ಅಂತರ್ಯುದ್ಧದ ನಿಜವಾದ ಸ್ವರೂಪವು ಅವನಿಗೆ ಗೋಚರ ವಾಗುತ್ತದೆ. ಈ ಯುದ್ಧದಲ್ಲಿ ಒಂದೆ ದೇಶ, ಒಂದೆ ಜನಾಂಗ, ಒಂದೆ ವಂಶ ಮಾತ್ರವಲ್ಲ; ಒಂದೆ ಮನೆತನಕ್ಕೆ ಸೇರಿದ ಯೋಧರು ಪರಸ್ಪರ ಪ್ರತಿಭಟಿಸಿ ನಿಂತಿದ್ದಾರೆ! ಸಾಧಾರಣವಾಗಿ ಮನುಷ್ಯರು ಪೂಜ್ಯತಮರೆಂದೂ, ಪ್ರಿಯತಮ ರೆಂದೂ ಎಣಿಸಿರುವ ಜನರನ್ನು ಈಗ ಅರ್ಜುನನು ಕೊಲ್ಲಬೇಕಾಗಿದೆ! ಆಚಾರ್ಯರು ಚಿಕ್ಕಂದಿನ ಗೆಳೆಯರು ಮತ್ತು ಸಹಪಾಠಿಗಳು, ಪಿತಾಮಹರು, ಮಾತುಲರು, ಪಿತೃಗಳು, ಪುತ್ರರು, ಪೌತ್ರರು, ರಕ್ತಸಂಬಂಧಿಗಳು ಮತ್ತು ವಿವಾಹಸಂಬಂಧಿ ಗಳು ಈ ಎಲ್ಲ ವಿಧವಾದ ಸಂಬಂಧವನ್ನು ದೂರಮಾಡಿ ಅವರೊಡನೆ ಯುದ್ಧ ಮಾಡಬೇಕಾಗಿದೆ. ಈ ವಿಷಯವು ಅವನಿಗೆ ಮುಂಚೆಯೆ ತಿಳಿದಿರಲಿಲ್ಲವೆಂದಲ್ಲ; ಆದರೆ ಅದರ ಪೂರ್ಣ ಅರಿವು ಅವನಿಗಾಗಿರಲಿಲ್ಲ.

ತನ್ನ ಹಕ್ಕು, ಆ ಬಗ್ಗೆ ತನಗಾದ ಅನ್ಯಾಯ, ಅನ್ಯಾಯ ಮತ್ತು ಅಧರ್ಮಗಳನ್ನು ಅಡಗಿಸಿ ನ್ಯಾಯ ಧರ್ಮಗಳನ್ನು ಸ್ಥಾಪಿಸುವುದಕ್ಕಾಗಿ ಯುದ್ಧಮಾಡಬೇಕೆಂಬ ತನ್ನ ಕ್ಷಾತ್ರಧರ್ಮ, ಈ ಧರ್ಮವೇ ಪ್ರಧಾನಗುರಿಯಾಗಿದ್ದ ತನ್ನ ಇದುವರೆಗಿನ ಜೀವನ, ಇವುಗಳಲ್ಲಿ ಲಕ್ಷ್ಯವನ್ನಿಟ್ಟಿದ್ದರಿಂದ ಇವನು ಯಾವಾಗಲೂ ಯಾವ ವಿಷಯಕ್ಕೂ ತನ್ನ ಪೂರ್ಣ ಗಮನವನ್ನು ಕೊಟ್ಟು ಯೋಚನೆ ಮಾಡಿರಲಿಲ್ಲ. ಅವನ ಹೃದಯದಲ್ಲಿ ಗಹನವಾದ ಯಾವ ವಿಚಾರವೂ ಮೂಡಿರಲಿಲ್ಲ. ಇವೆಲ್ಲವನ್ನು ಸಾರಥಿಯಾದ ಭಗವಂತನು ಕಣ್ಣುಮುಂದೆ ಸ್ಪಷ್ಟವಾಗಿ ನಿಲ್ಲುವಂತೆ ಹಠಾತ್ತಾಗಿ ಪ್ರದರ್ಶಿಸುತ್ತಾನೆ. ಅದು ಹೃದಯಕ್ಕೆ ಕೊಟ್ಟ ಆಘಾತದಂತಾಗಿದೆ.

ಇದರ ಮೊದಲನೆಯ ಪರಿಣಾಮವೇನೆಂದರೆ ಅವನ ಶರೀರದಲ್ಲಿ ಅಸ್ವಸ್ಥತೆಯೂ ಮನಸ್ಸಿನಲ್ಲಿ ಕ್ಷೋಭೆಯೂ ಉಂಟಾಗಿ ಅವನಿಗೆ ತನ್ನ ಕರ್ತವ್ಯವಾದ ಕ್ಷತ್ರಿಯಕರ್ಮದಲ್ಲೂ, ಅದರಲ್ಲಿ ಉಂಟಾಗುವ ಫಲದಲ್ಲೂ ಮತ್ತು ಜೀವನದಲ್ಲೂ ಜುಗುಪ್ಸೆಯೂ, ವೈರಾಗ್ಯವೂ ಉಂಟಾಗುತ್ತವೆ. ಸಾಮಾನ್ಯಜನರ ಲಕ್ಷ್ಯಗಳಾದ ಭೋಗ ಮತ್ತು ಸುಖಗಳನ್ನೂ, ಕ್ಷತ್ರಿಯಧರ್ಮವಾದ ಯುದ್ಧದಲ್ಲಿ ಜಯ ಒಡೆಯತನ ಮತ್ತು ರಾಜ್ಯ ಇವುಗಳನ್ನೂ ನಿರಾಕರಿಸುತ್ತಾನೆ. " ಧರ್ಮಕ್ಕಾಗಿ ಯುದ್ಧವೆಂಬುದರ ಅರ್ಥವೇನು ? ತನಗೂ, ತನ್ನ ಸಹೋದರರಿಗೂ ಮತ್ತು ತನ್ನ ಪಕ್ಷದವರಿಗೂ, ರಾಜ್ಯವೂ, ಭೋಗವೂ, ಆಧಿಪತ್ಯವೂ ದೊರೆಯುವುದಕ್ಕೋಸ್ಕರ ಮಾಡುವ ಯುದ್ಧವಷ್ಟೆ. ಇವುಗಳಿಗಾಗಿ ಈ ಘೋರಕೊಲೆಯನ್ನು ಮಾಡುವುದು ತಕ್ಕುದಲ್ಲ ರಾಜ್ಯಭೋಗ ಮುಂತಾದವುಗಳಿಗೆ ಸ್ವತಃ ಯಾವ ಬೆಲೆಯೂ ಇಲ್ಲ; ಸಾಮಾಜಿಕ ಮತ್ತು ರಾಜಕೀಯ ಜೀವನಗಳನ್ನು ನಡೆಸಲು ಸಾಧನವಾಗಿರುವುದಕ್ಕೋಸ್ಕರವೆ ಇವುಗಳಿಗೆ ಬೆಲೆ ಇದೆ ತನ್ನ ಬಂಧುಗಳ ಮತ್ತು ಕುಲವವರ ಕೊಲೆಯಿಂದ ಈ ಇಷ್ಟಾರ್ಥಗಳಿಗೇ ಚ್ಯುತಿತಂದಂತಾಗುವುದು." ಹೀಗೆ ಯೋಚಿಸಿದನಂತರ ಅವನು ಉದ್ವೇಗದಿಂದ ಸಂತಪ್ತನಾಗಿ ಹೇಳುತ್ತಾನೆ. 'ನಾವು ಭೋಗವನ್ನೂ ಸುಖವನ್ನೂ ಅಪೇಕ್ಷಿಸುವುದು ನಮ್ಮ ಬಂಧುಗಳಾದ ಇವರಿಗೋಸ್ಕರವೆ. ಸಮಸ್ತ ಭೂಮಂಡಲದ ಆಧಿಪತ್ಯಕ್ಕಾಗಲಿ ಅಥವಾ ತ್ರೈಲೋಕ್ಯರಾಜ್ಯಕ್ಕಾಗಲಿ ಇವರನ್ನೆಲ್ಲ ಕೊಲ್ಲಲು ಯಾರುತಾನೆ ಒಪ್ಪುವರು ? ಈ ಕೃತ್ಯವನ್ನು ಮಾಡಿದನಂತರ ಜೀವನದಲ್ಲಿ ಸುಖ, ಸಂತೋಷ, ಸಮಾಧಾನಗಳು ಹೇಗೆ ಉಂಟಾಗುತ್ತವೆ ? " ಈ ಕಾರ್ಯವನ್ನು ಮಾಡಬಾರದೆಂಬ ಮನೋ

ಭಾವನೆಗೆ ಸಹಾಯಕವಾಗಿ ಅವನ ಧರ್ಮಬುದ್ಧಿ ಎಚ್ಚರಗೊಂಡು ಈ ಕೆಲಸವು ಒಂದು ಮಹಾಪಾತಕವೆಂದು ಹೇಳುತ್ತದೆ. ಪರಸ್ಪರ ಕೊಲೆ ಮಾಡುವುದರಲ್ಲಿ ಯಾವವಿಧವಾದ ಧರ್ಮವೂ ನ್ಯಾಯವೂ ಇಲ್ಲ. ಹೀಗೆ ಕೊಲ್ಲಲ್ಪಡಬೇಕಾದವರು ಪ್ರೀತಿಗೂ ಗೌರವಕ್ಕೂ ಪಾತ್ರರಾಗಿರುವವರು. ಅವರಿಲ್ಲದ ಜೀವನವೆ ಬೇಕಾಗಿಲ್ಲ. ಈ ಪವಿತ್ರವ.ವ ಭಾವನೆಗಳನ್ನು ಅಲಕ್ಷ್ಯಮಾಡುವುದು ಧರ್ಮವಲ್ಲ; ಆದುದರಿಂದ ಇದು ಮಹಾಪಾತಕವೆ ಸರಿ. ಆದರೆ ಪ್ರತಿಕಕ್ಷಿಗಳು ಲೋಭದಿಂದಲೂ ಸ್ವಾರ್ಥ ದಿಂದಲೂ ಮೇಲೆಬಿದ್ದು, ತಪ್ಪು ಅವರದಾಗಿ, ಈ ಪರಿಸ್ಥಿತಿಗೆ ಅವರೆ ಕಾರಣ ಭೂತರಾಗಿದ್ದಾರೆಂಬುದೇನೋ ನಿಜ; ಆದರೆ ಅದಕ್ಕೋಸ್ಕರ ಅವರಮೇಲೆ ಯುದ್ಧ ಮಾಡುವುದು ಅವರ ಅಪರಾಧಕ್ಕಿಂತಲೂ ಹೆಚ್ಚಾದ ಅಪರಾಧವೂ ಪಾತಕವೂ ಆಗುತ್ತದೆ. ಅವರ ಮನಸ್ಸಾದರೋ ದುರಾಶೆಗೆ ಒಳಗಾಗಿ ತಪ್ಪಿನ ಅರಿವೆ ಅವರಿಗಿಲ್ಲ. ತನಗಾದರೊ ಮಾಡುವಾಗಲೆ ಇದು ಪಾಪಕೃತ್ಯವೆಂಬ ಸ್ಪಷ್ಟವಾದ ಜ್ಞಾನವು ಇದೆ. ಇದರಿಂದಾಗುವ ಪ್ರಯೋಜನವಾದರೂ ಏನು? ಕುಲಧರ್ಮ, ಜಾತಿಧರ್ಮ ಮತ್ತು ಸಮಾಜಧರ್ಮಗಳ ರಕ್ಷಣೆಯೆ? ಅಲ್ಲ; ಈ ಅಂತಃಕಲಹ ದಿಂದ ನಿರ್ನಾಮವಾಗುವುದು ಇವುಗಳೆ. ಕುಲವು ಕ್ಷಯವಾಗುವುದು; ಕುಲ ಧರ್ಮವು ನಾಶವಾಗಿ ವರ್ಣಸಂಕರವಾಗುವುದು. ಶಾಶ್ವತವಾದ ಧರ್ಮಗಳು ಸಂಪೂರ್ಣವಾಗಿ ನಾಶವಾಗುವುವು. ಈ ಘೋರಯುದ್ಧದ ಪರಿಣಾಮವೇನೆಂದರೆ ಕುಲಕ್ಷಯ; ಕುಲಧರ್ಮವು ನಾಶವಾಗಿ ಅಧರ್ಮದ ವ್ಯಾಪನೆ ಮತ್ತು ನರಕ ಪ್ರಾಪ್ತಿ. ಹೀಗೆ ಯೋಚಿಸಿ ಅರ್ಜುನನು ದೇವದತ್ತವಾದ ಗಾಂಡೀವವನ್ನೂ ಅಕ್ಷಯವಾದ ಬತ್ತಳಿಕೆಯನ್ನೂ ಕೆಳಕ್ಕೆ ಬಿಸುಟು "ಅಶಸ್ತ್ರನಾದ ನನ್ನನ್ನು ಶಸ್ತ್ರಪಾಣಿಗಳಾದ ಧೃತರಾಷ್ಟ್ರಪುತ್ರರು ಕೊಲ್ಲುವುದೇ ಕ್ಷೇಮಕರ. ನಾನು ಯುದ್ಧ ಮಾಡುವುದಿಲ್ಲ" ಎಂದು ಹೇಳುತ್ತಾನೆ.

ಅರ್ಜುನನ ಮುಂದೆ ಬಂದು ನಿಂತಿರುವ ಚಿಂತಾಜನಕವಾದ ಈ ಸಮ ಸ್ಯೆಯು ಜಿಜ್ಞಾಸುವಿನ ಸಮಸ್ಯೆಯಲ್ಲ. ಎಂದರೆ ಇದು ತೋರಿಕೆಯ ಪ್ರಪಂಚದಲ್ಲಿ ಜುಗುಪ್ಸೆ ಹೊಂದಿ, ಸತ್ಯಾನ್ವೇಷಣೆಗಾಗಿಯೂ, ಜೀವನದ ನಿಜವಾದ ಲಕ್ಷ್ಯ ವನ್ನು ತಿಳಿಯುವುದಕ್ಕಾಗಿಯೂ, ಸಂಸಾರ ಬಂಧನದಿಂದ ಬಿಡುಗಡೆ ಹೊಂದಲು ಸಾಧನವನ್ನು ಹುಡುಕುವುದಕ್ಕಾಗಿಯೂ, ಅಂತರ್ಮುಖವಾದ ದೃಷ್ಟಿಯುಳ್ಳವನ ಸಮಸ್ಯೆಯಲ್ಲ. ಇದು ಇಲ್ಲಿಯವರೆಗೂ ತನ್ನ ಧರ್ಮದಲ್ಲಿ—ಕ್ಷತ್ರಿಯಧರ್ಮದಲ್ಲಿ— ನಿರತನಾಗಿದ್ದ ಮನುಷ್ಯನ ಮನಸ್ಸಿನಲ್ಲೂ ಭಾವನೆಗಳಲ್ಲೂ ಹೃದಯದಲ್ಲೂ

ಉಂಟಾದ ಕ್ರಾಂತಿ. ಈ ಧರ್ಮಗಳು ಇವನನ್ನು ಈ ಭೀಕರವಾದ ಗೊಂದಲಕ್ಕೆ ತಳ್ಳಿವೆ. ಈ ಗೊಂದಲದಲ್ಲಿ ಈ ಧರ್ಮಗಳಿಗೆ ಪರಸ್ಪರ ವಿರೋಧ ಬಂದು, ಧರ್ಮವೆ ಇಲ್ಲದಂತಾಗಿ, ಅವನಿಗೆ ಭದ್ರವಾದ ಯಾವ ಆಧಾರವೂ ಊರೆಗೋಲೂ ಇಲ್ಲದಂತಾಗಿದೆ. ಕರ್ಮನಿರತನಾದವನ ಮನಸ್ಸಿಗೆ ಇದು ಅತ್ಯಂತ ಕಠಿಣವಾದ ಸ್ಥಿತಿ. ಅವನ ದೃಷ್ಟಿಗೆ ಎಲ್ಲವೂ ವಿಫಲವಾಗಿ ಶೂನ್ಯವಾಗುವುದು

ಈ ಕ್ರಾಂತಿಯೇನೊ ಸ್ವಾಭಾವಿಕವಾದುದು. ಮನಸ್ಸಿನಲ್ಲಿ ಕರುಣೆ, ಸಖೇದಾಶ್ಚರ್ಯ(Horror) ಮತ್ತು ಜುಗುಪ್ಸೆ ಇವೂ ಸಹಜವಾದ ಭಾವಗಳು. ಒಂದು ಕಡೆ ಜೀವನದಲ್ಲಿಯೂ ಧರ್ಮಕರ್ಮಗಳಲ್ಲಿಯೂ ಇದ್ದ ಆದರ ಮತ್ತು ನಂಬಿಕೆಗಳ ವಿನಾಶ; ಇನ್ನೊಂದು ಕಡೆ ತೀವ್ರವಾದ ಧರ್ಮನಿಷ್ಠೆಯ ಪರಿಣಾಮವಾಗಿ ಮನುಷ್ಯ ಸಾಮಾನ್ಯನಿಗಿರುವ ಪ್ರೀತಿ, ಗೌರವ, ಸುಖೇಚ್ಛೆ ಮೊದಲಾದುವುಗಳ ನಿರಾಕರಣೆ; ರಕ್ತಪಾತದಿಂದ ದೊರಕುವ ಭೋಗಗಳ ನಿರಾಕರಣೆ; ಪಾಪ ಮತ್ತು ನರಕಗಳ ಭೀತಿ; ಈ ಕಾರ್ಯವನ್ನು ಮಾಡಬೇಕೆಂಬ ವಿಧಿಯಿಂದ ಆ ಕಾರ್ಯದ ಫಲವೆ ನಾಶವಾಗುವ ಪ್ರಸಂಗ–ಇವೆಲ್ಲವೂ ಅವನ ಮನಸ್ಸಿನಲ್ಲಿ ಕ್ರಾಂತಿಯನ್ನುಂಟುಮಾಡಿದುದು ಸಹಜವೆ. ಒಟ್ಟಿನಲ್ಲಿ ಪರಿಣಾಮವೇನೆಂದರೆ ಅರ್ಜುನನ ಮನಸ್ಸಿನಲ್ಲಿ ಎಲ್ಲೆಲ್ಲಿಯೂ ತೋರುತ್ತಿದ್ದ ಶೂನ್ಯತೆ. ಇದನ್ನೆ ಕುರಿತು ಅರ್ಜುನನು ಶ್ರೀಕೃಷ್ಣನನ್ನು ಹೀಗೆ ಕೇಳುತ್ತಾನೆ—"ನನ್ನ ಮನಸ್ಸೂ, ಭಾವನೆಗಳೂ ಹೃದಯವೂ—ಇಡೀ ಚೇತನವೆ ಭ್ರಾಂತಿಗೊಂಡಿದೆ. ಧರ್ಮವು ಯಾವುದು? ಯಾವ ಲಕ್ಷ್ಯವನ್ನು ಇಟ್ಟುಕೊಂಡು ಯಾವ ದಾರಿಯನ್ನು ಅನುಸರಿಸಬೇಕು? ಯಾವ ಕಾರ್ಯವನ್ನು ಮಾಡಬೇಕು? ಇದು ಯಾವುದೂ ನನಗೆ ತಿಳಿಯುವುದಿಲ್ಲ. ನಾನು ನಿನ್ನನ್ನು ಮರೆಹೊಕ್ಕಿದ್ದೇನೆ. ನನ್ನನ್ನು ಶಿಷ್ಯನನ್ನಾಗಿ ಸ್ವೀಕರಿಸು. ನನಗೆ ಇದನ್ನೆಲ್ಲ ಬೋಧಿಸಿ ಸರಿಯಾದ ದಾರಿಯನ್ನು ತೋರಿಸು." ಅವನು ಪ್ರಪಂಚದ ಅಥವಾ ಜೀವನದ ಗುರಿಯನ್ನಾಗಲಿ ಸ್ವರೂಪವನ್ನಾಗಲಿ ಕೇಳುವುದಿಲ್ಲ. ತಾನು ಯಾವ ರೀತಿ ನಡೆದುಕೊಳ್ಳಬೇಕೆಂಬ ಧರ್ಮವನ್ನು ಮಾತ್ರ ಕೇಳುತ್ತಾನೆ. ಆದರೂ ಶ್ರೀಕೃಷ್ಣನು ಈ ಜಗತ್ತಿನ ಮತ್ತು ಜೀವಾತ್ಮನ ಸ್ವರೂಪವನ್ನು–ಕನಿಷ್ಠ ಪಕ್ಷ ಅರ್ಜುನನು ಮೇಲ್ಮಟ್ಟದ ಜೀವನವನ್ನು ನಡೆಸಲು ಅವಶ್ಯಕವಾಗಿರುವಷ್ಟಾದರೂ–ಉಪದೇಶಮಾಡಬೇಕೆಂದು ಸಂಕಲ್ಪಿಸಿದ್ದಾನೆ. ಎಲ್ಲ ಧರ್ಮಗಳನ್ನು ಬಿಟ್ಟು ತನ್ನಲ್ಲಿಯೆ ಮನೋಬುದ್ಧಿಗಳನ್ನಿಟ್ಟು ಕರ್ಮವನ್ನು ಮಾಡಬೇಕೆಂದು ಉಪದೇಶಿಸುವವನಾಗಿದ್ದಾನೆ. ಆದುದರಿಂದ ಶ್ರೀಕೃಷ್ಣನು ಅರ್ಜುನನ ಮನಸ್ಸು

ಸಾಮಾನ್ಯ ಧರ್ಮದಿಂದ ಸಂಪೂರ್ಣವಾಗಿ ವಿಮುಖವಾಗಿದೆಯೆಂದು ಪರೀಕ್ಷಿಸಿ ತಿಳಿದಮೇಲೆ ಆತ್ಮನ ಸಂಬಂಧವಾಗಿ ಅನೇಕ ವಿಷಯಗಳನ್ನು ಇವನಿಗೆ ಬೋಧಿಸಲು ಮೊದಲುಮಾಡುತ್ತಾನೆಯೆ ಹೊರತು ವ್ಯಾವಹಾರಿಕ ನಡತೆಯನ್ನು ಕುರಿತು ಏನನ್ನೂ ಹೇಳುವುದಿಲ್ಲ. ಸಮತ್ವಬುದ್ಧಿಯುಳ್ಳವನಾಗಿ, ಕರ್ಮದ ಫಲದಲ್ಲಿ ಆಕಾಂಕ್ಷೆಯನ್ನು ತ್ಯಜಿಸಿ, ಪಾಪ ಪುಣ್ಯಗಳೆಂಬ ಭಾವಗಳನ್ನು ಅತಿಕ್ರಮಿಸಿ, ಯೋಗಸ್ಥನಾಗಿ, ಸಮಾಧಿಯಲ್ಲಿದ್ದುಕೊಂಡು ಭಗವಂತನಲ್ಲಿ ನೆಟ್ಟಮನಸ್ಸುಳ್ಳವನಾಗಿರಬೇಕೆಂದು ಉಪದೇಶಿಸುತ್ತಾನೆ.

ಅರ್ಜುನನ ಮನಸ್ಸಿಗೆ ಸಮಾಧಾನವಾಗುವುದಿಲ್ಲ. "ಹೀಗೆ ಸಮಾಧಿಸ್ಥಿತಿಯಲ್ಲಿರುವವನು ಬಾಹ್ಯಪ್ರಪಂಚದಲ್ಲಿ ಹೇಗೆ ನಡೆದುಕೊಳ್ಳುತ್ತಾನೆ? ಅವನ ಮಾತು ಹೇಗಿರಬೇಕು? ಅವನ ಚಲನವಲನಗಳು ಯಾವರೀತಿ ಇರುತ್ತವೆ? ಇವನ ದಿನಚರಿಯ ಕೆಲಸಗಳ ಮೇಲೆ ಸಮಾಧಿಸ್ಥಿತಿಯು ಯಾವ ಪ್ರಭಾವವನ್ನು ಬೀರುತ್ತದೆ? ಈ ಸ್ಥಿತಿಯಿಂದ ಮನುಷ್ಯನ ನಿತ್ಯಜೀವನದಲ್ಲಿ ಏನು ಬದಲಾವಣೆ ಉಂಟಾಗುತ್ತದೆ?" ಎಂದು ಕೇಳುತ್ತಾನೆ. ಶ್ರೀಕೃಷ್ಣನು ಹಿಂದೆ ಹೇಳಿದುದನ್ನೆ ಮತ್ತೆ ವಿಸ್ತರಿಸಿ ಹೇಳುತ್ತಾನೆ. ಶ್ರೀಕೃಷ್ಣನು ಸಮಾಧಿಸ್ಥನ ಕಾರ್ಯವನ್ನು ಪ್ರೇರಿಸುವ ಯೋಗಸ್ಥಿತಿಯನ್ನೆ ಕುರಿತು ಪುನಃ ಹೇಳುತ್ತಾನೆಯೆ ಹೊರತು ಅವನು ಮಾಡುವ ಕಾರ್ಯದ ವಿಷಯವಾಗಿ ಏನನ್ನೂ ಹೇಳುವುದಿಲ್ಲ. ರಾಗದ್ವೇಷಗಳಿಗೆ ಆಶ್ರಯಕೊಡದೆ, ಎಲ್ಲವನ್ನೂ ಒಂದೆ ವಿಧವಾಗಿ ಕಾಣುವ ಸಮತ್ವ ಸ್ಥಿತಿಯಲ್ಲಿ ಮನಸ್ಸನ್ನು ಸ್ಥಿರವಾಗಿ ನೆಡುವುದೆ ಬೇಕಾಗಿರುವುದು. ಇದರಲ್ಲಿ ತಾನು ಯಾವ ರೀತಿ ನಡೆದುಕೊಳ್ಳಬೇಕು ಎಂಬ ಅರ್ಜುನನ ಪ್ರಶ್ನೆಗೆ ನಿಷ್ಕೃಷ್ಟವಾದ ಉತ್ತರವು ಇಲ್ಲ. ಅದಕ್ಕೆ ಬದಲಾಗಿ ಕರ್ಮಗಳ ತ್ಯಾಗವನ್ನೆ ಬೋಧಿಸುವಂತೆ ಅರ್ಜುನನಿಗೆ ತೋರುತ್ತದೆ. ಅರ್ಜುನನು ಅಸಹನೆಯಿಂದ ಮತ್ತೆ ಕೇಳುತ್ತಾನೆ. "ಕರ್ಮಕ್ಕಿಂತ ಜ್ಞಾನವೆ ಹೆಚ್ಚೆಂದು ನಿನ್ನ ಅಭಿಪ್ರಾಯವಾದರೆ ಈ ಘೋರವಾದ ಕರ್ಮವನ್ನು ಮಾಡೆಂದು ನನಗೆ ಏತಕ್ಕೆ ಹೇಳುತ್ತೀಯೆ? ಕರ್ಮ ಜ್ಞಾನಗಳು ಎರಡೂ ಹೆಚ್ಚೆಂದು ಹೇಳುವಂತೆ ತೋರುವ ಮಾತುಗಳಿಂದ ನನ್ನ ಮನಸ್ಸಿಗೇಕೆ ಭ್ರಾಂತಿಯನ್ನುಂಟುಮಾಡುತ್ತೀಯೆ? ನನಗೆ ಯಾವುದೊಂದರಿಂದ ಶ್ರೇಯಸ್ಸುಂಟಾಗುವುದೊ ಅದನ್ನು ಖಚಿತವಾಗಿ ತಿಳಿಸು." ಈ ಲೋಕದ ಕರ್ಮದಲ್ಲೆ ದೃಷ್ಟಿಯುಳ್ಳ ಮನುಷ್ಯನಿಗೆ ಆತ್ಮವಿಚಾರದಲ್ಲಾಗಲಿ ನಿವೃತ್ತಿಮಾರ್ಗದ ಜೀವನದಲ್ಲಾಗಲಿ ಆಸಕ್ತಿ ಇಲ್ಲ. ಅವನ ಇಹಲೋಕದ ನಡತೆಗೂ ಪ್ರಾಣವನ್ನು ತ್ಯಜಿಸುವ ವಿಷಯದಲ್ಲೂ (ಅವನ ಭಾವನೆಯಲ್ಲಿ ಇದೂ ಒಂದು ಕರ್ಮ) ಉಪಯುಕ್ತವಾಗುವ ಮಟ್ಟಿಗೆ ಮಾತ್ರ ಅವನಿಗೆ ಆತ್ಮವಿಚಾರದಲ್ಲಿ ಆಸಕ್ತಿ ಇರುತ್ತದೆ.

ಆದರೆ ಈ ಲೋಕದಲ್ಲಿ ಕರ್ಮಮಾಡಿಕೊಂಡಿದ್ದರೂ ಅದಕ್ಕೆ ಅಂಟಿಕೊಳ್ಳದೆ ಜೀವಿಸಬೇಕೆಂಬ ಹೇಳಿಕೆಯು ಅವನಿಗೆ ಅರ್ಥವಾಗುವುದಿಲ್ಲ. ಅರ್ಜುನನ ಉಳಿದ ಪ್ರಶ್ನೆಗಳೂ ಮಾತುಗಳೂ ಮೇಲೆ ಹೇಳಿದ ಮನೋಭಾವದಿಂದಲೆ ಪ್ರೇರಿತವಾಗಿವೆ. "ಸಮಾಧಿಸ್ಥಿತಿಯು ದೃಢವಾದ ಮೇಲೆ ಬಾಹ್ಯಕರ್ಮದಲ್ಲಿ ಬದಲಾವಣೆಯು ಆಗಲೇಬೇಕೆಂಬ ಆವಶ್ಯಕತೆಯಿಲ್ಲ. ನಿನ್ನ ಸ್ವಧರ್ಮಕ್ಕನು ಸಾರವಾಗಿ ನಡೆ. ಒಂದುವೇಳೆ ಹೀಗೆ ಮಾಡಬೇಕಾದ ಕರ್ಮವು ಇತರ ಧರ್ಮದೃಷ್ಟಿಯಲ್ಲಿ ದೋಷಯುಕ್ತವಾಗಿ ಕಂಡರೂ ಕೂಡ ನಿನ್ನ ಸ್ವಭಾವ ಧರ್ಮಕ್ಕನುಸಾರವಾಗಿಯೆ ನೀನು ನಡೆಯಬೇಕು." ಎಂದು ಶ್ರೀಕೃಷ್ಣನು ಹೇಳಿದಾಗ ಅರ್ಜುನನ ಮನಸ್ಸಿಗೆ ವ್ಯಾಕುಲವಾಗುವುದು. ಸ್ವಭಾವ ಧರ್ಮವೇನೊ ಸರಿ; ಆದರೆ ಮಾಡಲ್ಪಡುವ ಕರ್ಮವು ಪಾಪವೆಂದು ತೋರುವು ದಲ್ಲ? ಒಳ್ಳೆಯದನ್ನು ಮಾಡಬೇಕೆಂಬ ಇಚ್ಛೆಯಿದ್ದರೂ ಮನುಷ್ಯನನ್ನು ಬಲಾ ತ್ಕಾರದಿಂದ ಪಾಪಕರ್ಮಕ್ಕೆ ಪ್ರೇರಿಸುವುದು ಇದೆ ಸ್ವಭಾವವಲ್ಲವೆ? "ಹಿಂದೆ ನಾನು ಈ ಯೋಗವನ್ನು ವಿವಸ್ವಂತನಿಗೆ ಉಪದೇಶಮಾಡಿದೆನು. ಅಲ್ಲಿಂದ ಈಚೆಗೆ ಅದು ನಷ್ಟವಾಯಿತು. ಅದನ್ನೆ ಈಗ ನಾನು ನಿನಗೆ ಹೇಳುತ್ತಿದ್ದೇನೆ" ಎಂಬ ಶ್ರೀಕೃಷ್ಣನ ಮಾತು ಐಹಿಕವ್ಯಾಪಾರದಲ್ಲೆ ದೃಷ್ಟಿಯುಳ್ಳ ಅರ್ಜುನನಿಗೆ ಅರ್ಥವಾಗಲಿಲ್ಲ. ಇದು ಹೇಗೆ ಸಾಧ್ಯವೆಂಬ ಅರ್ಜುನನ ಪ್ರಶ್ನೆಗೆ ಉತ್ತರ ಕೊಡು ವಾಗ ಭಗವಂತನು "ಧರ್ಮಕ್ಕೆ ಹಾನಿಯು ಉಂಟಾದಾಗಲೆಲ್ಲ ಅಧರ್ಮವು ತಲೆ ಯೆತ್ತಿದಾಗಲೆಲ್ಲ ನಾನು ಧರ್ಮದ ಉದ್ಧಾರಕ್ಕಾಗಿ ಅವತರಿಸುತ್ತೇನೆ" ಎಂದು ಪ್ರಸಿದ್ಧವಾದ ಮಾತನ್ನು ಹೇಳುತ್ತಾನೆ ಕರ್ಮಯೋಗವನ್ನು ಕರ್ಮ ಸನ್ಯಾಸ ದೊಡನೆ ಸಮನ್ವಯ ಮಾಡುತ್ತ ಶ್ರೀಕೃಷ್ಣನು ಪುನಃ ಹೇಳಿದ ಮಾತುಗಳೂ ಕೂಡ ಅರ್ಜುನನಿಗೆ ಒಗಟಿನಂತಿರುವುವು. ಆದುದರಿಂದ ಇವೆರಡರಲ್ಲಿ ಯಾವುದು ಉತ್ತಮವೆಂಬುದನ್ನು ಸ್ಪಷ್ಟವಾಗಿ ತಿಳಿಸೆಂದು ಮತ್ತೆ ಕೇಳುತ್ತಾನೆ. ಇದನ್ನು ನೀನು ಅನುಷ್ಠಾನ ಮಾಡೆಂದು ಶ್ರೀಕೃಷ್ಣನು ಹೇಳಿದ ಯೋಗದ ನಿಜವಾದ ಸ್ವರೂಪವು ಅರ್ಜುನನಿಗೆ ಅರಿವಾದಾಗ, ಇಚ್ಛೆಯಿಂದಲೂ ರಾಗದಿಂದಲೂ ಕಾರ್ಯ ಗಳಲ್ಲಿ ತೊಡಗುವ ಐಹಿಕ ಪ್ರಯೋಜನದಲ್ಲೆ ದೃಷ್ಟಿಯುಳ್ಳ ಅರ್ಜುನನ ಮನಸ್ಸಿಗೆ ಅದು ಅತ್ಯಂತ ಕಷ್ಟವೆಂದು ತೋರುವುದು. ಆದುದರಿಂದ ಅವನು ಕೇಳುತ್ತಾನೆ "ಯೋಗಮಾರ್ಗದಲ್ಲಿ ಕಾಲಿಟ್ಟು ಗುರಿಯನ್ನು ಮುಟ್ಟದೆ ಇರುವ ಮನುಷ್ಯನ ಗತಿ ಏನು? ಹಿಂದಿನ ರಾಗಪ್ರೇರಿತವಾದ ಕರ್ಮಪ್ರಪಂಚವೂ ಇಲ್ಲದೆ,

ಲಕ್ಷ್ಯವಾದ ಯೋಗಸಿದ್ಧಿಯೂ ಇಲ್ಲದೆ, ಎರಡರಿಂದಲೂ ಭ್ರಷ್ಟನಾಗಿ ಒಂದು ತುಂಡಾದ ಮೋಡದಂತೆ ನಾಶಹೊಂದುವುದಿಲ್ಲವೆ?"

ಅವನ ಸಂಶಯಗಳು ನಿವಾರಣೆಯಾಗಿ ಬ್ರಾಹ್ಮೀಸ್ಥಿತಿಯಲ್ಲಿರುವುದೆ ಅವನ ಧರ್ಮವೆಂದು ತಿಳಿದಾಗಲೂ ಅವನು ಪುನಃ ಪುನಃ ತನ್ನ ಮುಂದಿನ ಕರ್ತವ್ಯವನ್ನು ನಿರ್ದೇಶಿಸುವ ನಿಯಮವನ್ನೂ ಧರ್ಮವನ್ನೂ ಕುರಿತು ಸ್ಪಷ್ಟವಾದ ತಿಳಿವಳಿಕೆಯನ್ನು ಯಾವಾಗಲೂ ಅಪೇಕ್ಷಿಸುತ್ತಾನೆ. "ಸಾಮಾನ್ಯವಾಗಿ ನಮಗೆ ಅನುಭವದಲ್ಲಿರುವ ಜೀವನ ಅವಸ್ಥೆಗಳಲ್ಲಿ ಈಶ್ವರನನ್ನು ತಿಳಿಯುವ ಬಗೆ ಹೇಗೆ? ಈ ಪ್ರಪಂಚದಲ್ಲಿ ಅಧಿಕಪ್ರಮಾಣದಲ್ಲಿ ಆವಿರ್ಭವಿಸುತ್ತಿರುವ ಈಶ್ವರನ ಶಕ್ತಿಯನ್ನು ಧ್ಯಾನದಿಂದ ಯಾವ ರೀತಿ ಗುರುತಿಸಿ ತಿಳಿಯಬಹುದು? ಮಾನುಷ ಶರೀರದಲ್ಲಿ ಮತ್ತು ಮನಸ್ಸಿನಲ್ಲಿ ಅಂತರ್ಹಿತವಾಗಿದ್ದುಕೊಂಡು ಈಗ ತನಗೆ ಉಪದೇಶ ಮಾಡುತ್ತಿರುವ ಈಶ್ವರನ ವಿಶ್ವರೂಪವನ್ನು ಈಗಲೆ ನೋಡಲು ಸಾಧ್ಯವಿಲ್ಲವೆ? ಕರ್ಮಸನ್ಯಾಸಕ್ಕೂ ಇದಕ್ಕಿಂತ ಶ್ರೇಷ್ಠವೆಂದು ಉಪದೇಶಿಸಲ್ಪಟ್ಟ ಸೂಕ್ಷ್ಮವಾದ ಕರ್ಮತ್ಯಾಗಕ್ಕೂ ವ್ಯತ್ಯಾಸವೇನೆಂದು ಸ್ಪಷ್ಟವಾಗಿ ತಿಳಿಸು. ಈಶ್ವರೇಚ್ಛೆಗನುಸಾರವಾಗಿ ಮಾಡಬೇಕಾದ ನಿಷ್ಕಾಮಕರ್ಮದ ಅನುಷ್ಠಾನಕ್ಕೆ ಅತ್ಯವಶ್ಯಕವಾಗಿ ತಿಳಿಯಬೇಕಾದ ಪ್ರಕೃತಿಪುರುಷ ಭೇದವನ್ನೂ ಕ್ಷೇತ್ರ-ಕ್ಷೇತ್ರಜ್ಞ ಭೇದವನ್ನೂ ತಿಳಿಸು. ನಾನು ಪ್ರಕೃತಿಯ ಯಾವ ಗುಣಗಳಿಗೆ ಅತೀತನಾಗಿರಬೇಕೊ ಆ ಮೂರು ಗುಣಗಳ ಸ್ವರೂಪವನ್ನೂ, ಕಾರ್ಯವನ್ನೂ, ಪರಿಣಾಮವನ್ನೂ ಉಪದೇಶಿಸು ಎಂಬುದಾಗಿ ಪ್ರಶ್ನೆಮಾಡುತ್ತಾನೆ.

ಇಂತಹ ಮನೋಭಾವವುಳ್ಳ ಶಿಷ್ಯನಿಗೆ ಭಗವಂತನು ತನ್ನ ದಿವ್ಯೋಪದೇಶವನ್ನು ಮಾಡುತ್ತಾನೆ. ಈ ಶಿಷ್ಯನು ಈ ವರೆಗೆ ಅಹಂಭಾವದಿಂದ ಕರ್ಮಗಳನ್ನು ಮಾಡಿ ತನ್ಮೂಲಕ ಕೊಂಚಮಟ್ಟಿಗೆ ಅವನ ಮನಸ್ಸು ಪರಿಪಕ್ವವಾಗಿದೆ ಇಂತಹ ಮನುಷ್ಯನಿಗೆ ಜೀವನದಲ್ಲಿ ಪ್ರಮಾಣಗಳಾಗಿದ್ದ ನಂಬಿಕೆಗಳೆಲ್ಲವೂ ಕುಸಿದುಬಿದ್ದು ಶೂನ್ಯವಾಗಿ ಪರಿಣಮಿಸಿವೆ ಇವನನ್ನೂ ಕೀಳ್ಮಟ್ಟದಿಂದ ಮೇಲ್ಮಟ್ಟದ ಜೀವನಕ್ಕೆ, ಕರ್ಮದಲ್ಲಿ ಮೂಢಾಸಕ್ತಿಯಿಂದ ಕರ್ಮಾತೀತವಾಗಿದ್ದರೂ ಕರ್ಮವನ್ನು ಪ್ರೇರಿಸಿ ನಿಯಂತ್ರಿಸುವ ಸ್ಥಿತಿಗೆ, ಅಹಂಸ್ಥಿತಿಯಿಂದ ಆತ್ಮಸ್ಥಿತಿಗೆ; ಅನ್ನ ಪ್ರಾಣ ಮನಸ್ಸುಗಳೇ ಉಪಾಧಿಯಾದ ಜೀವನದಿಂದ ಇದಕ್ಕೆ ಅತೀತವಾದ ಬ್ರಾಹ್ಮೀಸ್ಥಿತಿಗೆ ಉದ್ಧರಿಸಬೇಕು. ಹಾಗೆಯೆ ಶಿಷ್ಯನಿಗೆ ಅವನು ಬಯಸುವ-ಅಂತಃಪ್ರೇರಣೆಯಿಂದ ಹುಡುಕುತ್ತಿರುವ-ಉಪದೇಶವನ್ನೂ ಕೊಡ

ಬೇಕಾಗಿದೆ. ಎಂದರೆ ಪರಸ್ಪರ ವಿರೋಧಗಳಿಂದಲೂ ತೊಡಕುಗಳಿಂದಲೂ ಸತ್ಯದಂತೆ ಕಾಣಿಸುವ ಮಾಯೆಗಳಿಂದಲೂ ತುಂಬಿರುವ ಸಾಮಾನ್ಯ ಜೀವನವನ್ನು ನಿಯಂತ್ರಿಸುವ ಧರ್ಮಕ್ಕಿಂತ ಮೇಲ್ಮಟ್ಟದ ಜೀವನ ಕ್ರಮವನ್ನೂ ಧರ್ಮವನ್ನೂ ಬೋಧಿಸಬೇಕಾಗಿದೆ; ಮನುಷ್ಯನು ಕರ್ಮಬಂಧದಿಂದ ಮುಕ್ತಿಯನ್ನು ಪಡೆದು, ಬ್ರಾಹ್ಮೀಸ್ಥಿತಿಗೆ ಸಹಜವಾದ ಅನಂತ ಶಕ್ತಿಯಿಂದ ಕರ್ಮಗಳನ್ನು ಮಾಡಿ, ಸಿದ್ಧಿಯನ್ನು ಗಳಿಸಲು ಸಹಾಯಕವಾದ ಪರಮಧರ್ಮವನ್ನು ಉಪದೇಶಿಸಬೇಕಾಗಿದೆ. ಏತಕ್ಕೆಂದರೆ ಮನುಷ್ಯನು ಕರ್ಮವನ್ನು ಮಾಡಲೇಬೇಕು. ಪ್ರಪಂಚದ ಗತಿಯು ಮುಂದಕ್ಕೆ ಸಾಗಲೇಬೇಕು. ಜೀವನು ಅಜ್ಞಾನಕ್ಕೆ ವಶನಾಗಿ ತಾನು ಇಲ್ಲಿ ಮಾಡಬೇಕಾದ ಕರ್ತವ್ಯದಿಂದ ವಿಮುಖನಾಗಬಾರದು. ಗೀತೆಯ ಉಪದೇಶಸರಣಿಯು ಅಲ್ಲಲ್ಲಿ ಎಷ್ಟು ಲಂಬಿತವಾಗಿದ್ದರೂ ಈ ಮೂರು ಅಂಶಗಳ ಪುಷ್ಟೀಕರಣವನ್ನೆ ಗುರಿಯನ್ನಾಗಿಟ್ಟುಕೊಂಡು ಪ್ರವರ್ತಿಸಿದೆ.



# ನಾಲ್ಕನೆಯ ಪ್ರಕರಣ



## ಉಪದೇಶದ ಸಾರ

ಭಗವತ್ಸ್ವರೂಪನಾದ ಗುರುವನ್ನೂ, ಮನುಷ್ಯನ ಪ್ರತಿನಿಧಿಯಾದ ಶಿಷ್ಯನನ್ನೂ ಕುರಿತು ವಿಚಾರಮಾಡಿದ್ದಾಯಿತು. ಈಗ ಉಪದೇಶದ ಸಾರವನ್ನು ಸ್ಪಷ್ಟವಾಗಿ ತಿಳಿಯಬೇಕಾಗಿದೆ. ಈ ವಿಷಯದಲ್ಲಿ ನಿಷ್ಕೃಷ್ಟವಾದ ತಿಳಿವಳಿಕೆಯು ಬಹಳ ಅವಶ್ಯಕ. ಏಕೆಂದರೆ, ಅನೇಕ ವಿಷಯಗಳನ್ನು ಒಳಗೊಂಡಿರುವ ಗೀತೆಯು ನಾನಾಯೋಗಗಳನ್ನು ಪ್ರತಿಪಾದಿಸುತ್ತದೆ; ಮತ್ತು ಆಧ್ಯಾತ್ಮಿಕ ಜೀವನದ ನಾನಾಮುಖಗಳನ್ನು ನಿರೂಪಿಸಿ ಸಮನ್ವಯಮಾಡುತ್ತದೆ. ನಿರರ್ಗಳವಾದ ಇದರ ನಿರೂಪಣೆಯ ಪ್ರವಾಹವು ನಾನಾಮುಖವಾಗಿ ಹರಿಯುವುದರಿಂದ ಒಂದು ಸಂಪ್ರದಾಯದಲ್ಲೇ ಪಕ್ಷಪಾತವಿರುವವರು ಈ ಗ್ರಂಥವು ತಮ್ಮ ಸಿದ್ಧಾಂತವನ್ನೆ ಪ್ರತಿಪಾದಿಸುತ್ತದೆ ಎಂದು ತಪ್ಪು ವ್ಯಾಖ್ಯಾನ ಮಾಡಲು ಇತರ ಅಪೌರುಷೇಯ ಗ್ರಂಥಗಳಿಗಿಂತಲೂ ಗೀತೆಯಲ್ಲಿ ಹೆಚ್ಚು ಅವಕಾಶವಿದೆ. ಮನುಷ್ಯರು ತಮ್ಮ ಮನಸ್ಸಿನಲ್ಲಿ ಮೊದಲೆ ಇರುವ, ತಮಗೆ ಇಷ್ಟವಾದ ಅಭಿಪ್ರಾಯ, ಸಿದ್ಧಾಂತ ಅಥವಾ ತತ್ತ್ವಕ್ಕೆ ಸರಿಹೊಂದುವಂತೆ ವಸ್ತುವನ್ನೂ ಪದವನ್ನೂ ಅಭಿಪ್ರಾಯ

ಗಳನ್ನೂ, ತಿಳಿದೊ ಅಥವಾ ತಿಳಿಯದೆಯೊ, ತಿರುಗಿಸಿಕೊಳ್ಳುವುದು ತಪ್ಪು ತಿಳುವಳಿಕೆಗೆ ಬಹಳ ಸಾಮಾನ್ಯವಾದ ಕಾರಣವೆಂದು ಭರತಖಂಡದ ತರ್ಕ ಶಾಸ್ತ್ರಜ್ಞರಿಗೆ ಚೆನ್ನಾಗಿ ತಿಳಿದ ವಿಷಯ. ಬಹಳ ಜಾಗರೂಕತೆಯಿಂದ ವಿಚಾರ ಮಾಡುವ ಮನುಷ್ಯನೂ ಕೂಡ ಈ ದೋಷಕ್ಕೆ ಒಳಗಾಗದೆ ಇರುವುದು ಅತ್ಯಂತ ಕಷ್ಟ. ಏತಕ್ಕೆಂದರೆ ಈ ವಿಷಯದಲ್ಲಿ ಯಾವಾಗಲೂ ತನ್ನ ವರ್ತನೆಯನ್ನು ತಾನೆ ಪರೀಕ್ಷಿಸುವುದು ಮನುಷ್ಯನ ಮನಸ್ಸಿಗೆ ಸಾಧ್ಯವಿಲ್ಲ. ಯಾವುದಾದರೂ ಸಿದ್ಧಾಂತ ಅಥವಾ ತತ್ತ್ವವನ್ನು ಅರ್ಥಂಬರ್ಥವಾಗಿ ಗ್ರಹಿಸಿ, ಅದರಲ್ಲಿ ಪಕ್ಷ ಪಾತವನ್ನಿಟ್ಟು, ಎಲ್ಲ ಜ್ಞಾನಗ್ರಹಣಕ್ಕೂ ಅದನ್ನೆ ಅಳತೆಕೋಲನ್ನಾಗಿ ಮಾಡಿ ಕೊಳ್ಳುವುದು ಮನಸ್ಸಿನ ಸ್ವಭಾವ. ಸರ್ವಸಾಮಾನ್ಯವಾದ ಈ ದೋಷವು ತನ್ನ ದೃಷ್ಟಿಗೆ ಬೀಳದಿರುವಂತೆ ಮರೆಮಾಚಿಕೊಳ್ಳುವುದಕ್ಕಾಗಿ ಮನಸ್ಸು ಬಳಸಿ ಬಳಸಿ ಹೊರಟ ಸ್ಥಾನಕ್ಕೆ ಬರುತ್ತದೆ; ಇದರಲ್ಲಿ ಇದಕ್ಕೆ ಬಹಳ ನಿಪುಣತೆ ಇದೆ. ಈರೀತಿಯಾದ ತಪ್ಪು ತಿಳಿವಳಿಕೆಗೆ ಗೀತೆಯಲ್ಲಿ ಬೇಕಾದಷ್ಟು ಅವಕಾಶವಿದೆ. ಗೀತೆಯಲ್ಲಿರುವ ಉಪದೇಶಗಳಲ್ಲಿ ಯಾವುದಾದರೂ ಒಂದನ್ನು ಅಥವಾ ಮುಖ್ಯವೆ ಆದ ವಾಕ್ಯಗಳನ್ನು ಪ್ರಧಾನವನ್ನಾಗಿ ಎಣಿಸಿ ಉಳಿದ ಹದಿನೆಂಟು ಅಧ್ಯಾಯ ಗಳಲ್ಲಿ ಭಾಗಗಳನ್ನೆಲ್ಲಾ ಹಿಂಬದಿಗಿಟ್ಟು ಅಥವಾ ಗೌಣವಾಗಿ ಎಣಿಸುವುದರಿಂದ ನಮಗೆ ಅಭಿಮತವಾದ ಸಿದ್ಧಾಂತವನ್ನೆ ಗೀತೆಯೂ ನಿರೂಪಿಸುವಂತೆ ಅರ್ಥ ಮಾಡುವುದು ಬಹಳ ಸುಲಭ.

"ಗೀತೆಯು ಕರ್ಮವನ್ನು ಬೋಧಿಸುವುದೇ ಇಲ್ಲ. ಕರ್ಮವನ್ನೂ, ಜೀವನವನ್ನೂ ತ್ಯಾಗಮಾಡಲು ಸಿದ್ಧಗೊಳಿಸುವ ಸಾಧನಕ್ರಮವನ್ನು ಬೋಧಿಸು ತ್ತದೆ" ಎಂದು ಕೆಲವರು ಹೇಳುತ್ತಾರೆ. ಇವರ ಅಭಿಪ್ರಾಯದಲ್ಲಿ ವಿಧಿಸಲ್ಪಟ್ಟ ಕರ್ಮವನ್ನು ಅಥವಾ ಮಾಡಬೇಕಾದ ಕೆಲಸಗಳನ್ನು ರಾಗದ್ವೇಷವಿಲ್ಲದೆ ಮಾಡು ವುದೆ ಸಾಧನ; ಜೀವನ ಮತ್ತು ಕರ್ಮಗಳ ತ್ಯಾಗವೊಂದೆ ಸಾಧಿಸಬೇಕಾದ ಗುರಿ. ಗೀತೆಯಲ್ಲಿ **ಸನ್ಯಾಸ** ಎಂಬ ಪದವನ್ನು ಉಪಯೋಗಿಸಿರುವ ವಿಶೇಷರೀತಿಯಿಂ ದಲೂ, ಗೀತೆಯ ಕೆಲವು ಶ್ಲೋಕಗಳನ್ನು ಉದಾಹರಿಸಿರುವುದರಿಂದಲೂ, ಗೀತೆ ಯಲ್ಲಿ ಹೇಳಿರುವ ಯುಕ್ತಿಗಳಲ್ಲಿ ಕೆಲವನ್ನು ಮಾತ್ರ ಆರಿಸಿ ಅವುಗಳಿಗೆ ಪ್ರಾಧಾನ್ಯ ಕೊಡುವುದರಿಂದಲೂ ಇಂತಹ ಅಭಿಪ್ರಾಯವನ್ನು ಸುಲಭವಾಗಿ ಸಮರ್ಥಿಸ ಬಹುದು. ಆದರೆ ಈ ಅಭಿಪ್ರಾಯವು ಸರಿಯೆಂದು ಕೊನೆಯವರೆಗೂ ಸಾಧಿಸು ವುದಕ್ಕಾಗುವುದಿಲ್ಲ.

ಏತಕ್ಕೆಂದರೆ ಗೀತೆಯನ್ನು ನಿಷ್ಪಕ್ಷಪಾತವಾಗಿ ಪರಿಶೀಲಿಸಿದರೆ ಕರ್ಮವನ್ನು ಬಿಡುವುದಕ್ಕಿಂತ ಮಾಡುವುದೆ ಉತ್ತಮವೆಂದು ಮೊದಲಿನಿಂದ ಕೊನೆಯವರೆಗೂ ಹೇಳಲ್ಪಟ್ಟಿರುವುದು. ಮತ್ತು ಕರ್ಮವನ್ನು ಈಶ್ವರನಲ್ಲಿ ಅರ್ಪಿಸಿ, ಫಲಾಪೇಕ್ಷೆಯನ್ನು ಮನಸ್ಸಿನಿಂದ ತ್ಯಜಿಸಿ ಸಮತ್ವಬುದ್ಧಿಯಿಂದ ಕರ್ಮವನ್ನು ಮಾಡುವುದೆ ಉತ್ತಮವೆಂದು ಹೇಳಿರುವುದು.

ಇನ್ನು ಕೆಲವರು ಗೀತೆಯು ಕೇವಲ ಭಕ್ತಿಯೋಗವನ್ನೆ ಉಪದೇಶಿಸುತ್ತದೆಯೆಂದು ಹೇಳುತ್ತಾರೆ. ಗೀತೆಯಲ್ಲಿರುವ ಅದ್ವೈತವನ್ನು ನಿರೂಪಿಸುವ ಭಾಗಗಳನ್ನೂ, ಎಲ್ಲವೂ ಪರಾತ್ಪರವಸ್ತುವಿನಲ್ಲಿಯೆ ಲೀನವಾಗುವುದೆಂಬ ಗೀತೆಯ ಪ್ರಧಾನ ಉಪದೇಶವನ್ನೂ ಹಿಂಬದಿಗೆ ತಳ್ಳುತ್ತಾರೆ. ಗೀತೆಯೇನೊ ಭಕ್ತಿಗೆ ಪ್ರಾಧಾನ್ಯಕೊಟ್ಟು, ಪರಾತ್ಪರವಸ್ತುವನ್ನು ಪುರುಷನೆಂದೂ ಈಶ್ವರನೆಂದೂ ಹೇಳುತ್ತದೆ. ಅಲ್ಲದೆ ಕ್ಷರವಸ್ತುವಿಗೂ ಅಕ್ಷರವಸ್ತುವಿಗೂ ಅತೀತನಾಗಿ ಪುರುಷೋತ್ತಮನೆಂದು ಹೇಳಲ್ಪಡುವ ಈ ಜಗದೀಶ್ವರನ ನಿರೂಪಣೆಯು ಗೀತೆಯಲ್ಲಿನ ಪ್ರಧಾನವೂ ವಿಶಿಷ್ಟವೂ ಆದ ಅಂಶಗಳಲ್ಲಿ ಒಂದಾಗಿದೆ. ಆದರೆ ಈ ಪುರುಷೋತ್ತಮನು ಎಲ್ಲ ಭಕ್ತರ ಹೃದಯಗಳಲ್ಲಿಯೂ ನೆಲೆಸಿರುವ ಪ್ರೇಮಮೂರ್ತಿಮಾತ್ರವಲ್ಲದೆ, ಎಲ್ಲ ಜ್ಞಾನಗಳ ಪರಾಕಾಷ್ಠೆಯೂ ಮತ್ತು ಎಲ್ಲ ಕರ್ಮಗಳ ಗುರಿಯಾದ ಯಜ್ಞದ ಅಧೀಶ್ವರನೂ ಕೂಡ ಆಗಿದ್ದಾನೆ. ಗೀತೆಯಲ್ಲಿ ಒಂದೊಂದು ಸಂದರ್ಭದಲ್ಲಿ ಭಕ್ತಿಯನ್ನೊ, ಜ್ಞಾನವನ್ನೊ ಅಥವಾ ಕರ್ಮವನ್ನೊ ಶ್ರೇಷ್ಠವೆಂದು ಹೇಳಿದ್ದರೂ ಇದು ಆ ಸಂದರ್ಭಕ್ಕೆ ಮಾತ್ರ ಉಚಿತವೆ ಹೊರತು ಒಂದಕ್ಕಿಂತ ಇನ್ನೊಂದು ವಾಸ್ತವವಾಗಿ ಶ್ರೇಷ್ಠವೆಂಬ ಅರ್ಥದಲ್ಲಲ್ಲ. ಗೀತೆಯಲ್ಲಿ ಇವು ಮೂರಕ್ಕೂ ಸಮವಾದ ಸ್ಥಾನವಿರುವುದು. ಈ ಮೂರೂ ಯಾವನಲ್ಲಿ ಸೇರಿ ಒಂದಾಗುವುದೊ ಅವನೆ ಪುರುಷೋತ್ತಮನು, ಪರಾತ್ಪರನು.

ಇತ್ತೀಚೆಗೆ ಕೆಲವು ಆಧುನಿಕ ವಿಚಾರಪರರು ಗೀತೆಯ ವಿಷಯವಾಗಿ ಚರ್ಚಿಸುವಾಗ ಜ್ಞಾನವನ್ನೂ ಭಕ್ತಿಯನ್ನೂ ಹೆಚ್ಚು ಮುಖ್ಯವಲ್ಲವೆಂದು ಎಣಿಸಿದ್ದಾರೆ. ಗೀತೆಯಲ್ಲಿ ಆಗಾಗ್ಯೆ ಬರುವ **ಕರ್ಮವನ್ನು ಮಾಡು** ಎಂಬ ಉಪದೇಶವನ್ನು ಪ್ರಧಾನವನ್ನಾಗಿ ಮಾಡಿದ್ದಾರೆ. ಗೀತೆಯು ಕೇವಲ ಕರ್ಮಯೋಗದ ಶಾಸ್ತ್ರವೆಂದು ಭಾವಿಸುವುದು ರೂಢಿಗೆ ಬರುತ್ತಿದೆ. ಗೀತೆಯು ಕರ್ಮಯೋಗದ ಶಾಸ್ತ್ರವೇನೋ ಹೌದು. ಆದರೆ ಈ ಕರ್ಮವು ಜ್ಞಾನದಲ್ಲಿ ಎಂದರೆ ಶಾಂತಿಯಲ್ಲಿ, ಆತ್ಮಸಾಕ್ಷಾತ್ಕಾರದಲ್ಲಿ ಪರಿಸಮಾಪ್ತಿಯಾಗುವ ಕರ್ಮ; ಭಕ್ತಿಯಿಂದ ಪ್ರೇರಿತ

ವಾದ ಕರ್ಮ: ಎಂದರೆ ಭಗವಂತನಲ್ಲಿ ನಮ್ಮ ಆತ್ಮವನ್ನು ಸಮರ್ಪಣೆ ಮಾಡಿ, ಆವನಲ್ಲೇ ಇದ್ದುಕೊಂಡು ಮಾಡುವ ಕರ್ಮ. ಆಧುನಿಕರು ತಿಳಿದಿರುವಂತೆ ಈ ಕರ್ಮವು ತನ್ನ ಅಥವಾ ಸಮಾಜದ ಅಥವಾ ಮಾನವವರ್ಗದ ಹಿತವನ್ನೆ ಧ್ಯೇಯ ವನ್ನಾಗಿಟ್ಟುಕೊಂಡು ಮಾಡುವ ಸ್ವಾರ್ಥಪರವಾದ ಅಥವಾ ಸ್ವಾರ್ಥರಹಿತವಾದ ಕರ್ಮವಲ್ಲ. ಆದರೂ ಈಗಿನ ಕಾಲದ ವ್ಯಾಖ್ಯಾನಕಾರರು ಗೀತೆಯನ್ನು ಕೇವಲ ಕರ್ಮಯೋಗದ ಕೈಪಿಡಿಯನ್ನಾಗಿ ಮಾಡಲು ಪ್ರಯತ್ನಿಸುತ್ತಿದ್ದಾರೆ. ಈಗ ಪ್ರಮಾಣಭೂತರೆಂದು ಎಣಿಸಲ್ಪಟ್ಟಿರುವ ವ್ಯಾಖ್ಯಾನಕಾರರಿಂದ ಗೀತೆಯು ಕರ್ಮ ಯೋಗದ ಶಾಸ್ತ್ರವೆಂದೂ, ನಮ್ಮ ದೇಶದವರಿಗೆ ಧ್ಯೇಯವಾಗಿರುವ ಸಂನ್ಯಾಸ ವನ್ನೂ ಮುನಿವೃತ್ತಿಯನ್ನೂ ಇದು ಖಂಡಿಸಿ, ನಮ್ಮ ಸಮಾಜಕ್ಕೆ ಹಿತವಾದ ಕರ್ಮ ಗಳನ್ನು ಅಪೇಕ್ಷಿಸಿ, ಈಗಿನ ಸಾಮಾನ್ಯ ಕೂಗಾದ ಸಮಾಜಸೇವೆಯನ್ನು ನಿಷ್ಕಾಮ ವಾಗಿ ಆಚರಿಸಬೇಕೆಂಬುದೆ ಅದರ ಉಪದೇಶವೆಂದೂ ನಾವು ಮೇಲೆ ಮೇಲೆ ಕೇಳು ತ್ತೇವೆ. ಇವೆಲ್ಲಕ್ಕೂ ನಮ್ಮ ಉತ್ತರವಿಷ್ಟು: ಗೀತೆಯಲ್ಲಿ ಇಂತಹ ಉಪದೇಶವು ಸ್ವಲ್ಪವೂ ಇಲ್ಲವೆಂಬುದು ಸ್ಪಷ್ಟವಾಗಿದ್ದು ಸ್ಥೂಲದೃಷ್ಟಿಗೂ ಗೋಚರವಾಗುತ್ತದೆ. ಇದು ಈಗಿನ ಕಾಲದವರು ಮಾಡಿರುವ ತಪ್ಪರ್ಥ. ಪೂರ್ವದಿಕ್ಕಿನಲ್ಲಿರುವ ದೇಶ ಗಳನ್ನು ಹಿನ್ನೆಲೆಯಾಗಿ ಹೊಂದಿ ಸಂಪೂರ್ಣವಾಗಿ ಭಾರತೀಯವೂ ಪುರಾತನವೂ ಆಗಿರುವ ಈ ಗ್ರಂಥಕ್ಕೆ ಈಗಿನ ಕಾಲದ ಪಾಶ್ಚಾತ್ಯಮನೋಭಾವವುಳ್ಳವರು ಮಾಡುವ ತಪ್ಪುವ್ಯಾಖ್ಯಾನ. ಗೀತೆಯು ವಿಧಿಸುವುದು ಮನುಷ್ಯಸ್ವಭಾವಕ್ಕೆ ಸಹಜವಾದ ಕರ್ಮವನ್ನಲ್ಲ; ಈಶ್ವರಪ್ರೇರಿತವಾದ ಕರ್ಮವನ್ನು. ಸಮಾಜದ ಹಿತಕ್ಕಾಗಿ ಮಾಡುವ ಕರ್ಮವನ್ನಲ್ಲ; ಇತರ ಎಲ್ಲ ಧರ್ಮಗಳನ್ನೂ ಬಿಟ್ಟು ನಮ್ಮ ಮೂಲಕ ವ್ಯಕ್ತವಾಗುತ್ತಿರುವ ಈಶ್ವರಸಂಕಲ್ಪಕ್ಕನುಸಾರವಾಗಿ ನಿಃಸ್ವಾರ್ಥವಾಗಿ ಮಾಡುವ ಕರ್ಮವನ್ನು. ಸಮಾಜಸೇವೆಯನ್ನಲ್ಲ; ಆದರೆ ಈಶ್ವರನ ಆವೇಶವುಳ್ಳ ಪುರುಷಶ್ರೇಷ್ಠರು ಮಾಡುವಂತೆ ಪ್ರಕೃತಿಗೂ ಪುರುಷನಿಗೂ ಅತೀತನಾದ ಈಶ್ವರ ನಿಗೆ ಅರ್ಪಿತವಾಗಿ ಅಹಂಭಾವವಿಡದೆ ಮಾಡುವ ಕರ್ಮವನ್ನು.

ಬೇರೆ ಮಾತುಗಳಲ್ಲಿ ಹೇಳುವುದಾದರೆ ಗೀತೆಯು ಲೋಕಧರ್ಮವನ್ನು ಉಪದೇಶಿಸುವ ಗ್ರಂಥವಲ್ಲ. ಆಧ್ಯಾತ್ಮಿಕ ಜೀವನವನ್ನು ಉಪದೇಶಿಸುವ ಶಾಸ್ತ್ರ. ಆಧುನಿಕ ವಿಚಾರಸರಣಿಯೆಂದರೆ ಐರೋಪ್ಯರ ವಿಚಾರಸರಣಿ. ಈ ವಿಚಾರಸರ ಣಿಯೂ ಕೂಡ ಪ್ರಾರಂಭದಲ್ಲಿದ್ದ ಗ್ರೀಕ-ರೋಮನ್ನರ ಮೇಲ್ಮಟ್ಟದ ತತ್ತ್ವದೃಷ್ಟಿ ಯನ್ನೂ, ಮಧ್ಯಕಾಲದ ಕ್ರಿಸ್ತಧರ್ಮದವರ ಭಕ್ತಿದೃಷ್ಟಿಯನ್ನೂ ಬಿಟ್ಟು ಈಗ

ಇಹಲೋಕದ ಹಿತವನ್ನೆ-ಎಂದರೆ ಸಮಾಜಸೇವೆ, ದೇಶಭಕ್ತಿ ಮತ್ತು ಜನಸೇವೆ ಯನ್ನೆ—ಧ್ಯೇಯವನ್ನಾಗಿ ಉಳ್ಳದ್ದಾಗಿದೆ. ಅದು ಭಾನುವಾರದಲ್ಲಿ ನೆನೆಯುವುದನ್ನು ಬಿಟ್ಟರೆ ಈಶ್ವರನನ್ನು ಸಂಪೂರ್ಣವಾಗಿ ದೂರಮಾಡಿದೆ; ಅವನ ಸ್ಥಾನದಲ್ಲಿ ಮನುಷ್ಯ ನನ್ನೆ ಪೂಜಿಸಬೇಕಾದ ದೇವತೆಯನ್ನಾಗಿಯೂ, ಸಮಾಜವನ್ನೆ ಅರ್ಚಾಮೂರ್ತಿ ಯನ್ನಾಗಿಯೂ ಮಾಡಿಕೊಂಡಿದೆ. ಇಂತಹವರ ಕರ್ಮವು ಬಹಳ ಶ್ರೇಷ್ಠವಾಗಿರು ವಾಗ ಇಹಲೋಕದ ಲಕ್ಷ್ಯವನ್ನೇ ಅನುಸರಿಸುವಂತಹದೂ, ಅನುಷ್ಠಾನಯೋಗ್ಯ ವಾದುದೂ, ಧರ್ಮಸಮ್ಮತವಾದುದೂ, ಸಮಾಜದ ಪ್ರಪಂಚದ ಮತ್ತು ಮಾನವ ವರ್ಗದ ಹಿತವನ್ನು ಉಪದೇಶವನ್ನಾಗಿ ಉಳ್ಳದ್ದೂ ಆಗಿರುವುದು. ಇವೆಲ್ಲವೂ ಒಳ್ಳೆ ಯವೆ ಸರಿ; ಮತ್ತು ಈಗಿನಕಾಲದಲ್ಲಿ ಪ್ರಪಂಚಕ್ಕೆ ಬಹಳ ಅವಶ್ಯಕವಾದುವು ಮತ್ತು ಈಶ್ವರಸಂಕಲ್ಪಕ್ಕನುಸಾರವಾಗಿವೆ. ಹಾಗಿಲ್ಲದಿದ್ದರೆ ಇಷ್ಟು ಪ್ರಧಾನವೆಂದು ಎಣಿಸಲ್ಪಡುತ್ತಲೆ ಇರಲಿಲ್ಲ. ಈಶ್ವರನಲ್ಲಿದ್ದುಕೊಂಡು ಬ್ರಾಹ್ಮೀಸ್ಥಿತಿಯಲ್ಲಿರುವ ಮನುಷ್ಯನು ಈ ವಿಧವಾದ ಕರ್ಮಗಳನ್ನು ಮಾಡುವುದರಲ್ಲಿ ಅಡ್ಡಿಯೇನೂ ಇಲ್ಲ. ಪ್ರಪಂಚದ ಧ್ಯೇಯದಲ್ಲಿ ಆಮೂಲವಾದ ಯಾವ ಬದಲಾವಣೆಯೂ ಆಗಬೇಕಿಲ್ಲ ದಿದ್ದರೆ, ಇದೆ ಅತ್ಯುತ್ತಮ ಧ್ಯೇಯವಾಗಿದ್ದರೆ, ಇಂತಹ ಮನುಷ್ಯನು ಈ ವಿಧ ವಾದ ಕರ್ಮಗಳನ್ನು ಮಾಡಿಯೆ ಮಾಡುತ್ತಾನೆ. ಏತಕ್ಕೆಂದರೆ ಶ್ರೀಕೃಷ್ಣನು ಶಿಷ್ಯನಾದ ಅರ್ಜುನನಿಗೆ ಹೇಳಿರುವಂತೆ, ಇತರರಿಗೆ ಮಾರ್ಗ ತೋರಿಸಲು ಬ್ರಾಹ್ಮೀಸ್ಥಿತಿಯಲ್ಲಿರುವ ಮನುಷ್ಯನೆ ಉತ್ತಮ ಮಾರ್ಗದರ್ಶಿಯು. ವಸ್ತುತಃ ತನ್ನ ಕಾಲದ ಶ್ರೇಷ್ಠ ಧ್ಯೇಯಗಳು ಮತ್ತು ಸಂಸ್ಕೃತಿಗೆ ಅನುಸಾರವಾಗಿ ಜೀವಿಸ ಬೇಕೆಂದೇ ಗುರುವು ಅರ್ಜುನನಿಗೆ ವಿಧಿಸುತ್ತಾನೆ. ಆದರೆ ಸಾಮಾನ್ಯ ಮನುಷ್ಯ ರಂತೆ "ಇದು ಶಾಸ್ತ್ರದಲ್ಲಿ ವಿಧಿಸಲ್ಪಟ್ಟಿದೆ" ಎಂಬ ಕಾರಣಕ್ಕಾಗಿ ಅಲ್ಲ. ಆದರೆ ಬ್ರಾಹ್ಮೀಸ್ಥಿತಿಯಲ್ಲಿದ್ದುಕೊಂಡು ಆ ಶಾಸ್ತ್ರವಿಧಿಗೆ ಹಿನ್ನೆಲೆಯಾಗಿರುವ ತತ್ತ್ವವನ್ನು ತಿಳಿದು ಕರ್ಮವನ್ನು ಮಾಡಬೇಕೆಂಬುದು ಅವನ ಉಪದೇಶ.

ಇಲ್ಲಿ ಗಮನಿಸಬೇಕಾದ ಅಂಶವೇನೆಂದರೆ ಗೀತೆಯಲ್ಲಿ ಹೇಳಿರುವಂತೆ ಜೀವನ ದಲ್ಲಿ ಮುಖ್ಯಪ್ರೇರಕಗಳಾಗಿರುವ ಮತ್ತು ಗೀತೆಯ ಮುಖ್ಯ ತತ್ತ್ವಗಳಾದ ಈಶ್ವರ ಮತ್ತು ಬ್ರಾಹ್ಮೀಸ್ಥಿತಿ ಈ ಎರಡನ್ನು ಆಧುನಿಕ ವಿಚಾರಪರರು ಗಣನೆಗೆ ತಂದು ಕೊಂಡಿಲ್ಲ. ಈಗಿನ ಕಾಲದ ವಿಚಾರಪರರು ಮಾನವವರ್ಗದಲ್ಲೇ, ತಮ್ಮ ಶರೀರ, ಆಸೆಗಳು ಮತ್ತು ಮನಸ್ಸಿನಲ್ಲೇ, ನಶ್ವರವಾದ ಸರ್ವಭೂತಗಳಲ್ಲೇ ಮತ್ತು ಬದಲಾಗುತ್ತಿರುವ ಕಾಲಗತಿಯಲ್ಲೇ ನೆಟ್ಟ ದೃಷ್ಟಿಯುಳ್ಳವರಾಗಿದ್ದಾರೆ. ಆದರೆ

ಗೀತೆಯ ಪ್ರಕಾರ ನಾವು ಈಶ್ವರನಲ್ಲೇ ವಾಸಮಾಡುತ್ತಾ ಬ್ರಾಹ್ಮೀಸ್ಥಿತಿಯಲ್ಲಿದ್ದು ಕೊಂಡೆ, ಅಕ್ಷರಸ್ವಭಾವವುಳ್ಳ ಶಾಶ್ವತನಾದ ಪುರುಷೋತ್ತಮನಲ್ಲಿ ನೆಟ್ಟದೃಷ್ಟಿ ಯುಳ್ಳವರಾಗಿರಬೇಕು. ಒಂದು ವೇಳೆ ಇವು ಈಗಿನ ಕಾಲದವರ ಮನಸ್ಸಿಗೆ ಗೋಚರವಾದರೂ, ಅವು ಮಾನವನ ಮತ್ತು ಮಾನವವರ್ಗದ ಹಿತಕ್ಕೆ ಸಹಕಾರಿ ಯೆಂಬ ದೃಷ್ಟಿಯಿಂದ ನೋಡಲ್ಪಡುತ್ತವೆ. ಆದರೆ ಈಶ್ವರನೂ ಬ್ರಾಹ್ಮೀಸ್ಥಿತಿಯೂ ನಿರಪೇಕ್ಷವಾಗಿ ಸಾಧಿಸಲ್ಪಡತಕ್ಕುವುಗಳು ; ಬೇರೆ ಧ್ಯೇಯಗಳಿಗೆ ಸಹಕಾರಿಯಾ ಗಲ್ಲ. ಈ ಲೋಕದಲ್ಲಿ ನಮ್ಮಲ್ಲಿನ ಕೆಳಗಿನಮಟ್ಟದ ಸ್ವಭಾವವು ನಮ್ಮ ಉನ್ನತ ಧ್ಯೇಯಗಳ ಸಲುವಾಗಿ ಕೆಲಸಮಾಡಬೇಕು. ಹಾಗೆಯೇ ನಮ್ಮ ಉನ್ನತ ಸ್ವಭಾ ವವೂ ಕೂಡ ಕೀಳುದರ್ಜೆಯ ಮಟ್ಟಕ್ಕೆ ಇಳಿದು ಅದನ್ನು ತನ್ನ ಮಟ್ಟಕ್ಕೆ ಏರಿಸಿ ಕೊಳ್ಳಬೇಕು.

ಆದುದರಿಂದ ಈಗಿನ ಕಾಲದ ಮನೋಭಾವಕ್ಕನುಸಾರವಾಗಿ ಗೀತೆಗೆ ಅರ್ಥಮಾಡಿ ನಿಷ್ಕಾಮವಾದ ಕರ್ಮದ ಆಚರಣೆಯೇ ಸರ್ವಶ್ರೇಷ್ಠವಾದ ಧರ್ಮ ವೆಂಬುದೇ ಗೀತೆಯ ಉಪದೇಶವೆಂದೂ, ಇದಕ್ಕೆ ಮಿಗಿಲಾಗಿರುವ, ಮನುಷ್ಯನು ಸಾಧಿಸಬೇಕಾದ ಗುರಿ ಬೇರೆ ಯಾವುದೂ ಇಲ್ಲವೆಂದೂ, ತಿಳಿಯುವುದು ತಪ್ಪು. ಗೀತೆಯು ಯಾವ ಸಂದರ್ಭದಲ್ಲಿ ಉಪದೇಶಿಸಲ್ಪಟ್ಟಿತೆಂಬುದನ್ನು ಮನ ಸ್ಸಿಗೆ ಸ್ವಲ್ಪ ತಂದುಕೊಂಡರೂ ಇದು ತಪ್ಪೆಂದು ವ್ಯಕ್ತವಾಗುತ್ತದೆ. ಧರ್ಮದ ಸ್ವರೂಪವನ್ನು ಕುರಿತು ಬಹುಮುಖವಾದ ಅಭಿಪ್ರಾಯಗಳಿದ್ದುವು ; ಇವುಗಳಿಂದ ಸರಿಯಾದ ಧರ್ಮವು ಯಾವುದು ಎಂದು ತಿಳಿಯುವುದು ಕಷ್ಟತರವಾಯಿತು ; ಈ ತೊಡಕಿನಿಂದ ತಪ್ಪಿಸಿಕೊಳ್ಳಲು ಮನುಷ್ಯನ ಬುದ್ಧಿಯು ರಚಿಸಿದ ಸಮಯಾಚಾರ ಧರ್ಮದ ಕಟ್ಟಡವು ಕುಸಿದುಹೋಯಿತು ; ಆದುದರಿಂದ ಶಿಷ್ಯನು ಗುರುವಿಗೆ ಮೊರೆಯಿಡಬೇಕಾಯಿತು. ಮಾನವನ ಜೀವನದಲ್ಲಿ ಧರ್ಮಗಳಿಗೆ ಪರಸ್ಪರ ವಿರೋ ಧವು ಆಗಾಗ್ಗೆ ಬರುವುದುಂಟು. ಉದಾಹರಣೆಗಾಗಿ ಗೃಹಸ್ಥಧರ್ಮಕ್ಕೂ ಮತ್ತು ದೇಶಸೇವೆಯ ಕರೆಗೂ ; ದೇಶಸೇವೆಯ ಕರೆಗೂ ಮಾನವವರ್ಗದ ಹಿತ ಅಥವಾ ಅಷ್ಟೇ ವ್ಯಾಪಕವಾದ ಧರ್ಮ ಅಥವಾ ತತ್ತ್ವಕ್ಕೂ, ವಿರೋಧವು ಬರಬಹುದು. ಅಥವಾ ನಮ್ಮ ಅಧ್ಯಾತ್ಮ ಜೀವನದಲ್ಲಿ ಬುದ್ಧನಿಗೆ ಆದಂತೆ ಅಂತರಾತ್ಮನ ಪ್ರೇರಣೆ ಯಿಂದ ಎಲ್ಲ ವಿಧವಾದ ಧರ್ಮಗಳನ್ನೂ ಕರ್ಮಗಳನ್ನೂ ಕಿತ್ತೊಗೆಯಬೇಕಾದ ಸನ್ನಿವೇಶ ಬರಬಹುದು. ಈ ವಿಧವಾದ ಸಂದರ್ಭದಲ್ಲಿ ಕರ್ಮವನ್ನೇ ಮಾಡ ಬೇಕೆಂದು ಗೀತೆಯು ವಿಧಿಸುತ್ತದೆ ಎಂದು ಒಪ್ಪುವುದಕ್ಕಾಗುವುದಿಲ್ಲ.

ಹಾಗೆ ಒಪ್ಪಿದಲ್ಲಿ ಬುದ್ಧನು ತನ್ನ ಅರಮನೆಗೆ ಹಿಂತಿರುಗಿ ರಾಜ್ಯವನ್ನು ಪಾಲಿಸಬೇಕಾಗಿತ್ತು ; ರಾಮಕೃಷ್ಣಪರಮಹಂಸರು ಒಂದು ಶಾಲೆಯಲ್ಲಿ ಉಪಾಧ್ಯಾಯರಾಗಿ ಚಿಕ್ಕ ಮಕ್ಕಳಿಗೆ ಪಾಠವನ್ನು ಹೇಳಬೇಕಾಗಿತ್ತು ; ಸ್ವಾಮಿ ವಿವೇಕಾನಂದರು ವಕೀಲರಾಗಿಯೊ ವೈದ್ಯರಾಗಿಯೊ ಪತ್ರಿಕೋದ್ಯಮಿಯಾಗಿಯೊ ಇದ್ದುಕೊಂಡು ತಮ್ಮ ಕುಟುಂಬವನ್ನು ಪೋಷಿಸಬೇಕಾಗಿತ್ತು. ಅನಾಸಕ್ತಿಯಿಂದ ಕರ್ಮವನ್ನು ಮಾಡಬೇಕೆಂದು ಗೀತೆಯು ಬೋಧಿಸುವುದಿಲ್ಲ. ಸರ್ವಧರ್ಮಗಳನ್ನೂ ತ್ಯಜಿಸಿ ಈಶ್ವರನಲ್ಲಿ ಶರಣುಹೊಂದಿ ಆಧ್ಯಾತ್ಮಿಕ ಜೀವನವನ್ನು ನಡೆಸಬೇಕೆಂಬುದೆ ಅದರ ಉಪದೇಶ. ಬುದ್ಧ, ರಾಮಕೃಷ್ಣ ಮತ್ತು ವಿವೇಕಾನಂದರ ಆಧ್ಯಾತ್ಮಿಕ ಜೀವನವು ಈ ಉಪದೇಶಕ್ಕನುಸಾರವಾಗಿಯೆ ಇದೆ. ಅಷ್ಟೆ ಅಲ್ಲ ; ಅಕರ್ಮಕ್ಕಿಂತ ಕರ್ಮವು ಲೇಸೆಂದು ಗೀತೆಯು ಹೇಳುವುದಾದರೂ ಕರ್ಮಗಳ ಸನ್ಯಾಸವನ್ನು ಅದು ಸಂಪೂರ್ಣವಾಗಿ ದೂರಮಾಡುವುದಿಲ್ಲ ; ಭಗವಂತನ ಸನ್ನಿಧಿಯನ್ನು ಹೊಂದುವುದಕ್ಕೆ ಅದೂ ಒಂದು ಮಾರ್ಗವೆಂದು ಹೇಳುತ್ತದೆ. ಈ ಗುರಿಯನ್ನು ಸಾಧಿಸಲು ಜೀವನ, ಕರ್ಮ ಮತ್ತು ಧರ್ಮಗಳನ್ನು ತ್ಯಾಗಮಾಡುವುದೆ ಸಾಧನವೆಂದು ನಮ್ಮ ಮನಸ್ಸಿನಲ್ಲಿ ದೃಢವಾಗಿ ನಂಬಿಕೆ ಇದ್ದು, ಹಾಗೆ ಮಾಡಬೇಕೆಂದು ಅಂತರಾತ್ಮನ ಪ್ರೇರಣೆ ಇದ್ದರೆ ಆಗ ನಾವು ಖಂಡಿತವಾಗಿಯೂ ಅವನ್ನು ತ್ಯಜಿಸಲೇಬೇಕು. ಬೇರೆ ಗತಿಯೆ ಇಲ್ಲ. ಅಂತರಾತ್ಮನ ಪ್ರೇರಣೆಗೆ ಎದುರುಮಾತೆ ಇಲ್ಲ. ಬೇರೆ ಯಾವ ಧರ್ಮವೂ ಅದರ ಮುಂದೆ ನಿಲ್ಲಲಾರದು.

ಇಲ್ಲಿ ಇನ್ನೊಂದು ಕ್ಲಿಷ್ಟವಾದ ಸಮಸ್ಯೆಯಿದೆ. ಅರ್ಜುನನು ಮಾಡಬೇಕಾಗಿರುವ ಕೆಲಸದಿಂದ ಅವನ ಧಾರ್ಮಿಕ ಬುದ್ಧಿಯು ಹಿಂಜರಿಯುತ್ತದೆ. ಯುದ್ಧವನ್ನು ಮಾಡುವುದು ಅವನ ಕರ್ತವ್ಯವೆಂದು ಒಪ್ಪಿದರೆ ಈ ಕರ್ತವ್ಯವು ಅವನ ಮನಸ್ಸಿಗೆ ಘೋರವಾದ ಪಾಪವಾಗಿ ತೋರುತ್ತಿದೆ. ಹೀಗಿರುವಾಗ " ನಿನ್ನ ಕರ್ತವ್ಯವನ್ನು ರಾಗದ್ವೇಷವಿಲ್ಲದೆಯೂ ಅನಾಸಕ್ತಿಯಿಂದಲೂ ಮಾಡುವುದೆ ನಿನ್ನ ಧರ್ಮ " ಎಂದು ಹೇಳಿದರೆ ಅವನ ಸಮಸ್ಯೆಯನ್ನು ಹೇಗೆ ಪರಿಹರಿಸಿದಂತಾಯಿತು ? ಅವನು " ನನ್ನ ಧರ್ಮವು ಯಾವುದು ? ನನ್ನ ಬಂಧುಗಳನ್ನೂ, ಕುಲವನ್ನೂ, ದೇಶವನ್ನೂ ಘೋರ ಯುದ್ಧದಲ್ಲಿ ನಾಶಮಾಡುವುದು ಹೇಗೆ ನನ್ನ ಧರ್ಮವಾದೀತು ? " ಎಂದು ಕೇಳುತ್ತಾನೆ ; ಅವನ ಪ್ರಶ್ನೆಯೂ ನ್ಯಾಯವಾದುದೆಂದು ನಾವು ಹೇಳಬಹುದು. ಧರ್ಮಯುದ್ಧವನ್ನು ಮಾಡುವುದು ಕ್ಷತ್ರಿಯನ ಧರ್ಮವೆಂಬ ಉತ್ತರದಿಂದ ಅವನ ಮನಸ್ಸಿಗೆ ಯಾವ ಸಮಾಧಾನವೂ ಆಗುವುದಿಲ್ಲ. ನ್ಯಾಯವು ತನ್ನ ಕಡೆಗಿದ್ದರೂ

ದಾರುಣವಾದ ಯುದ್ಧದಲ್ಲಿ ತನ್ನ ಜನಾಂಗವನ್ನೆ ಕೊಲೆಮಾಡುವುದು ಧರ್ಮವಲ್ಲ ವೆಂಬುದು ಅವನ ವಾದ. ಕ್ಷತ್ರಿಯನಾದ ಅವನು ತನ್ನ ಧರ್ಮವನ್ನು—ಅದು ಪಾಪ, ಅದರ ಪರಿಣಾಮವೇನು ಎಂಬುದನ್ನು ಗಮನಿಸದೆ—ರಾಗದ್ವೇಷವಿಲ್ಲದೆ ಮಾಡಬೇಕೆಂದು ನಾವು ಹೇಳೋಣವೆ? ಇದು ರಾಜಕಾರಣಿಗಳು, ರಾಜನೀತಿಜ್ಞರು, ವಕೀಲರು ಮತ್ತು ವಾದಕ್ಕಾಗಿಯೆ ಹೋರಾಡುವವರು ಹೇಳಬಹುದಾದ ಮಾತು. ಜೀವನದ ಸಮಸ್ಯೆಗಳನ್ನು ಆಮೂಲವಾಗಿ ಬಿಡಿಸಲು ಹೊರಟಿರುವ ಗೀತೆಯಂತಹ ಧರ್ಮಗ್ರಂಥವು ಹೇಳುವ ಮಾತಲ್ಲ. ಅತ್ಯಂತ ಕ್ಲೇಶವನ್ನುಂಟುಮಾಡುತ್ತಿರುವ ಈ ಆಧ್ಯಾತ್ಮಿಕ ಸಮಸ್ಯೆಯ ವಿಚಾರವಾಗಿ ಗೀತೆಯು ಈ ಮಾತನ್ನು ಹೇಳಿದರೆ ಗೀತೆಯನ್ನು ಪ್ರಪಂಚದ ಧಾರ್ಮಿಕ ಗ್ರಂಥಗಳ ಪಟ್ಟಿಯಿಂದ ತೆಗೆದುಹಾಕಿ ರಾಜ ನೀತಿಶಾಸ್ತ್ರ ಮತ್ತು ವ್ಯವಹಾರಶಾಸ್ತ್ರ ಗ್ರಂಥಗಳೊಡನೆ ಸೇರಿಸಬೇಕಾಗುತ್ತದೆ.

ಉಪನಿಷತ್ತುಗಳಂತೆ ಗೀತೆಯೂ ಗುಣಾವಗುಣಗಳಿಗೂ ಪಾಪಪುಣ್ಯಗಳಿಗೂ ಅತೀತವಾಗಿರುವ ಸಮತ್ವವನ್ನು - ಬೋಧಿಸುವುದೆಂಬುದೇನೊ ನಿಜ. ಆದರೆ ಈ ಸಮತ್ವವು ಬ್ರಾಹ್ಮೀಸ್ಥಿತಿಯ ಅಂಗವಾಗಿ ಯೋಗಮಾರ್ಗದಲ್ಲಿ ಮುಂದುವರಿದಿರು ವವರ ಪರಮಧರ್ಮದ ಅಂಗವಾಗಿ ಬೋಧಿಸಲ್ಪಟ್ಟಿದೆ. ಸಾಮಾನ್ಯ ಮನುಷ್ಯರು ಜೀವನದಲ್ಲಿ ಪಾಪಪುಣ್ಯಗಳ ವಿಷಯದಲ್ಲಿ ಉದಾಸೀನರಾಗಿರಬೇಕೆಂದು ಗೀತೆಯು ಬೋಧಿಸುವುದಿಲ್ಲ. ಇಂತಹ ಔದಾಸೀನ್ಯದಿಂದ ಬಹಳ ಹಾನಿಯುಂಟಾಗುವುದು. ಅಲ್ಲದೆ ಪಾಪಮಾಡುವವರಿಗೆ ಭಗವತ್ಸಾನ್ನಿಧ್ಯವು ದೊರೆಯುವುದಿಲ್ಲ. ಆದುದರಿಂದ ಅರ್ಜುನನು ಮನುಷ್ಯಸಾಮಾನ್ಯವಾದ ಧರ್ಮವನ್ನು ಬಹಳ ನಿಷ್ಠೆಯಿಂದ ಮಾಡಲು ಯತ್ನಿಸಿ, ತನಗೆ ಪಾಪವೆಂದೂ ಘೋರವೆಂದೂ ತೋರುವುದಾದರೂ ಕೂಡ ತನ್ನ ಕ್ಷತ್ರಿಯ ಧರ್ಮವನ್ನು ಅನಾಸಕ್ತಿಯಿಂದ ಮಾಡಿದ ಮಾತ್ರದಿಂದ ಅವನಿಗೇನೂ ಉಪಯೋಗವಾಗುವುದಿಲ್ಲ. ತನ್ನ ಅಂತರಾತ್ಮನಿಗೆ ಪಾಪವೆಂದು ತೋರಿದ ಕೆಲಸ ವನ್ನು ಹೊರಗಿನ ನಿರ್ಬಂಧಕ್ಕೊಳಗಾಗಿ, ಧರ್ಮದ ನಿಯಮಕ್ಕೊಳಪಟ್ಟು ಮಾಡಿದರೆ ಅವನ ಮನಶ್ಶಾಂತಿಯು ಹೋಗುವುದು; ಸರಿ ತಪ್ಪನ್ನು ತೋರಿಸುವ ವಿವೇಕವು ಮಂಕಾಗುವುದು. ಆದುದರಿಂದ ಧರ್ಮನಿಯಮಗಳಿಗೆ ಭಂಗವುಂಟಾದರೂ ಸರಿ; ತನ್ನ ಅಂತರಾತ್ಮನಿಗೆ ಇಷ್ಟವಿಲ್ಲದ ಕರ್ಮವನ್ನು ಮಾಡಲೇಬಾರದು.

ಇನ್ನೊಂದು ಮಾತು. ಧರ್ಮಕ್ಕೆ ಆಧಾರವೇನು? ಸಮಾಜದ ಮನೋ ವೃತ್ತಿಯೆ ಧರ್ಮಕ್ಕೆ ಆಧಾರವೆಂಬುದನ್ನು ನಾವು ನೆನಪಿನಲ್ಲಿಡಬೇಕು. ಧರ್ಮವೆಂಬ ಪದಕ್ಕೆ ಇದಕ್ಕಿಂತ ವ್ಯಾಪಕವಾದ ಅರ್ಥವನ್ನು ಮಾಡಿ: "ಇದು ನನ್ನ ಧರ್ಮ"

"ಎಲ್ಲವನ್ನು ತ್ಯಾಗಮಾಡುವುದೆ ಬುದ್ಧನ ಧರ್ಮ" "ಗುಹೆಯಲ್ಲಿ ತಪಸ್ಸು ಮಾಡುವುದೆ ಋಷಿಯ ಧರ್ಮ" ಇವೆ ಮುಂತಾದುವುಗಳನ್ನು ನಾವು ಹೇಳಬಹುದು. ಆದರೆ ಇವೆಲ್ಲ ಮಾತುಗಳ ಜೋಡಣೆ ಮಾತ್ರ. ಧರ್ಮವೆಂಬುದು ಸಾಪೇಕ್ಷವಾದ ಪದ—ಎಂದರೆ ಇತರರಿಗೂ ನಮಗೂ ಇರುವ ಸಂಬಂಧವನ್ನು ಆಧಾರವಾಗಿ ಹೊಂದಿದೆ. ತನ್ನ ಮಕ್ಕಳನ್ನು ಪೋಷಿಸಿ ವಿದ್ಯಾಭ್ಯಾಸಮಾಡಿಸುವುದು ತಂದೆಯ ಧರ್ಮ. ತನ್ನ ಕಕ್ಷಿಗಾರನು ಅಪರಾಧವನ್ನು ನಿಜವಾಗಿ ಮಾಡಿದ್ದಾನೆಂದೂ, ಹಾಗೆ ಮಾಡಿಲ್ಲವೆಂದು ಹೇಳುತ್ತಿರುವುದು ಸುಳ್ಳೆಂದು ತಿಳಿದಿದ್ದರೂ, ಅವನಿಗಾಗಿ ಸರ್ವ ಪ್ರಯತ್ನವನ್ನೂ ಮಾಡುವುದು ವಕೀಲನ ಧರ್ಮ. ಶತ್ರುವು ಬಂಧುವಾಗಿದ್ದರೂ, ತನ್ನ ದೇಶದವನಾಗಿದ್ದರೂ ಅದನ್ನು ಎಣಿಸದೆ ತನಗೆ ಕೊಡಲ್ಪಟ್ಟ ಆಜ್ಞೆಯಂತೆ ಅವನ ಮೇಲೆ ಯುದ್ಧಮಾಡಿ ಅವನನ್ನು ಕೊಲ್ಲುವುದು ಸೈನಿಕನ ಧರ್ಮ. ಅಪರಾಧಿಗೆ ಕಾರಾಗೃಹಶಿಕ್ಷೆವಿಧಿಸುವುದೂ, ಕೊಲೆಗಾರನಿಗೆ ಮರಣದಂಡನೆ ವಿಧಿಸುವುದೂ ನ್ಯಾಯಾಧಿಪತಿಯ ಧರ್ಮ. ಈ ಜವಾಬ್ದಾರಿಗಳನ್ನು ಒಪ್ಪಿಕೊಂಡವರಿಗೆ ಅವರ ಧರ್ಮವು ಸಹಜವೂ ಸ್ಪಷ್ಟವೂ ಆಗಿದೆ. ಒಂದುವೇಳೆ ಇದು ಘನತೆಗೂ ಸ್ನೇಹಕ್ಕೂ ಕುಂದನ್ನುಂಟುಮಾಡಿದರೂ, ಅಥವಾ ಧರ್ಮ ಮತ್ತು ನೀತಿಗಳಿಗೆ ವಿರುದ್ಧವಾಗಿದ್ದರೂ, ಇದೆ ಅವರ ಕರ್ತವ್ಯವೆಂದು ಸ್ಪಷ್ಟವಾಗಿರುತ್ತವೆ. ಆದರೆ ಅವರ ಅಂತರಾತ್ಮನಿಗೆ ಇದು ವಿರೋಧವೆಂದು ಕಂಡುಬಂದಲ್ಲಿ—ಎಂದರೆ ವಕೀಲನಿಗೆ ಸುಳ್ಳುಹೇಳುವುದು ಮಹಾಪಾಪವೆಂದೂ, ನ್ಯಾಯಾಧಿಪತಿಗೆ ಮರಣದಂಡನೆಯು ಮಾನವನ ಮೇಲೆ ಮಾಡುವ ಮಹಾಪರಾಧವೆಂದೂ, ಸೈನಿಕನಿಗೆ ಯಾವ ಸಂದರ್ಭದಲ್ಲೂ ಮನುಷ್ಯನನ್ನು ಕೊಲ್ಲುವುದು ಮನುಷ್ಯ ಮಾಂಸವನ್ನು ತಿನ್ನುವಂತೆಯೆ ಹೇಯವಾದುದೆಂದೂ—ಅವರ ಮನಸ್ಸಿನಲ್ಲಿ ದೃಢವಾಗಿ ಬೇರೂರಿದ್ದರೆ, ಆಗ ಅವರು ಏನನ್ನು ಮಾಡಬೇಕು? ಈ ಸಂದರ್ಭದಲ್ಲಿ ಬೇರೆ ಎಲ್ಲ ಧರ್ಮಗಳಿಗಿಂತಲೂ ನಿರುಪಾಧಿಕವಾದ ಶುದ್ಧಧರ್ಮವನ್ನೆ ಅನುಷ್ಠಾನಮಾಡಬೇಕೆಂಬುದು ಸ್ಪಷ್ಟ. ಈ ಧರ್ಮಕ್ಕಾದರೆ ಇತರರ ಸಂಬಂಧವಾಗಲಿ, ಕರ್ತವ್ಯನಿಷ್ಠೆಯಾಗಲಿ ಆಧಾರವಲ್ಲ. ಅಂತರಾತ್ಮನ ವಾಣಿಯೊಂದೆ ಆಧಾರ.

ಈ ವಿಮರ್ಶೆಯಿಂದ ಒಂದು ವಿಷಯ ಸ್ಪಷ್ಟವಾಯಿತು. ಲೋಕದಲ್ಲಿ ಎರಡು ವಿಧವಾದ ಧರ್ಮಗಳಿರುವುವು. ಒಂದೊಂದೂ ತನ್ನ ಕ್ಷೇತ್ರದಲ್ಲಿ ಪ್ರಭಾವವುಳ್ಳದ್ದು ಒಂದು ಬಾಹ್ಯಪ್ರಪಂಚದ ವ್ಯವಹಾರಗಳನ್ನು ಆಧಾರವನ್ನಾಗಿ ಉಳ್ಳದ್ದು ಇನ್ನೊಂದು ಬಾಹ್ಯವ್ಯವಹಾರಕ್ಕೆ ಸಂಬಂಧಿಸದೆ ಮನುಷ್ಯನ ಆಂತರಿಕ ಜ್ಞಾನ ಮತ್ತು ಮನೋಭಾವಗಳನ್ನು ಆಧಾರವನ್ನಾಗಿ ಉಳ್ಳದ್ದು. ಇದು ಮೊದಲನೆಯದಕ್ಕಿಂತ

ಶ್ರೇಷ್ಠವಾದುದು; ಉಚ್ಚವಾದುದು. ಮೇಲ್ಮಟ್ಟದ ವಿಷಯಗಳನ್ನು ಕೀಳ್ಮಟ್ಟದ ವಿಷಯಗಳಿಗೆ ಅಡಿಯಾಳು ಮಾಡಬೇಕೆಂದು ಗೀತೆಯು ಬೋಧಿಸುವುದಿಲ್ಲ. ಶ್ರೇಷ್ಠವಾದ ಧರ್ಮಬುದ್ಧಿಯು ವಿಕಾಸಹೊಂದಿ ಕೆಲಸಮಾಡುತ್ತಿರುವಾಗ, ಅದನ್ನು ಶ್ರೇಷ್ಠವಲ್ಲದ ಸಾಮಾಜಿಕ ಧರ್ಮದ ನಿಯಮಕ್ಕಾಗಿ ಬಲಿಕೊಡಬೇಕೆಂದು ಗೀತೆಯು ವಿಧಿಸುವುದಿಲ್ಲ. ಮೇಲಕ್ಕೇರುವಂತೆ ಬೋಧಿಸುವುದೆ ಹೊರತು ಕೆಳಕ್ಕೆ ಹೋಗುವಂತೆ ಪ್ರೇರಿಸುವುದಿಲ್ಲ. ಬೇರೆ ಬೇರೆ ಅಂತಸ್ತಿನ ಎರಡು ಧರ್ಮಗಳಿಗೆ—ಎಂದರೆ ಕೇವಲ ವ್ಯಾವಹಾರಿಕ ಧರ್ಮಕ್ಕೆ ಮತ್ತು ನೈತಿಕಧರ್ಮಕ್ಕೆ—ಪರಸ್ಪರ ವಿರೋಧ ಬಂದಾಗ, ಅವೆರಡಕ್ಕೂ ಅತೀತವಾದ ಬ್ರಾಹ್ಮೀಸ್ಥಿತಿಯನ್ನು ಹೊಂದಬೇಕೆಂದು ಗೀತೆಯು ಉಪದೇಶಮಾಡುತ್ತದೆ. ಶಾಸ್ತ್ರಗಳು ವಿಧಿಸುವ ಸಾಮಾನ್ಯ ಧರ್ಮಗಳಿಗೆ ಬದಲಾಗಿ ಧರ್ಮಬುದ್ಧಿಯು ವಿಕಾಸ ಹೊಂದಿ ಕೆಲಸಮಾಡುತ್ತಿರುವ ಅಂತರಾತ್ಮ ಪ್ರೇರಣೆಗೆ ಮೊದಲನೆಯ ಸ್ಥಾನವನ್ನು ಕೊಡುತ್ತವೆ. ಕರ್ಮವನ್ನು ಮಾಡಲೇಬೇಕೆಂಬ ನಿರ್ಬಂಧಕ್ಕೆ ಒಳಗಾಗದೆ, ಬ್ರಾಹ್ಮೀಸ್ಥಿತಿಯಲ್ಲಿದ್ದುಕೊಂಡು, ನಮ್ಮ ಹೃದಯಪ್ರದೇಶದಲ್ಲೂ ಹೊರಗೂ ಇರುವ ಈಶ್ವರನ ಪ್ರೇರಣೆಯಂತೆ ಮಾಡಬೇಕೆಂಬುದೆ ಗೀತೆಯ ಉಪದೇಶದ ಸಾರ.

ಇತರ ಶ್ರೇಷ್ಠಗ್ರಂಥಗಳಂತೆ ಗೀತೆಯ ಸಾರವನ್ನು ಸರಿಯಾಗಿ ತಿಳಿಯಬೇಕಾದರೆ ನಾವು ಅದನ್ನು ಮೊದಲಿನಿಂದ ಕೊನೆಯವರೆಗೂ ಓದಿ ಕ್ರಮಕ್ರಮವಾಗಿ ಅಲ್ಲಿ ನಿರೂಪಿಸಲ್ಪಟ್ಟಿರುವ ವಿಷಯವನ್ನು ತಿಳಿಯಬೇಕು. ಆದರೆ ಈಗಿನ ವ್ಯಾಖ್ಯಾನಕಾರರು ಗೀತೆಯ ಮೊದಲು ಮೂರು ನಾಲ್ಕು ಅಧ್ಯಾಯಗಳಿಗೆ ಪ್ರಾಧಾನ್ಯವನ್ನು ಕೊಟ್ಟಿದ್ದಾರೆ. ಅದರಲ್ಲೂ ಸಮತ್ವದ ಉಪದೇಶಕ್ಕೂ, ಕರ್ಮದ ಅನುಷ್ಠಾನಕ್ಕೂ(ಕರ್ಮವೆಂದರೆ ಕರ್ತವ್ಯವೆಂದು ಅವರು ಅರ್ಥಮಾಡುತ್ತಾರೆ) ಪ್ರಾಧಾನ್ಯವನ್ನು ಕೊಟ್ಟು

**ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ ।**

ಎಂಬುದನ್ನೆ ಗೀತೆಯ ಮಹಾವಾಕ್ಯವನ್ನಾಗಿ ಮಾಡಿದ್ದಾರೆ. ವಿಶ್ವರೂಪದರ್ಶನವನ್ನು ನಿರೂಪಿಸುವ ೧೧ ನೆಯ ಅಧ್ಯಾಯವನ್ನು ಬಿಟ್ಟರೆ ಉಳಿದ ಅಧ್ಯಾಯಗಳನ್ನು—ಅವುಗಳಲ್ಲಿ ಅಮೋಘವಾದ ತತ್ತ್ವೋಪದೇಶವಿದ್ದರೂ ಕೂಡ—ಗೌಣವಾಗಿಯೆ ಪರಿಗಣಿಸಿದ್ದಾರೆ. ಈಗಿನಕಾಲದವರ ಮನೋವೃತ್ತಿಗೆ ಇದು ಸಹಜವಾಗಿಯೆ ಇದೆ. ಏತಕ್ಕೆಂದರೆ ಅವರಿಗೆ ಸೂಕ್ಷ್ಮವಾದ ತತ್ತ್ವವಿಚಾರದಲ್ಲಾಗಲಿ, ಬಹಳ ಕಾಲವನ್ನು ಹಿಡಿಯುವ ಆಧ್ಯಾತ್ಮಿಕವಿಚಾರದಲ್ಲಾಗಲಿ ಸಹನೆಯಿಲ್ಲ. ಯಾವಾಗಲೂ ಕರ್ಮಮಾಡುವುದಕ್ಕೆ ಉದ್ಯುಕ್ತರಾಗಿ ಅರ್ಜುನನಂತೆ ಲೌಕಿಕಕರ್ತವ್ಯವನ್ನು ಸರಿಯಾಗಿ ಬೋಧಿಸುವ ಧರ್ಮವನ್ನೆ ಅಪೇಕ್ಷಿಸುತ್ತಾರೆ. ಆದರೆ ಗೀತೆಯನ್ನು ಈ ರೀತಿಯಾಗಿ ಅರ್ಥಮಾಡುವುದು ಸರಿಯಲ್ಲ.

ಗೀತೆಯು ಬೋಧಿಸುವ ಸಮತ್ವವು ಔದಾಸೀನ್ಯವಲ್ಲ. ಗೀತೆಯ ಉಪದೇಶದ ತಳಹದಿಯನ್ನು ಹಾಕಿ ಅದರ ನಿರೂಪಣೆಯೆಂಬ ಕಟ್ಟಡವನ್ನು ಕಟ್ಟಿದಮೇಲೆ "ಏಳು, ಶತ್ರುಗಳನ್ನು ನಿಗ್ರಹಿಸಿ ಸಮೃದ್ಧವಾದ ರಾಜ್ಯವನ್ನು ಅನುಭವಿಸು" ಎಂದು ಶ್ರೀಕೃಷ್ಣನು ಅರ್ಜುನನಿಗೆ ಹೇಳಿದ ವಾಕ್ಯದಲ್ಲಿ ನಿಃಸ್ವಾರ್ಥತೆಯು ಅಥವಾ ರಾಗರಹಿತವಾದ ತ್ಯಾಗದ ಕುರುಹು ಕಂಡುಬರುವುದಿಲ್ಲ. ಅದು ಆಧ್ಯಾತ್ಮಿಕ ಸ್ವಾತಂತ್ರ್ಯದ ಅಡಿಗಲ್ಲಾದ ಆತ್ಮನ ಸಮಸ್ಥಿತಿಯನ್ನೂ ಮನೋವೈಶಾಲ್ಯವನ್ನೂ ಸೂಚಿಸುತ್ತದೆ.

ಈ ಸಮಸ್ಥಿತಿಯಲ್ಲಿ, ಈ ಸ್ವಾತಂತ್ರ್ಯದಲ್ಲಿ ನಾವು ಎಲ್ಲ ಕರ್ಮಗಳನ್ನೂ ಮಾಡಬೇಕು. ಗೀತೆಯಲ್ಲಿ ಹೇಳಿರುವ **ಸರ್ವಕರ್ಮಾಣಿ** ಎಂಬ ಪದವು ಎಲ್ಲ ವಿಧವಾದ ಕರ್ಮಗಳನ್ನೂ ಒಳಗೊಂಡಿರುವುದು. ಅಲ್ಲದೆ ಸಾಮಾಜಿಕ ಮತ್ತು ನೈತಿಕ ಧರ್ಮಗಳಿಗಿಂತಲೂ ಹೆಚ್ಚು ವ್ಯಾಪಕವಾಗಿರುವುದು. ಮಾಡಬೇಕಾದ ಕರ್ತವ್ಯವು ಯಾವುದೆಂಬುದು ಆಯಾ ವ್ಯಕ್ತಿಯ ಸ್ವಂತ ಇಚ್ಛೆಗೆ ಒಳಪಟ್ಟಿಲ್ಲ. "ಕರ್ಮದಲ್ಲಿ ಮಾತ್ರ ಅಧಿಕಾರವಿರುವುದು. ಅದರ ಫಲದಲ್ಲಲ್ಲ" ಎಂಬುದು ಗೀತೆಯ ಅತಿ ಮುಖ್ಯವಾದ ಉಪದೇಶವಲ್ಲ. ಯೋಗಸೋಪಾನಸಂಕ್ತಿಯನ್ನು ಹತ್ತಲು ಮೊದಲುಮಾಡುವ ಸಾಧಕನಿಗೆ ಕೊಡಲ್ಪಟ್ಟ ಪ್ರಾರಂಭೋಪದೇಶಮಾತ್ರ. ಸಾಧಕನು ಮುಂದುವರಿದ ಮೇಲೆ ಈ ಉಪದೇಶವು ಹಿಂಬದಿಗೊತ್ತಲ್ಪಟ್ಟು ಬೇರೆ ಧರ್ಮವು ಅವನಿಗೆ ಉಪದೇಶಿಸಲ್ಪಟ್ಟಿರುವುದು. ಕರ್ಮಗಳನ್ನು ಮಾಡುವವನು ಜೀವನಲ್ಲ; ತ್ರಿಗುಣಾತ್ಮಕವಾದ ಪ್ರಕೃತಿಯು ಅವನ ಮೂಲಕ ಕರ್ಮಗಳನ್ನು ಮಾಡುವುದು; ಆದುದರಿಂದ ತಾನು ಕರ್ತೃವಲ್ಲವೆಂಬುದನ್ನು ಪುರುಷನು ಮನನಮಾಡುವುದನ್ನು ಆರಂಭಿಸಬೇಕು. ಆದುದರಿಂದ "ಕರ್ಮಗಳನ್ನು ಮಾಡುವ ಅಧಿಕಾರ ನಿನ್ನದು" ಎಂಬ ಉಪದೇಶವು ಎಲ್ಲಿಯವರೆಗೆ ನಾವೆ ಕರ್ತೃಗಳೆಂಬ ಮಾಯೆಯಿಂದ ಆವೃತರಾಗಿರುತ್ತೇವೆಯೊ ಅಲ್ಲಿಯವರೆಗೆ ಮಾತ್ರ ನಮಗೆ ಅನ್ವಯಿಸುತ್ತದೆ. ಯಾವಾಗ ನಾನು ಕರ್ಮಗಳ ಕರ್ತೃವು ಎಂಬ ಅಹಂಭಾವವು ಹೋಗುತ್ತದೆಯೊ ಆಗ ಕರ್ಮಫಲದಲ್ಲಿ ಆಸಕ್ತಿಯು ಹೋದಂತೆ ಈ ಉಪದೇಶಕ್ಕೂ ನಾವು ಅತೀತರಾಗುತ್ತೇವೆ. ಆಗ ಕರ್ಮಫಲದ ವಿಷಯದಲ್ಲೂ ಕರ್ಮವನ್ನು ಮಾಡಲು ಇರುವ ಅಧಿಕಾರದ ವಿಷಯದಲ್ಲೂ ನಮಗೆ ಇರುವ ಅಭಿಮಾನ ಅಳಿಸಿ ಹೋಗುತ್ತದೆ.

ಆದರೆ ಪ್ರಕೃತಿಯೆ ಕರ್ತೃವೆಂಬುದು ಗೀತೆಯ ಕೊನೆಯ ಉಪದೇಶವಲ್ಲ. ಸಮತ್ವಬುದ್ಧಿ ಮತ್ತು ಕರ್ಮಫಲತ್ಯಾಗ, ಇವು ಮನಸ್ಸನ್ನೂ ಬುದ್ಧಿಯನ್ನೂ

ಹೃದಯವನ್ನೂ ಪರಮಾತ್ಮನಲ್ಲಿ ನೆಟ್ಟು ಅವನಲ್ಲಿ ವಾಸಮಾಡುವುದಕ್ಕೆ ಸಾಧನಗಳು ಮಾತ್ರ. ಸಾಧಕನು ಈ ಸ್ದಿತಿಯನ್ನು ಮುಟ್ಟುವವರೆಗೆ ಮತ್ತು ಈ ಸ್ಥಿತಿಯನ್ನು ಹೊಂದಲು ಯತ್ನಿಸುವಾಗ ಮಾತ್ರ ಇವೆರಡನ್ನು ಅಭ್ಯಸಿಸಬೇಕೆಂದು ಗೀತೆಯಲ್ಲಿ ಸ್ಪಷ್ಟವಾಗಿ ಹೇಳಿದೆ. "ನಾನೇ ಪರಮಾತ್ಮನು" ಎಂದು ಶ್ರೀ ಕೃಷ್ಣನು ಹೇಳಿಕೊಳ್ಳುವ ಈ ಪರಮಾತ್ಮನಾದರೂ ಯಾರು? ಅವನು ಕರ್ಮವನ್ನು ಮಾಡದಿರುವ ಪುರುಷನಿಗೂ ಕರ್ಮವನ್ನು ಮಾಡುವ ಪ್ರಕೃತಿಗೂ ಅತೀತನಾಗಿರುವ ಪುರುಷೋತ್ತಮನು. ಒಂದಕ್ಕೆ ಆಧಾರನೂ ಮತ್ತೊಂದಕ್ಕೆ ಅಧಿಪತಿಯೂ ಆಗಿರುವನು. ಈ ವಿಶ್ವವೆಲ್ಲವೂ ಅವನ ವ್ಯಕ್ತಸ್ವರೂಪವಾಗಿದ್ದು ಅವನು ಇದಕ್ಕೆ ಒಡೆಯನಾಗಿರುವನು. ಮಾಯೆಗೆ ವಶರಾಗಿ ರುವ ನಮ್ಮ ಈಗಿನ ಸ್ಥಿತಿಯಲ್ಲೂ ಅವನು ಎಲ್ಲರ ಹೃದಯದಲ್ಲೂ ಇದ್ದುಕೊಂಡು ಪ್ರಕೃತಿಯ ಕಾರ್ಯವನ್ನು ನಿಯಂತ್ರಿಸುತ್ತಾನೆ. ಕುರುಕ್ಷೇತ್ರದ ರಣರಂಗದಲ್ಲಿರುವ ಸೈನಿಕರೆಲ್ಲರನ್ನೂ ಅವರು ಜೀವಂತರಾಗಿ ಕಂಡುಬರುತ್ತಿದ್ದಾಗ್ಯೂ ಅವನು ಆಗಲೆ ಸಂಹರಿಸಿದ್ದಾನೆ. ಅವನು ಅರ್ಜುನನನ್ನು ಈ ಕೊಲ್ಲುವ ಕೆಲಸಕ್ಕೆ ಕೇವಲ ನಿಮಿತ್ತ ನನ್ನಾಗಿ ಮಾಡಿದ್ದಾನೆ. ಪ್ರಕೃತಿಯು ಅವನ ಕ್ರಿಯಾಶಕ್ತಿ ಮಾತ್ರ. ಸಾಧಕನು ಈ ತ್ರಿಗುಣಾತ್ಮಕವಾದ ಪ್ರಕೃತಿಯನ್ನು ದಾಟಬೇಕು. ಕರ್ಮಗಳಲ್ಲಿ ಸಾಧಕನಿಗೆ ಅಧಿಕಾರವಿಲ್ಲವಷ್ಟೆ; ಅವನ್ನು ಅವನು ಅರ್ಪಿಸಬೇಕಾದ್ದು ಪ್ರಕೃತಿಗಲ್ಲ, ಪರಮಾತ್ಮನಿಗೆ. ತನ್ನ ಬುದ್ಧಿ, ಮನಸ್ಸು, ಹೃದಯ ಮತ್ತು ಸಂಕಲ್ಪಗಳನ್ನು ಅವನಲ್ಲಿ ನೆಟ್ಟು, ಸ್ವಸ್ವರೂಪ ಜ್ಞಾನದಲ್ಲಿ, ಬ್ರಹ್ಮಜ್ಞಾನದಲ್ಲಿ ಮತ್ತು ಪ್ರಪಂಚಜ್ಞಾನದಲ್ಲಿ ನಿಷ್ಠನಾಗಿ, ಸಮತ್ವದಿಂದಲೂ, ನಿರತಿಶಯವಾದ ಭಕ್ತಿಯಿಂದಲೂ ಮತ್ತು ಪೂರ್ಣವಾದ ಆತ್ಮಾ ರ್ಪಣೆಯಿಂದಲೂ ಸಕಲ ಕರ್ಮಗಳಿಗೂ ಯಜ್ಞಗಳಿಗೂ ಪ್ರಭುವಾದ ಪರಮಾತ್ಮನಿಗೆ ತನ್ನ ಎಲ್ಲ ಕರ್ಮಗಳನ್ನೂ ಅರ್ಪಿಸಬೇಕು. ಆಗ ಸಾಧಕನ ಇಚ್ಛೆಯು ಪರಮಾತ್ಮನ ಇಚ್ಛೆಯೊಂದಿಗೆ ಸೇರಿ, ಅವನ ಸಂಕಲ್ಪವು ಪರಮಾತ್ಮನ ಸಂಕಲ್ಪದೊಡನೆ ಒಂದಾಗಿ, ಪರಮಾತ್ಮನೆ ಅವನಿಂದ ಕರ್ಮವನ್ನು ಮಾಡಿಸುತ್ತಾನೆ. ಭಗವತ್‌ಸ್ವರೂಪನಾದ ಗುರುವು ಶಿಷ್ಯನಿಗೆ ಮಾಡಿದ ಉಪದೇಶವು ಇದೇಯೆ.

ಗೀತೆಯ ಪರಮೋಪದೇಶವು, ಮಹಾವಾಕ್ಯವು ಏನೆಂಬುದಕ್ಕಾಗಿ ನಾವು ಹುಡುಕಬೇಕಾಗಿಯೆ ಇಲ್ಲ. ಕೊನೆಯಲ್ಲಿ ಇದು ಸ್ಪಷ್ಟವಾಗಿ ಕಂಡುಬರುತ್ತದೆ.

**ತಮೇವ ಶರಣಂ ಗಚ್ಛ ಸರ್ವಭಾವೇನ ಭಾರತ।**
**ತತ್ಪ್ರಸಾದಾತ್ ಪರಾಂಶಾಂತಿಂ ಸ್ಥಾನಂ ಪ್ರಾಪ್ಸ್ಯಸಿ ಶಾಶ್ವತಂ ॥**

**ಇತಿ ತೇ ಜ್ಞಾನಮಾಖ್ಯಾತಂ ಗುಹ್ಯಾತ್ ಗುಹ್ಯತರಂ ಮಯಾ।**
**ವಿಮೃಶ್ಯೈತದಶೇಷೇಣ ಯಥೇಚ್ಛಸಿ ತಥಾ ಕುರು ॥**
**ಸರ್ವಗುಹ್ಯತಮಂ ಭೂಯಃ ಶೃಣು ಮೇ ಪರಮಂ ವಚಃ।**
**ಇಷ್ಟೋಽಸಿ ಮೇ ದೃಢಂ ಇತಿ ತತೋ ವಕ್ಷ್ಯಾಮಿ ತೇ ಹಿತಂ॥**
**ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು।**
**ಮಾಮೇವೈಷ್ಯಸಿ ಸತ್ಯಂ ತೇ ಪ್ರತಿಜಾನೇ ಪ್ರಿಯೋಽಸಿ ಮೇ॥**
**ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ।**
**ಅಹಂ ತ್ವಾಂ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ॥**

"ಅಂತರ್ಯಾಮಿಯಾಗಿರುವ ಪರಮಾತ್ಮನನ್ನು ಸರ್ವಭಾವದಿಂದಲೂ ಶರಣು ಹೊಂದು. ಅವನ ಅನುಗ್ರಹದಿಂದ ನಿನಗೆ ಶ್ರೇಷ್ಠವಾದ ಸ್ಥಾನವೂ, ನಿರುಪಮವಾದ ಶಾಂತಿಯೂ ದೊರಕುವುವು. ಹೀಗೆ ಅತ್ಯಂತ ರಹಸ್ಯವಾದ ಜ್ಞಾನವನ್ನು ನಿನಗೆ ಉಪದೇಶ ಮಾಡಿದ್ದೇನೆ. ಇದಕ್ಕಿಂತಲೂ ರಹಸ್ಯವಾಗಿರುವ ಶ್ರೇಷ್ಠವಾದ ನನ್ನ ಉಪದೇಶವನ್ನು ಕೇಳು. ನನ್ನಲ್ಲಿ ನೆಟ್ಟ ಮನಸ್ಸುಳ್ಳವನಾಗು; ನನ್ನ ಭಕ್ತನಾಗು; ನನಗಾಗಿ ಯಜ್ಞವನ್ನು ಮಾಡು; ನನ್ನನ್ನು ನಮಸ್ಕರಿಸು. ನೀನು ತಪ್ಪದೆ ನನ್ನನ್ನು ಸೇರುತ್ತೀಯೆ. ಏತಕ್ಕೆಂದರೆ ನೀನು ನನಗೆ ಪ್ರಿಯನಾಗಿದ್ದೀಯೆ. ಇದು ಸತ್ಯ. ಎಲ್ಲ ಧರ್ಮಗಳನ್ನೂ ಬಿಟ್ಟು ನನ್ನೊಬ್ಬನಿಗೆ ಶರಣಾಗತನಾಗು. ನಾನು ನಿನ್ನನ್ನು ಎಲ್ಲ ಪಾಪಗಳಿಂದಲೂ ಬಿಡುಗಡೆ ಮಾಡುತ್ತೇನೆ. ಶೋಕಿಸಬೇಡ"

ಗೀತೆಯ ಉಪದೇಶವು ಮೂರು ಮೆಟ್ಟಲುಗಳಲ್ಲಿದೆಯೆಂದು ನಾವು ಭಾವಿಸಬಹುದು. ಅದರಂತೆ ಮನುಷ್ಯನು ಮಾಡುವ ಕರ್ಮಗಳು ಕೆಳಗಿನ ಮಟ್ಟದ ಬಂಧನವನ್ನು ಕಳಚಿಕೊಂಡು ಕ್ರಮವಾಗಿ ಮೇಲ್ಮಟ್ಟಕ್ಕೇರಿ ದೈವಿಕವಾದ ಪರಿಶುದ್ಧತೆಯನ್ನು ಹೊಂದುವುವು. ಮೊದಲು ಮನುಷ್ಯನು ಆಸೆಯನ್ನು ತ್ಯಾಗಮಾಡಿ ಸಮತ್ವ ಬುದ್ಧಿಯಿಂದ ತಾನೆ ಕರ್ತೃವೆಂದು ತಿಳಿದು ಶ್ರೇಷ್ಠನೂ ಸರ್ವವ್ಯಾಪಿಯೂ ಆದ ಪರಮಾತ್ಮನಿಗಾಗಿ—ತನ್ನಲ್ಲಿಯೂ ಅವನಿದ್ದಾನೆಂದು ಅರಿಯದಿದ್ದರೂ ಕೂಡ—ಕರ್ಮಗಳೆಲ್ಲವನ್ನೂ ಯಜ್ಞಾರ್ಥವಾಗಿ ಮಾಡಬೇಕು. ಇದೇ ಮೊದಲನೆಯ ಹಂತ. ಎರಡನೆಯದಾಗಿ ಫಲಾಪೇಕ್ಷೆಯನ್ನು ಮಾತ್ರ ಬಿಡುವುದಲ್ಲದೆ ತಾನೆ ಕರ್ತೃವೆಂಬ ಭಾವನೆಯನ್ನೂ ಬಿಡಬೇಕು. ನಿರ್ವಿಕಾರನೂ, ಅಕ್ಷರನೂ ಆದ ಪುರುಷನು ಕರ್ಮಗಳನ್ನು ಮಾಡದೆ ಎಲ್ಲರಲ್ಲಿಯೂ ಸಮಾನನಾಗಿರುವನೆಂದೂ, ಎಲ್ಲ ಕರ್ಮಗಳೂ ವಿಕಾರವನ್ನು ಹೊಂದುವ ಅಸಮಾನವಾದ ಅನಾದಿಯಾದ ಪ್ರಕೃತಿಗೆ ವ್ಯಾಪಾರ

ವೆಂದೂ ತಿಳಿಯಬೇಕು. ಮೂರನೆಯದಾಗಿ ಪರಮಾತ್ಮನು ಪ್ರಕೃತಿಯ ಈಶ್ವರನಾದ ಪುರುಷೋತ್ತಮನೆಂದೂ, ಜೀವರೆಲ್ಲರೂ ಅವನ ಅಂಶಭೂತರೆಂದೂ, ಈ ಪುರುಷೋತ್ತಮನೆ ಪ್ರಕೃತಿಗೆ ಅತೀತನಾಗಿದ್ದುಕೊಂಡು ಎಲ್ಲ ಕರ್ಮಗಳನ್ನೂ ನಿಯಂತ್ರಿಸುತ್ತಾನೆಂದೂ, ತಿಳಿಯಬೇಕು. ಈ ಪುರುಷೋತ್ತಮನಿಗೆ ನಮ್ಮ ಭಕ್ತಿಯನ್ನೂ, ಪೂಜೆಯನ್ನೂ, ಯಜ್ಞಗಳನ್ನೂ ಅರ್ಪಿಸಬೇಕು. ಇವನಿಗೆ ಆತ್ಮನು ತನ್ನನ್ನು ಸಮರ್ಪಣೆ ಮಾಡಬೇಕು. ತನ್ನ ಮನೋಬುದ್ಧಿಗಳನ್ನು ಪುರುಷೋತ್ತಮನಲ್ಲಿ ನೆಟ್ಟು, ಅವನಂತೆಯೆ ಪ್ರಕೃತಿಗೆ ಅತೀತನಾಗಿ, ಅವನ ವ್ಯಾಪಾರಗಳಲ್ಲಿ ಭಾಗಿಯಾಗಿ ಅವನಂತೆಯೆ ಸ್ವಚ್ಛಂದತೆಯಿಂದ ಪ್ರವರ್ತಿಸಬೇಕು.

ಮೇಲೆ ಹೇಳಿದ ಮೆಟ್ಟಲುಗಳಲ್ಲಿ ಮೊದಲನೆಯದು ಕರ್ಮಯೋಗ; ಎಂದರೆ ಸ್ವಾರ್ಥವಿಲ್ಲದೆ ಯಜ್ಞಭಾವದಿಂದ ಕರ್ಮವನ್ನು ಮಾಡುವುದು. ಇದರಲ್ಲಿ ಕರ್ಮಕ್ಕೆ ಪ್ರಾಧಾನ್ಯ. ಎರಡನೆಯದು ಜ್ಞಾನಯೋಗ; ಎಂದರೆ ಆತ್ಮಸಾಕ್ಷಾತ್ಕಾರ; ತನ್ನ ಮತ್ತು ಪ್ರಪಂಚದ ನಿಜಸ್ವರೂಪದ ಅರಿವು. ಇಲ್ಲಿ ಜ್ಞಾನಕ್ಕೆ ಪ್ರಾಧಾನ್ಯ; ಆದರೆ ಯಜ್ಞರೂಪವಾದ ಕರ್ಮವು ಮಾಡಲ್ಪಡುತ್ತಲೆ ಇರಬೇಕು. ಕರ್ಮಮಾರ್ಗವು ಜ್ಞಾನಮಾರ್ಗದೊಡನೆ ಸೇರಿಕೊಂಡಾಗ್ಯೂ ಅದರಲ್ಲಿ ಐಕ್ಯವಾಗುವುದಿಲ್ಲ. ಕೊನೆಯ ಮೆಟ್ಟಲು ಭಕ್ತಿಯೋಗ; ಎಂದರೆ ಅಂತರ್ಯಾಮಿಯಾದ ಆತ್ಮನನ್ನೆ ಪೂಜಿಸಿ ಅವನಲ್ಲಿ ಪರಮಾತ್ಮನನ್ನು ಹುಡುಕುವುದು. ಇಲ್ಲಿ ಭಕ್ತಿಗೆ ಪ್ರಾಧಾನ್ಯ; ಆದರೆ ಜ್ಞಾನವು ಅಪ್ರಧಾನವಲ್ಲ; ಅದು ಇನ್ನೂ ಮೇಲಕ್ಕೆತ್ತಲ್ಪಟ್ಟು ವೀರ್ಯವತ್ತಾಗಿ ಮಾಡಲ್ಪಟ್ಟು ಸಾಫಲ್ಯವನ್ನು ಹೊಂದುತ್ತದೆ. ಯಜ್ಞರೂಪವಾದ ಕರ್ಮದ ಆಚರಣೆಯು ಮುಂದಕ್ಕೆ ಸಾಗುತ್ತಲೆ ಇರುತ್ತದೆ. ದ್ವಿವಿಧವಾಗಿದ್ದ ಮಾರ್ಗವು ಈಗ ತ್ರಿವಿಧವಾಗಿ, ಭಕ್ತಿ ಜ್ಞಾನ ಕರ್ಮಗಳು ಒಂದುಗೂಡಿರುವ ಮಾರ್ಗವಾಗುತ್ತದೆ. ಈ ಯಜ್ಞದ ಉದ್ದಿಷ್ಟ ಫಲವು ಈಶ್ವರನಲ್ಲಿ ಐಕ್ಯವಾಗುವುದು; ಈಶ್ವರಭಾವದಲ್ಲಿ ಲೀನವಾಗುವುದು. ಇದು ಸಾಧಕನಿಂದ ಸಾಧಿಸಲ್ಪಡುತ್ತದೆ.



# ಐದನೆಯ ಪ್ರಕರಣ



## ಕುರುಕ್ಷೇತ್ರ

ಇಲ್ಲಿಯವರೆಗೆ, ಸಾಧಕರು ಹತ್ತಬೇಕಾಗಿರುವ ಮೂರು ದೊಡ್ಡ ಹಂತಗಳು, ಅನುಸರಿಸಬೇಕಾಗಿರುವ ತ್ರಿವಿಧವಾದ ಮಾರ್ಗ ಇವುಗಳ ವಿಚಾರವಾಗಿ ಶ್ರೀಕೃಷ್ಣನ ಉಪದೇಶವನ್ನು ನಿರೂಪಿಸಿದುದು ಆಯಿತು. ಸಾಧಕನು ತನ್ನ ಇಚ್ಛಾಜ್ಞಾನ ಕ್ರಿಯೆಗಳನ್ನು ಎಲ್ಲ ಭಕ್ತಿಜ್ಞಾನಕರ್ಮಗಳ ಏಕಲಕ್ಷ್ಯನಾದ ಪರಮಾತ್ಮನಿಗೆ ಅರ್ಪಿಸುವುದೆ ಈ ಮಾರ್ಗ. ಈ ಮಾರ್ಗದ ವಿಚಾರವನ್ನು ಮಾಡುವುದಕ್ಕೆ ಮುಂಚೆ ಗೀತೆಯ ಉಪದೇಶದ ಸಂದರ್ಭವನ್ನು ಮತ್ತೊಮ್ಮೆ, ಈ ಬಾರಿ ಮನುಷ್ಯನ ಮತ್ತು ಪ್ರಪಂಚದ ಜೀವನ ಸಂಸಾರದ ಪ್ರತೀಕದಂತೆ, ವಿಮರ್ಶೆಮಾಡಬೇಕಾಗಿದೆ.

ಅರ್ಜುನನ ಸಮಸ್ಯೆಯೇನೊ ಅವನ ತತ್ಕಾಲದ ಸನ್ನಿವೇಶಕ್ಕೂ, ಅವನ ಮನಸ್ಸಿನಲ್ಲಾಗುತ್ತಿದ್ದ ಹೋರಾಟಕ್ಕೂ ಮತ್ತು ಅವನು ಅನುಸರಿಸಬೇಕಾದ ಧರ್ಮಕ್ಕೂ ಸಂಬಂಧಿಸಿದುದು. ಆದಾಗ್ಯೂ ಅವನು ಕೇಳುವ ಪ್ರಶ್ನೆಗಳೂ, ಅವುಗಳನ್ನು ಅವನು ಕೇಳಿದ ರೀತಿಯೂ, ಒಟ್ಟು ಮಾನವ ವರ್ಗದ ಜೀವನ ಮತ್ತು ಕರ್ಮಗಳ ಸಮಸ್ಯೆಯನ್ನು ಮುಂದಿಟ್ಟು, ಪ್ರಪಂಚದ ಸ್ವರೂಪವೇನು; ಜೀವನದ ಗುರಿಯೇನು; ಐಹಿಕ ಜೀವನವನ್ನು ಆಮುಷ್ಮಿಕ ಜೀವನದೊಡನೆ ಸಮನ್ವಯ ಮಾಡುವುದು ಹೇಗೆ? ಎಂಬ ಪ್ರಶ್ನೆಗಳನ್ನು ಮುಂದೊಡ್ಡುತ್ತದೆ. ಎಲ್ಲರನ್ನೂ ಎದುರಿಸುವ ಮತ್ತು ಬಹಳ ಕಷ್ಟವಾದ ಈ ಸಮಸ್ಯೆಗಳನ್ನು ಶ್ರೀಕೃಷ್ಣನು ಹೀಗೆ ಪರಿಹರಿಸುತ್ತಾನೆ—ಮನುಷ್ಯನು ಮುಕ್ತಿದಾಯಕವಾದ ಜ್ಞಾನದ ಬೆಳಕಿನಲ್ಲಿ ಮತ್ತು ಹೊಸ ವಿಧವಾದ ಆತ್ಮಸ್ಥಿತಿಯಲ್ಲಿದ್ದುಕೊಂಡು ಕರ್ಮವನ್ನು ಮಾಡಲೆಬೇಕು.

ಈ ಲೋಕದಲ್ಲಿದ್ದುಕೊಂಡು ಕರ್ಮವನ್ನು ಮಾಡುತ್ತ ಆಧ್ಯಾತ್ಮಿಕ ಜೀವನವನ್ನು ನಡೆಸಲು ಮನುಷ್ಯನಿಗೆ ಇರುವ ಅಡ್ಡಿಯಾದರೂ ಯಾವುದು? ಎಚ್ಚೆತ್ತಿರುವ ಅವನ ಮನಸ್ಸಿಗೆ ಖೇದವನ್ನುಂಟುಮಾಡುವ ಜೀವನದ ನಡವಳಿಕೆಗಳು ಯಾವುವು? ಗೀತೆಯ ಮೊದಲನೆಯ ಅಧ್ಯಾಯಕ್ಕೆ ಅರ್ಜುನವಿಷಾದಯೋಗವೆಂದು ಹೆಸರಿಟ್ಟಿರುವುದು ಅರ್ಥಪೂರ್ಣವಾಗಿರುವುದು. "ನಾನು ಧರ್ಮವನ್ನು ಆಚರಿಸುತ್ತಿದ್ದೇನೆ" ಎಂಬುದು ಭ್ರಮೆಯೆಂದು ಎಚ್ಚೆತ್ತ ಮನುಷ್ಯನಿಗೆ ತಿಳಿದಾಗ, ಅವನು ಪ್ರಪಂಚವನ್ನು

ಯಥಾವತ್ತಾಗಿ ನೋಡಿದಾಗ ಅವನಿಗೆ ವಿಷಾದವನ್ನುಂಟುಮಾಡುವುದು ಯಾವುದು? ಈ ಪ್ರಸಂಗವೆ ಹೊರಗೆ ನೋಡಲು ಕುರುಕ್ಷೇತ್ರದ ಘೋರವಾದ ಯುದ್ಧ ಮತ್ತು ಕೊಲೆಯ ರೂಪದಲ್ಲಿಯೂ, ಆಂತರವಾಗಿ ವಿಶ್ವರೂಪದರ್ಶನದ—ಎಲ್ಲವನ್ನೂ ನುಂಗುತ್ತಿರುವ—ಕಾಲಪುರುಷನ ರೂಪದಲ್ಲಿಯೂ ಚಿತ್ರಿತವಾಗಿದೆ. ಈ ವಿಶ್ವರೂಪ ದರ್ಶನದಲ್ಲಿ ಪರಮಾತ್ಮನು ಸೃಷ್ಟಿಕರ್ತನಾಗಿಯೂ ಮತ್ತು ಉಪನಿಷತ್ತಿನಲ್ಲಿ* ಹೇಳಿರುವಂತೆ ವಿಶ್ವಸಂಹಾರಕನಾಗಿಯೂ ಕಾಣಿಸಿಕೊಳ್ಳುತ್ತಾನೆ. ಈ ಒಂದು ತತ್ತ್ವವೆ ಜೀವನದ ಘಟನೆಗಳಲ್ಲಿ ಮಸುಕು ಮಸುಕಾಗಿಯೂ ಅಸ್ಪಷ್ಟವಾಗಿಯೂ ಈ ಜೀವನದಲ್ಲಿ ಅಭಿವ್ಯಕ್ತವಾಗುವುದನ್ನು ಆತ್ಮನು ಆಂತರಿಕ ದೃಷ್ಟಿಯಿಂದ ನೋಡುವಾಗ ನೇರವಾಗಿಯೂ ಸ್ಪಷ್ಟವಾಗಿಯೂ ಗೋಚರವಾಗುತ್ತದೆ. ಹೊರಗಿನ ದೃಷ್ಟಿಗೆ ಮನುಷ್ಯಜೀವನದಲ್ಲಿ ಮತ್ತು ಪ್ರಪಂಚದಲ್ಲಿ ಇರುವ ಹೋರಾಟ ಕೊಲೆಗಳಾಗಿಯೂ, ಆಂತರಿಕ ದೃಷ್ಟಿಗೆ ಎಲ್ಲವನ್ನೂ ಸೃಷ್ಟಿಸುವ ಮತ್ತು ಸಂಹರಿಸುವ ವಿಶ್ವಾತ್ಮನಾಗಿಯೂ ಕಾಣುತ್ತದೆ. ಮನುಷ್ಯರ ಪರಸ್ಪರ ಹೋರಾಟ ಮತ್ತು ಮೃತ್ಯುವಿನ ನಾಟ್ಯರಂಗ—ಇದೆ ಕುರುಕ್ಷೇತ್ರ. ಈ ರಣರಂಗದಲ್ಲಿ ಅರ್ಜುನನಿಗೆ ಕಾಣುವುದೆ ಉಗ್ರಮೂರ್ತಿಯಾದ ಪರಮಾತ್ಮ.

"ಯುದ್ಧವೇ ಎಲ್ಲಕ್ಕೂ ಮೂಲ ಮತ್ತು ಎಲ್ಲಕ್ಕಿಂತ ಮಿಗಿಲಾದುದು" ಎಂಬ ಹಿರಾಕ್ಲಿಟಸ್ ಎಂಬ ಗ್ರೀಕ್ ತತ್ತ್ವಜ್ಞಾನಿಯ ಹೇಳಿಕೆಯು ಅವನ ಇತರ ಹೇಳಿಕೆಗಳಂತೆ ಅರ್ಥಪೂರಿತವಾಗಿದೆ. ಭೌತಿಕ ಅಥವಾ ಇತರ ಶಕ್ತಿಗಳ ಪರಸ್ಪರ ಘರ್ಷಣೆಯಿಂದ ಈ ಪ್ರಪಂಚದಲ್ಲಿರುವ ಎಲ್ಲ ವಸ್ತುಗಳೂ ಅಥವಾ ಈ ಪ್ರಪಂಚವೆ ಸೃಷ್ಟಿಯಾಗಿರುವಂತೆ ತೋರುತ್ತದೆ. ಶಕ್ತಿಗಳ, ಸ್ವಭಾವಗಳ, ತತ್ತ್ವಗಳ ಮತ್ತು ಜೀವಿಗಳ ಪರಸ್ಪರ ಹೋರಾಟದಿಂದ ಯಾವಾಗಲೂ ಹೊಸ ವಸ್ತುಗಳು ಸೃಷ್ಟಿಯಾಗುತ್ತಾ ಹಳೆಯ ವಸ್ತುಗಳು ನಾಶವಾಗುತ್ತಾ ಪ್ರಪಂಚವು ಮುಂದುವರಿಯುವಂತೆ ಕಾಣುತ್ತದೆ. ಈ ಹೋರಾಟದ ಪರಿಣಾಮವಾಗಿ ಪ್ರಪಂಚವು ಎತ್ತ ಕಡೆ

* ಯಸ್ಯ ಬ್ರಹ್ಮ ಚ ಕ್ಷತ್ರಂ ಚ ಉಭೇ ಭವತ ಓದನಃ ।
ಮೃತ್ಯುರ್ ಯಸ್ಯೋಪಸೇಚನಂ ಕ ಇತ್ಥಾ ವೇದ ಯತ್ರ ಸಃ ॥
(ಕಠೋಪನಿಷತ್ ೧. ೨. ೨೫)

ಬ್ರಾಹ್ಮಣರೂ ಕ್ಷತ್ರಿಯರೂ ಯಾರಿಗೆ ಆಹಾರವಾಗಿದ್ದಾರೋ ಯಾರಿಗೆ ಮೃತ್ಯುವು ಅನಂಜಕೊಳ್ಳುವ ವ್ಯಂಜನವೊ ಆ ಪರಮಾತ್ಮನು ಎಲ್ಲಿ ಇರುವನೆಂಬುದನ್ನು ಯಾರು ಬಲ್ಲರು?

ಸಾಗುತ್ತಿದೆಯೆಂದು ಖಂಡಿತವಾಗಿ ಹೇಳಲಾಗುವುದಿಲ್ಲ. ಅದು ಸಂಪೂರ್ಣವಾದ ನಾಶಕ್ಕೆಂದು ಕೆಲವರೂ, ಇದಕ್ಕೆ ಕೊನೆಯೂ ಅರ್ಥವೂ ಇಲ್ಲವೆಂದು ಕೆಲವರೂ ಹೇಳುತ್ತಾರೆ. ಬೇರೆ ಕೆಲವರ ಅಭಿಪ್ರಾಯವು ಆಶಾಜನಕವಾಗಿದೆ. ಅವರ ಪ್ರಕಾರ ಪ್ರಪಂಚದಲ್ಲಿ ಎಷ್ಟು ಕಷ್ಟಗಳೂ ತೊಡಕುಗಳೂ ಇರುವಂತೆ ಕಂಡುಬಂದರೂ ಅದು ಯುಗಯುಗದಲ್ಲಿಯೂ ಮೇಲು ಮೇಲು ಮಟ್ಟಕ್ಕೇರಿ ಹೆಚ್ಚು ಹೆಚ್ಚಾಗಿ ಪರಮಾತ್ಮನ ಆವಿರ್ಭಾವಕ್ಕೆ ನೆಲೆಯಾಗುತ್ತಾ ಇದೆ. ಅದು ಹೇಗಾದರೂ ಇರಲಿ, ಇಷ್ಟಂತೂ ಖಂಡಿತ. ಇಲ್ಲಿ ನಾಶವಿಲ್ಲದೆ ಸೃಷ್ಟಿಯು ಆಗುವುದಿಲ್ಲ. ಅನೇಕ ಅಪಸ್ವರಗಳ ಘರ್ಷಣೆಯಿಲ್ಲದೆ ಮಧುರಗಾನವಿಲ್ಲ. ಸಂತತವಾಗಿ ಇತರ ಜೀವಿಗಳನ್ನು ನುಂಗಿ ಆಹಾರವನ್ನು ಒದಗಿಸಿಕೊಳ್ಳದೆ ಜೀವನವು ಮುಂದೆ ಸಾಗುವುದಿಲ್ಲ. ನಿತ್ಯಜೀವನದಲ್ಲಿ ನಮ್ಮ ಭೌತಿಕದೇಹವು ಜೀವಿಸಿರುವುದೆ ಸತತವಾದ ಮರಣ ಮತ್ತು ಜನನಗಳಿಂದ; ನಮ್ಮ ಶರೀರವು ಶತ್ರುಗಳು ಮುತ್ತಿಗೆ ಹಾಕಿರುವ ಒಂದು ಪಟ್ಟಣದಂತೆ. ಇದನ್ನು ಮುತ್ತಿಗೆಹಾಕುವ ಶತ್ರುಗಳೂ ರಕ್ಷಿಸುವ ಭಟರೂ ಒಬ್ಬರನ್ನೊಬ್ಬರು ನುಂಗುವುದರಲ್ಲಿ ನಿರತರಾಗಿರುತ್ತಾರೆ. ಪ್ರಪಂಚದ ಇತರ ಎಲ್ಲ ಜೀವಿಗಳ ವಿಷಯವೂ ಹೀಗೆಯೆ. ಸೃಷ್ಟಿಯ ಆದಿಯಿಂದಲೆ ಈ ನಿಯಮವನ್ನು ಘೋಷಿಸಿದಂತಿದೆ. "ನಿನ್ನ ಸನ್ನಿವೇಶದೊಡನೆಯೂ, ಜೊತೆಗಾರರೊಡನೆಯೂ ಯುದ್ಧಮಾಡದಿದ್ದರೆ ನಿನಗೆ ಜಯವಿಲ್ಲ. ಹೋರಾಟವಿಲ್ಲದೆ ಮತ್ತು ಇತರ ಜೀವಿಗಳನ್ನು ನುಂಗದೆ ನಿನಗೆ ಜೀವಿಸುವುದಕ್ಕೆ ಸಾಧ್ಯವಿಲ್ಲ. ನಾನು ಸೃಷ್ಟಿಸಿರುವ ಪ್ರಪಂಚದ ಮೊದಲನೆಯ ಕಟ್ಟಳೆಯೇನೆಂದರೆ ಸಂಹಾರದಿಂದಲೆ ಸೃಷ್ಟಿ ಮತ್ತು ಸ್ಥಿತಿಗಳು" ನಮ್ಮ ಹಿಂದಿನವರು ಪ್ರಪಂಚದ ವಿಷಯದಲ್ಲಿ ತಮ್ಮ ಅನುಭವಕ್ಕೆ ಅನುಸಾರವಾಗಿದ್ದ ಈ ವಿಚಾರಸರಣಿಯನ್ನು ಒಪ್ಪಿಕೊಂಡಿದ್ದರು. ಪ್ರಾಚೀನ ಉಪನಿಷತ್ತಿನಲ್ಲಿ ಸ್ವಲ್ಪವೂ ಮುಚ್ಚುಮರೆಯಿಲ್ಲದೆ—**ಮೃತ್ಯುವೆಂಬ ಹಸಿವು ಪ್ರಪಂಚದ ಅಧಿಪತಿಯು** ಎಂದು ಅಲ್ಲಿ ಹೇಳಿರುವುದಲ್ಲದೆ ಈ ಲೋಕದ ಜೀವನವನ್ನು ಯಜ್ಞದ ಕುದುರೆಗೆ ಹೋಲಿಸಿರುವರು. ಜಡವಸ್ತುವನ್ನು ಅನ್ನವೆಂದು ಕರೆದು "ಇತರರನ್ನು ತಾನು ತಿನ್ನುವುದರಿಂದಲೂ, ತನ್ನನ್ನು ಇತರರು ತಿನ್ನುವುದರಿಂದಲೂ ಇದಕ್ಕೆ ಅನ್ನವೆಂದು ಹೆಸರು" ಎಂದು ಹೇಳಿದೆ. ಡಾರ್ವಿನ್ ಎಂಬ ಪಂಡಿತನ ಅನುಯಾಯಿಗಳು ಈಚೆಗೆ ಕಂಡುಹಿಡಿದಂತೆ ಜೀವನಕ್ಕಾಗಿ ಹೋರಾಟವೆ ಬೆಳವಣಿಗೆಯ ನಿಯಮವಾಗಿರುವದೆಂಬುದನ್ನು ಉಪನಿಷತ್ತು "ತಿನ್ನುವವನು ತಿನ್ನುತ್ತಾ ತಿನ್ನಲ್ಪಡುವನು" ಎಂದು ಹೇಳಿರುವುದು, ಹಿಂದೆಯೆ ಹಿರಾಕ್ಲಿಟಸ್ಸಿನ ಸೂತ್ರಗಳೂ ಉಪನಿಷ

ದ್ವಾಕ್ಯಗಳೂ ಬಹಳ ಸ್ಪಷ್ಟವಾಗಿ ನಿಸ್ಸ್ಪೃಷ್ಟವಾಗಿ ಮನಸ್ಸಿಗೆ ನಾಟುವಂತೆ ಹೇಳಿರುವ ಪುರಾತನತತ್ತ್ವಗಳನ್ನೆ ಈಗಿನ ಕಾಲದ ವಿಜ್ಞಾನವು ಬೇರೆ ಮಾತುಗಳಲ್ಲಿ ಹೇಳುತ್ತಿದೆ.

ಜರ್ಮನಿಯ ನೀಟ್ಷೆ ಎಂಬ ತತ್ತ್ವಜ್ಞಾನಿಯು ಜೀವನದಲ್ಲಿ ಯುದ್ಧಕ್ಕೆ ಬಹಳ ಮುಖ್ಯವಾದ ಸ್ಥಾನವನ್ನು ಕೊಟ್ಟು ಆದರ್ಶಪುರುಷನನ್ನು ಯೋಧನನ್ನಾಗಿ ಚಿತ್ರಿಸಿದ್ದಾನೆ. ಪ್ರಾರಂಭದಲ್ಲಿ ಮನುಷ್ಯನು ಒಂಟಿಯಂತಿದ್ದು ಅಂತ್ಯದಲ್ಲಿ ನರಪಶುವಿನಂತಾದರೂ, ಅವನು ಪರಿಪೂರ್ಣತೆಯನ್ನು ಹೊಂದಬೇಕಾದರೆ ಮಧ್ಯದಲ್ಲಿ ನರಸಿಂಹನೆ ಆಗಬೇಕೆಂಬುದು ಅವನ ವಾದ. ನೀಟ್ಷೆಯ ಈ ವಿಧವಾದ ಅಭಿಪ್ರಾಯಗಳು ಅವಹೇಳನಕ್ಕೆ ಗುರಿಯಾಗಿದ್ದರೂ, ಮತ್ತು ಇವುಗಳ ಆಧಾರದ ಮೇಲೆ ಅವನು ಸ್ಥಾಪಿಸಿದ ನೈತಿಕ ಮತ್ತು ವ್ಯಾವಹಾರಿಕ ನಿಯಮಗಳನ್ನು ಒಪ್ಪಲು ಸಾಧ್ಯವಿಲ್ಲದಿದ್ದರೂ, ಅವನ ವಾದವು ಸ್ವಲ್ಪಮಟ್ಟಿಗಾದರೂ ನಿಜವೆಂಬುದನ್ನು ನಾವು ಎಷ್ಟು ಮುಚ್ಚುವುದಕ್ಕೆ ಪ್ರಯತ್ನಪಟ್ಟರೂ ಒಪ್ಪಿಕೊಳ್ಳಲೇ ಬೇಕು. ಇದನ್ನು ನಾವು ಜ್ಞಾಪಕದಲ್ಲಿಟ್ಟುಕೊಳ್ಳುವುದು ಒಳ್ಳೆಯದು. ಏತಕ್ಕೆಂದರೆ ಮೊದಲನೆಯದಾಗಿ ಇದು ಯೋಧರಿಗೆ ಉತ್ಸಾಹವನ್ನುಂಟುಮಾಡುತ್ತದೆ. ತತ್ತ್ವಶಾಸ್ತ್ರ, ಧರ್ಮ ಮತ್ತು ಮತಗ್ರಂಥಗಳಲ್ಲಿರುವ ಉನ್ನತ ಮಟ್ಟದ ಉಪದೇಶಗಳು ಕಲ್ಪಿಸುವ ಭಾವನಾಮಯ ಪ್ರಪಂಚದಲ್ಲಿರುವ, ಎಂದರೆ, ಲೋಕದಲ್ಲಿ ಯಾವಾಗಲೂ ಪ್ರೇಮ, ಸೌಂದರ್ಯ, ಮತ್ತು ಒಳ್ಳೆಯವುಗಳನ್ನೆ ನೋಡುತ್ತ, ಮೃತ್ಯುವಿನ ಕರಾಳನೃತ್ಯಕ್ಕೆ ಬೆನ್ನು ತಿರುಗಿಸಿಕೊಂಡು ದೇವದೇವನನ್ನು ಶಿವನಾಗಿ ಪೂಜಿಸುತ್ತ, ಅವನು ರುದ್ರನೆಂಬುದನ್ನು ಮರೆಯುವ ನಮ್ಮನ್ನು ಹೊಡೆದೆಬ್ಬಿಸಿ, ನಮ್ಮ ಅಲಸತೆಯನ್ನು ದೂರಮಾಡುತ್ತದೆ. ಎರಡನೆಯದಾಗಿ ಪ್ರಪಂಚವನ್ನು ನೇರವಾಗಿ ಧೈರ್ಯದಿಂದ ಪೂರ್ಣದೃಷ್ಟಿಯಿಂದ ನೋಡುವವರೆಗೂ ಅದರಲ್ಲಿರುವ ಘರ್ಷಣೆಗಳಿಗೂ ವಿರಸಗಳಿಗೂ ಸರಿಯಾದ ಪರಿಹಾರವು ದೊರೆಯುವುದಿಲ್ಲ. ಮೊದಲು ನಾವು ಜೀವನದ ಮತ್ತು ಪ್ರಪಂಚದ ನಿಜವಾದ ಸ್ವರೂಪವನ್ನು ತಿಳಿಯಬೇಕು. ಅದನ್ನು ತಿಳಿದ ನಂತರ ಅದು ಹೇಗಿರಬೇಕೆಂದು ನಮ್ಮ ಧ್ಯೇಯವಿದೆಯೋ ಹಾಗೆ ಅದನ್ನು ಮಾರ್ಪಡಿಸಲು ಪ್ರಯತ್ನಪಡಬಹುದು. ಜೀವನದಲ್ಲಿರುವ ಕಹಿಯಾದ ಭಾಗವನ್ನು ನಾವು ನೋಡಲು ಹಿಂತೆಗೆದರೆ ನಾವು ತಿಳಿದೂ ತಿಳಿದೂ ಮಾಡುವ ಈ ಉಪೇಕ್ಷೆಯಿಂದ, ಅದರಲ್ಲಿರಬಹುದಾದ ಜೀವನದಲ್ಲಿ ಸಮರಸವನ್ನುಂಟುಮಾಡುವ ಅಂಶಗಳು ನಮ್ಮ ದೃಷ್ಟಿಗೆ ಬೀಳದೆ, ಜೀವನಸಮಸ್ಯೆಯನ್ನು ಬಿಡಿಸಲು ನಾವು ಮಾಡುವ ಪ್ರಯತ್ನಗಳು ವ್ಯರ್ಥವಾಗುವುವು. ಒಂದು

ವೇಳೆ ಅದು ನಿಗ್ರಹಿಸಬೇಕಾದ, ಭೇದಿಸಬೇಕಾದ, ನಿರ್ಮೂಲವಾಗಿ ಧ್ವಂಸಮಾಡ ಬೇಕಾದ ಶತ್ರುವಾಗಿದ್ದರೂ, ಜೀವನದಲ್ಲಿ ಅದು ಬೀರುವ ಪ್ರಭಾವವನ್ನೂ ಶಕ್ತಿಯನ್ನೂ ಜೀವನದ ಪಥದಲ್ಲಿಯೂ ತತ್ತ್ವಗಳಲ್ಲಿಯೂ ಅದರ ಮಹಿಮೆಯನ್ನೂ ಅಲ್ಲಗಳೆಯುವುದರಿಂದ ನಮಗೇನೂ ಉಪಯೋಗವಾಗುವುದಿಲ್ಲ.

ಯುದ್ಧವೂ ಮತ್ತು ನಿಗ್ರಹವೂ ಸ್ಥೂಲಪ್ರಪಂಚದಲ್ಲಿ ಮಾತ್ರವಲ್ಲದೆ ಮನೋಭಾವಗಳಿಗೂ ನೀತಿಗಳಿಗೂ ಅನ್ವಯಿಸುವ ಸಾರ್ವತ್ರಿಕ ತತ್ತ್ವವಾಗಿರುವುದು. ಮನುಷ್ಯರ ಜೀವನದಲ್ಲಿ—ಎಂದರೆ ಸಾಮಾಜಿಕ, ರಾಜಕೀಯ, ನೈತಿಕ ಮತ್ತು ಮಾನಸಿಕ ವ್ಯಾಪಾರಗಳಲ್ಲಿ ಈಗ ಇರುವುದಕ್ಕೂ, ಆಗಬೇಕಾಗಿರುವುದಕ್ಕೂ, ಹಿಂದೆ ಇದ್ದುದಕ್ಕೂ ಪರಸ್ಪರ ಘರ್ಷಣೆ ಮತ್ತು ಹೋರಾಟವು ಅನಿವಾರ್ಯವೆಂಬುದು ಸ್ಪಷ್ಟ. ಮನುಷ್ಯನ ಮತ್ತು ಪ್ರಪಂಚದ ಈಗಿನ ಸ್ಥಿತಿಯಲ್ಲಿ, ಅಹಿಂಸೆಯೆ ಪರಮ ಧರ್ಮವೆಂದು ಸಾರುವರು ಇದ್ದಾರೆ. ಅದನ್ನೆ ಸಂಪೂರ್ಣವಾಗಿ ಆಚರಿಸಿದರೆ, ಮನುಷ್ಯನು ಮುಂದುವರಿಯುವುದಕ್ಕೂ, ಬೆಳೆದು ಪರಿಪೂರ್ಣತೆಯನ್ನು ಹೊಂದುವುದಕ್ಕೂ ಅಸಾಧ್ಯ. ಯುದ್ಧದಲ್ಲಾಗಲಿ ಅಥವಾ ಆತ್ಮರಕ್ಷಣೆಗಾಗಲಿ ಬಾಹುಬಲವನ್ನು ಸ್ವಲ್ಪವಾದರೂ ಉಪಯೋಗಿಸದೆ ಕೇವಲ ಆತ್ಮಶಕ್ತಿಯನ್ನು ಉಪಯೋಗಿಸುವುದೆ? ಆಗಬಹುದು, ಆದರೆ ಈ ಆತ್ಮಶಕ್ತಿಯು ಕಾರ್ಯಕಾರಿಯಾಗುವತನಕ ಮನುಷ್ಯನ ಮತ್ತು ಜನಾಂಗಗಳ ಆಸುರೀಶಕ್ತಿಯು ಈಗ ನಾವು ನೋಡುತ್ತಿರುವಂತೆ ಎಲ್ಲವನ್ನೂ ಧ್ವಂಸಮಾಡುತ್ತಾ ಕೆಡಿಸುತ್ತಾ ದಹನಮಾಡುತ್ತಾ ಕೊಲೆಮಾಡುತ್ತದೆ. ಆಗ ಈ ಕೆಲಸವು ತಡೆಯಿಲ್ಲದೆ ನಿರಾಯಾಸವಾಗಿ ಸಾಗುತ್ತದೆ. ಇಂತಹ ಸಂದರ್ಭದಲ್ಲಿ ಇತರರ ಬಾಹುಬಲವು ಎಷ್ಟು ಕೊಲೆಗೆ ಕಾರಣವೊ ನಮ್ಮ ಅಹಿಂಸೆಯೂ ಪ್ರಾಯಶಃ ಅಷ್ಟೇ ಕಾರಣವಾಗಿರುತ್ತದೆ. ಆದರೂ ಮುಂದೆಯಾದರೂ ಉತ್ತಮಸ್ಥಿತಿಯನ್ನು ಉಂಟುಮಾಡುವ ಅಥವಾ ಉಂಟುಮಾಡಬೇಕಾದ ಆದರ್ಶವನ್ನು .ನಾವು ಮುಂದಿಟ್ಟುಕೊಂಡಿದ್ದೇವೆಂದು ಹೇಳಬಹುದು. ಆದರೆ ಆತ್ಮಶಕ್ತಿಯೂ ಕೂಡ ಕಾರ್ಯಕಾರಿಯಾದಾಗ ನಾಶವನ್ನುಂಟುಮಾಡುತ್ತದೆ.

ಸಂಪೂರ್ಣ ಅರಿವಿನಿಂದ ಆತ್ಮಶಕ್ತಿಯನ್ನುಪಯೋಗಿಸಿರುವವರಿಗೆ ಅದು ಕತ್ತಿ ಮದ್ದುಗುಂಡುಗಳಿಗಿಂತ ಎಷ್ಟು ವಿನಾಶಕಾರಿಯೆಂಬುದು ಗೊತ್ತು. ಆತ್ಮಶಕ್ತಿಯ ಪ್ರಯೋಗ ಮತ್ತು ಅದರಿಂದ ತತ್ಕ್ಷಣದಲ್ಲಿ ಆಗುವ ಪರಿಣಾಮಗಳನ್ನು ಮಾತ್ರ ನೋಡದೆ, ವ್ಯಾಪಕವಾದ ದೃಷ್ಟಿಯುಳ್ಳವರಿಗೆ ಈ ಪ್ರಯೋಗದ ಪೂರ್ಣ ಪರಿಣಾಮವು ಎಷ್ಟು ಮಹತ್ತರವಾದುದು ಎಂಬುದು ಗೊತ್ತಾಗುವುದು. ಅದರಿಂದ

ಆಗುವ ವಿನಾಶ ಎಷ್ಟು ಅಪಾರವೆಂಬುದೂ, ಆ ವಿನಾಶದ ಪರಿಣಾಮವಾಗಿ ಇನ್ನು ಎಷ್ಟು ಜೀವಹಾನಿಯಾಗುವುದೆಂಬುದೂ ತಿಳಿದಿರುವುದು. ಅಧರ್ಮವನ್ನು ನಾಶಮಾಡ ಬೇಕಾದರೆ ಆ ಅಧರ್ಮದಿಂದ ಜೀವಿಸುವವರನ್ನು ನಾಶಮಾಡಬೇಕಾಗುತ್ತದೆ. ಇದರಲ್ಲಿ ನಾವು ಕಣ್ಣಿಗೆ ಕಾಣುವಂತೆ ಹಿಂಸಾಕೃತ್ಯವನ್ನು ಮಾಡದಿದ್ದರೂ ಇದೂ ವಿನಾಶಕಾರಿಯೆಂಬುದರಲ್ಲಿ ಸಂದೇಹವೆ ಇಲ್ಲ.

ಅಲ್ಲದೆ ನಾವು ಆತ್ಮಶಕ್ತಿಯನ್ನು ಉಪಯೋಗಿಸಿದಾಗಲೆಲ್ಲ ಪ್ರತಿಕಕ್ಷಿಯ ಮೇಲೆ ಕರ್ಮದ ಒಂದು ದೊಡ್ಡ ಶಕ್ತಿಗೆ ದಾರಿಮಾಡುತ್ತೇವೆ. ಆದರೆ ಈ ಶಕ್ತಿಯ ವ್ಯಾಪಾರಗಳು ನಮ್ಮ ಹಿಡಿತಕ್ಕೆ ಸಿಕ್ಕುವುದಿಲ್ಲ. ವಸಿಷ್ಠನು ವಿಶ್ವಾಮಿತ್ರನ ಕ್ಷಾತ್ರ ಬಲಕ್ಕೆ ಎದುರಾಗಿ ತನ್ನ ಆತ್ಮಶಕ್ತಿಯನ್ನು ಉಪಯೋಗಿಸಿದನು. ಇದರ ಪರಿಣಾಮ ವಾಗಿ ಹೂಣರ, ಶಕರ ಮತ್ತು ಪಲ್ಲವರ ಪಡೆಗಳು ಹುಟ್ಟಿ ಶತ್ರುವಿನ ಮೇಲೆ ಬಿದ್ದರು. ಆತ್ಮನಿಷ್ಠನಾದ ಮನುಷ್ಯನನ್ನು ಹಿಂಸೆಮಾಡಿದರೆ ಅವನ ನಿರ್ವಿಕಾರವಾದ ಶಾಂತಿಯೆ ಪ್ರತೀಕಾರಕ್ಕಾಗಿ ಲೋಕದಲ್ಲಿನ ಮಹತ್ತರವಾದ ಶಕ್ತಿಗಳಿಗೆ ಕರೆ ನೀಡುತ್ತದೆ. ಆದುದರಿಂದ ದುಷ್ಟರನ್ನು ನಮ್ಮ ಶರೀರ ಬಲದಿಂದಲಾದರೂ ತಡೆಗಟ್ಟಿ ಅವರು ಮುಂದುವರಿಯುವುದನ್ನು ತಪ್ಪಿಸುವುದು ಹೆಚ್ಚು ಕ್ಷೇಮಕರ. ಹಾಗಲ್ಲದೆ ಅವರು ಆ ಮಾರ್ಗದಲ್ಲಿ ಮುಂದುವರಿಯುವುದಕ್ಕೆ ಅವಕಾಶಕೊಟ್ಟರೆ ನಾವು ಅವರಿಗೆ ಉಂಟುಮಾಡಬಹುದಾದ ಹಾನಿಗಿಂತಲೂ ಹೆಚ್ಚಾದ ಹಾನಿಯನ್ನು ಅವರು ತಮ್ಮ ಮೇಲೆ ತಂದುಕೊಳ್ಳುವರು. ಪ್ರಪಂಚದಲ್ಲಿ ಕಲಹವೂ ಕೊಲೆಯೂ ನಾಶವಾಗ ಬೇಕಾದರೆ ನಮ್ಮ ಕೈ ಪರಿಶುದ್ಧವಾಗಿ ನಾವು ಅಹಿಂಸಾಪರರಾಗಿದ್ದರೆ ಮಾತ್ರ ಸಾಲದು ; ಕಲಹವೂ, ಕೊಲೆಯೂ ಮಾನವ ವರ್ಗದಲ್ಲೆ ನಿರ್ಮೂಲವಾಗಬೇಕು. ಇಂತಹ ಸ್ಥಿತಿಯಲ್ಲಿ ಸೋಮಾರಿತನ ಮತ್ತು ಜಡತ್ವದಿಂದ, ದುಷ್ಟತನವನ್ನು ಎದುರಿಸಲು ಇಷ್ಟವಿಲ್ಲದೆ ಅಥವಾ ಶಕ್ತಿಯಿಲ್ಲದೆ ಸುಮ್ಮನೆ ಇದ್ದರೆ, ಈ ದುಷ್ಟತನವನ್ನು ನಿರ್ಮೂಲಮಾಡುವುದು ಸಾಧ್ಯವಿಲ್ಲ. ಜಡತ್ವ ಅಥವಾ ತಮಸ್ಸು ರಜಸ್ಸಿಗಿಂತಲೂ ಹೆಚ್ಚು ಹಾನಿಕರ ; ರಜಸ್ಸಾದರೊ ತಾನು ನಾಶಮಾಡುವುದಕ್ಕಿಂತ ಹೆಚ್ಚಾಗಿ ಸೃಷ್ಟಿಸುತ್ತದೆ. ಆದುದರಿಂದ ವ್ಯಕ್ತಿಯ ದೃಷ್ಟಿಯಿಂದ ನೋಡಿದರೆ ಮನುಷ್ಯನು ಹೋರಾಟದಿಂದಲೂ ರಕ್ತಪಾತದಿಂದಲೂ ಹಿಮ್ಮೆಟ್ಟಿದರೆ ಅವನ ಧರ್ಮಬುದ್ಧಿಗೆ ತೃಪ್ತಿಯಾಗುವುದೆ ಹೊರತು ಕೊಲೆಪಾತಕನು ನಿರಾತಂಕವಾಗಿ ವರ್ತಿಸುತ್ತಾನೆ.

ಈ ನಿಯಮವನ್ನು ಮೀರಲು ಅಸಾಧ್ಯ. ಮತ್ತು ಇದು ಎದುರಿಸಲಾರದ ಶಕ್ತಿಯಿಂದ ಪ್ರಪಂಚದಲ್ಲಿ ಎಲ್ಲೆಲ್ಲಿಯೂ ಯಾವಾಗಲೂ ಕಾಣಿಸಿಕೊಳ್ಳುತ್ತದೆಂಬುದು

ಮಾನವನ ಇಡೀ ಇತಿಹಾಸದಿಂದ ತಿಳಿದುಬರುತ್ತದೆ. ಇದನ್ನೆ ನೋಡುವುದಕ್ಕೆ ಇಷ್ಟಪಡದೆ ಕಣ್ಣುಮುಚ್ಚಿಕೊಂಡು ಇತರ ಅಂಶಗಳಿಗೆ ನಾವು ಹೆಚ್ಚು ಗಮನ ಕೊಡುವುದು ಸಹಜವಾಗಿ ಕಾಣಬಹುದು. ಏತಕ್ಕೆಂದರೆ ಹೋರಾಟ ಮತ್ತು ವಿನಾಶವೆ ಸರ್ವವೂ ಅಲ್ಲ; ಬೇರ್ಪಡುವುದು ಮತ್ತು ಪರಸ್ಪರ ಕಲಹವಾಡುವುದು, ಇವುಗಳ ಜೊತೆಗೆ ಪರಸ್ಪರ ಸಹಾಯ ಮತ್ತು ಸಹಕಾರವೆಂಬ ಕ್ಷೇಮಕರವಾದ ನಿಯಮವೂ ಪ್ರಪಂಚದಲ್ಲಿ ಕಂಡುಬರುತ್ತದೆ. ಅಹಂಭಾವದಿಂದ ಪ್ರೇರಿತವಾದ ಹಠಸಾಧನೆಯ ಜೊತೆಗೆ ಅಹಂಭಾವರಹಿತವಾದ ಪ್ರೇಮವೂ ಕಂಡುಬರುತ್ತದೆ. ನಮಗಾಗಿ ಇತರರನ್ನು ಬಲಿಕೊಡುವಂತೆ ಇತರರಿಗಾಗಿ ತನ್ನನ್ನು ಬಲಿಕೊಡುವ ನಿದರ್ಶಗಳೂ ಇವೆ. ಇವುಗಳ ಪ್ರಭಾವವನ್ನು ಒಪ್ಪಿಕೊಂಡರೂ ಇವುಗಳ ವಿರುದ್ಧ ಭಾವಗಳ ಪ್ರಭಾವವನ್ನು ಉಪೇಕ್ಷಿಸುವುದೂ ಅಲ್ಲಗಳೆಯುವುದೂ ಸಾಧುವಲ್ಲ. ಮನುಷ್ಯರು ಇತರರೊಡನೆ ಸ್ನೇಹವನ್ನು ಬೆಳೆಸುವುದು ಪರಸ್ಪರ ಸಹಾಯಕ್ಕೆ ಮಾತ್ರವೆ ಅಲ್ಲ; ಜೀವನದ ಹೋರಾಟದಲ್ಲಿ ನಮ್ಮ ಮೇಲೆ ಬೀಳುವವರನ್ನು ಎದಿರಿಸುವುದಕ್ಕೆ ಮಾತ್ರವೆ ಅಲ್ಲ; ಇತರರ ಮೇಲೆ ಬೀಳುವುದಕ್ಕೂ ಆತ್ಮರಕ್ಷಣೆಗೂ ಗೆಳೆತನವನ್ನು ಬೆಳೆಸುತ್ತಾರೆ. ಸ್ನೇಹವನ್ನು ಬೆಳೆಸುವುದು ಯುದ್ಧಕ್ಕೂ, ಆತ್ಮ ಪ್ರತಿಷ್ಠೆಗೂ ಮತ್ತು ನಮ್ಮ ಜೀವಕ್ಕಾಗಿ ಇತರ ಜೀವಗಳನ್ನು ಬಲಿಕೊಡುವುದಕ್ಕೂ ಉಪಕರಣವಾಗಿದೆ. ಪ್ರೇಮವೂ ಕೂಡ ಸಾವಿಗೆ ಅನೇಕ ವೇಳೆ ಕಾರಣವಾಗಿದೆ. ಅದರಲ್ಲೂ ಮನುಷ್ಯನಿಗಿರುವ ಧರ್ಮದಲ್ಲಿ ಆಸಕ್ತಿ ಮತ್ತು ದೈವಭಕ್ತಿಗಳು ಬಹಳವಾಗಿ ಯುದ್ಧ, ಕೊಲೆ ಮತ್ತು ನಾಶಗಳಿಗೆ ಕಾರಣಗಳಾಗಿವೆ. ಆತ್ಮಬಲಿದಾನವೇನೊ ಬಹಳ ಉತ್ಕೃಷ್ಟವಾದುದು ಮತ್ತು ಶ್ರೇಷ್ಠವಾದುದು: ನಿಜ. ಆದರೆ ಅದರಿಂದ ಸ್ಪಷ್ಟವಾಗುವ ಅಂಶವು ಯಾವುದು? ಉತ್ತಮ ನಿದರ್ಶನಗಳನ್ನು ವಿಮರ್ಶೆ ಮಾಡೋಣ. ಇನ್ನೊಬ್ಬನು ಬಾಳಲೆಂದು, ಬದುಕಲೆಂದು ನಾವು ನಮ್ಮ ಜೀವನ ವನ್ನು ಅರ್ಪಿಸುತ್ತೇವೆ. ಇದರಿಂದ ಬದುಕೇ ಸಾವಿಗಿಂತ ಶ್ರೇಷ್ಠವಾದುದೆಂಬ ನಿಯಮವನ್ನು ಒಪ್ಪಿದಂತಾಯಿತು, ಉದ್ದೇಶಿಸಿದ ಕಾರ್ಯಸಿದ್ಧಿಗಾಗಿ ಅರ್ಪಿಸಿದ ಬಲಿಯಾಗುತ್ತದೆ. ತನ್ನ ಮರಿಯನ್ನು ಕಾಪಾಡುವುದಕ್ಕಾಗಿ ಶತ್ರುಪ್ರಾಣಿಯನ್ನು ಎದುರಿಸುವ ತಾಯಿಪಕ್ಷಿ, ದೇಶದ ಸ್ವಾತಂತ್ರ್ಯಕ್ಕಾಗಿ ಪ್ರಾಣತೆರುವ ದೇಶಭಕ್ತ, ಧರ್ಮ ಅಥವಾ ತತ್ತ್ವಕ್ಕಾಗಿ ಪ್ರಾಣತ್ಯಾಗಮಾಡುವ ಮಹಾತ್ಮ—ಇವರೆಲ್ಲರೂ ಜೀವಗಳ ನಾನಾಮಟ್ಟಗಳಲ್ಲಿ ಆತ್ಮಾರ್ಪಣೆಗೆ ಉತ್ತಮ ನಿದರ್ಶನಗಳಾಗಿದ್ದುಕೊಂಡು ಮೇಲಿನ ನಿಯಮಕ್ಕೆ ಉದಾಹರಣೆಗಳಾಗಿದ್ದಾರೆ.

ಇವುಗಳ ಪರಿಣಾಮವನ್ನು ನೋಡಿದರೆ ಬಾಹುಬಲಕ್ಕಿಂತ ಆತ್ಮಶಕ್ತಿಯೆ ಲೇಸೆಂಬ ಅಭಿಪ್ರಾಯಕ್ಕೆ ಆಧಾರವು ಇನ್ನೂ ಕುಸಿದುಹೋಗುವುದು ದೇಶದ ಸ್ವಾತಂತ್ರ್ಯಕ್ಕಾಗಿ ದೇಶಭಕ್ತನು ತನ್ನ ಪ್ರಾಣವನ್ನು ಅರ್ಪಿಸಿದನಷ್ಟೆ. ಈ ಕಷ್ಟ ಸಂತಾಪಗಳಿಗೆ ಅನುಗುಣವಾದ ಪ್ರತಿಫಲವನ್ನು ಕರ್ಮದೇವತೆಯು ಆ ದೇಶಕ್ಕೆ ಸಲ್ಲಿಸಿದ ಹತ್ತಾರುವರ್ಷಗಳನಂತರ ಆ ದೇಶದ ಸ್ಥಿತಿಯು ಹೇಗಿರುವುದೆಂಬುದನ್ನು ನೋಡಿದರೆ, ಅದೇ ದೇಶದವರೆ ಇತರರಮೇಲೆ ಬಿದ್ದು, ಅವರಿಗೆ ಹಿಂಸೆ ಕೊಟ್ಟು ಸೋಲಿಸಿ, ಅವರನ್ನು ಅಡಿಯಾಳಾಗಿ ಮಾಡಿಕೊಂಡು, ಅವರ ಸುಲಿಗೆಯಿಂದ ತಾವು ವೈಭವದಿಂದ ಮೆರೆಯುವುದು ಕಂಡುಬರುತ್ತದೆ. ಕ್ರೈಸ್ತಮತದ ಭಕ್ತರು, ಸಾವಿರಗಟ್ಲೆ, ತಮ್ಮ ಮತಕ್ಕಾಗಿ ಪ್ರಾಣವನ್ನು ಆರ್ಪಿಸಿದರು. ಕ್ರೈಸ್ತಮತದ ಉದ್ಧಾರಕ್ಕಾಗಿ, ಕ್ರಿಸ್ತನ ಹಿರಿಮೆಗಾಗಿ ರಾಜನ ಬಲವನ್ನು ಆತ್ಮಶಕ್ತಿಯಿಂದ ಎದುರಿಸಿದರು. ಆತ್ಮಶಕ್ತಿಯು ಗೆದ್ದಿತು; ಕ್ರೈಸ್ತಮತವು ಊರ್ಜಿತವಾಯಿತು. ಆದರೆ ಕ್ರಿಸ್ತನು ಗೆಲ್ಲಲಿಲ್ಲ. ಕ್ರಿಸ್ತಧರ್ಮವು ಇತರರ ಮೇಲೆ ಬಿದ್ದು ದಬ್ಬಾಳಿಕೆಯಿಂದ ಅಧಿಕಾರ ನಡೆಸುವ ಮತವಾಯಿತು. ಹಿಂದೆ ಅಧಿಕಾರದಲ್ಲಿದ್ದು ತನ್ನನ್ನು ಹಿಂಸಿಸಿದ ಚಕ್ರಾಧಿಪತ್ಯಕ್ಕಿಂತಲೂ ಹೆಚ್ಚು ಅಸಹನೆಯಿಂದ ಇತರರ ಮೇಲೆ ಬಿದ್ದು, ಅವರನ್ನು ಹಿಂಸಿಸುವ ಮತವಾಗಿ ಪರಿಣಮಿಸಿತು. ಹೀಗೆ ಶಾಂತಿ ಸ್ಥಾಪನೆಗೆ ಹುಟ್ಟಿದ ಮತಗಳೆ ಪರಸ್ಪರ ಕಾದಾಡುವ ಪಕ್ಷಗಳಾಗಿ ರೂಪಾಂತರಗೊಂಡು ಹೋರಾಟ ಮತ್ತು ಹಿಂಸೆಗಳಿಂದಲೆ ಬಾಳಿ, ಬೆಳೆದು, ಪ್ರಪಂಚವನ್ನು ವಶಮಾಡಿಕೊಂಡಿವೆ.

ಇದರಿಂದ ನಾವು ತಿಳಿದುಕೊಳ್ಳಬೇಕಾದ ವಿಷಯವಿದು: ನಮ್ಮ ಅಧೀನಕ್ಕೆ ಸಿಕ್ಕಿಲ್ಲದ ನೈಸರ್ಗಿಕವಾದ ಒಂದು ಶಕ್ತಿಯು ಹೀಗೆ ಕೆಲಸಮಾಡುತ್ತಿದೆ. ಇದಕ್ಕೆ ಕಾರಣವೇನೆಂದರೆ ಆ ಶಕ್ತಿಯ ಸ್ವರೂಪವು ನಮಗೆ ತಿಳಿಯುವ ಹಾಗಿಲ್ಲ; ಅಥವಾ ತಿಳಿಯುವಂತಹದಾದರೂ, ನಾವು ನಿಷ್ಪಕ್ಷಪಾತವಾದ ಸ್ಥಿರದೃಷ್ಟಿಯಿಂದ ಶಾಂತಮನಸ್ಕರಾಗಿ ಈ ವಿಷಯವನ್ನು ತಿಳಿಯುವುದಕ್ಕೆ ಪ್ರಯತ್ನಪಟ್ಟಿಲ್ಲ. ನಮ್ಮ ಸಮಸ್ಯೆಯು ಪರಿಹಾರವಾಗಬೇಕಾದರೆ, ಪರಿಹಾರವು ಎಂತಹುದಾದರೂ ಆಗಲಿ, ಜೀವನವನ್ನು ಪೂರ್ಣದೃಷ್ಟಿಯಿಂದ ಕಣ್ಣುಬಿಟ್ಟು ನೋಡಬೇಕು. ಎಂದರೆ ಈಶ್ವರನ ನಿಜಸ್ವರೂಪವನ್ನು ನಿಶ್ಚಲದೃಷ್ಟಿಯಿಂದ ಅರಸಬೇಕು. ಏತಕ್ಕೆಂದರೆ ಇವೆರಡನ್ನೂ ಬೇರ್ಪಡಿಸಲಾಗುವುದಿಲ್ಲ. ಪ್ರಪಂಚವನ್ನು ಸೃಷ್ಟಿಸಿರುವ ಈಶ್ವರನನ್ನು ಅವನ ನಿಯಮಕ್ಕನುಸಾರವಾಗಿ ನಡೆಯುವ ಜೀವನದಿಂದ ಬೇರೆಮಾಡಲಾಗುವುದಿಲ್ಲ. ಆದರೂ ಈ ವಿಷಯದಲ್ಲಿಯೂ ಕೂಡ ಮುಚ್ಚುಮರೆಮಾಡಿ ಸಂದಿಗ್ಧವಾಗಿ ಮಾತನಾಡುವುದೆ ನಮಗೆ ಬೇಕಾಗಿದೆ.

ನಾವು ಯಾವುದನ್ನು ನ್ಯಾಯ, ಧರ್ಮ ಮತ್ತು ಸದ್ಗುಣಗಳೆಂದು ಭಾವಿಸುತ್ತೇವೆಯೊ ಅದಕ್ಕನುಸಾರವಾಗಿ ನ್ಯಾಯಮೂರ್ತಿಯೂ ಧರ್ಮಮೂರ್ತಿಯೂ ಸದ್ಗುಣಪರಿಪೂರ್ಣನೂ ದಯಾಮಯನೂ ಆದ ಈಶ್ವರನನ್ನು ನಾವು ನಿರ್ಮಾಣ ಮಾಡಿಕೊಂಡು, ಇದಕ್ಕೆ ವಿರುದ್ಧವಾದುದಕ್ಕೆ ಅವನು ಕಾರಣನಲ್ಲವೆಂದೂ, ಒಂದು ಆಸುರ ಶಕ್ತಿಯೆ ಕಾರಣವೆಂದೂ, ಅಥವಾ ಈಶ್ವರನಿಂದ ಸೃಷ್ಟಿಸಲ್ಪಟ್ಟ ದೋಷರಹಿತವಾದ ಪ್ರಪಂಚದಲ್ಲಿ ದೋಷಗಳು ಕಂಡುಬರುವುದಕ್ಕೆ ಸ್ವಾರ್ಥಿಯೂ ಪಾಪಿಯೂ ಆದ ಮನುಷ್ಯನೆ ಕಾರಣನೆಂದೂ ಹೇಳುತ್ತೇವೆ. ಪ್ರಾಣಿಗಳು ಇತರ ಪ್ರಾಣಿಗಳನ್ನು ಕೊಂದು, ಅವನ್ನು ತಿಂದು ಶರೀರಪೋಷಣೆಮಾಡುವ ನಿಯಮವನ್ನೂ, ಮತ್ತು ಜಗತ್ತಿನಲ್ಲಿ ಎಲ್ಲವನ್ನೂ ಸೃಷ್ಟಿಸಿ ಕಾಪಾಡುವಾಗಲೆ ಸಂಹಾರಮಾಡುವ ಪ್ರಕೃತಿಯ ಅಗಾಧ ವ್ಯಾಪಾರವನ್ನೂ ಮನುಷ್ಯನೆ ಕಲ್ಪಿಸಿದನೆಂದು ಯಾರಾದರು ನಂಬಲು ಸಾಧ್ಯವೆ?

ಸಂಹಾರವನ್ನು ಮಾಡುವ ಶಕ್ತಿಯು ಸೃಷ್ಟಿಸ್ಥಿತಿಗಳನ್ನು ಮಾಡುವ ಶಕ್ತಿಯೆ ಎಂದೂ, ಇವೆಲ್ಲವೂ ಒಂದೆ ಈಶ್ವರನ ಮೂರು ಮುಖಗಳೆಂದೂ ಧೈರ್ಯದಿಂದ ಸಾರುವ ಮತಗಳು ಪ್ರಪಂಚದಲ್ಲಿ ಅತಿ ವಿರಳ. ಅಂತಹವುಗಳಲ್ಲಿ ಹಿಂದೂಮತವು ಒಂದು. ಈ ಮತವು ಪಾರ್ವತೀರೂಪದಲ್ಲಿ ಜಗತ್ತಿಗೆ ಕಲ್ಯಾಣವನ್ನುಂಟುಮಾಡುವ ಶಕ್ತಿಯೆ ರಕ್ತಮಯವಾದ ಮೃತ್ಯುಮಂಟಪದಲ್ಲಿ ತಾಂಡವವಾಡುವ ಉಗ್ರಕಾಳಿಯೆಂದೂ ಹೇಳುತ್ತಾ "ಈ ಶಕ್ತಿಯೂ ಜಗನ್ಮಾತೆ, ಇದನ್ನೂ ಪೂಜಿಸು" ಎಂದು ಉಪದೇಶಿಸುತ್ತದೆ. ಹೀಗೆ ಸತ್ಯವನ್ನು ಮರೆಮಾಡದೆ ನಿರ್ಭಯವಾಗಿ ಸಾರಿದ ಈ ಮತವೆ ಪ್ರಪಂಚದಲ್ಲಿ ಉಳಿದ ಮತಗಳಿಗಿಂತಲೂ ಹೆಚ್ಚಾಗಿ ಅಗಾಧವಾದ ಮತ್ತು ವ್ಯಾಪಕವಾದ ಅಧ್ಯಾತ್ಮಜ್ಞಾನವನ್ನು ಹರಡಿದೆಯೆಂಬುದು ಗಮನಾರ್ಹವಾದ ವಿಷಯ. ನಿಜವಾದ ಅಧ್ಯಾತ್ಮ ಜ್ಞಾನಕ್ಕೆ ಸತ್ಯವೆ ತಳಹದಿ, ಧೈರ್ಯವೇ ಜೀವ. ತಸ್ಯೈ ಸತ್ಯಂ ಆಯತನಂ.

ಎಂದರೆ ಹೋರಾಟವೂ ಕೊಲೆಯೂ ಜೀವನದ ಸರ್ವಸ್ವವೆಂದು ತಾತ್ಪರ್ಯವಲ್ಲ. ಬಾಹುಬಲಕ್ಕೆ ಬದಲಾಗಿ ಆತ್ಮಶಕ್ತಿಯನ್ನೂ ಯುದ್ಧಕ್ಕೆ ಬದಲು ಶಾಂತಿಯನ್ನೂ, ಹೋರಾಟಕ್ಕೆ ಬದಲು ಸ್ನೇಹವನ್ನೂ, ಕ್ರೌರ್ಯಕ್ಕೆ ಬದಲು ಪ್ರೇಮವನ್ನೂ, ಸ್ವಾರ್ಥತೆಗೆ ಬದಲು ಲೋಕಹಿತವನ್ನೂ, ಮೃತ್ಯುವಿಗೆ ಬದಲು ಅಮರ ಜೀವನವನ್ನೂ ಪುರಸ್ಕರಿಸಬಾರದೆಂದಲ್ಲ; ಸ್ನೇಹಕ್ಕಿಂತ ಯುದ್ಧವು ಲೇಸಲ್ಲ. ಭಗವತ್ಸ್ವರೂಪವು ಕೊಲೆಗಿಂತ ಪ್ರೇಮದಲ್ಲೆ ಹೆಚ್ಚಾಗಿ ವ್ಯಕ್ತವಾಗುತ್ತದೆ. ಈಶ್ವರನು ಸಂಹಾರಕರ್ತೃ

ಮಾತ್ರವಲ್ಲ, ಎಲ್ಲರ ಮಿತ್ರನೂ ಆಗಿರುವನು; ತ್ರಿಮೂರ್ತಿಸ್ವರೂಪನು ಮಾತ್ರವಲ್ಲ, ಅವರಿಗೆ ಅತೀತನೂ ಹೌದು. ಉಗ್ರರೂಪದ ಕಾಳಿಯು ವಾತ್ಸಲ್ಯಮಯಳಾದ ಜಗನ್ಮಾತೆಯೂ ಆಗಿದ್ದಾಳೆ; ಕುರುಕ್ಷೇತ್ರದ ಯುದ್ಧದ ನಿಯಾಮಕನು ಮತ್ತು ಅರ್ಜುನನ ಸಾರಥಿಯು ಸಖನು, ಈಶ್ವರನ ಜಗತ್ತನ್ನೆಲ್ಲ ತನ್ನ ಕಡೆ ಸೆಳೆಯುವ ಅವತಾರಪುರುಷನಾಗಿದ್ದನು. ಈ ಎಲ್ಲ ದ್ರೋಹ, ಘರ್ಷಣೆ ಗಲಿಬಿಲಿಯ ಮಧ್ಯದಲ್ಲಿ ಆವನು ನಮ್ಮನ್ನು ಎಲ್ಲಿಗೆ ಸೆಳೆಯುತ್ತಿರುವನೊ, ಯಾವ ಲಕ್ಷ್ಯದ ಕಡೆಗೆ, ದಿವ್ಯಸ್ಥಿತಿಗೆ ಆಕರ್ಷಿಸುತ್ತಿರುವನೊ ಆ ಸ್ಥಿತಿಯು, ಹಿಂದೆ ಒತ್ತಿ ಹೇಳಿರುವಂತೆ ಈ ಕಲಹ, ಘರ್ಷಣೆ ಮುಂತಾದವುಗಳಿಗೆ ಅತೀತವಾದುದೆಂಬುದರಲ್ಲಿ ಯಾವ ಸಂದೇಹವೂ ಇಲ್ಲ. ಈ ಸ್ಥಿತಿಯು ಎಲ್ಲಿದೆ, ಎಂತಹದು, ಇದರ ಸ್ವರೂಪ ಮತ್ತು ನಿಯಮಗಳೇನು, ಅದನ್ನು ಸಾಧಿಸುವುದು ಹೇಗೆ ಎಂಬುದನ್ನು ನಾವು ತಿಳಿಯಬೇಕಾಗಿದೆ. ಇದನ್ನು ಕಂಡು ಹಿಡಿಯಬೇಕಾದರೆ ಈ ಜಗತ್ತಿನ ನಿಜವಾದ ಸ್ವರೂಪವೇನೆಂಬುದನ್ನು ನಾವು ಮೊದಲು ತಿಳಿಯಬೇಕು; ಮತ್ತು ಪ್ರಾರಂಭದಿಂದ ಕೊನೆಯವರೆಗೂ ಈ ಅವತಾರ ಪುರುಷನ ಕಾರ್ಯವನ್ನು ಗಮನಿಸಿ ಅದರ ಮರ್ಮವನ್ನು ತಿಳಿಯಬೇಕು. ಹಾಗೆ ಮಾಡಿದರೆ ಲಕ್ಷ್ಯವೂ ಮತ್ತು ಅದನ್ನು ಸಾಧಿಸುವ ಮಾರ್ಗವೂ ಸ್ಪಷ್ಟವಾಗಿ ಗೋಚರವಾಗುವುವು. ನಾವು ಕುರುಕ್ಷೇತ್ರದ ತತ್ವವನ್ನು ಅಂಗೀಕರಿಸಬೇಕು; ಎಂದರೆ, ಅಮರತ್ವವನ್ನು ಸಾಧಿಸುವುದಕ್ಕೆ ಮುಂಚೆ ಜೀವನಕ್ಕೆ ಮೃತ್ಯುವೇ ದ್ವಾರವೆಂಬುದನ್ನು ಮನಗಾಣಬೇಕು. ಅರ್ಜುನನಷ್ಟು ಭೀತಿಪಡದೆ ನಾವು ಕಣ್ಣುಬಿಟ್ಟು ಕಾಲಪುರುಷನ ನಿಜರೂಪವನ್ನು ನೋಡಬೇಕು, ವಿಶ್ವದ ಸಂಹಾರಕರ್ತೃವನ್ನು ದ್ವೇಷಿಸದೆ, ಅವನಿಂದ ವಿಮುಖರಾಗದೆ ಅವನೂ ಈಶ್ವರನೆಂಬುದನ್ನು ಅರಿಯಬೇಕು.



# ಆರನೆಯ ಪ್ರಕರಣ

## ಮನುಷ್ಯ ಮತ್ತು ಜೀವನಸಂಗ್ರಾಮ

ಗೀತೋಪದೇಶವನ್ನು ಎಲ್ಲ ಸಂದರ್ಭಗಳಲ್ಲಿಯೂ ಅನ್ವಯಿಸಬಹುದೆಂಬು ದನ್ನು ನಾವು ತಿಳಿಯಬೇಕಾದರೆ ಪ್ರಪಂಚದಲ್ಲಿ ಪ್ರಕೃತಿಯ ವ್ಯಾಪಾರವನ್ನು ಕುರಿತು ನಿರ್ಭೀತಿಯಿಂದ ಮತ್ತು ಯಥಾವತ್ತಾಗಿ ಗೀತೆಯಲ್ಲಿ ಮಾಡಿರುವ ನಿರೂಪಣೆಯನ್ನು ಸಂಪೂರ್ಣವಾಗಿ ಸ್ವಲ್ಪವೂ ಹಿಂತೆಗೆಯದೆ ಒಪ್ಪಿಕೊಳ್ಳ ಬೇಕು. ಕುರುಕ್ಷೇತ್ರಯುದ್ಧದಲ್ಲಿ ಸಾರಥಿಯಾದ ಶ್ರೀಕೃಷ್ಣನು ಒಂದುಕಡೆ ಸರ್ವಲೋಕೇಶ್ವರನೂ, ಎಲ್ಲವನ್ನೂ ತಿಳಿದ ಸರ್ವಭೂತ ಸಖನಂತೆಯೂ, ಇನ್ನೊಂದುಕಡೆ ಎಲ್ಲರ ಸಂಹಾರಕ್ಕಾಗಿಯೆ ಬಂದಿರುವ ಕಾಲಪುರುಷನಂತೆಯೂ ಕಾಣುತ್ತಾನೆ. ಸರ್ವಸಮ್ಮತವಾದ ಆರ್ಯಧರ್ಮಕ್ಕೆ ತಕ್ಕಂತೆ ಗೀತೆಯು ಈ ಕಾಲಪುರುಷನನ್ನು ಈಶ್ವರನೆಂದು ಹೇಳುತ್ತದೆ. ಜೀವನದ ಸಮಸ್ಯೆಯನ್ನು ಎದುರಿಸುವುದಕ್ಕೆ ಹಿಮ್ಮೆಟ್ಟಿ ಅಡ್ಡದಾರಿಯನ್ನು ಹಿಡಿದು ತಪ್ಪಿಸಿಕೊಳ್ಳಲು ಇದು ಪ್ರಯತ್ನಪಡುವುದಿಲ್ಲ. ಸಂಸಾರವು ಕೇವಲ ಚೇತನರಹಿತವಾದ ಪಾಶವೀ ಶಕ್ತಿಯ ಯಾಂತ್ರಿಕ ಸೃಷ್ಟಿಯಲ್ಲ; ಅಸತ್ತೇ ಮೂಲವಾಗಿ ಉಳ್ಳ ಸಂಕಲ್ಪಗಳ ಮತ್ತು ಶಕ್ತಿಗಳ ಪರಸ್ಪರ ಕ್ರಿಯೆ ಪ್ರತಿಕ್ರಿಯೆಯೂ ಅಲ್ಲ; ನಿಷ್ಕ್ರಿಯನಾದ ಪುರುಷನಲ್ಲಿ ಉಂಟಾಗುವ ಪ್ರತಿಬಿಂಬವಲ್ಲ; ಉದಾಸೀನವಾದ, ಅಕ್ಷರವಾದ, ಅವ್ಯಕ್ತದ ಪ್ರಜ್ಞೆಯ ಹೊರವಲಯದಲ್ಲಿ ಉಂಟಾಗಿ ಅದಕ್ಕೆ ಸಂಬಧಿಸಿದೆ ಅದರಲ್ಲಿ ಯಾವ ವಿಕಾರವನ್ನೂ ಉಂಟುಮಾಡದಿರುವ ಸ್ವಪ್ನವಲ್ಲ. ಇದನ್ನು ನಾವು ತಿಳಿದುಕೊಳ್ಳಬೇಕು. ಮತ್ತು ಗೀತೆಯಲ್ಲಿ ಹೇಳಿರುವಂತೆ ಈಶ್ವರಸಿದ್ಧಾನೆಂದೂ, ಎಂದರೆ ಸರ್ವಶಕ್ತನೂ, ಸರ್ವಜ್ಞನೂ ಸರ್ವವ್ಯಾಪಿಯೂ ಆಗಿದ್ದು ಎಲ್ಲಕ್ಕೂ ಅತೀತನಾದ ಒಬ್ಬ ಪುರುಷನು ಇದ್ದಾನೆಂದೂ; ಅವನು ಪ್ರಪಂಚವನ್ನು ಸೃಷ್ಟಿಸಿ ಅದರಲ್ಲಿ ತಾನು ವ್ಯಕ್ತನಾಗಿದ್ದರೂ, ತನ್ನ ಮಾಯೆ, ಪ್ರಕೃತಿ ಅಥವಾ ಶಕ್ತಿಗೆ ಅಧೀನನಾಗದೆ ಅದನ್ನು ತನ್ನ ವಶದಲ್ಲಿಟ್ಟುಕೊಂಡಿದ್ದಾ ನೆಂದೂ; ಇವನ ಸಂಕಲ್ಪಕ್ಕೆ ಇವನಿಂದ ಸೃಷ್ಟಿಸಲ್ಪಟ್ಟ ಜಂತುಗಳಿಂದಲಾಗಲಿ, ಮನುಷ್ಯರಿಂದಾಗಲಿ, ಅಸುರರಿಂದಾಗಲಿ, ಭಂಗ ಬರುವುದಿಲ್ಲವೆಂದೂ; ಇವನು ಸೃಷ್ಟಿಸಿದ ಪ್ರಪಂಚದಲ್ಲಿ ಯಾವ ವಿಷಯಕ್ಕಾಗಲಿ ಇವನು ಹೊಣೆಯನ್ನು ಬೇರೊ ಬ್ಬರ ಮೇಲೆ ಹಾಕಬೇಕಾದ ಆವಶ್ಯಕತೆಯಿಲ್ಲವೆಂದೂ ಒಪ್ಪಬೇಕು. ಈರೀತಿ ಸಂಸಾ ರದ ಸ್ವರೂಪದ ವಿಚಾರವಾಗಿ ಮೇಲೆ ಹೇಳಿರುವುದನ್ನು ತಿಳಿದುಕೊಂಡು, ಈಶ್ವರನು

ಸರ್ವಶಕ್ತನೆಂದು ಒಪ್ಪಿಕೊಂಡರೆ ನಾವು ಪ್ರಾರಂಭದಲ್ಲೇ ಮಹತ್ತರವಾದ ಶ್ರದ್ಧೆಯನ್ನೂ ನಂಬಿಕೆಯನ್ನೂ ತೋರ್ಪಡಿಸಿಕೊಂಡಂತಾಗುತ್ತದೆ.

ಮನುಷ್ಯನು ಜೀವಿಸುತ್ತಿರುವ ಈ ಪ್ರಪಂಚವು ಪರಸ್ಪರ ವಿರುದ್ಧವಾದ, ಮಹತ್ತರವಾದ ಮತ್ತು ಅಜ್ಞಾತವಾದ ಶಕ್ತಿಗಳ ಹೋರಾಟಕ್ಕೆ ರಂಗಸ್ಥಳವಾಗಿದ್ದು ಅವ್ಯವಸ್ಥೆಯಿಂದ ತುಂಬಿರುವುದು. ಅವನ ಜೀವನವು ಸಂತತವಾಗಿ ಬದಲಾವಣೆ ಮತ್ತು ಮರಣದಿಂದಲೆ ಮುಂದಕ್ಕೆ ನಾಗುವುದು ; ಯಾತನೆ, ದುಃಖ, ಕ್ಲೇಶ ಮತ್ತು ನಾಶಗಳಿಂದ ಪೀಡಿತವಾಗಿರುವುದು. ಇವೆಲ್ಲದರಲ್ಲೂ ಸರ್ವವ್ಯಾಪಿಯಾದ ಈಶ್ವರನಿದ್ದಾನೆಂದು ನಾವು ತಿಳಿಯಬೇಕು. ಈ ಒಗಟಿಗೆ ಉತ್ತರವಿದೆಯೆಂದೂ, ಈ ಅಜ್ಞಾನದ ಆಚೆ ಎಲ್ಲವನ್ನೂ ಸಮನ್ವಯಗೊಳಿಸುವ ಜ್ಞಾನವಿದೆಯೆಂದೂ ತಿಳಿಯಬೇಕು. ಹೀಗೆ ತಿಳಿದುಕೊಂಡು, "ನೀನು ನನ್ನನ್ನು ಕೊಂದರೂ ಕೂಡ ನಾನು ನಿನ್ನನ್ನು ನಂಬುತ್ತೇನೆ" ಎಂದು ಈಶ್ವರನಲ್ಲಿ ಅಚಲವಾದ ಶ್ರದ್ಧೆಯನ್ನಿಡಬೇಕು. ಕಾರ್ಯಶೀಲವಾದ ನಿಷೇಧಾತ್ಮಕವಲ್ಲದ ಎಲ್ಲ ಅಭಿಪ್ರಾಯಗಳಲ್ಲಿಯೂ ಅಥವಾ ಮತಗಳಲ್ಲಿಯೂ—ಅದು ಆಸ್ತಿಕ ಮತವಾಗಲಿ, ನಾಸ್ತಿಕವಾದದ್ದಾಗಲಿ, ವಿಶ್ವವೆ ದೇವರೆಂಬ ವಾದವಾಗಲಿ, ಎಲ್ಲದರಲ್ಲಿಯೂ—ಈ ವಿಧವಾದ ನಂಬಿಕೆ ಮತ್ತು ಶ್ರದ್ಧೆಯು ಇದ್ದೇ ಇದೆ. ಪ್ರಪಂಚದಲ್ಲಿ ವಿರಸ ವೈಷಮ್ಯಗಳಿವೆಯೆಂಬುದನ್ನು ಈ ಎಲ್ಲ ಮತಗಳೂ ಒಪ್ಪುತ್ತವೆ. ಮತ್ತು ಈ ವಿರಸ ವೈಷಮ್ಯಗಳನ್ನು ಹೋಗಲಾಡಿಸಿ, ಅತಿಕ್ರಮಿಸಿ ಸಮರಸವನ್ನುಂಟುಮಾಡುವ ಈಶ್ವರ, ಪರವಸ್ತು ಅಥವಾ ಪ್ರಕೃತಿಯೊಂದಿದೆಯೆಂದು ಎಲ್ಲ ಮತಗಳಲ್ಲೂ ನಂಬಿಕೆ ಕಂಡುಬರುತ್ತದೆ.

ಮನುಷ್ಯನ ಜೀವನವನ್ನು ನೋಡಿದರೆ, ಹೋರಾಟ ಮತ್ತು ಯುದ್ಧಗಳು—ಉತ್ಕಟಸ್ಥಿತಿಗೆ ಬಂದಾಗ ಕುರುಕ್ಷೇತ್ರದಂತಹ ಯುದ್ಧಗಳು—ನಡೆಯುವುದು ಕಂಡುಬರುತ್ತದೆ. ಹಿಂದೆ ಹೇಳಿದಂತೆ ಗೀತೆಯು ಪ್ರಪಂಚದಲ್ಲಿ ಆಗಾಗ ಸಂಭವಿಸುವ ಈ ವಿಧವಾದ ವಿಷಮಸನ್ನಿವೇಶವನ್ನು ಹಿನ್ನೆಲೆಯಾಗಿ ಹೊಂದಿದೆ. ಈ ವಿಧವಾದ ವಿಷಮಸನ್ನಿವೇಶದಲ್ಲಿ ಪ್ರಬಲವಾದ ಶಕ್ತಿಗಳಿಗೆ ಪರಸ್ಪರ ಘರ್ಷಣೆಯುಂಟಾಗಿ ಅಪಾರವಾದ ನಾಶವೂ ಮತ್ತೆ ಪುನರ್ನಿರ್ಮಾಣವೂ ಉಂಟಾಗುವುವು. ನಾಶ ಮತ್ತು ಪುನರ್ನಿರ್ಮಾಣವು ಮಾನಸಿಕವಾಗಿಯೂ, ಸಮಾಜ ಮತ್ತು ರಾಜಕೀಯ ಕ್ಷೇತ್ರಗಳಲ್ಲಿಯೂ, ಮತಧರ್ಮ ಮತ್ತು ಆಚಾರಗಳಲ್ಲಿಯೂ ಆಗುವುದು.

ಪ್ರಪಂಚದ ಬೆಳವಣಿಗೆಗೆ ಇಂತಹ ವಿಷಮ ಸನ್ನಿವೇಶಗಳು ಅವಶ್ಯಕವೆಂಬ ದೃಷ್ಟಿಯನ್ನು ಗೀತೆಯು ಪ್ರಾರಂಭದಿಂದಲೆ ಅನುಸರಿಸಿದೆ. ಕೇವಲ ಮಾನಸಿಕ

ಪ್ರಪಂಚದಲ್ಲಿ ಧರ್ಮಕ್ಕೂ ಅಧರ್ಮಕ್ಕೂ, ಧರ್ಮದಪರವಾದ ಶಕ್ತಿಗಳಿಗೂ ವಿರುದ್ಧವಾದ ಶಕ್ತಿಗಳಿಗೂ ನಡೆಯುವ ಘರ್ಷಣೆಗಳನ್ನು ಮಾತ್ರವಲ್ಲ; ಈ ಪರಸ್ಪರ ವಿರುದ್ಧ ಶಕ್ತಿಗಳಿಗೆ ಆಶ್ರಯವಾಗಿರುವ ಮನುಷ್ಯರಲ್ಲೂ ಹೋರಾಟಗಳು ನಡೆಯಲೆ ಬೇಕೆಂದು ಗೀತೆಯು ಹೇಳುತ್ತದೆ. ಗೀತೆಯನ್ನು ಉಪದೇಶಮಾಡಿದ ಕಾಲದಲ್ಲಿ ಯುದ್ಧವು ಪ್ರಪಂಚದ ಬೆಳವಣಿಗೆಗೆ ಈಗಿನ ಕಾಲಕ್ಕಿಂತಲೂ ಹೆಚ್ಚು ಅವಶ್ಯಕವಾಗಿತ್ತೆಂಬುದನ್ನು ನಾವು ಮರೆಯಬಾರದು. ಪ್ರಪಂಚದಲ್ಲಿ ಯುದ್ಧವಿಲ್ಲದಂತೆ ಮಾಡುವುದು ಆಗ ಸ್ವಪ್ನಸದೃಶವಾಗಿತ್ತು. ಬೈಬಲ್ಲಿನಲ್ಲಿ ಹೇಳಿರುವ ವಿಶ್ವಶಾಂತಿ ಮತ್ತು ಸರ್ವರಲ್ಲಿಯೂ ಸೌಮನಸ್ಯವು ನಮಗೆ ತಿಳಿದಂತೆ ಈ ಪ್ರಪಂಚದ ಇತಿಹಾಸದಲ್ಲಿ ಈವರೆಗೆ ಎಲ್ಲಿಯೂ ಕಾರ್ಯರಂಗಕ್ಕಿಳಿದಿಲ್ಲ. ಏತಕ್ಕೆಂದರೆ ಆಧ್ಯಾತ್ಮಿಕದೃಷ್ಟಿಯಿಂದ, ನೈತಿಕದೃಷ್ಟಿಯಿಂದ ಮತ್ತು ಸಾಮಾಜಿಕದೃಷ್ಟಿಯಿಂದಲು ಇಲ್ಲಿಯವರೆಗಿನ ಜನಾಂಗಗಳು ಇವುಗಳನ್ನು ಅನುಸರಿಸುವ ಮಟ್ಟಕ್ಕೆ ಬಂದಿರಲಿಲ್ಲ. ಅಲ್ಲದೆ ಪ್ರಪಂಚದ ಬೆಳವಣಿಗೆಯು ಕ್ರಮದಲ್ಲಿ ತತ್‌ಕ್ಷಣವೆ ಇಷ್ಟು ಮೇಲ್ಮಟ್ಟಕ್ಕೇರುವುದು ಸಾಧ್ಯವಿರಲಿಲ್ಲ. ಈಗಲೂ ಕೂಡ ವಿರುದ್ಧಶಕ್ತಿಗಳ ಹೋರಾಟವು ಘೋರ ಯುದ್ಧಗಳಾಗದಂತೆ ತಡೆಗಟ್ಟಲು ಪರಸ್ಪರ ಅನುಸರಿಸಿಕೊಂಡು ಹೋಗುವುದು ಸಾಧ್ಯವೆಂಬ ಸ್ಥಿತಿಗೆ ನಾವು ಬಂದಿರುವೆವೆ ಹೊರತು ಅಲ್ಲಿಂದ ಮುಂದಕ್ಕೆ ಹೋಗಿಲ್ಲ.

ಈ ಲಕ್ಷ್ಯದ ಸಾಧನೆಗೆ ಮನುಷ್ಯರು ಅನುಸರಿಸಿದ ಮಾರ್ಗವೇನೆಂದರೆ ಇದುವರೆಗೂ ಚರಿತ್ರೆಯಲ್ಲಿ ಕಂಡುಕೇಳದಿರುವ ಘೋರವಾದ ಯುದ್ಧ ಮತ್ತು ಕೊಲೆ. ವಿಶ್ವಶಾಂತಿಯನ್ನು ಸ್ಥಾಪಿಸಲು ಈಗಿನಕಾಲದ ಮನುಷ್ಯರಿಗೆ ತೋರಿರುವ ಸುಲಭವಾದ ಮತ್ತು ನೇರವಾದ ಉಪಾಯವೆಂದರೆ ದ್ವೇಷಬುದ್ಧಿಯಿಂದ ತುಂಬಿರುವ ವಿಶ್ವವ್ಯಾಪಕವಾದ ಮಹಾಸಂಗ್ರಾಮ. ವಿಶ್ವಶಾಂತಿಯನ್ನು ಸ್ಥಾಪಿಸಬೇಕೆಂಬ ಸಂಕಲ್ಪವೂ ಕೂಡ ಮನುಷ್ಯನ ಸ್ವಭಾವದಲ್ಲಾಗಿರುವ ಬದಲಾವಣೆಯಿಂದಲ್ಲ, ಸ್ವಾರ್ಥಪೂರ್ಣವಾದ ವ್ಯಾವಹಾರಿಕ ಕಾರಣಗಳಿಂದ ಮಾತ್ರ—ಎಂದರೆ, ಆರ್ಥಿಕಪರಿಸ್ಥಿತಿಯನ್ನು ಸುಧಾರಿಸುವುದಕ್ಕೋಸ್ಕರ ಮತ್ತು "ಅಯ್ಯೊ, ರಕ್ತಪಾತವಾಗುವುದಲ್ಲ; ಭೀಷಣವಾದ ಯುದ್ಧವಾಗುವುದಲ್ಲ; ಅದರಿಂದ ನಮಗೆ ಕಷ್ಟವಾಗುವುದಲ್ಲ" ಎಂಬ ಭಾವನೆಯಿಂದ ಮಾತ್ರ. ಕೇವಲ ರಾಜಕೀಯವಾದ ಅವಶ್ಯಕತೆಗಳೆ ಆಧಾರವಾಗಿ ಇರುವುದರಿಂದ ಈ ವಿಶ್ವಶಾಂತಿಯು ದೃಢವಾಗಿಯೂ ಚಿರಸ್ಥಾಯಿಯಾಗಿಯೂ ಇರಲಾರದು. ಮನುಷ್ಯವರ್ಗವು ಆಧ್ಯಾತ್ಮಿಕವಾಗಿ, ನೈತಿಕವಾಗಿ, ಸಾಮಾಜಿಕವಾಗಿ, ವಿಶ್ವಶಾಂತಿಗೆ ಅರ್ಹವಾಗುವ ಕಾಲವು ಎಂದಾದರೂ ಬರಬಹುದು; ಬರಬಹುದೇಕೆ,

ಬಂದೇ ಬರುವುದು. ಅಲ್ಲಿಯವರೆಗೆ ಯುದ್ಧವು ಅನಿವಾರ್ಯವೆಂಬುದನ್ನೂ, ಮನುಷ್ಯನು ಯುದ್ಧಮಾಡುವ ಸ್ವಭಾವವುಳ್ಳವನೆಂಬುದನ್ನೂ, ಅದರ ಪ್ರಯೋಜನವನ್ನೂ ಎಲ್ಲಾ ವ್ಯಾವಹಾರಿಕ ಮತಗಳೂ ಗಮನದಲ್ಲಿಟ್ಟಿರಬೇಕು. ಎಂದೊ ಮುಂದೆ ಆಗಬಹುದಾದ್ದ ಮಾರ್ಪಾಟನ್ನು ಬಿಟ್ಟು, ಈಗಿನ ಸ್ಥಿತಿಯನ್ನು ಮಾತ್ರ ಗಮನದಲ್ಲಿಟ್ಟುಕೊಂಡು ಗೀತೆಯು ಜೀವನದ ಈ ಅಂಶವನ್ನು—ಎಂದರೆ ಮನುಷ್ಯನ ಹೋರಾಡುವ ಸ್ವಭಾವವನ್ನೂ ಆಧ್ಯಾತ್ಮಿಕ ಜೀವನವನ್ನೂ ಸಮನ್ವಯಗೊಳಿಸುವುದು ಹೇಗೆ ಎಂಬ ವಿಷಯವನ್ನು—ವಿಚಾರಮಾಡಿದೆ.

ಆದುದರಿಂದ ಗೀತೆಯು ಯುದ್ಧಮಾಡಿ ಇತರರನ್ನು ರಕ್ಷಿಸುವುದೆ ಧರ್ಮವಾಗಿ ಉಳ್ಳ ಕ್ಷತ್ರಿಯನಿಗೆ ಉಪದೇಶಿಸಲ್ಪಟ್ಟಿದೆ. ಎಂದರೆ ಯುದ್ಧಮಾಡಕೂಡದೆಂದು ನಿಷೇಧಿಸಲ್ಪಟ್ಟ, ಆತ್ಮರಕ್ಷಣೆ ಮಾಡಿಕೊಳ್ಳಲಾಗದೆ ಧೂರ್ತರ ಮತ್ತು ದುಷ್ಟರ ಹಿಂಸೆಗೆ ಗುರಿಯಾದ, ಸಾಧುಜನರನ್ನು ರಕ್ಷಿಸುವುದೆ ಧರ್ಮವಾಗಿ ಉಳ್ಳ ಮತ್ತು ಒಂದು ಹೆಜ್ಜೆ ಮುಂದೆ ಹೋದರೆ, ದುಷ್ಟನಿಗ್ರಹ, ಶಿಷ್ಟರಕ್ಷಣೆ ಮತ್ತು ನ್ಯಾಯ ಧರ್ಮಗಳ ಪರಿಪಾಲನೆಗಾಗಿ ಬದ್ಧಕಂಕಣನಾದ ಕ್ಷತ್ರಿಯನಿಗೆ ಉಪದೇಶಿಸಲ್ಪಟ್ಟಿದೆ. ನಮ್ಮ ದೇಶದಲ್ಲಿ ಕ್ಷತ್ರಿಯನೆಂದರೆ ಮೇಲೆ ಹೇಳಿದವುಗಳೆಲ್ಲ ಕರ್ತವ್ಯವಾಗಿ ಉಳ್ಳವನೆಂದೆ ಅರ್ಥ. ಗೀತೆಯ ಮುಖ್ಯವಾದ ಉಪದೇಶಗಳು ಸಾರ್ವತ್ರಿಕವಾದರೂ, ಅದು ಭರತಖಂಡದಲ್ಲಿ ಉಪದೇಶಿಸಲ್ಪಟ್ಟಿತೆಂದೂ, ಇಲ್ಲಿನ ಸಂಸ್ಕೃತಿ ಮತ್ತು ಸಾಮಾಜಿಕ ಸ್ಥಿತಿಯನ್ನು ಗಮನದಲ್ಲಿಟ್ಟಿದೆಯೆಂದೂ ನಾವು ಮರೆಯಕೂಡದು. ಆಗಿನ ಸ್ಥಿತಿಯು ಈಗಿನ ಪರಿಸ್ಥಿತಿಯಂತಿರಲಿಲ್ಲ. ಈಗಿನ ಕಾಲದ ಅಭಿಪ್ರಾಯದಂತೆ ಪ್ರತಿ ಮನುಷ್ಯನೂ ಏಕಕಾಲದಲ್ಲಿ ಜ್ಞಾನಾರ್ಜನೆಯಲ್ಲಿ ತೊಡಗಿರುವವನೂ, ಶರೀರ ಶ್ರಮದಿಂದ ದುಡಿದು ಧನಾರ್ಜನೆ ಮಾಡುವವನೂ ಮತ್ತು ಯೋಧನೂ ಎಲ್ಲವೂ ಆಗಿರಬೇಕು. ಈಗಿನ ಸಮಾಜವು ಮನುಷ್ಯನ ಸಹಜ ಸ್ವಭಾವಕ್ಕೆ ಲಕ್ಷ್ಯಕೊಡದೆ, ಎಂದರೆ—ಅವನಿಗೆ ಜ್ಞಾನಾರ್ಜನೆಯಲ್ಲಿಯೊ, ಧನಾರ್ಜನೆಯಲ್ಲಿಯೊ, ಯುದ್ಧ ಮಾಡುವುದರಲ್ಲಿಯೊ ಅಥವಾ ಶರೀರದ ದುಡಿಮೆಯಲ್ಲಿಯೊ ಯಾವುದರಲ್ಲಿ ವಿಶೇಷ ಆಸಕ್ತಿಯಿದೆಯೆಂಬುದನ್ನು ಗಮನಿಸದೆ, ಪ್ರತಿ ಮನುಷ್ಯನಿಂದಲೂ ನಾಲ್ಕು ವಿಧದಲ್ಲಿಯೂ ಸೇವೆಯನ್ನು ನಿರೀಕ್ಷಿಸುತ್ತದೆ. ಪ್ರಾಚೀನಕಾಲದ ಭರತಖಂಡದ ಸಮಾಜವು ಮನುಷ್ಯನ ಈ ಸಹಜವಾದ ಸ್ವಭಾವ ಮತ್ತು ಪ್ರವೃತ್ತಿಗಳಿಗೆ ವಿಶೇಷವಾದ ಗಮನವನ್ನು ಕೊಟ್ಟು, ಅದರಿಂದ ಸಮಾಜದಲ್ಲಿ ಮನುಷ್ಯರಿಗೆ ಅವರ ಸ್ವಭಾವಕ್ಕನುಗುಣವಾದ ಸ್ಥಾನ ಮತ್ತು ಕರ್ತವ್ಯಗಳನ್ನು ನಿರ್ಣಯಿಸುತ್ತಿತ್ತು. ಮನುಷ್ಯನ

ಸಾಮಾಜಿಕ ಜೀವನವನ್ನು ಬಹಳ ಮುಖ್ಯವೆಂದಾಗಲಿ, ಇಂತಹ ಜೀವನದಲ್ಲಿ ಉನ್ನತವಮಟ್ಟವನ್ನು ಹೊಂದುವುದೆ ಪರಮಧ್ಯೇಯವೆಂದಾಗಲಿ ಭಾವಿಸಿರಲಿಲ್ಲ. ಮನುಷ್ಯನು ಬೆಳೆಯುತ್ತಿರುವ ಈಶ್ವರಾಂಶನೆಂದೂ, ಈ ಲೋಕದಲ್ಲಿ ಅವನ ಸಾಮಾಜಿಕ ಜೀವನ, ಧರ್ಮ, ಸ್ವಭಾವ ಮತ್ತು ಕರ್ಮಗಳೆಲ್ಲವೂ ಈ ಬೆಳವಣಿಗೆಗೆ ಸಾಧನಗಳು ಮಾತ್ರವೆಂದೂ ಭಾವಿಸಲಾಗಿತ್ತು. ಜ್ಞಾನಾರ್ಜನೆಯೂ, ಯುದ್ಧ ಮತ್ತು ರಾಜ್ಯಪರಿಪಾಲನೆಯೂ, ಕೃಷಿ ಮತ್ತು ವಾಣಿಜ್ಯವೂ, ದೇಹಶ್ರಮದಿಂದ ಜೀವನ ಮತ್ತು ಸೇವೆಯೂ ಪ್ರಯತ್ನಪೂರ್ವಕವಾಗಿ ವಿಂಗಡಿಸಲಾಗಿತ್ತು. ಪ್ರತಿಯೊಬ್ಬ ಮನುಷ್ಯನಿಗೂ ಅವನ ಸ್ವಭಾವಕ್ಕನುಗುಣವಾಗಿಯೂ ಈ ಮೇಲಿನ ನಾಲ್ಕರಲ್ಲಿ ಯಾವುದು ಆಯಾ ಮನುಷ್ಯನ ಬೆಳವಣಿಗೆಗೂ ಪರಿಪೂರ್ಣತೆಗೂ ಉತ್ತಮವಾದ ಸಾಧನವಾಗುತ್ತಿತ್ತೋ ಆ ಮಾರ್ಗವು ವಿಧಿಸಲ್ಪಡುತ್ತಿತ್ತು.

ಮನುಷ್ಯನು ಪ್ರಾಪಂಚಿಕ ಜೀವನದಲ್ಲಿ ಎಲ್ಲ ಬಗೆಯ ಕೆಲಸಕಾರ್ಯಗಳನ್ನು ಮಾಡಬೇಕೆಂಬ ಈಗಿನ ಕಾಲದ ಅಭಿಪ್ರಾಯದಲ್ಲೂ ಒಂದು ವಿಧವಾದ ಪ್ರಯೋಜನವುಂಟು. ಸಮಾಜದಲ್ಲಿ ಒಗ್ಗಟ್ಟನ್ನೂ, ಸಂಘಟನೆಯನ್ನೂ, ಪೂರ್ಣತ್ವವನ್ನೂ ಉಂಟುಮಾಡಲು ಸಹಾಯಮಾಡುತ್ತದೆ ಮತ್ತು ಇದರಿಂದ ಮನುಷ್ಯನ ಸರ್ವತೋಮುಖವಾದ ಬೆಳವಣಿಗೆಗೂ ಸಹಾಯವಾಗುತ್ತದೆ. ಪ್ರಾಚೀನವಾದ ಭರತಖಂಡದ ವರ್ಣಾಶ್ರಮ ಪದ್ಧತಿಯು ಸಮೂಹವು ಅನಂತ ಜಾತಿಗಳಾಗಿ ಒಡೆಯುವುದಕ್ಕೂ, ಮನುಷ್ಯನು ಒಂದರಲ್ಲೇ ವಿಶೇಷವಾದ ಗಮನವನಿಟ್ಟು ಅವನ ಜೀವನವು ಸಂಕುಚಿತವೂ ಸ್ವಾತಂತ್ರ್ಯರಹಿತವೂ ಆಗುವುವದಕ್ಕೂ, ಅವಕಾಶಕೊಟ್ಟಿತು. ಆದರೆ ಈ ಆಧುನಿಕ ದೃಷ್ಟಿಯಲ್ಲೂ ದೋಷಗಳಿವೆ. ಇದು ಕೆಲವು ವಿಷಯಗಳಲ್ಲಿ ಹಾನಿಕರವಾದ ಬೆಳವಣಿಗೆಗೆ ಎಡೆಗೊಟ್ಟಿದೆ. ಈಗಿನ ಕಾಲದ ಯುದ್ಧದ ಸಂಬಂಧದಲ್ಲಿ ಇದು ಚನ್ನಾಗಿ ವ್ಯಕ್ತವಾಗುತ್ತದೆ. ತಾನು ನೆಲೆಸಿ ಪೋಷಣೆಪಡೆಯುತ್ತಿರುವ ದೇಶದ ರಕ್ಷಣೆಗಾಗಿ ಪ್ರತಿಮನುಷ್ಯನೂ ಯುದ್ಧದಲ್ಲಿ ಭಾಗವಹಿಸಬೇಕೆಂದು ವಿಧಿಸಲ್ಪಟ್ಟು ಅದರ ಪರಿಣಾಮವಾಗಿ ದೇಶದ ಪುರುಷರೆಲ್ಲರೂ ಕಡ್ಡಾಯವಾಗಿ ರಣರಂಗಕ್ಕೆ ಒಯ್ಯಲ್ಪಟ್ಟು ಇತರರನ್ನು ಕೊಂದು ತಾವೂ ಮೃತ್ಯುವಿಗೆ ತುತ್ತಾಗುವರು. ಜ್ಞಾನಿಗಳು ಕಲಾವಿದರು, ದಾರ್ಶನಿಕರು, ವೈದಿಕರು, ವರ್ತಕರು, ಶಿಲ್ಪಿಗಳು ಇವರೆಲ್ಲರೂ ಅವರ ಸಹಜವಾದ ಉದ್ಯೋಗಗಳಿಂದ ಸೆಳೆಯಲ್ಪಟ್ಟು ದೇಶದ ಸಾಮಾಜಿಕ ಜೀವನವೆ ಅವ್ಯವಸ್ಥೆಗೆ ಈಡಾಗುತ್ತದೆ. ಎಲ್ಲರಿಗೂ ಶಾಂತಿಯನ್ನೂ ಮೈತ್ರಿಯನ್ನೂ ಉಪದೇಶ ಮಾಡುವುದು ಉದ್ಯೋಗವಾಗಿ ಉಳ್ಳ, ಅದಕ್ಕಾಗಿಯೆ ನಿಯಮಿಸಲ್ಪಟ್ಟ ಧರ್ಮಬೋಧಕರಾದ ಗುರುಗಳೂ ಕೂಡ ಯುದ್ಧರಂಗಕ್ಕೆ ಒಯ್ಯಲ್ಪಟ್ಟು ತಮ್ಮ ಸೋದರರನ್ನು

ಕೊಲೆ ಮಾಡಬೇಕಾಗುತ್ತದೆ. ಯುದ್ಧ ಮಾಡುತ್ತಿರುವ ದೇಶದಲ್ಲಿ ಸರ್ಕಾರದ ಆಜ್ಞೆಯಂತೆ ಪ್ರಜೆಗಳು ಅವರ ಸಹಜವಾದ ಧರ್ಮಬುದ್ಧಿಗೂ ಸ್ವಭಾವಕ್ಕೂ ವಿರೋಧವಾಗಿ ವರ್ತಿಸಬೇಕಾಗುತ್ತದೆ. ಅಲ್ಲದೆ ಸ್ವದೇಶರಕ್ಷಣೆಗಾಗಿ ಮಾಡುವ ಸಿದ್ಧತೆಗಳು ಅತಿಯಾಗಿ, ಎಲ್ಲೆ ಮೀರಿದರೆ, ಸಾಮಾಜಿಕ ಆತ್ಮಹತ್ಯಕ್ಕೆ ಅದು ಉತ್ತಮವಾದ ಸಾಧನವಾಗುತ್ತದೆ.

ಪ್ರಾಚೀನ ಭರತಖಂಡದಲ್ಲಾದರೊ ಯುದ್ಧವನ್ನೂ, ಅದರಿಂದುಂಟಾಗುವ ನಷ್ಟವನ್ನೂ ಸಾಧ್ಯವಾದಷ್ಟು ಕಡಿಮೆ ಮಾಡುವುದೆ ಉದ್ದೇಶವಾಗಿತ್ತು. ಈ ಉದ್ದೇಶದಿಂದಲೆ ಯುದ್ಧಮಾಡುವ ಕಾರ್ಯವು ಜನ್ಮದಿಂದಲೂ, ಸ್ವಭಾವದಿಂದಲೂ ಕುಲಕ್ರಮಾಗತವಾದ ಸಂಪ್ರದಾಯದಿಂದಲೂ, ಅದಕ್ಕಾಗಿಯೆ ಅರ್ಹರಾದ ಕ್ಷತ್ರಿಯರೆಂಬ ಸಣ್ಣ ವರ್ಗಕ್ಕೆ ಮಾತ್ರ ವಹಿಸಲ್ಪಟ್ಟಿತ್ತು. ಅವರು ಉದಾತ್ತವಾದ ಧ್ಯೇಯಗಳನ್ನು ಲಕ್ಷ್ಯದಲ್ಲಿಟ್ಟುಕೊಂಡು ಯುದ್ಧಮಾಡುವುದರಿಂದ ಶೌರ್ಯ, ಹಿಡಿತದಲ್ಲಿರುವ ಬಲ, ಉದಾರವಾದ ಸಹಾಯ ಬುದ್ಧಿ ಮತ್ತು ಕ್ಷಾತ್ರಧರ್ಮ ಇವು ಅಭಿವೃದ್ಧಿಹೊಂದಿ ಈ ಮೂಲಕ ಇವರ ಆತ್ಮವಿಕಾಸಕ್ಕೆ ಅವಕಾಶವು ದೊರೆಯುತ್ತಿತ್ತು. ಮಿಕ್ಕವರನ್ನು ಯುದ್ಧವೂ ಅದರ ಆಘಾತಗಳೂ ಕಾಡಿಸುತ್ತಿರಲಿಲ್ಲ. ಅವರ ನಿತ್ಯಜೀವನಕ್ಕೂ ವೃತ್ತಿಗಳಿಗೂ ಯುದ್ಧದಿಂದಾಗಬಹುದಾದ ತೊಂದರೆ ಸಾಧ್ಯವಾದಷ್ಟು ಮಟ್ಟಿಗೆ ಕಡಿಮೆಮಾಡಲ್ಪಟ್ಟಿತ್ತು. ಮನುಷ್ಯರಲ್ಲಿ ಅಂತರ್ಗತವಾಗಿರುವ ಕಲಹ ಮಾಡಬೇಕೆಂಬ ಮತ್ತು ನಾಶಮಾಡಬೇಕೆಂಬ ಸ್ವಭಾವಕ್ಕೆ ಪರಿಮಿತವಾದ ಅವಕಾಶವನ್ನು ಕೊಡಲಾಗಿತ್ತು; ಅದನ್ನು ಸಮಾಜಜೀವನಕ್ಕೆ ಹೆಚ್ಚು ತೊಂದರೆ ಆಗದಂತೆ ಒಂದು ಎಲ್ಲೆಯೊಳಗೆ ಬಂಧಿಸಲಾಗಿತ್ತು. ಅಲ್ಲದೆ ಉಚ್ಚವಾದ ಧ್ಯೇಯಗಳನ್ನಿಟ್ಟುಕೊಂಡಿದ್ದರಿಂದ, ಯುದ್ಧವು ಅದರಲ್ಲಿ ಭಾಗವಹಿಸುವ ಕ್ಷತ್ರಿಯರನ್ನು ಪಶುಪ್ರಾಯರನ್ನಾಗಿ ಮಾಡದೆ ಉತ್ತಮ ಮಟ್ಟಕ್ಕೆ ಏರಿಸಿ ಅವರು ಉದಾತ್ತ ಪುರುಷರಾಗಲು ಸಹಾಯ ಮಾಡುತ್ತಿತ್ತು.

ಈ ವಿಧವಾದ ಯುದ್ಧವು ಗೀತೋಪದೇಶಕ್ಕೆ ಹಿನ್ನೆಲೆಯಾಗಿತ್ತು. ಮನುಷ್ಯಜೀವನದಲ್ಲಿ ಯುದ್ಧವೂ ಕೂಡ ಅವಶ್ಯಕವೆಂದು ಭಾವಿಸಲಾಗಿತ್ತು. ಮನುಷ್ಯನ ಇತರ ವರ್ತನೆಗಳಂತೆ ಯುದ್ಧವೂ ಜೀವನದ ಪರಮಧ್ಯೇಯವೆಂದು ಎಣಿಸಲ್ಪಟ್ಟಿದ್ದು ಧಾರ್ಮಿಕ ಮತ್ತು ಆಧ್ಯಾತ್ಮಿಕ ಉನ್ನತಿಗೆ ಸಾಧನವಾಗುವಂತೆ ವ್ಯವಸ್ಥೆಗೊಳಿಸಲ್ಪಟ್ಟಿತ್ತು ; ಎಂದರೆ ಕೆಲವು ವ್ಯಕ್ತಿಗಳ ಶರೀರಕ್ಕೆ ವ್ಯವಸ್ಥಿತವಾದ ರೀತಿಯಲ್ಲಿ ಹಾನಿಯನ್ನುಂಟುಮಾಡಿದರೂ ಅವರ ಆಧ್ಯಾತ್ಮಿಕ ಜೀವನದ ಬೆಳವಣಿಗೆಗೂ, ದೇಶದ ಧಾರ್ಮಿಕ ಉನ್ನತಿಗೂ ಸಾಧನವಾಗಿತ್ತು.

ಹೀಗೆ ಉದಾತ್ತವಾದ ಧ್ಯೇಯವು ಮುಂದಿದ್ದಾಗ ಯುದ್ಧವು ಯೋಧರನ್ನು ಉತ್ತಮಮಟ್ಟಕ್ಕೆ ಕರೆತಂದಿದೆಯೆಂಬುದಕ್ಕೆ ಭಾರತದಲ್ಲಿ ಹಿಂದಿದ್ದ ಕ್ಷತ್ರಿಯರೂ, ಯೂರೋಪಿನಲ್ಲಿ ಮಧ್ಯಯುಗದಲ್ಲಿದ್ದ ದೀನರಕ್ಷಕ ವೀರರೂ (Knight) ಜಪಾನಿನಲ್ಲಿದ್ದ ಸಾಮುರಾಯ್ ವೀರರೂ ನಿದರ್ಶನವಾಗಿದ್ದಾರೆ. ಯಾವ ಕಾರಣಕ್ಕೂ ಯುದ್ಧವು ಕೂಡದೆಂದು ಹೇಳುವ ಹಟಮಾರಿಗಳನ್ನು ಬಿಟ್ಟರೆ ಉಳಿದವರೆಲ್ಲರೂ ಇದನ್ನು ಒಪ್ಪುತ್ತಾರೆ. ಅದರಿಂದಾಗಬೇಕಾದ ಪ್ರಯೋಜನವು ಸಿದ್ಧಿಸಿದಮೇಲೆ ಯುದ್ಧವು ಪ್ರಪಂಚದಿಂದ ಮಾಯವಾಗಬಹುದು. ಏತಕ್ಕೆಂದರೆ ಅದರಿಂದ ಆಗಬೇಕಾದ ಕಾರ್ಯಸಾಧನೆಯಾದ ಮೇಲೂ ಯುದ್ಧವು ಉಳಿದರೆ ಪ್ರಗತಿಶೀಲರಾದ ಮನುಷ್ಯರಿಗೆ ಅದು ಯಾವ ಉದಾತ್ತಧ್ಯೇಯವೂ ಇಲ್ಲದ ಹಿಂಸಾಕೃತ್ಯದಂತೆ ಕಂಡುಬಂದು ತಿರಸ್ಕಾರಕ್ಕೆ ಗುರಿಯಾಗುವುದು. ಹೇಗಾದರೂ ಹಿಂದಿನಕಾಲದಲ್ಲಿ ಮನುಷ್ಯನ ಬೆಳವಣಿಗೆಗೆ ಅದು ಸಹಾಯವನ್ನು ಮಾಡಿದೆಯೆಂಬುದನ್ನು ಎಲ್ಲರೂ ಒಪ್ಪಬೇಕು.

ಯುದ್ಧದಲ್ಲಿ ಕಾದಾಡುವುದು ಜೀವನದ ಸಾರ್ವತ್ರಿಕವಾದ ತತ್ತ್ವದ ಒಂದು ಬಾಹ್ಯರೂಪ. ಮನುಷ್ಯನು ಪರಿಪೂರ್ಣನಾಗಲು ಹೋಗಬೇಕಾದ ದಾರಿಯಲ್ಲಿ ಕ್ಷತ್ರಿಯನದು ಒಂದು ಗೊತ್ತಾದ ಸ್ಥಾನ. ನಮ್ಮ ಬಾಹ್ಯ ಮತ್ತು ಆಂತರಿಕ ಜೀವನದಲ್ಲಿ ಆಗುವ ಹೋರಾಟವನ್ನು ಬಾಹ್ಯಪ್ರಪಂಚದಲ್ಲಿ ಯುದ್ಧವು ಪ್ರತಿಬಿಂಬಿಸುತ್ತದೆ. ಈ ಪ್ರಪಂಚದಲ್ಲಿ ಅನೇಕ ಶಕ್ತಿಗಳು ಸೇರಿ ಘರ್ಷಣೆಯಿಂದ ಪರಸ್ಪರ ನಾಶವಾಗಿ ಆ ಮೂಲಕ ಬೆಳವಣಿಗೆಯಾಗುವುದಷ್ಟೆ. ಈ ಬೆಳವಣಿಗೆಯು ಯಾವಾಗಲೂ ಬದಲಾಗುತ್ತಿರುವ ಪರಸ್ಪರ ಸಂಬಂಧದ ಜೋಡಣೆಯಿಂದಲೂ, ಮತ್ತು ಈವರೆಗೆ ಅಜ್ಞಾತವಾಗಿರುವ ಏಕತ್ವವನ್ನು ಆಧಾರವಾಗಿಯೂ ಉಳ್ಳ ಸಂಪೂರ್ಣವಾದ ಸಾಮರಸ್ಯವನ್ನು ಗುರಿಯಾಗಿ ಹೊಂದಿದೆ.

ಮನುಷ್ಯನಲ್ಲಿರುವ ಹೋರಾಡುವ ಸ್ವಭಾವದ ಪ್ರತಿಬಿಂಬವೆ ಕ್ಷತ್ರಿಯ. ಇವನು ಮೇಲೆ ಹೇಳಿದ ತತ್ತ್ವವನ್ನು ಒಪ್ಪಿಕೊಂಡು, ಜೀವನದ ಗುರಿಯಾದ ಸಾಮರಸ್ಯಕ್ಕೆ ಸಾಧನಗಳಾದ ಸತ್ಯ ಧರ್ಮಗಳನ್ನು ಸ್ಥಾಪಿಸಲು ದೇಹಗಳನ್ನೂ ಮೂರ್ತಿಗಳನ್ನೂ ನಾಶಮಾಡಲು ಹಿಂದೆಗೆಯದೆ ಧೈರ್ಯದಿಂದ ಹೋರಾಡುವವನು. ಪ್ರಪಂಚದಲ್ಲಿ ಹೋರಾಡುವ ಸ್ವಭಾವವೂ ಅವರ ಪರಿಣಾಮವಾದ ಯುದ್ಧವೂ ತಪ್ಪಿದ್ದಲ್ಲವೆಂಬುದನ್ನು ಒಪ್ಪಿಕೊಂಡೆ ಗೀತೆಯ ಉಪದೇಶವು ಮುಂದುವರಿದಿದೆ. ಆದುದರಿಂದಲೆ ಇದು ಕರ್ತವ್ಯನಿರತನೂ ಯೋಧನೂ ಉದ್ಯಮಶೀಲನೂ ಆದ

ಕ್ಷತ್ರಿಯನಿಗೆ ಉಪದೇಶಿಸಲ್ಪಟ್ಟಿದೆ. ಯುದ್ಧವು ಮನುಷ್ಯನ ಉಚ್ಚಧ್ಯೇಯಗಳಾದ ಮಾನಸಿಕಶಾಂತಿ ಮತ್ತು ಬಾಹ್ಯಪ್ರಪಂಚದಲ್ಲಿ ಅಹಿಂಸೆ ಇವುಗಳಿಗೆ ಅತ್ಯಂತ ವಿರೋಧವಾಗಿದೆ. ಯೋಧನ ಮತ್ತು ಧರ್ಮನಿರತನ ಹೋರಾಟ ಮತ್ತು ವ್ಯಾಪಾರಗಳಿಂದ ಉಂಟಾಗುವ ಕ್ಷೋಭೆಯು ಮನುಷ್ಯನ ಪರಮಧ್ಯೇಯವಾದ ಮನಸ್ಸಿನ ಪ್ರಸನ್ನತೆ ಮತ್ತು ಇಂದ್ರಿಯನಿಗ್ರಹಕ್ಕೆ ಸಂಪೂರ್ಣವಾಗಿ ವಿರೋಧವಾಗಿದೆ. ಈ ವಿರೋಧದಿಂದ ತಪ್ಪಿಸಿಕೊಂಡು, ಈ ವಿರುದ್ಧಭಾವಗಳು ಮಿಳಿತವಾಗುವ ಸಂಧಿಯನ್ನು ಗೊತ್ತುಮಾಡಿ, ವಿರೋಧಗಳೆಲ್ಲಕ್ಕೂ ಅತೀತವಾದ ಸಾಮರಸ್ಯಕ್ಕೆ ಮುಖ್ಯ ಸಾಧನವಾದ ಸಮತ್ವಸ್ಥಿತಿಯನ್ನು ತೋರಿಸಿಕೊಡುವುದೆ ಗೀತೆಯ ಉದ್ದೇಶ.

ಮನುಷ್ಯನು ತನ್ನ ಸ್ವಭಾವದಲ್ಲಿ ಪ್ರಧಾನವಾದ ಮತ್ತು ಸಾರಭೂತವಾದ ಗುಣಕ್ಕೆ ಅನುರೂಪವಾದ ರೀತಿಯಲ್ಲಿ ಜೀವನದ ಸಂಗ್ರಾಮದಲ್ಲಿ ಹೋರಾಡುತ್ತಾನೆ. ಗೀತೆಗೆ ಸಮ್ಮತವಾಗಿರುವ ಸಾಂಖ್ಯದರ್ಶನದ ಪ್ರಕಾರ ಪ್ರಕೃತಿಯಲ್ಲಿಯೂ, ಆದುದರಿಂದ ಮನುಷ್ಯನಲ್ಲಿಯೂ ಮೂರು ಪ್ರಧಾನವಾದ ಗುಣಗಳಿರುವುವು. ಸಮಸ್ಥಿತಿ, ಜ್ಞಾನ ಮತ್ತು ಸುಖಗಳಲ್ಲಿ ಕಂಡುಬರುವ **ಸತ್ತ್ವಗುಣ**; ರಾಗ, ಕರ್ಮ ಮತ್ತು ಮನಸ್ಸಿನ ಅಶಾಂತತೆಗಳಲ್ಲಿ ಕಂಡುಬರುವ **ರಜೋಗುಣ**; ಮತ್ತು ಅಜ್ಞಾನ ಅಥವಾ ಮೋಹ ಮತ್ತು ಜಡತ್ವ (ಆಲಸ್ಯ)ಗಳಲ್ಲಿ ಕಂಡುಬರುವ **ತಮೋಗುಣ**.

ತಮೋಗುಣಕ್ಕೆ ವಶನಾದ ಮನುಷ್ಯನು ತನ್ನ ಸುತ್ತಲೂ ತಿರುಗುತ್ತಾ ತನ್ನ ಕಡೆಗೆ ನುಗ್ಗಿ ಬರುತ್ತಿರುವ ಪ್ರಕೃತಿಶಕ್ತಿಗಳ ಆಘಾತವನ್ನು ಸ್ಥೈರ್ಯದಿಂದ ತಡೆಯಲಾರದೆ ಕುಸಿದುಬಿದ್ದು ಅವು ಎಳೆವ ಕಡೆಗೆ ಬಲಾತ್ಕಾರದಿಂದ ಒಯ್ಯಲ್ಪಡುತ್ತಾನೆ. ಅಥವಾ ಹೆಚ್ಚೆಂದರೆ (ಇತರ ಎರಡು ಗುಣಗಳ ಸಹಾಯದಿಂದ) ಈ ತಾಮಸಮನುಷ್ಯನು ಹೇಗಾದರೂ ಬದುಕುವ ಯತ್ನಮಾಡುತ್ತಾನೆ, ಎಲ್ಲಿಯವರೆಗೆ ಸಾಧ್ಯವೊ ಅಲ್ಲಿಯವರೆಗೆ ತಲೆಯೆತ್ತಿಕೊಂಡಿರುವುದಕ್ಕೆ ಯತ್ನಿಸುತ್ತಾನೆ. ಹಿಂದಿನಿಂದ ಬಂದ ಮನಸ್ಸಿನ ಪ್ರವೃತ್ತಿಗಳು ಮತ್ತು ಕರ್ಮಗಳೆಂಬ ಒಂದು ಕೋಟೆಯನ್ನು ಕಟ್ಟಿ ಅದರೊಳಗೆ ಸೇರಿಕೊಂಡು ಅದರ ಮೂಲಕ ಈ ಆಘಾತಗಳನ್ನು ತಪ್ಪಿಸಿಕೊಳ್ಳಲು ಯತ್ನಿಸುತ್ತಾನೆ. ಹೀಗೆ ಮಾಡುವುದರಿಂದ ತನ್ನ ಉತ್ತಮಸ್ವಭಾವದ ಪ್ರೇರಣೆಗಳನ್ನು ಆದರಿಸದೆ, ತನ್ನ ನೀಚ ಸ್ವಭಾವವನ್ನು ಗೆಲ್ಲುವ ಹೋರಾಟದಿಂದಲೂ ಪ್ರಯತ್ನದಿಂದಲೂ ತಪ್ಪಿಸಿಕೊಳ್ಳುತ್ತಾನೆ.

ರಜೋಗುಣಪ್ರಧಾನನಾದ ಮನುಷ್ಯನು ಯುದ್ಧರಂಗಕ್ಕೆ ನುಗ್ಗುತ್ತಾನೆ. ತನ್ನ ಸುತ್ತಲೂ ಕೆಲಸಮಾಡುತ್ತಿರುವ ಪ್ರಕೃತಿಶಕ್ತಿಗಳನ್ನು ಸ್ವಾರ್ಥಸಾಧನೆಗಾಗಿ

ಉಪಯೋಗಿಸಿಕೊಂಡು ಇತರರನ್ನು ಕೊಲ್ಲುತ್ತಾನೆ; ಗೆಲ್ಲುತ್ತಾನೆ; ವಶಪಡಿಸಿಕೊಳ್ಳುತ್ತಾನೆ ಮತ್ತು ಭೋಗಪಡುತ್ತಾನೆ. ಅವನಲ್ಲಿ ಸತ್ವಗುಣವು ಸ್ವಲ್ಪವೃದ್ಧಿಯಾದಾಗ ಈ ಹೋರಾಟವನ್ನು ಆತ್ಮಸಂಯಮಿಯಾಗುವುದಕ್ಕೂ ಆನಂದ ಶಕ್ತಿ ಮತ್ತು ಪರಿಗ್ರಹಗಳನ್ನು ಬೆಳೆಸಿಕೊಳ್ಳುವುದಕ್ಕೂ ಸಾಧನವನ್ನಾಗಿ ಮಾಡಿಕೊಳ್ಳುತ್ತಾನೆ. ಜೀವನದ ಹೋರಾಟದಲ್ಲಿ ಅವನಿಗೆ ಆಸಕ್ತಿಯೂ ಆನಂದವೂ ಉಂಟಾಗುತ್ತವೆ. ಕಾರಣವೇನೆಂದರೆ ಅದರಲ್ಲಿ ಅವನ ಶಕ್ತಿಯನ್ನು ಪ್ರಯೋಗಿಸಿ ಕೆಲಸ ಮಾಡಲು ಅವಕಾಶ ಸಿಕ್ಕುತ್ತದೆ; ಮತ್ತು ಅವನ ಆತ್ಮವಿಕಾಸಕ್ಕೆ ಅದು ಸಾಧನವಾಗಿದೆ.

ಸತ್ವಗುಣಸಂಪನ್ನನಾದವನು ಈ ಹೋರಾಟದಲ್ಲಿ ನ್ಯಾಯ, ಧರ್ಮ, ಸಮತ್ವ, ಸಮರಸ, ಶಾಂತಿ ಮತ್ತು ಆನಂದಗಳನ್ನು ಹುಡುಕುತ್ತಾನೆ. ಶುದ್ಧ ಸಾತ್ವಿಕಸ್ವಭಾವವುಳ್ಳವನು ಇವನ್ನು ತನ್ನೊಳಗೆ ಹುಡುಕಿ ತನಗೂ, ತನಗೆ ದೊರೆತಮೇಲೆ ಇತರರಿಗೆ ಅದನ್ನು ಪ್ರಸಾರ ಮಾಡುವುದಕ್ಕೂ ಯತ್ನಿಸುತ್ತಾನೆ. ಸಾಮಾನ್ಯವಾಗಿ ಅವನು ಬಾಹ್ಯಪ್ರಪಂಚದಲ್ಲಿ ಎಲ್ಲೆಲ್ಲಿಯೂ ಕೆಲಸಮಾಡುತ್ತಿರುವ ಪ್ರಕೃತಿ ಶಕ್ತಿಗಳ ಹೋರಾಟದ ಕಡೆಗೆ ಗಮನಕೊಡದೆ ತಟಸ್ಥನಾಗಿ ಅಂತರ್ಮುಖಿಯಾಗಿರುತ್ತಾನೆ. ಆದರೆ ಇಂತಹ ಮನುಷ್ಯನಿಗೆ ರಜೋಗುಣದ ಅಂಶವಿದ್ದರೆ ಈ ಹೋರಾಟದಲ್ಲಿ ಸಮತ್ವವನ್ನೂ ಸಮರಸವನ್ನೂ ಉಂಟುಮಾಡಲು ಪ್ರಯತ್ನಿಸುತ್ತಾನೆ. ಯುದ್ಧ, ಹೋರಾಟ ಮತ್ತು ಅಶಾಂತಿಗಳನ್ನು ಹೊರದೂಡಿ ಶಾಂತಿ, ಪ್ರೇಮ ಮತ್ತು ಸಮರಸಗಳನ್ನು ಸ್ಥಾಪಿಸಲು ಶ್ರಮಿಸುತ್ತಾನೆ. ಜೀವನಸಮಸ್ಯೆಯ ವಿಚಾರವಾಗಿ ಮನುಷ್ಯರಲ್ಲಿ ಕಂಡುಬರುವ ಎಲ್ಲ ವಿಧವಾದ ಮನೋಭಾವಗಳೂ ಈ ಮೂರು ಗುಣಗಳಲ್ಲಿ ಯಾವುದಾದರೂ ಒಂದರ ಪ್ರಾಧಾನ್ಯದಿಂದಾಗಲಿ ಅಥವಾ ಈ ಮೂರರಲ್ಲಿಯೂ ಸಮತೆ ಮತ್ತು ಸಮರಸವನ್ನು ಉಂಟುಮಾಡಬೇಕೆಂಬ ಪ್ರಯತ್ನದಿಂದಾಗಲಿ ಉದ್ಭವಿಸುತ್ತವೆ.

ಆದರೆ ಮನುಷ್ಯನಿಗೆ ಯಾವುದೊ ಒಂದುಕಾಲದಲ್ಲಿ ಈ ಸಮಸ್ಯೆಯಲ್ಲಿ ಜಿಹಾಸೆಯುಂಟಾಗುತ್ತದೆ. ಪ್ರಕೃತಿಯ ಈ ಮೂರು ಗುಣಗಳ ವ್ಯಾಪಾರದ ಮೂಲಕ ಕಂಡುಬರುವ ಸಮಸ್ಯೆಯ ಪರಿಹಾರದಿಂದ ತೃಪ್ತಿಪಡದೆ ಇದಕ್ಕೆ ಬಾಹ್ಯವಾದ, ಅತೀತವಾದ ಪರಿಹಾರವನ್ನು ಹುಡುಕುತ್ತಾನೆ. ಈ ಗುಣಗಳಿಗೆ ಸೇರದೆ ಗುಣರಹಿತವಾದ ಎಂದರೆ ಕರ್ಮರಹಿತವಾದ ಒಂದು ಸ್ಥಿತಿಯನ್ನು ಹೊಂದಿ ಈ ಸಮಸ್ಯೆಯಿಂದ ಪಾರಾಗಲು ಪ್ರಯತ್ನಿಸುತ್ತಾನೆ. ಅಥವಾ ಈ ಗುಣಗಳಿಗೆ ಅತೀತವಾಗಿ ಅವುಗಳನ್ನು

ನಿಯಂತ್ರಿಸುವ, ಎಂದರೆ ಕರ್ಮಮಾಡಲು ಸಮರ್ಥನಾಗಿದ್ದರೂ ಕರ್ಮದಿಂದ ನಿರ್ಲಿಪ್ತನಾಗಿ ಬಂಧಿಸಲ್ಪಡದೆ ಇರುವ, ತ್ರಿಗುಣಾತೀತ ಅಥವಾ ನಿರ್ಗುಣವಾದ ಸ್ಥಿತಿಯನ್ನು ಹೊಂದಲು ಯತ್ನಿಸುತ್ತಾನೆ. ಅವನು ಜೀವನವನ್ನೂ ನಿರುಪಾಧಿಕವಾದ ಮತ್ತು ಶ್ರೇಷ್ಠವಾದ ಶಾಂತಿಯನ್ನೂ ಅರಸುತ್ತಾನೆ. ಇಲ್ಲವೆ ಪ್ರಭಾವಯುತವಾದ ಸಮಾಧಾನವನ್ನೂ ಉತ್ತಮವಾದ ಜೀವನವನ್ನೂ ಬಯಸುತ್ತಾನೆ. ಮೊದಲನೆಯ ಮಾರ್ಗವು ಸಂನ್ಯಾಸಕ್ಕೆ ಒಯ್ಯುವುದು; ಎರಡನೆಯ ಮಾರ್ಗವು ಅಧಮಸ್ವಭಾವದ ಅಪೇಕ್ಷೆಗಳಿಗೂ ಅದರ ಕ್ರಿಯೆ-ಪ್ರತಿಕ್ರಿಯೆಗಳ ಪ್ರಪಂಚಕ್ಕೂ ಅತೀತವಾದ ಸ್ಥಿತಿಗೆ ಒಯ್ಯುವುದು. ಅಂತರಂಗದಲ್ಲಿ ರಾಗದ್ವೇಷಗಳ ಬಿಡುವಿಕೆ ಮತ್ತು ಸಮತ್ವವೆ ಈ ಸ್ಥಿತಿಯ ಮೂಲತತ್ವ. ಅರ್ಜುನನ ಮನಸ್ಸು ಮೇಲೆ ಹೇಳಿದ ಒಂದನೆಯ ಮಾರ್ಗದಲ್ಲಿ ಎಳೆಯಲ್ಪಟ್ಟಿತು. ಹೋರಾಟ ಮತ್ತು ಕೊಲೆಯು ತಾಂಡವವಾಡುತ್ತಿರುವ ಕುರುಕ್ಷೇತ್ರದಲ್ಲಿ ತನ್ನ ಶೌರ್ಯದ ದುರಂತಪರಿಣಾಮದಿಂದ ಹಿಮ್ಮೆಟ್ಟುತ್ತಾನೆ. ಇಲ್ಲಿಯವರೆಗೂ ತನ್ನ ಕರ್ಮಗಳ ಹಿನ್ನೆಲೆಯಾಗಿದ್ದ ಕ್ಷಾತ್ರಧರ್ಮವನ್ನು ಅನುಸರಿಸಬೇಕೆ ಅಥವಾ ಕರ್ಮಗಳನ್ನು ಬಿಟ್ಟು ಜೀವನವನ್ನೂ ಅದರ ಕರ್ತವ್ಯಗಳನ್ನೂ ತ್ಯಾಗಮಾಡಬೇಕೆ ಎಂಬುದೆ ಅವನ ಸಮಸ್ಯೆ. ಆದರೆ ಭಗವಂತನು ಅವನಿಗೆ ಉಪದೇಶಿಸಿದುದು ಜೀವನದ ಮತ್ತು ಕರ್ಮಗಳ ಬಾಹ್ಯತ್ಯಾಗವನ್ನಲ್ಲ; ಆಂತರವಾಗಿ (ತನ್ನ ಅಂತರಂಗದಲ್ಲಿ) ಇದಕ್ಕೆ ಅತೀತವಾಗಿರುವ ಸ್ಥಿತಿಯನ್ನು.

ಅರ್ಜುನನು ಕ್ಷತ್ರಿಯ. ರಾಜಸ್ವಭಾವದವ. ಆದರೆ ಸಾತ್ವಿಕಧ್ಯೇಯಗಳನ್ನಿಟ್ಟುಕೊಂಡು ಅದರಿಂದ ತನ್ನ ರಾಜಸವ್ಯಾಪಾರಗಳನ್ನು ನಿಯಂತ್ರಿಸುತ್ತಿದ್ದನು. ಅವನು ಕುರುಕ್ಷೇತ್ರದ ಮಹಾಸಂಗ್ರಾಮಕ್ಕೆ ಅದು ಧರ್ಮಯುದ್ಧವೆಂಬ ಭರವಸೆಯಿಂದ ಹರ್ಷದಿಂದಲೂ ಉತ್ಸಾಹದಿಂದಲೂ ಹೊರಡುತ್ತಾನೆ. ತನ್ನ ಶಂಖನಾದದಿಂದ ಶತ್ರುಗಳ ಹೃದಯವನ್ನು ಭೇದಿಸುತ್ತಾ ಶೀಘ್ರಗಾಮಿಯಾದ ರಥದಲ್ಲಿ ಹೊರಡುತ್ತಾನೆ. ಅಧರ್ಮದ ಪಕ್ಷ ವಹಿಸಿ ಧರ್ಮವನ್ನೂ ಸತ್ಯವನ್ನೂ ಮೂಲೆಗಿಟ್ಟು ಅದರ ಸ್ಥಾನದಲ್ಲಿ ಅಧರ್ಮಾಭಿಮಾನಯುಕ್ತವಾದ ಸ್ವಾರ್ಥವನ್ನು ಲಕ್ಷ್ಯವನ್ನಾಗಿಟ್ಟುಕೊಂಡು ಯುದ್ಧಮಾಡಲು ಸನ್ನದ್ಧರಾಗಿರುವ ನೃಪತಿಗಳನ್ನು ನೋಡಬಯಸುತ್ತಾನೆ. ಈ ರಜೋಗುಣಪ್ರಧಾನನಾದ ಪುರುಷನಲ್ಲಿ ತಮೋಗುಣವು ಮೇಲಕ್ಕೆದ್ದಾಗ ಅವನ ಉತ್ಸಾಹವು ನಾಶವಾಗಿ ಸ್ವಾಭಾವಿಕವಾದ ದೃಷ್ಟಿಕೋನ, ಮನೋವೃತ್ತಿಗಳಿಗೆ ಭಂಗಬರುತ್ತವೆ. ಇದರ ಪರಿಣಾಮವಾಗಿ ಅವನಲ್ಲಿ ಆಶ್ಚರ್ಯ, ಶೋಕ, ಮೋಹ, ಕಳವಳ, ನಿರುತ್ಸಾಹ, ಮನಸ್ಸಿನ ವ್ಯಾಕುಲತೆ ಮತ್ತು ಒಳಗೇ ಹೋರಾ

ಟಗಳು ಉಂಟಾಗುತ್ತವೆ. ಅವನು ಅಜ್ಞಾನ ಮತ್ತು ಆಲಸ್ಯಗಳಿಗೆ ತುತ್ತಾಗುತ್ತಾನೆ. ಆದುದರಿಂದ ಅವನ ಮನಸ್ಸು ಸಂನ್ಯಾಸದ ಕಡೆ ತಿರುಗುತ್ತದೆ. "ಈ ಕ್ಷತ್ರಿಯ ವೃತ್ತಿಗಿಂತ ಭಿಕ್ಷುಕನ ಜೀವನವೆ ಮೇಲು. ಇವರು ಯಾರೆಂಬುದನ್ನು ಗಮನಿಸದೆ ಎಲ್ಲರನ್ನೂ ಕೊಲ್ಲುವ ಈ ಯುದ್ಧಕ್ಕಿಂತ, ನಾಶ ಮತ್ತು ರಕ್ತಪಾತಗಳಿಂದ ಮಾತ್ರ ದೊರಕುವ ಈ ರಾಜ್ಯ, ಭೋಗ, ಯಶಸ್ಸು ಮತ್ತು ಪ್ರಭುತ್ವಗಳಿಗಿಂತ, ಧರ್ಮವನ್ನು ಮೂಲೆಗೊತ್ತುವ ಮಾರ್ಗದ ಮೂಲಕ ಧರ್ಮವನ್ನು ಸ್ಥಾಪಿಸುವುದಕ್ಕಿಂತ, ಸಮಾಜವನ್ನೆ ನಿರ್ಮೂಲಮಾಡುವ ಈ ಯುದ್ಧದ ಮೂಲಕ ಸಮಾಜಧರ್ಮವನ್ನು ಉದ್ಧರಿಸುವುದಕ್ಕಿಂತ—ಭಿಕ್ಷುಕವೃತ್ತಿಯಿಂದ ಜೀವಿಸುವುದೆ ಮೇಲು."

ಸಂನ್ಯಾಸವೆಂದರೆ ಜೀವನದ, ಕರ್ಮದ ಮತ್ತು ಪ್ರಕೃತಿಯ ಮೂರು ಗುಣಗಳ ತ್ಯಾಗ. ಆದರೆ ಈ ಮೂರು ಗುಣಗಳಲ್ಲಿ ಯಾವುದಾದರೊಂದರ ಮುಖಾಂತರವೆ ಇದನ್ನು ಸಾಧಿಸಬೇಕು. ಇದನ್ನು ಪ್ರಚೋದಿಸುವ ಕಾರಣವು ಕೇವಲ ತಮೋಗುಣಕ್ಕೆ ಸಂಬಂಧಪಟ್ಟಿದ್ದರೆ ಜೀವನದಲ್ಲಿಯೂ ಪ್ರಪಂಚದಲ್ಲಿಯೂ ನಿರುತ್ಸಾಹ, ಭೀತಿ, ಜುಗುಪ್ಸೆ, ದ್ವೇಷ, ಅಸಹ್ಯ ಮುಂತಾದವು ಉಂಟಾಗುತ್ತವೆ. ತಮಸ್ಸಿನಿಂದ ಕೂಡಿದ ರಜೋಗುಣಸಂಬಂಧವಾಗಿದ್ದರೆ ಹೋರಾಟದಲ್ಲಿ ದಣಿವೂ, ಶೋಕವೂ ನಿರಾಶೆಯೂ ಉಂಟಾಗಿ ದುಃಖದಿಂದಲೂ ಅತೃಪ್ತಿಯಿಂದಲೂ ಸದಾ ತುಂಬಿರುವ ನಿಷ್ಫಲವಾದ ಕರ್ಮದ ಗೊಂದಲವನ್ನು ನಿರಾಕರಿಸುತ್ತಾನೆ. ಅಥವಾ ರಜೋಗುಣದಿಂದ ಕೂಡಿದ ಸತ್ವಗುಣಸಂಬಂಧವಾಗಿದ್ದರೆ ಜೀವನದಲ್ಲಿ ದೊರೆಯಬಹುದಾದ ಎಲ್ಲ ವಸ್ತುಗಳಿಗಿಂತಲೂ ಶ್ರೇಷ್ಠವಾದುದನ್ನು ಪಡೆಯಲು, ಒಂದು ಮೇಲ್ಮಟ್ಟವನ್ನು ಮುಟ್ಟಲು, ಎಲ್ಲ ಪರಿಮಿತಿಗಳನ್ನೂ ಅತಿಕ್ರಮಿಸುವ, ಬಂಧನಗಳನ್ನು ಕಡಿದುಹಾಕುವ ಆತ್ಮಶಕ್ತಿಯಿಂದ ಜೀವನವನ್ನು ತುಚ್ಛೀಕರಿಸುವ ಪ್ರವೃತ್ತಿಯು ಉಂಟಾಗುವುದು. ಅದು ಸತ್ವಗುಣಸಂಬಂಧವಾಗಿದ್ದರೆ ಸಂಸಾರವು ನಿಸ್ಸಾರವೆಂಬ ಭಾವನೆಯೂ, ಸರ್ವದಾ ಚಕ್ರದಂತೆ ಸುತ್ತುತ್ತಿರುವ ಸಂಸಾರಕ್ಕೆ ವಾಸ್ತವವಾದ ಗುರಿಯೂ ಅವಶ್ಯಕತೆಯೂ ಇಲ್ಲವೆಂಬ ಭಾವನೆಯೂ, ಅಥವಾ ಕಾಲಾತೀತವೂ ಅನಂತವೂ ನಿಶ್ಶಬ್ದವೂ ನಾಮರೂಪರಹಿತವೂ ಆದ ಪರಾಶ್ರುತಿಯ ಆಧ್ಯಾತ್ಮಿಕ ಅನುಭವವೂ ಉಂಟಾಗುವುದು. ಅರ್ಜುನನು ಸತ್ತ್ವಗುಣಯುಕ್ತವಾದ ರಜೋಗುಣವುಳ್ಳವನಾದರೂ ಅವನ ಈ ಹಿಮ್ಮೆಟ್ಟುವಿಕೆಯು ತಮೋಗುಣಪ್ರೇರಿತವಾದುದು ಈ ಸಂದರ್ಭದಲ್ಲಿ ಶ್ರೀಕೃಷ್ಣನು ಎರಡು ' ವಿಧವಾಗಿ ವರ್ತಿಸಬಹುದಾಗಿತ್ತು. ಇದೆ ತಾಮಸಮಾರ್ಗವನ್ನೆ ಅನುಸರಿಸಿ ತನ್ಮೂಲಕ ಮನಸ್ಸಿನ ಪರಿಶುದ್ಧತೆಗೂ ಶಾಂತಿಗೂ ಅರ್ಜುನನನ್ನು

ಒಯ್ಯಬಹುದು. ಅಥವಾ ಅವನು ತತ್ಕ್ಷಣದಲ್ಲಿ ಆ ತಾಮಸಪ್ರವೃತ್ತಿಯನ್ನು ಶುದ್ಧವನ್ನಾಗಿ ಮಾಡಿ ಸಾತ್ವಿಕತ್ಯಾಗದ ಉಚ್ಚಮಟ್ಟಕ್ಕೆ ಏರಿಸಬಹುದಾಗಿತ್ತು. ವಾಸ್ತವವಾಗಿ ಈ ಎರಡು ಮಾರ್ಗಗಳಲ್ಲಿ ಯಾವುದನ್ನೂ ಅವನು ಅನುಸರಿಸಲಿಲ್ಲ. ತಾಮಸಸ್ವಭಾವದಿಂದ ಪ್ರೇರಿತವಾದ ಈ ವೈರಾಗ್ಯದ ಪ್ರವೃತ್ತಿಯನ್ನು ಶ್ರೀಕೃಷ್ಣನು ನಿರೋಧಿಸುತ್ತಾನೆ. ಕರ್ಮವನ್ನು ಮಾಡಬೇಕೆಂದೆ—ಈ ಕ್ರೂರವಾದ ಮತ್ತು ಘೋರವಾದ ಕರ್ಮವನ್ನು ಸಹ ಮಾಡಬೇಕೆಂದೆ— ಆದೇಶಮಾಡುತ್ತಾನೆ. ಮತ್ತು ಅವನು ಶಿಷ್ಯನಿಗೆ ಬೇರೊಂದು ಆಂತರವಾದ ಸಂನ್ಯಾಸವನ್ನು ತೋರಿಸಿ ಅವನ ಸಮಸ್ಯೆಗೆ ಇದೆ ಸರಿಯಾದ ಪರಿಹಾರವೆಂದೂ, ಈ ರೀತಿಯಲ್ಲಿ ಆತ್ಮನು ಪ್ರಕೃತಿಯನ್ನು ವಶಪಡಿಸಿಕೊಂಡು ಶಾಂತತೆಯಿಂದಲೂ ಸ್ವಸ್ಥಚಿತ್ತನಾಗಿಯೂ ಕರ್ಮವನ್ನು ಮಾಡಬಹುದೆಂದೂ ಸ್ಪಷ್ಟಪಡಿಸುತ್ತಾನೆ. ಗೀತೆಯ ಉಪದೇಶವು ಬಾಹ್ಯವಾದ ವೈರಾಗ್ಯವಲ್ಲ—ಆಂತರವಾದ ವೈರಾಗ್ಯ.



# ಏಳನೆಯ ಪ್ರಕರಣ



## ಕ್ಷತ್ರಿಯನ ಧರ್ಮ

ಅರ್ಜುನನ ಉದ್ವೇಗಪೂರಿತವಾದ ಪ್ರಶ್ನೆಗಳ ಸುರಿಮಳೆ, ಕೊಲೆಯಿಂದ ಹಿಂತೆಗೆಯುವಿಕೆ, ಶೋಕ ಮತ್ತು ಪಾಪಭೀತಿ, ಶೂನ್ಯವಾದ ಮತ್ತು ಶುಷ್ಕವಾದ ಜೀವನ ಮೇಲೆಂಬ ಅವನ ಹಂಬಲಿಕೆ, ದುಷ್ಕರ್ಮದಿಂದ ದುಷ್ಪರಿಣಾಮವಾಗುವುದು ಎಂಬ ಶಂಕೆ, ಇವೆಲ್ಲಕ್ಕೂ ಉತ್ತರವಾಗಿ ಶ್ರೀಕೃಷ್ಣನು ಅವನನ್ನು ಕಠಿಣವಾದ ಮಾತುಗಳಲ್ಲಿ ಹಳಿಯುತ್ತಾನೆ. "ಇದೆಲ್ಲವೂ ಚಿತ್ತಭ್ರಮೆ, ಭ್ರಾಂತಿ, ಹೃದಯ ದೌರ್ಬಲ್ಯ, ಮೂಢತನ; ಆರ್ಯನಿಗೂ, ಕ್ಷತ್ರಿಯನಿಗೂ ತಕ್ಕುದಲ್ಲ. ಅಪಾಯವು ಒದಗಿರುವ ವಿಷಮಸನ್ನಿವೇಶದಲ್ಲಿ, ಧರ್ಮದ ಪಕ್ಷವಾಗಿ ಮುಖ್ಯ ಯೋಧನಾದ ನಿನ್ನಲ್ಲೇ ಎಲ್ಲರೂ ಭರವಸೆಯಿಟ್ಟಿರುವ ಸಮಯದಲ್ಲಿ ನೀನು ಯುದ್ಧದಿಂದ ವಿಮುಖ ನಾಗುವುದು ಸರಿಯಲ್ಲ. ಇಂದ್ರಿಯಗಳು ಮೋಹಗೊಂಡು, ಹೃದಯವು ಕಲುಷಿತ ವಾಗಿ, ಮನಸ್ಸು ಭ್ರಾಂತಿಗೊಂಡು, ಮನೋನಿಶ್ಚಯವು ಕುಗ್ಗಿ, ಕೈಯಿಂದ ದಿವ್ಯಾ ಯುಧಗಳನ್ನು ಬಿಸಾಡಿ, ದೈವನಿಯಮಿತವಾದ ಕಾರ್ಯದಿಂದ ಹಿಮ್ಮೆಟ್ಟುವುದು

ಸರಿಯಲ್ಲ. ಇದು ಆರ್ಯರ ಪದ್ಧತಿಯಲ್ಲ. ಸ್ವರ್ಗವನ್ನು ತಪ್ಪಿಸತಕ್ಕದ್ದು; ಅವಮಾನ ಕರವಾದ್ದು. ದುರ್ಬಲತೆಯನ್ನು ಸೂಚಿಸುವ ಹೀನವಾದ ಈ ಕೃಪೆಯನ್ನು ಬಿಟ್ಟು ಶತ್ರುಗಳನ್ನು ನಿಗ್ರಹಿಸು."

ಈ ಉತ್ತರವು ಒಬ್ಬ ಕ್ಷತ್ರಿಯನಿಗೆ ಇನ್ನೊಬ್ಬ ಕ್ಷತ್ರಿಯನು ಹೇಳಲು ಯೋಗ್ಯವಾಗಿದೆಯೆಂಬುದರಲ್ಲಿ ಸಂದೇಹವಿಲ್ಲ. ಆದರೆ ಗುರುವು ಶಿಷ್ಯನಿಗೆ ಮಾಡಬಹುದಾದ ಬೋಧೆಯಂತೆ ಕಾಣುವುದಿಲ್ಲ. ಏತಕ್ಕೆಂದರೆ ಗುರುವು ಯಾವಾಗಲೂ ಅಹಿಂಸೆ, ಸಾತ್ವಿಕತೆ, ಸ್ವಾರ್ಥತ್ಯಾಗ, ಐಹಿಕ ವಿಷಯಗಳಲ್ಲಿ ವಿರಕ್ತಿ ಮತ್ತು ಸಾಮಾನ್ಯಜನರ ದಾರಿಯನ್ನು ಬಿಟ್ಟು ಬೇರೆ ಮಾರ್ಗವನ್ನು ಅನುಸರಿಸುವುದು, ಇವನ್ನು ಉಪದೇಶಿಸುವನೆಂದು ನಾವು ನಂಬಿಕೊಂಡಿದ್ದೇವೆ. ಅರ್ಜುನನ ಕಣ್ಣುಗಳು ನೀರಿನಿಂದ ತುಂಬಿ, ಅವನ ಮನಸ್ಸು ಶೋಕದಿಂದಲೂ ಉದ್ವೇಗದಿಂದಲೂ ಪರಿತಪ್ತವಾಗಿ ಹೃದಯದೌರ್ಬಲ್ಯವು ಉಂಟಾಗಲು ಕಾರಣವೇನೆಂದರೆ ಅವನು ಕೃಪೆಯಿಂದ ಪರವಶನಾಗಿದ್ದುದೆ. ಈ ದೌರ್ಬಲ್ಯವು ಸಾತ್ವಿಕವೂ ಸ್ತುತ್ಯವೂ ಅಲ್ಲವೆ? ಕೃಪೆಯೆಂಬುದು ಪ್ರಶಂಸನೀಯವಾದ ಮನೋಧರ್ಮವಲ್ಲವೆ? ಇದನ್ನು ಕಠಿಣೋಕ್ತಿಗಳಿಂದ ಅವಹೇಳನ ಮಾಡುವುದು ನ್ಯಾಯವೆ? ಅಥವಾ ಶಕ್ತಿಯ ಆರಾಧಕರಾದ ನೀಟ್ಷೆ ಮೊದಲಾದವರು ಹೇಳುವಂತೆ ಕೃಪೆಯು ಒಂದು ದೌರ್ಬಲ್ಯವೆಂದೂ, ಕಠಿಣಹೃದಯವು ಪುರುಷಲಕ್ಷಣವೆಂದೂ ಗುರುವಿನ ಅಭಿಪ್ರಾಯವೆಂದು ನಾವು ತಿಳಿಯೋಣವೆ? ಆದರೆ ಗೀತೋಪದೇಶವು ಆರ್ಯಭೂಮಿಯಲ್ಲಿ ಜನಿಸಿತೆಂಬುದನ್ನೂ, ಭಗವಂತನ ಕಲ್ಯಾಣಗುಣಗಳಲ್ಲಿ ಕರುಣೆಯು ಬಹಳ ಮುಖ್ಯವಾದುದೆಂದು ಆರ್ಯರು ಭಾವಿಸಿರುವರೆಂಬುದನ್ನೂ, ನಾವು ಮರೆಯಬಾರದು. ಭಗವಂತನ ಉಪದೇಶವಾದ ಮುಂದೆ ಬರುವ ಒಂದು ಅಧ್ಯಾಯದಲ್ಲಿ ಮನುಷ್ಯನ ದೈವೀಸಂಪತ್ತನ್ನು ವರ್ಣಿಸುವಾಗ ಅದರಲ್ಲಿ ನಿರ್ಭೀತಿ (ಅಭಯ) ಶೌರ್ಯ ಮತ್ತು ಪೌರುಷಗಳಿಗೆ ಎಷ್ಟು ಪ್ರಾಧಾನ್ಯವಿದೆಯೊ ಭೂತದಯೆ, ಮಾರ್ದವ, ಅಹಿಂಸೆ ಮತ್ತು ಅಕ್ರೋಧ ಇವುಗಳಿಗೂ ಅಷ್ಟೆ ಪ್ರಾಧಾನ್ಯವಿದೆ. ಕಾಠಿಣ್ಯ, ನಿರ್ದಯೆ, ಕ್ರೌರ್ಯ, ಶತ್ರುವಧೆಯಲ್ಲಿ, ಧನಾರ್ಜನೆಯಲ್ಲಿ, ಮತ್ತು ಧರ್ಮವಿರುದ್ಧವಾದ ಭೋಗಗಳಲ್ಲಿ ಲಾಲಸೆ, ಇವೆಲ್ಲವೂ ಆಸುರೀ ಸಂಪತ್ತು; ಪ್ರಪಂಚದಲ್ಲಿ ಈಶ್ವರನಿಲ್ಲವೆಂದೂ, ಮನುಷ್ಯನಲ್ಲಿ ದೈವತ್ವವಿಲ್ಲವೆಂದೂ ತಿಳಿದು ಕಾಮವನ್ನೆ ಪರದೈವವೆಂದು ಪೂಜಿಸುವ ಆಸುರೀ ಪ್ರಕೃತಿಯಿಂದ ಈ ಗುಣಗಳು ಜನಿಸಿವೆ. ಆದುದರಿಂದ ಅರ್ಜುನನ ಹೃದಯದೌರ್ಬಲ್ಯದ ನಿಂದೆಗೆ ಅವನು ಕೇವಲ ದಯೆಯಿಂದ ಕೂಡಿದ್ದನೆಂಬುದು ಕಾರಣವಲ್ಲ.

"ಈ ವಿಷಮಸನ್ನಿವೇಶದಲ್ಲಿ ನಿನಗೆ ಈ ಹೃದಯಕಶ್ಮಲವೂ ನಿರುತ್ಸಾಹವೂ ಎಲ್ಲಿಂದ ಬಂತು?" ಎಂದು ಕೃಷ್ಣನು ಅರ್ಜುನನನ್ನು ಕೇಳುತ್ತಾನೆ. ಕ್ಷಾತ್ರಸ್ವಭಾವ ದಿಂದ ಯಾವರೀತಿಯಲ್ಲಿ ಅರ್ಜುನನು ತಪ್ಪಿದ್ದಾನೆಂಬುದನ್ನು ಈ ಪ್ರಶ್ನೆಯು ತೋರಿ ಸುತ್ತದೆ. ಭಗವಂತನ ಗುಣವಾದ ಕರುಣೆಯು ಮೇಲಿನ ಮಟ್ಟದಿಂದ ಇಳಿದು ಬರು ತ್ತದೆ. ಯಾರ ಸ್ವಭಾವದಲ್ಲಿ ಇದು ಕಾಣಿಸಿಕೊಳ್ಳುವುದಿಲ್ಲವೋ, ಯಾವ ಮನುಷ್ಯನು ಇದಕ್ಕೆ ಪಾತ್ರನಲ್ಲವೋ ಅಂತಹವನು ತಾನು ಉತ್ತಮನಾದ ಶ್ರೇಷ್ಠನಾದ ಅತಿಶಯ ಗುಣಗಳುಳ್ಳ ಮನುಷ್ಯನೆಂದು ಹೇಳಿಕೊಳ್ಳುವುದೂ, ತೋರ್ಪಡಿಸಿಕೊಳ್ಳುವುದೂ ಮೂರ್ಖತನ. ಇದು ದುರಭಿಮಾನವನ್ನು ಸೂಚಿಸುತ್ತದೆ. ಭಗವಂತನ ಕಲ್ಯಾಣ ಗುಣಗಳು ಯಾವನಲ್ಲಿ ಹೆಚ್ಚಾಗಿ ವ್ಯಕ್ತವಾಗಿವೆಯೊ ಅವನೆ ಪುರುಷಶ್ರೇಷ್ಠ. ಈ ಕರುಣೆಯುಳ್ಳ ಪುರುಷನ ಲಕ್ಷಣವೇನೆಂದರೆ-ಅವನು ಅನುಕಂಪಸಹಿತವಾದ ಪ್ರಜ್ಞೆ ಯಿಂದಲೂ, ಅಚಲವಾದ ಶೌರ್ಯದಿಂದಲೂ ಮನುಷ್ಯರ ಯುದ್ಧ ಹೋರಾಟಗಳನ್ನೂ, ಬಲಾಬಲಗಳನ್ನೂ, ಗುಣದೋಷಗಳನ್ನೂ, ಸುಖದುಃಖಗಳನ್ನೂ, ವಿದ್ಯೆ-ಅವಿದ್ಯೆ ಗಳನ್ನೂ, ಚಾತುರ್ಯ ಮೌಢ್ಯಗಳನ್ನೂ, ಲಕ್ಷ್ಯ ಮತ್ತು ಅದನ್ನು ಸಾಧಿಸುವುದರಲ್ಲಿ ಅಪಜಯವನ್ನೂ ನೋಡುತ್ತ ಅವರಿಗೆ ಸಹಾಯಮಾಡಲು, ತೊಂದರೆಯನ್ನು ನಿವಾರಣೆ ಮಾಡಲು ಪ್ರಯತ್ನಿಸುತ್ತಿರುತ್ತಾನೆ. ಧರ್ಮಿಷ್ಠರಾದವರಲ್ಲಿ, ಸಾತ್ವಿಕಬುದ್ಧಿ ಯುಳ್ಳವರಲ್ಲಿ ಈ ಕರುಣೆಯು ಅಪಾರವಾದ ಪ್ರೇಮ ಮತ್ತು ದಾನಗಳ ರೂಪದಲ್ಲಿ ವ್ಯಕ್ತವಾಗುತ್ತದೆ. ಜ್ಞಾನಿಯಲ್ಲಿ, ಕ್ಷತ್ರಿಯನಲ್ಲಿ, ರಾಜಸಸ್ವಭಾವವುಳ್ಳವನಲ್ಲಿ ಇದೆ ಕರುಣೆಯು ಉದಾರವಾದ ಲೋಕ ಅಭ್ಯುದಯಮಾಡುವ ಜ್ಞಾನ ಮತ್ತು ಶಕ್ತಿಗಳ ಮೂಲಕ ಪ್ರಕಟವಾಗುತ್ತದೆ. ಯೋಧನಲ್ಲಿರುವ ಈ ಕರುಣೆಯೆ ಕ್ಷಾತ್ರಧರ್ಮದ ಜೀವಾಳ. ಇದು ಅಬಲರನ್ನು ಘಾತಿಸಲು ಅವನಿಗೆ ಎಡೆಗೊಡುವುದಿಲ್ಲ. ದುರ್ಬಲ ರನ್ನೂ, ದೀನರನ್ನೂ, ಯುದ್ಧದಲ್ಲಿ ಬಿದ್ದವರನ್ನೂ, ಗಾಯಗೊಂಡವರನ್ನೂ ಹಿಂಸಿಸದೆ ರಕ್ಷಿಸಬೇಕೆಂದು ಅವನನ್ನು ಪ್ರೇರಿಸುತ್ತದೆ. ಬಲಿಷ್ಠನಾದ ದುಷ್ಟಪ್ರಭು ವನ್ನೂ, ಎದುರಿಸಲಸಾಧ್ಯವಾದ ಆಕ್ರಮಣಕಾರನನ್ನೂ ಧ್ವಂಸಮಾಡುವುದೂ ಈ ಭಗವಂತನ ಕರುಣೆಯೆ—ಕೋಪವೂ ದ್ವೇಷವೂ ಅಲ್ಲ. ಏತಕ್ಕೆಂದರೆ ಅವು ದೈವೀ ಪ್ರಕೃತಿಯ ಗುಣಗಳೆ ಅಲ್ಲ. ಭಗವಂತನಿಗೆ ಪಾಪಿಗಳಮೇಲೆ ಕೋಪವೂ, ದುಷ್ಟರ ಮೇಲೆ ದ್ವೇಷವೂ ಇದೆಯೆಂದು ಹೇಳುವುದು ನರಕದಲ್ಲಿ ಶಾಶ್ವತವಾದ ಯಾತನೆಗೆ ಪಾಪಿಗಳು ಗುರಿಯಾಗುವರು ಎಂಬ ಅಭಿಪ್ರಾಯದಷ್ಟೆ ಕಟ್ಟುಕತೆ— ಯಾರೂ ನಂಬತಕ್ಕದ್ದಲ್ಲ.

ಹಿಂದೆ ಜ್ಞಾನಿಗಳು ಹೇಳಿರುವಂತೆ ನಮ್ಮ ದೇಶದವರ ಭಾವನೆಯು ಮುಂದೆ ಹೇಳಿರುವಂತಿದೆ :—

ಭಗವಂತನು ಹಿಂಸೆಗೂ ಅನ್ಯಾಯಕ್ಕೂ ಗುರಿಯಾದವರನ್ನು ಎಷ್ಟು ಅಪಾರವಾದ ಪ್ರೇಮ ಮತ್ತು ಕರುಣೆಗಳಿಂದ ಕಾಪಾಡುತ್ತಾನೆಯೊ ಈ ಹಿಂಸೆಯನ್ನು ಕೊಟ್ಟು ಮತ್ತೆ ಈ ಪಾಪಕೃತ್ಯಗಳಿಗಾಗಿ ತನ್ನಿಂದ ಹತರಾಗುವ ಬಲಿಷ್ಠರಾದ ದುಷ್ಟರನ್ನು ಕೂಡ ಅಷ್ಟೆ ಪ್ರೇಮ ಮತ್ತು ಕರುಣೆಗಳಿಂದ ನೋಡುತ್ತಾನೆ. ಆದರೆ ಅರ್ಜುನನು ತನ್ನ ಧರ್ಮವನ್ನು ಮತ್ತು ಕರ್ತವ್ಯವನ್ನು ನಿರಾಕರಿಸುದದಕ್ಕೆ ಕಾರಣ ಈ ಕರುಣೆಯಲ್ಲ; ತನ್ನ ಕರ್ತವ್ಯವನ್ನು ಮಾಡಿ ಅದರಿಂದ ಉಂಟಾಗುವ ಶೋಕವನ್ನು ತಪ್ಪಿಸಿಕೊಳ್ಳಬೇಕೆಂಬ ಭಾವನೆಯಿಂದ ಪ್ರೇರಿತವಾದ ಹೃದಯದೌರ್ಬಲ್ಯ ಮತ್ತು ಕ್ಲೈಬ್ಯ. " ಇಂದ್ರಿಯಗಳನ್ನು ಶೋಷಣೆಮಾಡುತ್ತಿರುವ ಈ ಶೋಕದಿಂದ ಯಾವರೀತಿ ತಪ್ಪಿಸಿಕೊಳ್ಳಲಿ " ಎಂದು ಅರ್ಜುನನು ಕೇಳುತ್ತಾನೆ. ಈ ರೀತಿ ತನಗಾಗಿಯೆ ಶೋಕಿಸುವುದು ಅಕೀರ್ತಿಕರ ಮತ್ತು ಅನಾರ್ಯ. ಇತರರ ವಿಷಯವಾಗಿ ಅರ್ಜುನನಿಗೆ ಉಂಟಾದ ಶೋಕವೂ ಕೂಡ ಒಂದು ದೃಷ್ಟಿಯಿಂದ ಸ್ವಾರ್ಥವೆ ಹೌದು ; ಧಾರ್ತರಾಷ್ಟ್ರರು ಸ್ವಜನರೆಂಬ, ಅವರಿಲ್ಲದ ಜೀವನವು ಬರಿದಾಗುವುದೆಂಬ ಕಾರಣಗಳಿಂದ ಅವರನ್ನು ಕೊಲ್ಲಲು ಮಮತೆಯಿಂದ ಕೂಡಿದ ಹಿಂತೆಗೆಯುವಿಕೆ. ಈ ವಿಧವಾದ ಕನಿಕರವು ಮನಸ್ಸಿನ ಮತ್ತು ಇಂದ್ರಿಯಗಳ ದೌರ್ಬಲ್ಯದ ಲಕ್ಷಣ. ಕಡಿಮೆ ಮಟ್ಟದ ಜನರ ಬೆಳವಣಿಗೆಗೆ ಈ ದೌರ್ಬಲ್ಯವು ಸಹಕಾರಿಯಾಗಬಹುದು. ಅವರಲ್ಲಿ ಈ ಕನಿಕರವೆಂಬ ದೌರ್ಬಲ್ಯವಿಲ್ಲದಿದ್ದರೆ ಅವರು ಕಠಿಣಹೃದಯರೂ ಕ್ರೂರಿಗಳೂ ಆಗಬಹುದು. ಹೃದಯ ಕಾಠಿಣ್ಯವನ್ನು ಹೋಗಲಾಡಿಸಲು ಕನಿಕರವನ್ನು—ಸ್ವಾರ್ಥದಿಂದ ಕೂಡಿದ್ದರೂ ಕೂಡ—ಬೆಳೆಸಿಕೊಳ್ಳಬೇಕು. ತಮ್ಮಲ್ಲಿ ಅಧಿಕವಾಗಿರುವ ರಾಜಸಸ್ವಭಾವವನ್ನು ಅಡಗಿಸಲು ಸತ್ವಗುಣಕ್ಕೆ ಬೆಂಬಲವಾಗಿ ತಮೋಗುಣದ ಸಹಾಯವನ್ನು ಪಡೆಯಬೇಕಾಗಬಹುದು. ಆದರೆ ಬೆಳೆದಿರುವ ಅರ್ಜುನನಿಗೆ ಇದು ಸರಿಯಾದ ಮಾರ್ಗವಲ್ಲ. ದೌರ್ಬಲ್ಯದಿಂದ ಅವನು ಬೆಳೆಯುವ ಕಾಲ ಮೀರಿಹೋಗಿದೆ. ಈಗ ಅವನು ಬಲದಿಂದ ಬಲವನ್ನು ವೃದ್ಧಿಮಾಡಿಕೊಳ್ಳಬೇಕು. ಅರ್ಜುನನು ದೈವೀಪ್ರಕೃತಿಯ ಮನುಷ್ಯ—ನರಶ್ರೇಷ್ಠನಾಗುವವ. ಹಾಗೆಂದು ಇವನನ್ನು ದೇವತೆಗಳು ಆರಿಸಿದ್ದರು. ಅವನು ಮಾಡಬೇಕಾದ ಕಾರ್ಯವು ಗೊತ್ತಾಗಿದೆ; ಭಗವಂತನು ಅವನ ಪಕ್ಕದಲ್ಲಿ ಇದ್ದಾನೆ; ದಿವ್ಯಧನುಸ್ಸಾದ ಗಾಂಡೀವವು ಅವನ ಕೈಯಲ್ಲಿದೆ ; ಅಧರ್ಮಪಕ್ಷದ ನಾಯಕರು, ಪ್ರಪಂಚದಲ್ಲಿ ಭಗವತ್ಸಂಕಲ್ಪ

ವನ್ನು ವಿರೋಧಿಸಿದವರು ಅವನ ಎದುರಿಗೆ ಇದ್ದಾರೆ; ತನ್ನ ರಾಗದ್ವೇಷಗಳಿಗನು ಸಾರವಾಗಿ "ಈ ಕೆಲಸವನ್ನು ಮಾಡುತ್ತೇನೆ, ಇದನ್ನು ಬಿಡುತ್ತೇನೆ" ಎಂದು ಹೇಳುವ ಅಧಿಕಾರ ಅವನಿಗಿಲ್ಲ. ಅಹಂಕಾರ ಮಮಕಾರಗಳಿಗೆ ಒಳಪಟ್ಟು, ಅವಶ್ಯಕ ವಾಗಿ ಆಗಬೇಕಾದ ಕೊಲ್ಲುವಿಕೆಯಿಂದ ಹಿಂತೆಗೆಯುವ ಹಕ್ಕು ಅವನಿಗಿಲ್ಲ. ತನ್ನ ಮನಸ್ಸಿಗೆ ಕ್ಲೇಶವುಂಟಾಗುವುದೆಂದಾಗಲಿ, ತನ್ನ ಜೀವನವು ಶೂನ್ಯವಾಗುವುದೆಂದಾ ಗಲಿ ಅಥವಾ ಸಹಸ್ರಾರು ಜನ ತನ್ನ ಬಂಧುಗಳು ಮಡಿದನಂತರ ಈ ಲೋಕದಲ್ಲಿ ತನ್ನ ಬಾಳಿನಿಂದ ಉಪಯೋಗವಿಲ್ಲವೆಂದಾಗಲಿ ತನ್ನ ಕರ್ತವ್ಯವನ್ನು ಮಾಡದೆ ಇರುವ ಹಕ್ಕು ಅರ್ಜುನನಿಗಿಲ್ಲ. ಈ ಭಾವನೆಗಳೆಲ್ಲವೂ ಕ್ಷತ್ರಿಯ ಶ್ರೇಷ್ಠನಾದ ಅವನಿಗೆ ತಕ್ಕವಲ್ಲ. ಮಾಡಬೇಕಾದ ಕರ್ಮಕ್ಕೆ ಮಾತ್ರ ಅವನು ಲಕ್ಷ್ಯವನ್ನು ಕೊಡ ಬೇಕು. ತನ್ನ ಕ್ಷಾತ್ರಸ್ವಭಾವದ ಮೂಲಕ ಕೇಳಿಬಂದ ದೈವಾಜ್ಞೆಗೆ ಮಾತ್ರ ಕಿವಿಗೊಡಬೇಕು. "ಪ್ರಪಂಚದ ಶ್ರೇಯಸ್ಸಿಗೆ ಕಂಟಕವಾಗಿರುವ ಅಧರ್ಮಪಕ್ಷದ ಸೈನ್ಯಗಳಿಂದ ಅದನ್ನು ಪಾರುಮಾಡುವುದಕ್ಕಾಗಿಯೆ ನೀನು ಜನ್ಮವೆತ್ತಿದ್ದೀಯೆ. ನಮ್ಮನ್ನು ಉದ್ಧರಿಸು" ಎಂಬ ಲೋಕದ ಆರ್ತನಾದವನ್ನು ಮಾತ್ರ ಆಲಿಸಬೇಕು.

ಅರ್ಜುನನು ಶ್ರೀಕೃಷ್ಣನ ಆದೇಶವನ್ನು ಮೀರಲು ಉದ್ಯುಕ್ತನಾದಾಗ್ಯೂ ಅವನು ತನ್ನನ್ನು ಹೀಯಾಳಿಸಿದುದು ಸಾಧುವೆಂದು ಒಪ್ಪಿಕೊಳ್ಳುತ್ತಾನೆ. ತನ್ನ ಲ್ಲಿರುವ ಲೋಪವನ್ನು ತಿಳಿದೂ ಕೂಡ ಅದಕ್ಕೆ ವಶನಾಗಿದ್ದಾನೆ. ತನ್ನ ನಿಜವಾದ ಕ್ಷಾತ್ರಸ್ವಭಾವವು ನಿರುತ್ಸಾಹ (ಕಾರ್ಪಣ್ಯದೋಷ) ದಿಂದ ಮಂಕಾಗಿದೆಯೆಂದು ಒಪ್ಪಿ ಕೊಳ್ಳುತ್ತಾನೆ. ಧರ್ಮ ಯಾವುದು, ಅಧರ್ಮ ಯಾವುದು ಎಂದು ಅವನ ಮನಸ್ಸಿಗೆ ಭ್ರಮೆಯುಂಟಾಗಿದೆ. ತನಗೆ ದಾರಿತೋರಿಸಲು ಶ್ರೀಕೃಷ್ಣನನ್ನು ಗುರುವನ್ನಾಗಿ ಅಂಗೀಕರಿಸುತ್ತಾನೆ. ಇದು ಧರ್ಮವೆಂಬ ತನ್ನ ತಿಳಿವಳಿಕೆಗೆ ಇದ್ದ ಆಧಾರಗಳೆಲ್ಲವೂ ಕುಸಿದು ಬಿದ್ದಿವೆ; ಆದರೂ ತನ್ನ ಹಿಂದಿನ ದೃಷ್ಟಿಗೆ ಅನುಸಾರವಾದ ಹೊಸ ಆಧಾರವು ಯಾವುದೂ ಇಲ್ಲದಿರುವ ಹೊಸ ಆದೇಶವನ್ನು ಒಪ್ಪಲು ಹಿಂತೆಗೆಯು ತ್ತಾನೆ. ಹೀಗೆ ಹಿಂತೆಗೆಯಲು ಅರ್ಜುನನ ಕಾರಣಗಳು ಇವು: "ಪೂಜ್ಯರಾಗಿರುವ ಭೀಷ್ಮದ್ರೋಣರ ಮೇಲೆ ಯುದ್ಧಮಾಡಿ ನಾನು ಹೇಗೆ ಅವರನ್ನು ಕೊಲ್ಲಲ್ಲಿ? ರಕ್ತ ಪಾತದಿಂದ ಬರುವ ಭೋಗವನ್ನು ಅನುಭವಿಸುವುದಕ್ಕಿಂತಲೂ ಭಿಕ್ಷೆಮಾಡಿ ಜೀವಿಸು ವುದೆ ಮೇಲು. ಈ ಘೋರವಾದ ಜ್ಞಾತಿವಧೆಯಿಂದ ಪಾಪಬರುವುದೆ ಹೊರತು ಯಾವ ಶ್ರೇಯಸ್ಸೂ ಉಂಟಾಗುವುದಿಲ್ಲ." ಹೀಗೆಂದು ಹೇಳಿ ಅರ್ಜುನನು ತನಗೆ ಇದುವರೆಗೂ ಪ್ರಮಾಣವಾಗಿದ್ದ ಧರ್ಮದ ಪ್ರಕಾರ ಯುದ್ಧಮಾಡುವುದಿಲ್ಲವೆಂದು

ತೀರ್ಮಾನಿಸುತ್ತಾನೆ. ಆದರೂ ಸರಿಯಾದ ಉತ್ತರವು ದೊರೆಯುವುದಿಲ್ಲವೆಂದು ತಿಳಿದಿರುವ ತನ್ನ ಆಕ್ಷೇಪಣೆಗಳಿಗೆ ಶ್ರೀಕೃಷ್ಣನು ಏನು ಉತ್ತರಕೊಡಬಹುದೆಂದು ತವಕದಿಂದ ಎದುರುನೋಡುತ್ತಾನೆ. ಅಹಂಕಾರದಿಂದ ಪ್ರೇರಿತವಾದ ಈ ಭಾವನೆಗಳನ್ನು ಶ್ರೀಕೃಷ್ಣನು ಅರ್ಜುನನ ಹೃದಯದಿಂದ ಮೊದಲು ತೊಲಗಿಸಿ ನಂತರ ಅಹಂತಾ-ಮಮತಾಗಳಿಗೆ ಅತೀತವಾದ ಶ್ರೇಷ್ಠವಾದ ಧರ್ಮವನ್ನು ಬೋಧಿಸಲು ತೊಡಗುತ್ತಾನೆ.

ಶ್ರೀಕೃಷ್ಣನ ಉಪದೇಶವನ್ನು ಎರಡು ಭಾಗಮಾಡಬಹುದು. ಒಂದು ಭಾಗ ಅರ್ಜುನನಿಗೆ ಪರಿಚಿತವಾದ ಆರ್ಯ ಧರ್ಮದ ಅತ್ಯಂತ ಶ್ರೇಷ್ಠವಾದ ತತ್ವಗಳಿಗೆ ಸಂಬಂಧಪಟ್ಟದ್ದು. ಎರಡನೆಯದು ಎಲ್ಲ ಧರ್ಮಗಳಿಗೂ ಮೂಲಭೂತವೂ ಸರ್ವವ್ಯಾಪಕವೂ ಆದ ಮನುಷ್ಯನ ಸ್ವರೂಪದ ವಿಷಯವಾಗಿ ಅಂತರಂಗವಾದ ನೈಜವಾದ ಜ್ಞಾನಕ್ಕೆ ಸಂಬಂಧಪಟ್ಟದ್ದು. ಇದೆ ಗೀತೋಪದೇಶದ ತಳಹದಿಯಾಗಿರುವುದು. ಮೊದಲನೆಯ ಭಾಗಕ್ಕೆ ವೇದಾಂತದ ಧರ್ಮ ಮತ್ತು ದರ್ಶನಗಳೂ, ಆರ್ಯರ ಜೀವನದ ತಳಿಹದಿಯಾಗಿದ್ದ ವರ್ಣಧರ್ಮಗಳೂ ಆಧಾರವಾಗಿವೆ. ಅರ್ಜುನನೇನೊ ಯುದ್ಧವನ್ನು ಮಾಡುವುದು ಧರ್ಮವಿರುದ್ಧವೆಂದೂ, ಯುಕ್ತವಲ್ಲವೆಂದೂ ಹೇಳಿ ನಿರಾಕರಿಸಿದ್ದಾನೆ. ಆದರೆ ಅವನು ಅಜ್ಞಾನದಿಂದ ಆವೃತನಾಗಿ ಉದ್ವೇಗಪರವಶನಾಗಿದ್ದು, ಅದನ್ನು ಯುಕ್ತಿವಾದದಿಂದ ಮರೆಮಾಚಲು ಯತ್ನಿಸಿದ್ದಾನೆ. ಇಹಲೋಕದ ಜೀವನವೂ ಮರಣವೂ ಮುಖ್ಯವಾದ ವಿಷಯಗಳೆಂಬಂತೆ ಮಾತನಾಡಿದ್ದಾನೆ. ಆದರೆ ಜ್ಞಾನಿಯ ಮತ್ತು ಯತಿಯ ದೃಷ್ಟಿಯಲ್ಲಿ ಇವು ಮುಖ್ಯವಾದುವಲ್ಲ. ತನ್ನ ಗೆಳೆಯರ ಮತ್ತು ಬಂಧುಗಳ ಮರಣಕ್ಕಾಗಿ ಶೋಕಿಸಲು ಜೀವನದ ನಿಜಸ್ವರೂಪದ ಜ್ಞಾನವು ಎಡೆಗೊಡುವುದಿಲ್ಲ. ಪ್ರಾಜ್ಞನು ಬದುಕಿರುವವರಿಗಾಗಲಿ ಸತ್ತವರಿಗಾಗಲಿ ಶೋಕಿಸುವುದಿಲ್ಲ. ಏತಕ್ಕೆಂದರೆ ಜೀವನ ಯಾತ್ರೆಯಲ್ಲಿ ದುಃಖವೂ ಮರಣವೂ ಪದೇ ಪದೇ ಸಂಭವಿಸುವುವು ಎಂಬುದು ಅವನಿಗೆ ಗೊತ್ತು. ನಿತ್ಯವಾದುದು ಆತ್ಮವೆ ಹೊರತು ದೇಹವಲ್ಲ. ಯಾವ ರಾಜರ ಮರಣ ಸಂಭವಿಸುವುದೆಂದು ಇವನು ಶೋಕಿಸುತ್ತಿದ್ದಾನೆಯೊ ಅವರು ಹಿಂದೆಯೂ ಜನ್ಮ ತಾಳಿದ್ದರು ; ಮುಂದೆಯೂ ಜನಿಸುತ್ತಾರೆ. ದೇಹಕ್ಕೆ ಬಾಲ್ಯವೂ ಯೌವನವೂ ವೃದ್ಧಾಪ್ಯವೂ ಬರುವಂತೆ ಮರಣವೂ ಉಂಟಾಗಿ ದೇಹಿಯು ಬೇರೊಂದು ದೇಹವನ್ನು ಹೊಂದುವನು. ರಾಗದ್ವೇಷಗಳು ತಮ್ಮ ಕಡೆ ಎಳೆಯಲು ಅವುಗಳಿಗೆ ಅವಕಾಶಕೊಡದೆ ಜೀವನವನ್ನು ಯಥಾವತ್ತಾಗಿ ನೋಡುವ ಪ್ರಾಜ್ಞನಾದ ಧೀರನು ಬಾಹ್ಯದ ತೋರಿಕೆಗೆ ಮರುಳಾಗುವುದಿಲ್ಲ.

ತನ್ನ ದೇಹ, ಇಂದ್ರಿಯ ಮತ್ತು ಹೃದಯಗಳ ರಾಗದ್ವೇಷಗಳು ತನ್ನ ಜ್ಞಾನಕ್ಕೆ ಅಡ್ಡಿಮಾಡುವುದಕ್ಕೆ ಅಥವಾ ಅದನ್ನು ಮೊಬ್ಬುಮಾಡುವುದಕ್ಕೆ ಅವಕಾಶ ಕೊಡುವುದಿಲ್ಲ. ಅವನು ದೇಹ ಮತ್ತು ಇಂದ್ರಿಯ ಗೋಚರವಾದ ವಿಷಯಗಳನ್ನು ದಾಟಿ ತನ್ನ ನಿಜಸ್ವರೂಪವನ್ನು ಗಮನಲ್ಲಿಟ್ಟುಕೊಂಡಿರುತ್ತಾನೆ; ತಾಮನಸಪ್ರಕೃತಿಯ ಇಚ್ಛೆಗಳಿಗೆ ಅತೀತನಾಗಿರುತ್ತಾನೆ; ಯಾವಾಗಲೂ ತನ್ನ ಜೀವನದ ಗುರಿಯೊಂದನ್ನೆ ದೃಷ್ಟಿಯಲ್ಲಿಟ್ಟಿರುತ್ತಾನೆ.

ಈ ಸತ್ಯವಾದ ಪರಮಶ್ರೇಷ್ಠವಾದ ಗುರಿಯಾವುದೆಂದರೆ ಅನೇಕ ಕಲ್ಪಗಳ ಕಾಲ ಮನುಷ್ಯನು ಹುಟ್ಟಿ, ಸತ್ತು, ಅನುಭವಗಳನ್ನು ಪಡೆದು ಮಾಗಿದ ಮೇಲೆ ಅಮೃತತ್ವಕ್ಕೆ ಅರ್ಹನಾಗುತ್ತಾನೆ. ಈ ಅರ್ಹತೆಯನ್ನು ಪಡೆಯುವುದು ಹೇಗೆ? ಪಡೆಯುವವರು ಯಾರು? "ಈ ದೇಹವೆ ನಾನು, ಈ ಪ್ರಾಣವೆ ನಾನು" ಎಂಬ ಭಾವನೆಯನ್ನು ಅತಿಕ್ರಮಿಸಿರುವವನು; ಸ್ಥೂಲದೇಹದ ಮತ್ತು ಇಂದ್ರಿಯಗೋಚರವಾದ ವಿಷಯಗಳಿಗೆ ಅವುಗಳ ದೃಷ್ಟಿಯಿಂದ ಪ್ರಾಧಾನ್ಯವನ್ನು ಕೊಡದಿರುವವನು; ಅವುಗಳಿಗೆ ದೇಹಾತ್ಮಭಾವನೆಯುಳ್ಳ ಮನುಷ್ಯನು ಕಟ್ಟುವ ಬೆಲೆಯನ್ನು ಒಪ್ಪಿಕೊಳ್ಳದಿರುವವನು; ತಾನೂ ಇತರರೂ ಆತ್ಮಸ್ವರೂಪರೆಂದು ತಿಳಿದಿರುವನು; ಶರೀರದಲ್ಲಿ ಆಸಕ್ತನಾಗಿಲ್ಲದೆ ಆತ್ಮನಲ್ಲೇ ನಿರತನಾಗಿರುವವನು; ಇತರರನ್ನೂ ಆತ್ಮದೃಷ್ಟಿಯಿಂದಲೆ ನೋಡುವವನು.

ಅಮೃತತ್ವವೆಂದರೆ ಮರಣಾನಂತರ ಜೀವಿಸುವುದು ಮಾತ್ರವಲ್ಲ. ಇಂತಹ ಜೀವನವು ಎಲ್ಲರಿಗೂ ಇದ್ದೇ ಇದೆ. ಸತ್ತಮೇಲೆ ಎಲ್ಲರೂ, ಸ್ವಲ್ಪಕಾಲವೊ, ದೀರ್ಘಕಾಲವೂ, ಸೂಕ್ಷ್ಮಲೋಕಗಳಲ್ಲಿ ವಾಸಮಾಡಿಯೆ ಮಾಡುತ್ತಾರೆ. ಆದರೆ ಆ ಲೋಕಗಳಲ್ಲಿಯೂ ದೇಹಾತ್ಮಬುದ್ಧಿಯಿಂದಲೆ ನಡೆದುಕೊಳ್ಳುತ್ತಾರೆ. ಅಮೃತತ್ವವೆಂದರೆ ಜನನ ಮರಣಗಳೆರಡಕ್ಕೂ ಅತೀತವಾಗಿರುವ ಸ್ಥಿತಿ. ಮನೋವಿಶಿಷ್ಟವಾದ ದೇಹಭಾವನೆಯನ್ನು ಮೀರಿ, ಮೇಲ್ಮಟ್ಟದಲ್ಲಿ ಆತ್ಮನಾಗಿ ಆತ್ಮನಲ್ಲಿ ವಾಸಮಾಡುವ ಸ್ಥಿತಿ. ದುಃಖ ಶೋಕಗಳಿಗೆ ಒಳಗಾಗಿ, ರಾಗದ್ವೇಷಗಳಿಗೆ ವಶನಾಗಿ ನಶ್ವರವಾದ ವಿಷಯಗಳಲ್ಲಿ ಆಸಕ್ತನಾಗಿರುವವನು ಅಮೃತತ್ವಕ್ಕೆ ಅರ್ಹನಲ್ಲ. ಅವನು ಆ ಸ್ಥಿತಿಯನ್ನು ತಿಳಿಯಲೂ ಆರನು. ಗೆಲ್ಲುವವರೆಗೂ ಈ ಲೋಕದ ಅನುಭವಗಳನ್ನು ತಾಳ್ಮೆಯಿಂದ ಸಹಿಸಬೇಕು. ಮುಕ್ತನಿಗೆ ಅವುಗಳಿಂದ ಯಾವ ತೊಂದರೆಯೂ ಇಲ್ಲ. ನಮ್ಮಲ್ಲಿ ಗೂಢವಾಗಿರುವ ಪ್ರಶಾಂತವಾದ ಶಾಶ್ವತವಾದ ಆತ್ಮನಂತೆ ನಾವು ಈ ಲೋಕದ ಅನುಭವಗಳನ್ನು ದುಃಖಕರವಾಗಲಿ ಅಥವಾ ಸುಖಕರವಾಗಲಿ ಅವುಗಳನ್ನು—ಉದ್ವೇಗವಿಲ್ಲದೆ ಜ್ಞಾನವುಳ್ಳ ಸಮತ್ವ ಬುದ್ಧಿಯಿಂದ ಸ್ವಾಗತಿಸಬೇಕು.

ಅರ್ಜುನನಂತೆ ಶೋಕದಿಂದಲೂ ಭೀಕರದೃಶ್ಯದಿಂದಲೂ ವ್ಯಾಕುಲಹೊಂದು ವುದೂ; ಕರ್ತವ್ಯದಿಂದ ವಿಮುಖನಾಗುವುದೂ ಮತ್ತು ದೇಹದ ಮರಣವೆಂಬ ಆವಶ್ಯಕವಾದ ಅಲ್ಪವಿಷಯಕ್ಕೆ ಉದ್ವೇಗಗೊಂಡು ಕರ್ತವ್ಯದಿಂದ ಹಿಂದೆಗೆಯು ವುದೂ; ಈ ಮೌಢ್ಯವೆಲ್ಲವೂ ಆರ್ಯನಿಗೆ ತಕ್ಕುದಲ್ಲ. ಉದ್ವೇಗವಿಲ್ಲದೆ ಧೈರ್ಯದಿಂದ ಅಮೃತತತ್ವದ ಕಡೆಗೆ ಮುಂದುವರಿಯುತ್ತಿರುವ ಆರ್ಯನ ಮಾರ್ಗವು ಇದಲ್ಲ.

ಮನುಷ್ಯನಿಗೆ ಮರಣವೆಂಬುದು ಇಲ್ಲ. ಏತಕ್ಕೆಂದರೆ ಸಾಯುವುದು ದೇಹ ಮಾತ್ರ. ಮನುಷ್ಯನು ದೇಹವಲ್ಲ. ಸತ್ ಆದ ಆತ್ಮ. ಸತ್ ಆಗಿರುವುದಕ್ಕೆ ನಾಶ ವಿಲ್ಲ. ಅದರ ರೂಪವು ಮಾತ್ರ ಬದಲಾವಣೆ ಹೊಂದಬಹುದು. ಹಾಗೆಯೆ ಅಸತ್ತಾದ ವಸ್ತುವಿಗೆ ಇರುವಿಕೆಯಿಲ್ಲ. ಆತ್ಮ ಸತ್ ಆದುದರಿಂದ ಅದಕ್ಕೆ ನಾಶವಿಲ್ಲ. ಜೀವನ ಯಾತ್ರೆಯಲ್ಲಿ ಮನಸ್ಸಿಗೆ ಗೋಚರವಾಗುವ ಸತ್ ಅಸತ್ತೆಂಬ ಭೇದವು ಯಾವುದ ರಿಂದ ಜಗತ್ತೆಲ್ಲವು ವಿಸ್ತೃತವಾಗಿದೆಯೊ ಆ ನಾಶವಿಲ್ಲದ ಆತ್ಮನ ಸಾಕ್ಷಾತ್ಕಾರ ವಾದಾಗ ಮಾಯವಾಗುತ್ತದೆ. ದೇಹಗಳು ಹುಟ್ಟುತ್ತವೆ, ಸಾಯುತ್ತವೆ; ಇವಕ್ಕೆ ಮೊದಲು ಕೊನೆ ಉಂಟು. ಆದರೆ ದೇಹವನ್ನು ಧರಿಸಿರುವ ಆತ್ಮನು ಅನಂತ, ಅಪ್ರಮೇಯ, ಶಾಶ್ವತ ಮತ್ತು ನಾಶವಿಲ್ಲದವನು. ಮನುಷ್ಯನು ಹರಿದಿರುವ ಬಟ್ಟೆ ಯನ್ನು ಬಿಟ್ಟು ಹೊಸ ಬಟ್ಟೆಯನ್ನು ತೊಡುವಂತೆ ಆತ್ಮನು ಜೀರ್ಣವಾದ ದೇಹಗ ಳನ್ನು ಬಿಟ್ಟು ಹೊಸದಾದ ದೇಹಗಳನ್ನು ಧರಿಸುತ್ತಾನೆ. ಇದರಲ್ಲಿ ಶೋಕಿಸುವದಕ್ಕೆ, ಹಿಂದೆಗೆಯುವುದಕ್ಕೆ ಕಾರಣವೇನಿದೆ? ಈ ಆತ್ಮನು ಹುಟ್ಟುವುದೂ ಇಲ್ಲ; ಸಾಯು ವುದೂ ಇಲ್ಲ. ಒಂದು ಸಲ ಇದ್ದು ಮಾಯವಾಗಿ ಮತ್ತೆ ಇಲ್ಲದೆ ಇರತಕ್ಕಂತಹ ವಸ್ತುವು ಇದಲ್ಲ. ಈ ಆತ್ಮನು ಅಜ, ನಿತ್ಯ, ಶಾಶ್ವತ, ಪುರಾಣ. ದೇಹವು ಸತ್ತಾಗ ಅವನು ಸಾಯುವುದಿಲ್ಲ. ಇದನ್ನು ಕೊಲ್ಲಲು ಯಾರಿಗೂ ಸಾಧ್ಯವಿಲ್ಲ. ಈ ಆತ್ಮನನ್ನು ಶಸ್ತ್ರಗಳು ಕತ್ತರಿಸಲಾರವು, ಬೆಂಕಿಯು ಸುಡಲಾರದು, ನೀರು ಒದ್ದೆಮಾಡಲಾರದು; ಗಾಳಿಯು ಒಣಗಿಸಲಾರದು. ಅವನು ನಿತ್ಯ, ಅಚಲ, ಸರ್ವವ್ಯಾಪಿ ಮತ್ತು ಶಾಶ್ವತ. ಶರೀರದಂತೆ ವ್ಯಕ್ತವಾಗದಿದ್ದರೂ ವ್ಯಕ್ತವಸ್ತುಗಳೆಲ್ಲಕ್ಕಿಂತಲೂ ಶ್ರೇಷ್ಠ, ಮನಸ್ಸಿಗೆ ಅಗೋಚರನಾಗಿದ್ದು ಮನಸ್ಸಿಗಿಂತಲೂ ಮಿಗಿಲಾದವನು. ಪ್ರಾಣೇಂದ್ರಿ ಯಾರ್ಥಗಳ ವಿಕಾರಕ್ಕೆ ಆಶ್ರಯವಾಗಿರುವವನಲ್ಲ. ದೇಹ, ಪ್ರಾಣ ಮತ್ತು ಮನಸ್ಸು ಗಳಲ್ಲಾಗುವ ಬದಲಾವಣೆಗಳಿಗೆ ಅತೀತ. ಆದರೂ ಇವೆಲ್ಲವೂ ಯಾವ ಸತ್ಯವನ್ನು ರೂಪಿಸಲು ಯತ್ನಿಸುವುವೊ ಆ ಸತ್ಯವಸ್ತುವೆ ಅವನಾಗಿದ್ದಾನೆ.

ಒಂದು ವೇಳೆ ನಿಜವಾದ ನಾವು ಮೇಲೆ ಹೇಳಿದಂತೆ ಅನಂತವೂ ದಿವ್ಯವೂ

ಅಲ್ಲದೆ ಸಾವಿಗೆ ಒಳಪಡುವವರಾದರೂ ಕೂಡ ಮರಣಕ್ಕಾಗಿ ಶೋಕಿಸಬೇಕಾಗಿಲ್ಲ. ಏತಕ್ಕೆಂದರೆ ಆತ್ಮನು ವ್ಯಕ್ತವಾಗಲು ಜನನ ಮರಣಗಳು ಅವಶ್ಯಕ. ಜನನವೆಂದರೆ ಅಸತ್ತಲ್ಲದಿದ್ದರೂ ನಮ್ಮ ಸ್ಥೂಲ ದೃಷ್ಟಿಗೆ ಗೋಚರವಲ್ಲದ ಅವ್ಯಕ್ತ ಸ್ಥಿತಿಯಿಂದ ವ್ಯಕ್ತ ಸ್ಥಿತಿಗೆ ಬರುವುದು. ಅಲ್ಲಿಂದ ಪುನಃ ಅವ್ಯಕ್ತ ಸ್ಥಿತಿಗೆ ಹಿಂತಿರುಗಬೇಕಾಗುವುದು. ಮೃತ್ಯುಶಯ್ಯೆಯಲ್ಲಾಗಲಿ ಯುದ್ಧರಂಗದಲ್ಲಾಗಲಿ ಮರಣಕ್ಕೆ ಭಯಪಡುವುದು ಮೌಢ್ಯದ ಪರಮಾವಧಿ. ಮನುಷ್ಯರು ಸಾಯುತ್ತಾರಲ್ಲ ಎಂದು ಶೋಕಿಸುವುದು ಮೂಢತನ. ಏತಕ್ಕೆಂದರೆ ಅವರಿಗೆ ನಾಶವಿಲ್ಲ. ಅಥವಾ ದುಃಖಕರವಾದ ಮತ್ತು ಕಷ್ಟವಾದ ಸ್ಥಿತಿಯೂ ಅವರಿಗೆ ಬಂದಿಲ್ಲ. ಅವರು ಜೀವಂತರಾಗಿದ್ದಾಗ ಇದ್ದ ಅಸ್ತಿತ್ವವು ಈಗಲೂ ಇದೆ. ಸುಖವೂ ಕಡಿಮೆಯಾಗಿಲ್ಲ.

ವಾಸ್ತವವಾದ ತತ್ವವೇನೆಂದರೆ: ಎಲ್ಲರೂ ಅವಾಙ್ಮಾನಸ ಗೋಚರವಾದ ಆ ಒಂದು ಪರವಸ್ತುವೆ ಆಗಿದ್ದಾರೆ. ಎಷ್ಟು ಜಿಜ್ಞಾಸೆ ಮಾಡಿದರೂ, ತಿಳಿದವರಿಂದ ಜ್ಞಾನಸಂಪಾದನೆಮಾಡಿದರೂ, ಯಾವ ಮಾನವನ ಮನಸ್ಸಿಗೂ ಈ ಪರವಸ್ತುವೇನೊ ಗೋಚರವಾಗಿಲ್ಲ. ಆದರೆ ಈ ಪ್ರಪಂಚದಲ್ಲಿರುವುದು ಈ ವಸ್ತುವೆ. ಇದು ಪ್ರಪಂಚದಲ್ಲಿ ಮುಚ್ಚಲ್ಪಟ್ಟಿದ್ದರೂ ದೇಹದ ನಿಜವಾದ ಒಡೆಯ. ಜೀವವೆಲ್ಲವೂ ಇದರ ನೆರಳು. ಆತ್ಮನು ಜನ್ಮವನ್ನು ತಾಳುವುದೂ, ದೇಹವನ್ನು ಬಿಡುವುದೂ ಇದರ ಒಂದು ಸಣ್ಣ ಚಲನೆ ಮಾತ್ರ. ನಮ್ಮ ನಿಜ ಸ್ವರೂಪವು ಇದೆಂದು ತಿಳಿದಮೇಲೆ ನಾವು ಕೊಲ್ಲುತ್ತೇವೆ, ಅಥವಾ ಕೊಲ್ಲಲ್ಪಡುತ್ತೇವೆ, ಎಂದು ಹೇಳುವುದು ಅವಿವೇಕ.

ನಾವು ಇಲ್ಲಿ ತಿಳಿಯಬೇಕಾದ ಸತ್ಯವು ಒಂದು ಮಾತ್ರ. ಯಾವುದೆಂದರೆ ನಿತ್ಯವಾದ ಆ ವಸ್ತುವು ಮನುಷ್ಯನ ಆತ್ಮನಾಗಿ ವ್ಯಕ್ತಗೊಂಡು ಕೈಗೊಳ್ಳುವ ಈ ಸಂಸಾರ ಯಾತ್ರೆಯಲ್ಲಿ ಜನನ ಮರಣಗಳೆ ಮೈಲಿಗಲ್ಲುಗಳು; ಮೇಲಿನ ಲೋಕಗಳೆ ವಿಶ್ರಾಂತಿ ಗೃಹಗಳು; ಜೀವನದಲ್ಲಿ ಕಂಡುಬರುವ ಸುಖದುಃಖಗಳೆ ಹೋರಾಟದಲ್ಲಿ ಮುಂದುವರಿಯುವುದಕ್ಕೆ ಸಾಧನವಾದ ಹೆಜ್ಜೆಗಳು, ಅಮರತ್ವವೆ ಗುರಿ. "ಆದುದರಿಂದ, ಎಲೈ ಅರ್ಜುನನೆ, ಈ ವ್ಯರ್ಥವಾದ ಶೋಕವನ್ನು, ಕಾರ್ಯದಿಂದ ಹಿಮ್ಮೆಟ್ಟುವುದನ್ನು ಬಿಟ್ಟು, ಯುದ್ಧಮಾಡು" ಎಂದು ಪರಮಾತ್ಮನು ಹೇಳುತಾನೆ. ಈ ಸತ್ಯವನ್ನು ಏತಕ್ಕೆ ತಿಳಿಯಬೇಕೆಂದರೆ ಈ ಶ್ರೇಷ್ಠ ಜ್ಞಾನದಿಂದ, ಮನಸ್ಸನ್ನು ಕಠಿಣವಾದ ನಿಯಮಗಳಿಗೆ ಒಳಪಡಿಸುವುದರಿಂದ ಅದು ರಾಗದ್ವೇಷಗಳಿಂದಲೂ ಇಂದ್ರಿಯಜಾಲದಿಂದಲೂ ಬಿಡುಗಡೆ ಹೊಂದಿ ಆತ್ಮಸಾಕ್ಷಾತ್ಕಾರ ಹೊಂದುವುದಕ್ಕೂ, ಶೋಕ ಮೋಹಗಳಿಂದ ಪಾರಾಗುವದಕ್ಕೂ ಸಾಧನವಾಗುವದು. ಈ ಸತ್ಯವು ಮೃತ್ಯುಭೀತಿಯನ್ನೂ,

ಸತ್ತವರಿಗಾಗಿ ಶೋಕಿಸುವುದನ್ನೂ ತಪ್ಪಿಸುವುದು. ನಾವು ಮೃತರಾದರೆಂದು ತಿಳಿದವರು ನಿಜವಾಗಿ ನಾಶವಾಗಿಲ್ಲವೆಂದೂ, ಮೇಲಿನ ಲೋಕಗಳಿಗೆ ಮಾತ್ರ ಹೋಗಿದ್ದಾರೆಂದೂ ಅವರಿಗಾಗಿ ನಾವು ಶೋಕಿಸಬೇಕಾಗಿಲ್ಲವೆಂದೂ ನಮಗೆ ಮನವರಿಕೆಯಾಗುವಂತೆ ಮಾಡುವುದು; ಜೀವನದಲ್ಲಿ ಅತ್ಯಂತ ಕಷ್ಟವಾದ ಅನುಭವಗಳನ್ನೂ, ದೇಹದ ಮರಣವನ್ನೂ ಕೂಡ ಶಾಂತ ಮನಸ್ಸಿನಿಂದ ಹುಲ್ಲುಕಡ್ಡಿಯಹಾಗೆ ಎಣಿಸುವಂತೆ ಮಾಡುವುದು. ಜೀವನದ ಘಟನೆಗಳೆಲ್ಲವೂ ಆ ಒಂದು ವಸ್ತುವಿನ ಹೊರರೂಪ ಗಳೆಂಬ, ನಾವು ಈ ತೋರಿಕೆಯ ಪ್ರಪಂಚವನ್ನು ದಾಟಿ ನಮ್ಮ ನಿಜಸ್ವರೂಪವನ್ನು ತಿಳಿಯಲು ಇವು ಸಾಧನಗಳು ಮಾತ್ರವೆಂಬ ಜ್ಞಾನವನ್ನು ಉಂಟುಮಾಡುವುದು.

ಈ ಸತ್ಯಕ್ಕೆ ಇಷ್ಟೆಲ್ಲ ಪ್ರಯೋಜನವಿದ್ದರೂ ಅರ್ಜುನನು ಯುದ್ಧಮಾಡ ಬೇಕೆಂದಾಗಲಿ ಕುರುಕ್ಷೇತ್ರ ಯುದ್ಧವಾಗಬೇಕೆಂದಾಗಲಿ ಇದರಿಂದ ಹೇಗೆ ಸಿದ್ಧವಾಗು ವುದು ? ಇದಕ್ಕೆ ಉತ್ತರವನ್ನು ಈರೀತಿ ಹೇಳಬೇಕಾಗುವುದು. ಅರ್ಜುನನ ಬೆಳವಣಿ ಗೆಗೆ ಈ ಕಾರ್ಯಗಳನ್ನು ಅವನು ಮಾಡಬೇಕಾದುದು ಅವಶ್ಯಕ. ಸಮಾಜಕ್ಕೆ ಅವನ ಕರ್ತವ್ಯವನ್ನೂ, ಅವನ ಜೀವನದ ಧರ್ಮವನ್ನೂ ಪಾಲಿಸಬೇಕಾದರೆ ಈ ಕಾರ್ಯಗಳನ್ನು ಅವನು ಮಾಡಲೇಬೇಕು. ಪರವಸ್ತುವಿನ ಹೊರರೂಪವಾಗಿರುವ ಈ ಪ್ರಪಂಚವು ಮನುಷ್ಯನ ಆಧ್ಯಾತ್ಮಿಕ ಬೆಳವಣಿಗೆಗೆ ಹೇಗೆ ಸಾಧನವೊ ಹಾಗೆಯೆ ಈ ಪ್ರಪಂಚದ ಘಟನೆಗಳೂ ಕೂಡ ಆತ್ಮವಿಕಾಸಕ್ಕೆ ತಕ್ಕ ಸನ್ನಿವೇಶಗಳನ್ನು ಒದಗಿಸುವ ಸಾಧನಗಳು. ಜೀವನವು ಪರಸ್ಪರ ಸಹಾಯ ಮತ್ತು ಘರ್ಷಣೆಯಿಂದ ಕೂಡಿದೆ. ಯಾವ ಘರ್ಷಣೆಯೂ ಇಲ್ಲದೆ ಶಾಂತವಾಗಿ ಯಾವಾಗಲೂ ಸುಖಮಯ ವಾದ ಜೀವನವನ್ನು ನಾಗಿಸುತ್ತಿದ್ದರೆ ಆ ಸನ್ನಿವೇಶದಲ್ಲಿ ಮುಂದುವರಿಯುವುದಕ್ಕಾ ಗುವುದಿಲ್ಲ. ಹೆಜ್ಜೆ ಹೆಜ್ಜೆಗೂ ಕಠಿಣವಾದ ಪ್ರಯತ್ನಗಳಿಂದ ಎಡರು ತೊಡರುಗಳನ್ನು ಎದುರಿಸುತ್ತಲೆ ಇರಬೇಕು. ಹೀಗೆ ಒಳಗೂ ಹೊರಗೂ ಹೋರಾಡಬೇಕು. ಎಲ್ಲ ಕ್ಕಿಂತ ಸ್ಥೂಲವಾದ ಹೋರಾಟವನ್ನು—ಎಂದರೆ ಯುದ್ಧವನ್ನು—ಮಾಡುವವರು ಕ್ಷತ್ರಿಯರು. ಯುದ್ಧ, ಶೌರ್ಯ, ಉದಾತ್ತ ನಡತೆ ಮತ್ತು ಧೈರ್ಯಗಳು ಅವರ ಲಕ್ಷಣ. ಧರ್ಮವನ್ನು ರಕ್ಷಿಸುವುದು ಮತ್ತು ಸ್ವಲ್ಪವೂ ಹಿಂಜರಿಯದೆ ಯುದ್ಧದ ಕರೆಯನ್ನು ಸ್ವೀಕರಿಸುವುದು ಅದರ ಕರ್ತವ್ಯ ಮತ್ತು ಧರ್ಮ. ಧರ್ಮಕ್ಕೂ ಅಧರ್ಮಕ್ಕೂ, ನ್ಯಾಯಕ್ಕೂ ಅನ್ಯಾಯಕ್ಕೂ, ಇತರರನ್ನು ರಕ್ಷಿಸುವ ಬಲಕ್ಕೂ ಇತರರನ್ನು ಹಿಂಸಿಸುವುದಕ್ಕೂ, ಯಾವಾಗಲೂ ಹೋರಾಟವಿರುವುದು. ಈ ಹೋರಾಟವು ಯುದ್ಧದ ಸ್ವರೂಪವನ್ನು ತಾಳಿದಾಗ ಧರ್ಮರಕ್ಷಣೆಗಾಗಿ ಟೊಂಕ

ಕಟ್ಟಿರುವ ಯೋಧನು ತಾನು ಮಾಡಬೇಕಾಗಿರುವ ಕಾರ್ಯವು ಘೋರವೂ ಹಿಂಸಾತ್ಮಕವೂ ಆಗಿದೆಯೆಂದು ಹಿಂಜರಿಯಬಾರದು. ಹಿಂಸಕರನ್ನೂ ಕ್ರೂರಕರ್ಮಿಗಳನ್ನೂ ಕರುಣೆಯಿಂದ ನೋಡಿ, ಮಾಡಬೇಕಾಗಿರುವ ಅಪಾರವಾದ ಘೋರ ಕೊಲೆಗಾಗಿ ಹೇಸಿ, ತನ್ನ ಅನುಯಾಯಿಗಳು ಮತ್ತು ಸಹಾಯಕರನ್ನೂ ತೊರೆಯಬಾರದು ಮತ್ತು ಧರ್ಮ ಮತ್ತು ನ್ಯಾಯಗಳನ್ನು ಕ್ರೂರಕರ್ಮಿಗಳ ಆಘಾತಕ್ಕೆ ಈಡುಮಾಡಬಾರದು. ಅವನ ಧರ್ಮವೂ ನಿಷ್ಠೆಯೂ ಯುದ್ಧಮಾಡುವುದರಲ್ಲಿದೆಯೆ ಹೊರತು ಯುದ್ಧದಿಂದ ಹಿಮ್ಮೆಟ್ಟುವುದರಲ್ಲಿಲ್ಲ. ಇಲ್ಲಿ ಪಾಪವೆನ್ನಿಸಿಕೊಳ್ಳುವುದು ಕೊಲೆಮಾಡುವುದಲ್ಲ-ಕೊಲೆಯಿಂದ ಹಿಮ್ಮೆಟ್ಟುವುದು.

ಹೀಗೆ ಹೇಳಿದ ಮೇಲೆ ಶ್ರೀಕೃಷ್ಣನು ತನ್ನ ಬಂಧು ಬಾಂಧವರ ಮರಣದಿಂದ ತನ್ನ ಜೀವನವೆ ಶೂನ್ಯವಾಗುವುದೆಂಬ ಅರ್ಜುನನ ಶೋಕಕ್ಕೆ ಇನ್ನೊಂದು ರೀತಿಯಾದ ಸಮಾಧಾನವನ್ನು ಕೊಡುತ್ತಾನೆ. ಕ್ಷತ್ರಿಯನ ಜೀವನದ ಮೂಲ ಉದ್ದೇಶವೇನು? ಅವನ ಸುಖದ ನಿಜಸ್ವರೂಪವು ಯಾವುದು? ಹೆಂಡತಿ ಮಕ್ಕಳೊಡನೆ, ಬಂಧುಮಿತ್ರರೊಡನೆ, ಸಂಸಾರದಲ್ಲಿ ಸುಖವಾಗಿರುವುದಲ್ಲ. ಧರ್ಮಕ್ಕಾಗಿ ಹೋರಾಡುವುದೆ ಅವನ ಜೀವನದ ನಿಜವಾದ ಉದ್ದೇಶ. ಇದಕ್ಕಾಗಿ ಪ್ರಾಣತ್ಯಾಗ ಮಾಡುವುದೂ ಅಥವಾ ವಿಜಯಗಳಿಸಿ ವೀರನೆಂದು ಪ್ರಖ್ಯಾತಿ ಹೊಂದುವುದೂ ಅವನಿಗೆ ನಿಜವಾಗಿ ಅತ್ಯಂತ ಸುಖದಾಯಕ. ಧರ್ಮಕ್ಕಾಗಿ ಮಾಡುವ ಯುದ್ಧಕ್ಕಿಂತ ಹೆಚ್ಚು ಶ್ರೇಯಸ್ಕರವಾದುದು ಕ್ಷತ್ರಿಯನಿಗೆ ಬೇರೆ ಯಾವುದೂ ಇಲ್ಲ. ಇಂತಹ ಯುದ್ಧವು ತಾನಾಗಿಯೆ ಒದಗಿದರೆ ಅದು ಕ್ಷತ್ರಿಯನಿಗೆ ಸ್ವರ್ಗದ ಬಾಗಿಲು ತೆರೆದಂತೆ. "ಹೀಗೆ ಧರ್ಮ್ಯವಾದ ಈ ಯುದ್ಧವನ್ನು ಮಾಡಲು ನೀನು ನಿರಾಕರಿಸಿದರೆ ನಿನ್ನ ಧರ್ಮವೂ ಕೀರ್ತಿಯೂ ನಾಶವಾಗಿ ನಿನಗೆ ಪಾಪವುಂಟಾಗುವುದು. ನಿನಗೆ ಅಕೀರ್ತಿಯೂ ಅಪಯಶಸ್ಸೂ ಎಲ್ಲ ಕಡೆಯಲ್ಲಿಯೂ ಉಂಟಾಗುವುವು. ಕ್ಷತ್ರಿಯನಿಗೆ ಎಲ್ಲದಕ್ಕಿಂತ ಹೆಚ್ಚಿನ ಶೋಕವು ಯಾವುದು? ಸಂಭಾವಿತನಾದ ಕ್ಷತ್ರಿಯನಿಗೆ ವೀರರಲ್ಲಿ, ಮಹಾರಥರಲ್ಲಿ ಅಪಕೀರ್ತಿಯನ್ನೂ ಪಡೆಯುವುದು ಮರಣಕ್ಕಿಂತ ಕಷ್ಟತರ. ಯುದ್ಧ, ಶೌರ್ಯ, ಶಕ್ತಿ, ಸ್ವಾಮಿತ್ವ, ತೇಜಸ್ಸು ಮತ್ತು ವೀರಸ್ವರ್ಗ, ಇವು ಕ್ಷತ್ರಿಯನ ಆದರ್ಶಗಳು. ಈ ಉನ್ನತ ಧ್ಯೇಯವನ್ನು ತ್ಯಜಿಸಿ, ಈ ಗೌರವಕ್ಕೆ ಕಳಂಕ ಬರುವಂತೆ ಮಾಡಿ, ಇಲ್ಲಿಯವರೆಗೂ ವೀರಶ್ರೇಷ್ಠನೆಂದು ಹೆಸರುಪಡೆದಿದ್ದ ನೀನು ಈಗ ಹೇಡಿ ಮತ್ತು ದುರ್ಬಲನೆಂಬ ನಿಂದೆಗೆ ಅವಕಾಶಕೊಟ್ಟು ಜನರ ನೈತಿಕಮಟ್ಟವನ್ನು ಇಳಿಸುವುದು ಆತ್ಮನಿಗೆ ದ್ರೋಹಮಾಡಿದಂತಾಗುವುದಲ್ಲದೆ ಮುಂದಾಳುಗಳಲ್ಲಿ ಲೋಕವು ನಿರೀಕ್ಷಿಸುವ ನಡತೆಗೂ ಭಂಗತಂದಂತಾಗುತ್ತದೆ."

"ಸತ್ತರೆ ನಿನಗೆ ಸ್ವರ್ಗಪ್ರಾಪ್ತಿಯಾಗುವುದು. ಗೆದ್ದರೆ ಭೂಮಿಯು ನಿನ್ನ ವಶವಾಗುವುದು. ಆದುದರಿಂದ, ಎಲೈ ಕುಂತೀಪುತ್ರನೆ! ಎದ್ದು ನಿಲ್ಲು. ಯುದ್ಧ ಮಾಡಲು ನಿಶ್ಚಯಿಸು" ಹೀಗೆಂಬುದಾಗಿ ಶ್ರೀಕೃಷ್ಣನು ಉಪದೇಶಮಾಡುತ್ತಾನೆ.

ಕ್ಷಾತ್ರಧರ್ಮವನ್ನು ಕುರಿತ ಈ ಉತ್ತೇಜನವು ಹಿಂದೆ ಹೇಳಿದ ಮತ್ತು ಮುಂದೆ ಹೇಳುವ ಆಧ್ಯಾತ್ಮಿಕ ಉಪದೇಶಕ್ಕಿಂತ ಕೆಳಮಟ್ಟದಲ್ಲಿರುವಂತೆ ಕಾಣ ಬಹುದು. ಏತಕ್ಕೆಂದರೆ ಮುಂದಿನ ಶ್ಲೋಕದಲ್ಲಿಯೆ "ಸುಖ ದುಃಖಗಳನ್ನೂ, ಜಯಾಪಜಯಗಳನ್ನೂ, ಲಾಭ ನಷ್ಟಗಳನ್ನೂ ಸಮವಾಗಿ ಕಂಡು ಯುದ್ಧವನ್ನು ಮಾಡು" ಎಂದು ಭಗವಂತನು ಉಪದೇಶಿಸುತ್ತಾನೆ. ಆದರೆ ಮನುಷ್ಯನ ಆಧ್ಯಾತ್ಮಿಕ ಮತ್ತು ನೈತಿಕ ಬೆಳವಣಿಗೆಗೆ ಬೇರೆ ಬೇರೆ ಮಟ್ಟದ ಗುರಿಗಳು ಅವಶ್ಯಕವೆಂಬುದನ್ನು ಈ ದೇಶದ ಹಿಂದಿನ ಶಾಸ್ತ್ರಕರ್ತೃಗಳು ತಿಳಿದಿದ್ದರು. ಕ್ಷತ್ರಿಯಧರ್ಮ ಮತ್ತು ಇತರ ವರ್ಣಗಳ ಧರ್ಮಗಳು ಇಲ್ಲಿ ವಿವರಿಸಲ್ಪಡುವುದು ಸಾಮಾಜಿಕ ದೃಷ್ಟಿಯಿಂದ—ಮುಂದೆ ಹೇಳಲ್ಪಡುವಂತೆ ಆಧ್ಯಾತ್ಮಿಕದೃಷ್ಟಿಯಿಂದಲ್ಲ. "ಸುಖ ದುಃಖ ರೂಪವಾದ ಕರ್ಮಫಲವನ್ನು ನೋಡಿ ಕರ್ಮಮಾಡುತ್ತೇನೆಂದರೆ ನಿನಗೆ ನಾನು ಹೇಳುವ ಉತ್ತರವು ಇದು. ಆತ್ಮನ ಮತ್ತು ಜಗತ್ತಿನ ಸ್ವರೂಪವನ್ನು ಕುರಿತ ಶ್ರೇಷ್ಠವಾದ ಜ್ಞಾನವು ನಿನಗೆ ಯಾವ ಮಾರ್ಗವನ್ನು ತೋರಿಸುತ್ತದೆ ಎಂಬುದನ್ನು ಹೇಳಿದ್ದೇನೆ. ಮತ್ತು ಸಮಾಜಧರ್ಮ ಮತ್ತು ನಿನ್ನ ಸ್ವಧರ್ಮವಾದ ಕ್ಷತ್ರಿಯಧರ್ಮದ ಪ್ರಕಾರ ನಿನ್ನ ಕರ್ತವ್ಯವನ್ನು ಹೇಳಿದ್ದೇನೆ. ಈ ಎರಡರ ಫಲಿತಾಂಶವೂ ಒಂದೆ ಸಮಾಜಧರ್ಮ ಮತ್ತು ಕ್ಷತ್ರಿಯಧರ್ಮಗಳನ್ನು ಅನುಸರಿಸಿದರೆ ಪಾಪವೂ ದುಃಖವೂ ಉಂಟಾಗುವುದೆಂದು ನೀನು ಇನ್ನೂ ಹೇಳುವೆಯಾದರೆ ಇದಕ್ಕಿಂತ ಉತ್ತಮವಾದ ಆದರ್ಶವನ್ನಿಟ್ಟುಕೊಳ್ಳಬೇಕೆ ಹೊರತು ಕೀಳ್ಮಟ್ಟದ ಲಕ್ಷ್ಯವನ್ನಲ್ಲ. ಸ್ವಾರ್ಥವನ್ನು ಪೂರ್ಣವಾಗಿ ಬಿಡು. ಸುಖದುಃಖಗಳನ್ನೂ, ಲಾಭನಷ್ಟಗಳನ್ನೂ, ಐಹಿಕವಾದ ಫಲಗಳನ್ನೂ ಲಕ್ಷಿಸಬೇಡ. ನೀನು ನಿರ್ವಹಿಸಬೇಕಾದ ಕಾರ್ಯವೊಂದನ್ನು ಮಾತ್ರ ಲಕ್ಷ್ಯದಲ್ಲಿಡು. ಭಗವದಾಜ್ಞೆಯಿಂದ ನೀನು ಮಾಡಬೇಕಾದ ಕರ್ತವ್ಯವನ್ನು ಮಾತ್ರ ಗಮನದಲ್ಲಿಡು. ಹೀಗೆ ಮಾಡುವುದರಿಂದ ನಿನಗೆ ಪಾಪವು ಅಂಟುವುದಿಲ್ಲ." ಈ ವಿಧವಾಗಿ ಶೋಕ, ಪಾಪ ಮತ್ತು ಅನಿಷ್ಟಪರಿಣಾಮಗಳು ಉಂಟಾಗುವುದರಿಂದ ಯುದ್ಧದಿಂದ ವಿಮುಖನಾಗುತ್ತೇನೆಂಬ ಅರ್ಜುನನ ವಾದಕ್ಕೆ ಆಗಿನ ಕಾಲದ ಶ್ರೇಷ್ಠಪುರುಷರು ಪಡೆದಿದ್ದ ಜ್ಞಾನ ಮತ್ತು ಧರ್ಮಕ್ಕೆ ಅನುಗುಣವಾಗಿ ಉತ್ತರವನ್ನು ಕೊಡುತ್ತಾನೆ.

ಇದು ಕ್ಷತ್ರಿಯನ ಧರ್ಮ. "ದೇವರ ಮತ್ತು ನಿನ್ನ ಸ್ವರೂಪವನ್ನು ತಿಳಿ. ಮನುಷ್ಯರಿಗೆ ಉಪಕಾರಮಾಡು. ಧರ್ಮವನ್ನು ರಕ್ಷಿಸು. ಈ ಪ್ರಪಂಚದ ಹೋರಾಟದಲ್ಲಿ ನಿನ್ನ ಕರ್ತವ್ಯವಾದ ಯುದ್ಧವನ್ನು ಸಂಶಯವಿಲ್ಲದೆ ದೃಢಮನಸ್ಸಿನಿಂದ ನಿರ್ಭೀತಿಯಿಂದ ದೌರ್ಬಲ್ಯವಿಲ್ಲದೆ ಮಾಡು. ನೀನು ಶಾಶ್ವತನೂ ಅವಿನಾಶಿಯೂ ಆದ ಆತ್ಮ. ನಿನ್ನ ಆತ್ಮನು ಇಲ್ಲಿರುವುದು ಅಮೃತತ್ವದ ಮಟ್ಟಕ್ಕೇರುವವದಕ್ಕಾಗಿ. ಜನನಮರಣಗಳೂ, ಶೋಕ, ನೋವು ಮತ್ತು ದುಃಖಗಳೂ ಗಣಿಸಲ್ಪಡತಕ್ಕುವಲ್ಲ. ಅವುಗಳನ್ನು ಗೆದ್ದು ದಾಟಬೇಕು. ನಿನ್ನ ಸ್ವಂತ ಸುಖ, ಸಂತೋಷಲಾಭಗಳನ್ನು ಎಣಿಸಬೇಡ. ನಿನ್ನ ಉಚ್ಚವಾದ ಆದರ್ಶವನ್ನು ಗಮನದಲ್ಲಿಡು. ಧರ್ಮ-ಅಧರ್ಮಗಳ, ಉನ್ನತಿ-ಅವನತಿಗಳ ಘರ್ಷಣೆಯಿಂದ ತುಂಬಿರುವ ಪ್ರಪಂಚದಕಡೆ ನೋಡು. ಮನುಷ್ಯಶ್ರೇಷ್ಠನೂ ವೀರನೂ ಆದ ನಿನ್ನ ಸಹಾಯಕ್ಕಾಗಿ ಪ್ರಪಂಚವು ಮೊರೆಯಿಡುತ್ತಿದೆ. ಅದಕ್ಕೆ ಕಿವಿಗೊಟ್ಟು ಯುದ್ಧಮಾಡು. ಕೊಲೆಯಿಂದಲೆ ಪ್ರಪಂಚಕ್ಕೆ ಕಲ್ಯಾಣವಾಗುವುದಾದರೆ ಕೊಲ್ಲು. ಆದರೆ ನೀನು ಯಾರನ್ನು ಕೊಲ್ಲುತ್ತೀಯೊ ಅವರನ್ನು ದ್ವೇಷಿಸಬೇಡ. ಅವರಿಗಾಗಿ ಮರುಗಲೂ ಬೇಡ. ಎಲ್ಲೆಲ್ಲಿಯೂ ಏಕಮಾತ್ರನಾದ ಪರಮಾತ್ಮನನ್ನೆ ನೋಡು. ಎಲ್ಲರೂ ಮರಣರಹಿತರಾದ ಆತ್ಮರೆಂಬುದನ್ನೂ, ಈ ಶರೀರವು ನಶ್ವರವೆಂಬುದನ್ನೂ ತಿಳಿ. ನಿನ್ನ ಕೆಲಸವನ್ನು ತಾಳ್ಮೆಯಿಂದಲೂ ಉತ್ಸಾಹದಿಂದಲೂ ಸಮಬುದ್ಧಿಯಿಂದಲೂ ಮಾಡು. ಯುದ್ಧಮಾಡಿ ವೀರನಂತೆ ಮಡಿ ಅಥವಾ ಅದ್ಭುತವಾದ ಜಯವನ್ನು ಗಳಿಸು. ಭಗವಂತನಿಂದಲೂ ಮತ್ತು ನಿನ್ನ ಕ್ಷತ್ರಿಯ ಸ್ವಭಾವದಿಂದಲೂ ನಿನಗೆ ನಿಯಮಿತವಾದ ಕಾರ್ಯವು ಇದೇಯೆ."

# ಎಂಟನೆಯ ಪ್ರಕರಣ

## ಸಾಂಖ್ಯ ಮತ್ತು ಯೋಗ

ಹಿಂದೆ ಹೇಳಿದ ಉತ್ತರದಿಂದ ಅರ್ಜುನನಿಗೆ ಸಮಾಧಾನವಾಗಲಿಲ್ಲ. ಆಗ ಶ್ರೀಕೃಷ್ಣನು ಆಧ್ಯಾತ್ಮಿಕಮಟ್ಟದಿಂದ ಉತ್ತರವನ್ನು ಕೊಡುತ್ತಾ ಮೊದಲು ಸಾಂಖ್ಯ ಮತ್ತು ಯೋಗಗಳ ಪ್ರಸ್ತಾಪಮಾಡುತ್ತಾನೆ. ಇದು ಗೀತೆಯ ಮುಖ್ಯವಾದ ಭಾಗಗಳಲ್ಲೊಂದು. "ಸಾಂಖ್ಯದಲ್ಲಿ ವಸ್ತುಗಳ ಮತ್ತು ಮನಸ್ಸಂಕಲ್ಪದ ವಿಷಯವಾಗಿ ಇದೆ ಉಪದೇಶವೆ ಕೊಡಲ್ಪಟ್ಟಿದೆ. ಯೋಗದಲ್ಲಿ ನಿರೂಪಿಸಲ್ಪಟ್ಟಿರುವುದನ್ನು ಕೇಳು.

ಈ ನಿರೂಪಣೆಗನುಸಾರವಾಗಿ ನೀನು ಯೋಗದಲ್ಲಿದ್ದರೆ ಕರ್ಮಬಂಧನದಿಂದ ಬಿಡುಗಡೆ ಹೊಂದುತ್ತೀಯೆ." ಈರೀತಿಯಾಗಿ ಗೀತೆಯಲ್ಲಿ ಸಾಂಖ್ಯ ಮತ್ತು ಯೋಗಗಳಿಗೆ ಇರುವ ವ್ಯತ್ಯಾಸವನ್ನು ಹೇಳಿದೆ.

ಮೂಲತಃ ಗೀತೆಯು ವೇದಾಂತಗ್ರಂಥ. ವೇದಾಂತವನ್ನು ಬೋಧಿಸುವ ಪ್ರಸ್ಥಾನತ್ರಯಗಳಲ್ಲಿ ಇದು ಒಂದು. ಶ್ರುತಿಗ್ರಂಥವಲ್ಲದಿದ್ದರೂ-ಎಂದರೆ ತಪಸ್ಸಿನ ಮೂಲಕ ಋಷಿಗಳ ಸೂಕ್ಷ್ಮದೃಷ್ಟಿಗೆ ಗೋಚರವಾದ ವೇದವಲ್ಲದಿದ್ದರೂ-ಗೀತೆಗೆ ಎಷ್ಟು ಗೌರವವಿದೆಯೆಂದರೆ ಅದು ಹದಿಮೂರನೆಯ ಉಪನಿಷತ್ತಿನಂತೆ ಎಣಿಸಲ್ಪಟ್ಟಿದೆ. ಇದು ಬಹಳ ತರ್ಕಬದ್ಧವಾಗಿದೆ; ಯುಕ್ತಿಯುಕ್ತವಾಗಿದೆ; ವೇದಾಂತಕ್ಕೆ ಸಂಬಂಧಪಟ್ಟ ಇದರ ವಾದಸರಣಿಯಲ್ಲಿ ಈ ಎರಡು ಲಕ್ಷಣಗಳೂ ಇವೆ. ಆದರೆ ಗೀತೆಯು ಪ್ರತಿಪಾದಿಸುವ ವೇದಾಂತ ತತ್ತ್ವಗಳು ಸಾಂಖ್ಯ ಮತ್ತು ಯೋಗ ತತ್ತ್ವಗಳಿಂದ ರಂಜಿತವಾಗಿವೆ. ಇದರಲ್ಲಿ ಕಂಡುಬರುವ ಸಮನ್ವಯರೂಪವಾದ ವೈಶಿಷ್ಟ್ಯಕ್ಕೆ ಗೀತೆಯು ವೇದಾಂತದೊಡನೆ ಸಾಂಖ್ಯ ಮತ್ತುಯೋಗಗಳನ್ನು ಕೂಡ ಪ್ರತಿಪಾದಿಸುವುದೆ ಕಾರಣ. ವಸ್ತುತಃ ಗೀತೆಯು ಯೋಗಸಾಧನೆಯ ಕೈಪಿಡಿ. ಯೋಗಗ್ರಂಥಗಳಲ್ಲಿ ಹೇಳಿರುವ ಸಾಧನೆಗಳ ಆಚರಣೆಗೆ ಉಪಯುಕ್ತವಾದ ವೇದಾಂತ ತತ್ತ್ವಗಳನ್ನು ಮಾತ್ರ ವಿವರಿಸುತ್ತದೆ. ವೇದಾಂತ ತತ್ತ್ವಗಳನ್ನು ಹೇಳುವುದು ಮಾತ್ರವೆ ಅಲ್ಲ-ಜ್ಞಾನ ಭಕ್ತಿಗಳಿಗೆ ಕರ್ಮವನ್ನೆ ಆಧಾರವನ್ನಾಗಿ ಮಾಡುತ್ತದೆ. ಮತ್ತು ಕರ್ಮಗಳು ಜ್ಞಾನದಲ್ಲಿ ಪರಿಸಮಾಪ್ತಿಹೊಂದುವುದೆಂದು ಹೇಳುವುದಲ್ಲದೆ ಕರ್ಮಗಳ ತಿರುಳು ಮತ್ತು ಸಾರವೆ ಭಕ್ತಿಯೆಂದು ಹೇಳುತ್ತದೆ. ಅದಲ್ಲದೆ ಗೀತೆಯು ತಾನು ಹೇಳುವ ಯೋಗಕ್ಕೆ ಸಾಂಖ್ಯಶಾಸ್ತ್ರದ ವಿಭಜನೆಯ ಮಾರ್ಗವನ್ನು ಆಧಾರವನ್ನಾಗಿಟ್ಟುಕೊಂಡು ತನ್ನ ಉಪದೇಶದಲ್ಲಿ ಈ ಮಾರ್ಗವನ್ನು ಹೆಚ್ಚಾಗಿ ಅನುಸರಿಸುತ್ತದೆ. ಆದಾಗ್ಯೂ ಗೀತೆಯು ಸಾಂಖ್ಯಸಿದ್ಧಾಂತವನ್ನು ಅತಿಕ್ರಮಿಸಿ ಬಹಳ ಮುಂದೆ ಹೋಗುತ್ತದೆ. ಸಾಂಖ್ಯದ ಕೆಲವು ಮುಖ್ಯವಾದ ತತ್ತ್ವಗಳನ್ನೆ ನಿರಾಕರಿಸಿ ಅದರ ಕೆಳಗಿನಮಟ್ಟದ ವಿಭಜನ ಮಾರ್ಗವನ್ನೂ, ವೇದಾಂತ ಮತ್ತು ಯೋಗದ ಮೇಲ್ಮಟ್ಟದ ಸಂಯೋಜನೆಯ ಮಾರ್ಗವನ್ನೂ ಸಮನ್ವಯಗೊಳಿಸುತ್ತದೆ.

ಆದರೆ ಗೀತೆಯು ಹೇಳುವ ಸಾಂಖ್ಯವೂ ಯೋಗವೂ ಯಾವುವು? ಅವು ಈಗ ಬಳಕೆಯಲ್ಲಿರುವ ಈಶ್ವರಚಂದ್ರನ ಸಾಂಖ್ಯಕಾರಿಕೆಗಳಾಗಲಿ ಪತಂಜಲಿಯ ಯೋಗಸೂತ್ರಗಳಾಗಲಿ ಅಲ್ಲ. ಗೀತೆಯ ಸಾಂಖ್ಯವು ಸಾಂಖ್ಯಕಾರಿಕೆಗಳ ಸಾಂಖ್ಯವಲ್ಲ. ಏತಕ್ಕೆಂದರೆ ಕಾರಿಕೆಗಳು ಹೇಳುವ ಅಸಂಖ್ಯಾತ ಪುರುಷರನ್ನು ಮೂಲತತ್ತ್ವ

ವನ್ನಾಗಿ ಗೀತೆಯು ಒಪ್ಪುವುದಿಲ್ಲ ಕಾರಿಕೆಗಳು ನಿರಾಕರಿಸಿರುವ ಈ ಮೂರು ತತ್ತ್ವಗಳನ್ನು ಗೀತೆಯು ಒಪ್ಪುತ್ತದೆ:—“(1) ಒಬ್ಬನೇ ಆದ ಆತ್ಮ, ಪುರುಷ, (2) ಈ ಒಬ್ಬನೆ ಈಶ್ವರ, ಪುರುಷೋತ್ತಮ, (3) ಈ ಈಶ್ವರನೆ ಜಗತ್ತಿನ ಸೃಷ್ಟಿಕರ್ತ. ಕಾರಿಕೆಗಳ ಸಾಂಖ್ಯವು ಈಶ್ವರನನ್ನು ಒಪ್ಪುವುದಿಲ್ಲ; ಗೀತೆಯು ಈಶ್ವರನಿದ್ದಾನೆಂದು ಹೇಳುತ್ತದೆ. ಮತ್ತು ಅದ್ವೈತವನ್ನೂ, ಆತ್ಮವು ಅನೇಕವಾದುದೆಂಬ ದ್ವೈತವಾದವನ್ನೂ ಸಮನ್ವಯಮಾಡುತ್ತದೆ.

ಗೀತೆಯ ಯೋಗವೂ ಕೂಡ ಪತಂಜಲಿಯ ಯೋಗಶಾಸ್ತ್ರದ ಯೋಗವಲ್ಲ. ಪತಂಜಲಿಯ ಯೋಗವು ಬಾಹ್ಯಪ್ರಪಂಚಕ್ಕೆ ಗಮನವನ್ನು ಕೊಡದೆ ಅಂತರಿಂದ್ರಿಯವಾದ ಮನಸ್ಸನ್ನೆ ವಿಷಯವನ್ನಾಗಿ ಉಳ್ಳ ಒಂದು ಬಗೆಯ ರಾಜಯೋಗ. ಈ ಯೋಗಕ್ಕೆ ಗೊತ್ತಾದ ವ್ಯಾಪ್ತಿಯಿದೆ. ಇದರಲ್ಲಿ ನಿಷ್ಕೃಷ್ಟವಾದ ಅಂಗಗಳಿವೆ; ಕ್ರಮವಾದ ಹಂತಗಳಿವೆ; ಇದರಿಂದ ಚಿತ್ತವು ಕ್ರಮಕ್ರಮವಾಗಿ ಶಾಂತಗೊಂಡು ಸಮಾಧಿಸ್ಥಿತಿಗೆ ಒಯ್ಯಲ್ಪಡುತ್ತದೆ. ಈ ರೀತಿಯಲ್ಲಿ ಮನುಷ್ಯನು ಅಹಂಭಾವವನ್ನು ಮೀರಿ, ಕೆಲವು ತಾತ್ಕಾಲಿಕವಾದ ಮತ್ತು ಕೆಲವು ಶಾಶ್ವತವಾದ ಪ್ರಯೋಜನಗಳನ್ನು ಹೊಂದುತ್ತಾನೆ. ಮನುಷ್ಯನ ಜ್ಞಾನ ಮತ್ತು ಶಕ್ತಿಗಳ ವಿಕಾಸವೆ ತಾತ್ಕಾಲಿಕ ಪ್ರಯೋಜನ. ಸಾಯುಜ್ಯ ಮುಕ್ತಿಯೆ ಶಾಶ್ವತವಾದ ಪ್ರಯೋಜನ.

ಗೀತೆಯ ಯೋಗವನ್ನಾದರೊ ಸಂದರ್ಭಾನುಸಾರ ಹೊಂದಿಸಿಕೊಳ್ಳಬಹುದು. ಇದು ಬಹುಮುಖವಾಗಿಯೂ ಇದೆ. ಅನೇಕ ಅಂಶಗಳನ್ನೂ ಒಳಗೊಂಡಿದೆ. ಇವೆಲ್ಲವೂ ಸಹಜವಾದರೀತಿಯಲ್ಲಿ ಮಿಳಿತವಾಗಿ ಅನುಷ್ಠಾನಯೋಗ್ಯವಾಗಿವೆ. ಇವುಗಳಲ್ಲಿ ರಾಜಯೋಗವೂ ಒಂದು; ಆದರೆ ಅದೆ ಅತ್ಯಂತ ಪ್ರಧಾನವಾದುದಲ್ಲ. ಗೀತೆಯ ಯೋಗದಲ್ಲಿ ನಿಷ್ಕೃಷ್ಟವಾದ ಹಂತಗಳಿಲ್ಲ. ಇದರ ಗುರಿ ಸಹಜವಾದ ಆತ್ಮವಿಕಾಸ. ಚಿತ್ತಸ್ಥೈರ್ಯ ಮತ್ತು ಮನೋವ್ಯಾಪಾರಗಳಿಗೆ ಸಂಬಂಧಿಸಿದ ಕೆಲವು ನಿಯಮಗಳನ್ನು ಅನುಸರಿಸುವುದರಿಂದ ಮನುಷ್ಯನು ಹೊಸದಾಗಿ ಮಾರ್ಪಾಟಾಗುತ್ತಾನೆ. ಕೆಳಮಟ್ಟದ ಪ್ರಕೃತಿಯಿಂದ ಮೇಲ್ಪಟ್ಟದ ದೈವೀಪ್ರಕೃತಿಗೆ ಏರುತ್ತಾನೆ. ಒಂದು ವಿಧವಾದ ಹೊಸ ಜನ್ಮವನ್ನು ಹೊಂದುತ್ತಾನೆ. ಇದೆ ಗೀತೆಯ ಉದ್ದೇಶ. ಆದುದರಿಂದ ಯೋಗಶಾಸ್ತ್ರದ ಸಮಾಧಿಗೂ ಗೀತಾಯೋಗದ ಸಮಾಧಿಗೂ ಬಹಳ ವ್ಯತ್ಯಾಸವಿದೆ. ಪತಂಜಲಿಯ ಪ್ರಕಾರ ಕರ್ಮವು ದುರ್ಗುಣಗಳನ್ನು ಹೋಗಲಾಡಿಸಿಕೊಳ್ಳುವುದಕ್ಕೂ, ಈಶ್ವರಧ್ಯಾನದಲ್ಲಿ ಏಕಾಗ್ರತೆಯನ್ನು ಬೆಳೆಸಿಕೊಳ್ಳುವುದಕ್ಕೂ ಸಾಧನ ಮಾತ್ರ. ಗೀತೆಯ ಯೋಗದಲ್ಲಾದರೊ ಕರ್ಮವು ಯೋಗದ ಬಹಳ ಮುಖ್ಯವಾದ ಭಾಗ. ಪತಂಜಲಿಯ ಪ್ರಕಾರ ಕರ್ಮವು ಪ್ರಾರಂಭದಲ್ಲಿ ಮಾತ್ರ ಉಪಯುಕ್ತ. ಗೀತೆಯ ಯೋಗಕ್ಕೆ ಕರ್ಮವು

ಶಾಶ್ವತವಾದ ತಳಹದಿ. ರಾಜಯೋಗದಲ್ಲಿ ಕರ್ಮಸಿದ್ಧಿಯಾದಮೇಲೆ ಕರ್ಮವನ್ನು ಮೂಲೆಗೊತ್ತರಿಸಬೇಕು. ಅಥವಾ ಅದರಿಂದ ಯಾವ ಪ್ರಯೋಜನವೂ ಇಲ್ಲ. ಗೀತೆಯ ಯೋಗದಲ್ಲಾದರೊ ಕರ್ಮವು ಎಲ್ಲಕ್ಕಿಂತ ಮೇಲಿನ ಮಟ್ಟವನ್ನು ಮುಟ್ಟಲು ಸಾಧನಮಾತ್ರವಲ್ಲ; ಅನಂತರವೂ ಆಚರಿಸಲ್ಪಡಬೇಕು.

ಇವೆಲ್ಲವುಗಳಿಂದಲೂ ಒಂದು ವಿಷಯ। ಸ್ಪಷ್ಟವಾಗುತ್ತದೆ. ಶಾಸ್ತ್ರಗಳಲ್ಲಿ ನಿಷ್ಕೃಷ್ಟವಾದ ಅರ್ಥವನ್ನು ಹೊಂದಿರುವ ಕೆಲವು ಸಂಕೇತಪದಗಳು ಗೀತೆಯಲ್ಲಿ ಇನ್ನೂ ವ್ಯಾಪಕವಾದ ಅರ್ಥದಲ್ಲಿ ಉಪಯೋಗಿಸಲ್ಪಟ್ಟಿವೆಯೆಂಬುದು ಎದ್ದು ಕಾಣು ತ್ತದೆ. ಸಾಂಖ್ಯ ಮತ್ತು ಯೋಗಶಾಸ್ತ್ರಗಳ ಮುಖ್ಯವಾದ, ವ್ಯಾಪಕವಾದ, ಎಲ್ಲರಿಗೂ ಅನ್ವಯಿಸುವ ತತ್ವಗಳೆಲ್ಲವನ್ನೂ ಗೀತೆಯು ಒಪ್ಪುತ್ತದೆ. ಗೀತೆಯ ಸಾಂಖ್ಯವು ಪುರಾಣಗಳಲ್ಲಿಯೂ ಉಪನಿಷತ್ತುಗಳ ಮೂಲತತ್ವಗಳಲ್ಲಿಯೂ ಕಂಡುಬರುವ ವ್ಯಾಪಕ ವಾದ ವೇದಾಂತಶಾಸ್ತ್ರದ ಸಾಂಖ್ಯ. ಗೀತೆಯ ಪ್ರಕಾರ ಯೋಗವೆಂದರೆ ಆತ್ಮಸಾಕ್ಷಾ ತ್ಕಾರಕ್ಕೆ ಅಥವಾ ಸಾಯುಜ್ಯಕ್ಕೆ ಸಾಧನವಾದ ಮನಸ್ಸಿನ ಅಭ್ಯಾಸ ಮತ್ತು ಆಂತರಿಕ ವಾದ ಬದಲಾವಣೆ. ಇದರಲ್ಲಿ ರಾಜಯೋಗವು ಒಂದು ದಾರಿ ಮಾತ್ರ. ಸಾಂಖ್ಯವೂ ಯೋಗವೂ ಪರಸ್ಪರ ವಿರುದ್ಧವಾದ, ಹೊಂದಿಕೆಯಿಲ್ಲದ, ಭಿನ್ನವಾದ, ಎರಡು ಶಾಸ್ತ್ರ ಗಳಲ್ಲವೆಂದೂ; ಒಂದೆ ತತ್ವವನ್ನು ಆಧಾರವನ್ನಾಗಿ ಹೊಂದಿ, ಒಂದೆ ಲಕ್ಷ್ಯವನ್ನೂ ಕೂಡ ಹೊಂದಿವೆಯೆಂದೂ ಗೀತೆಯು ಒತ್ತಿ ಹೇಳುತ್ತದೆ. ಪ್ರಾರಂಭದಲ್ಲಿಯೂ, ಸಾಧಿ ಸುವ ಮಾರ್ಗದಲ್ಲಿಯೂ ವ್ಯತ್ಯಾಸವಿದೆ. ಆದರೆ ಎರಡರ ಗುರಿಯು ಒಂದೆ. ಸಾಂಖ್ಯವೂ ಯೋಗವೇಯೆ; ಅದು ಜ್ಞಾನಮಾರ್ಗವನ್ನು ಅನುಸರಿಸುತ್ತದೆ. ಅದು ಮಾನಸಿಕ ವಿವೇಚನೆಯಿಂದಲೂ ನಮ್ಮ ಸ್ವರೂಪದ ವಿಮರ್ಶೆಯಿಂದಲೂ ಮೊದಲಾಗಿ ತತ್ವ ವನ್ನು ಗುರಿಯಾಗಿಟ್ಟುಕೊಂಡು ಅದರ ಸಾಕ್ಷಾತ್ಕಾರದಲ್ಲಿ ಕೊನೆಯಾಗುವುದು. ಯೋಗವಾದರೊ ಕರ್ಮಮಾರ್ಗವನ್ನು ಅನುಸರಿಸುವುದು. ಮೂಲತಃ ಅದು ಕರ್ಮ ಯೋಗ. ಗೀತೆಯ ಸಮಗ್ರ ಉಪದೇಶದಿಂದಲೂ ಮತ್ತು ಅದರಲ್ಲಿ ಹೇಳಿರುವ ವಿವರಣೆಯಿಂದಲೂ **ಕರ್ಮ**ಕ್ಕೆ ವ್ಯಾಪಕವಾದ ಅರ್ಥವಿದೆಯೆಂದೂ, ಯೋಗವೆಂದರೆ ಆಂತರವಾದ ಮತ್ತು ಬಾಹ್ಯವಾದ ಎಲ್ಲ ಕ್ರಿಯೆಗಳನ್ನೂ ಎಲ್ಲ ಕರ್ಮಗಳ ಅಧ್ಯಕ್ಷನೂ, ಆತ್ಮನ ಸರ್ವಶಕ್ತಿ. ಮತ್ತು ತಪಸ್ಸುಗಳಿಗೆ ಪ್ರಭುವೂ ಆದ ಪರಮಾತ್ಮನಲ್ಲಿ ಸ್ವಾರ್ಥ ರಹಿತವಾದ ಭಕ್ತಿಯಿಂದ ಮಾಡುವ ಅರ್ಪಣವೆಂದು ಸ್ಪಷ್ಟವಾಗುತ್ತದೆ. ಜ್ಞಾನಕ್ಕೆ ಗೋಚರವಾಗುವ ಸತ್ಯದ ಸಾಧನೆಯೆ ಯೋಗ. ಈ ಸಾಧನೆಗೆ ಜ್ಞಾನದಿಂದ ಬೆಳಗ ಲ್ಪಟ್ಟ ಭಕ್ತಿಯೆ—ಎಂದರೆ ಬುದ್ಧಿಗೆ ಯಾವುದು ಪರಾತ್ಪರ ವಸ್ತುವೆಂದು ಗೋಚರ ವಾಗಿದೆಯೊ ಅದಕ್ಕಾಗಿ ಶ್ರದ್ಧೆಯಿಂದ ಆತ್ಮಾರ್ಪಣೆ ಮಾಡುವುದೇ-ಪ್ರೇರಕಶಕ್ತಿ.

ಸಾಂಖ್ಯದ ತತ್ವಗಳು ಯಾವುವೆಂಬುದನ್ನು ನೋಡೋಣ. ಇದು ಅನುಸರಿಸುವ ವಿಭಜನೆಯ ಮಾರ್ಗಕ್ಕಾಗಿ ಈ ಶಾಸ್ತ್ರಕ್ಕೆ ಸಾಂಖ್ಯವೆಂಬ ಹೆಸರು ಬಂದಿತು (ಸಂಖ್ಯಾ). ಸಾಂಖ್ಯವು ಮನುಷ್ಯನ ಸ್ವರೂಪದ ತತ್ವಗಳನ್ನು ವಿಭಜಿಸಿ, ಬೇರೆ ಬೇರೆ ವಿಂಗಡಿಸಿ, ನಿರೂಪಿಸುತ್ತದೆ. ಸಾಮಾನ್ಯವಾಗಿ ಈ ತತ್ವಗಳ ಸಂಯೋಗಗಳೂ, ಅವುಗಳ ಪರಿಣಾಮಗಳೂ ಮನಸ್ಸಿಗೆ ಗೋಚರವಾಗುವುವೆ ಹೊರತು ಈ ತತ್ವಗಳು ಬೇರೆ ಬೇರೆಯಾಗಿ ಗೋಚರವಾಗುವುದಿಲ್ಲ. ತತ್ವಗಳನ್ನು ಸಂಯೋಗಮಾಡುವುದಕ್ಕೆ ಸಾಂಖ್ಯವು ಯಾವಾಗಲೂ ಯತ್ನಿಸಲಿಲ್ಲ. ಮೂಲತಃ ಅದರ ದೃಷ್ಟಿಯು ದ್ವೈತಪರ, ಎಂದರೆ ದ್ವೈತವೇದಾಂತದಂತೆ ಸಾಪೇಕ್ಷವಾದ ದ್ವೈತವಲ್ಲದಿದ್ದರೂ ನಿರಪೇಕ್ಷವಾದ, ಖಂಡಿತವಾದ ದ್ವೈತ. ಸಾಂಖ್ಯದರ್ಶನದ ಪ್ರಕಾರ ಸೃಷ್ಟಿಗೆ ಕಾರಣ ಒಂದಲ್ಲ–ಎರಡು ಮೂಲ ತತ್ವಗಳು; ತಟಸ್ಥನಾದ ಪುರುಷ ಮತ್ತು ಕ್ರಿಯೆಗೆ ಆಶ್ರಯವಾದ ಪ್ರಕೃತಿ. ಇವೆರಡರ ಸಂಬಂಧದಿಂದ ಸೃಷ್ಟಿಯಾಗುತ್ತದೆ. ಪುರುಷನೆಂದರೆ ಅಚಲನೂ ನಿರ್ವಿಕಾರನೂ ಅವ್ಯಯನೂ ಮತ್ತು ಸ್ವಯಂಪ್ರಕಾಶನೂ ಆದ ಶುದ್ಧ ಚೈತನ್ಯ ಸ್ವರೂಪವಾದ ಆತ್ಮ. ಪ್ರಕೃತಿಯೆಂದರೆ ಶಕ್ತಿ ಮತ್ತು ಅದರ ವ್ಯಾಪಾರ. ಪುರುಷನು ತಟಸ್ಥ; ಏನನ್ನೂ ಮಾಡುವುದಿಲ್ಲ. ಆದರೆ ಇವನಲ್ಲಿ ಪ್ರಕೃತಿಯೂ ಅದರ ವ್ಯಾಪಾರಗಳೂ ಪ್ರತಿಬಿಂಬಿತವಾಗುತ್ತವೆ. ಪ್ರಕೃತಿಯು ಚೈತನ್ಯರಹಿತವಾದುದು; ಆದರೆ ಪುರುಷನಲ್ಲಿ ಪ್ರತಿಬಿಂಬಿತವಾಗುವುದರಿಂದ ಪ್ರಕೃತಿಯಲ್ಲಿ ಚೈತನ್ಯವೂ ಮತ್ತು ಅದರ ವ್ಯಾಪಾರಗಳೂ ಇರುವಂತೆ ಕಾಣುತ್ತವೆ. ಇದರಿಂದ ಸೃಷ್ಟಿ ಸ್ಥಿತಿ ಲಯಗಳು; ಜನನ, ಜೀವನ, ಮರಣಗಳು; ಜ್ಞಾನ ಮತ್ತು ಅಜ್ಞಾನಗಳು; ಇಂದ್ರಿಯ ಜ್ಞಾನ, ಮನಸ್ಸಿನ ಜ್ಞಾನ ಮತ್ತು ಅವಿದ್ಯೆಗಳು; ಕರ್ಮ ಅಕರ್ಮಗಳು; ಸುಖ ದುಃಖಗಳು ಉಂಟಾಗುತ್ತವೆ. ಇವೆಲ್ಲವನ್ನೂ ಪ್ರಕೃತಿಯ ವಶದಿಂದ ಪುರುಷನು ತನ್ನಲ್ಲಿ ಆರೋಪಿಸಿಕೊಂಡರೂ ಇವು ಪ್ರಕೃತಿಯ ವ್ಯಾಪಾರಗಳೆ ಹೊರತು ಪುರುಷನಿಗೆ ಸೇರಿದುವಲ್ಲ.

ಪ್ರಕೃತಿಯು ಮೂರು ಗುಣಗಳನ್ನು ಹೊಂದಿದೆ; ಎಂದರೆ ಅದರ ಶಕ್ತಿಯು ಮೂರು ವಿಧವಾಗಿ ಕೆಲಸಮಾಡುತ್ತದೆ. ಜ್ಞಾನಮೂಲವಾದ ಸತ್ವಗುಣವು ಶಕ್ತಿಯನ್ನು ಸಂಗ್ರಹಿಸಿ ಅದರ ಕಾರ್ಯವನ್ನು ಸ್ಥಿರಗೊಳಿಸುತ್ತದೆ. ಕ್ರಿಯಾತ್ಮಕವಾದ ರಜೋಗುಣವು ಶಕ್ತಿಯ ಉತ್ಪತ್ತಿಗೆ ಕಾರಣ. ಅಜ್ಞಾನವನ್ನು ಮೂಲವಾಗಿ ಉಳ್ಳದ್ದೂ, ಜಡವೂ ಆದ ತಮೋಗುಣವು ಸತ್ವ ಮತ್ತು ರಜೋಗುಣಗಳಿಗೆ ವಿರುದ್ಧವಾಗಿದ್ದು ಅವು ಸೃಷ್ಟಿಗೆ ಸಂಗ್ರಹಿಸಿದ ಕಾರ್ಯವನ್ನು ನಾಶಮಾಡುತ್ತದೆ. ಇವು ಮೂರು ಗುಣಗಳೂ ಸಮಸ್ಥಿತಿಯಲ್ಲಿರುವಾಗ ಎಲ್ಲವೂ ಸ್ತಬ್ಧವಾಗಿದ್ದು, ಚಲನೆಯಾಗಲಿ ಕ್ರಿಯೆ

ಯಾಗಲಿ ಸೃಷ್ಟಿಯಾಗಲಿ ಯಾವುದೂ ಇರುವುದಿಲ್ಲ. ಆದುದರಿಂದ ಅಕ್ಷರನೂ ಜ್ಯೋತಿರೂಪನೂ ಆದ ಆತ್ಮನಲ್ಲಿ ಪ್ರತಿಬಿಂಬಿತವಾಗುವುದಕ್ಕೆ ಏನೂ ಇರುವುದಿಲ್ಲ. ಈ ಸಮಸ್ಥಿತಿಗೆ ಭಂಗ ಬಂದಾಗ ಈ ಮೂರು ಗುಣಗಳ ಸಮತ್ವವು ತಪ್ಪುತ್ತದೆ; ಅವು ಒಂದರಮೇಲೊಂದು ವರ್ತಿಸಿ ಅವುಗಳ ಸಂಕಲನದಿಂದ ಈ ಸೃಷ್ಟಿ ಸ್ಥಿತಿ ಲಯಗಳು ಉಂಟಾಗುತ್ತವೆ; ಈ ವಿಶ್ವದ ವ್ಯಾಪಾರಗಳು ಮೊದಲಾಗುತ್ತವೆ. ಎಲ್ಲಿಯವರೆಗೆ ಪುರುಷನು ಈ ವಿಷಮಸ್ಥಿತಿಯನ್ನು ಪ್ರತಿಬಿಂಬಿಸುತ್ತ ತನ್ನ ಶಾಶ್ವತವಾದ ಸ್ವರೂಪವನ್ನು ಮರೆತು ಅದನ್ನು ಪ್ರಕೃತಿಗೆ ಆರೋಪಿಸುತ್ತಾನೆಯೊ ಅಲ್ಲಿಯವರೆಗೆ ಈ ವಿಶ್ವವ್ಯಾಪಾರವು ನಡೆಯುತ್ತದೆ. ಯಾವಾಗ ಅವನು ಈ ಅವಕಾಶವನ್ನು ತಪ್ಪಿಸುತ್ತಾನೆಯೊ ಆಗ ಗುಣಗಳು ಮತ್ತೆ ಸಮಸ್ಥಿತಿಯನ್ನು ಹೊಂದುತ್ತವೆ. ಆತ್ಮನು ತನಗೆ ಸಹಜವಾದ ಶಾಶ್ವತವಾದ ಕೂಟಸ್ಥವಾದ ತಟಸ್ಥವಾದ ಸ್ವಭಾವವನ್ನು ಮತ್ತೆ ಪಡೆಯುತ್ತಾನೆ. ಹೀಗೆ ಪ್ರತಿಬಿಂಬಿಸುವುದಕ್ಕೆ ಅವಕಾಶವನ್ನು ಕೊಡುವುದು ಮತ್ತು ತಪ್ಪಿಸುವುದು ಇಷ್ಟುಮಾತ್ರವೆ ಪುರುಷನ ವ್ಯಾಪಾರ. ಹೀಗೆ ಪ್ರಕೃತಿಯನ್ನು ಪ್ರತಿಬಿಂಬಿಸುವುದರಿಂದ, ಅದಕ್ಕೆ ಅವಕಾಶ ಕೊಡುವುದರಿಂದ, ಪುರುಷನು ಸಾಕ್ಷಿಯೆಂದೂ ಅನುಮಂತೃವೆಂದೂ ಗೀತೆಯಲ್ಲಿ ಹೇಳಲ್ಪಡುತ್ತಾನೆ. ಸ್ವಯಂ ವ್ಯಾಪಾರವನ್ನು ಪ್ರಾರಂಭಿಸದೆ ಇರುವುದರಿಂದ ಈಶ್ವರನೆಂದು(ಗೀತೆಯಲ್ಲಿ)ಹೇಳಲ್ಪಟ್ಟಿಲ್ಲ. ಹೀಗೆ ಅವನು ಅನುಮತಿಯನ್ನು ಕೊಡುವುದೂ, ಅದನ್ನು ಹಿಂತೆಗೆದುಕೊಳ್ಳುವುದೂ ಕೂಡ ಕರ್ತೃಸ್ವಭಾವದ ಕಾರ್ಯವಲ್ಲ, ತಟಸ್ಥ ಸ್ವಭಾವದ ಕಾರ್ಯ. ಎಲ್ಲ ವಿಧವಾದ ವ್ಯಾಪಾರಗಳೂ ತನ್ನಲ್ಲಿ ಆಗಲಿ, ಹೊರಗೆ ಆಗಲಿ, ಪುರುಷನಿಗೆ ಸ್ವಲ್ಪವೂ ಸಂಬಂಧಪಡುವುದಿಲ್ಲ. ಅವನಿಗೆ ಸ್ವಯಂ ಪ್ರವೃರ್ತಿಸುವ ಇಚ್ಛೆಯಾಗಲಿ, ಜ್ಞಾನವಾಗಲಿ ಇಲ್ಲ. ಆದುದರಿಂದ ಸೃಷ್ಟಿಗೆಲ್ಲ ಇವನು ಏಕಮಾತ್ರ ಕಾರಣನಾಗಲಾರನು. ಆದುದರಿಂದ ಎರಡನೆಯ ಕಾರಣವನ್ನು ನಿರೂಪಿಸುವುದು ಅವಶ್ಯಕವಾಗಿದೆ. ಸಚ್ಚಿದಾನಂದಸ್ವರೂಪನಾದ ಆತ್ಮನ ಇಚ್ಛೆಯೊಂದೆ ಸೃಷ್ಟಿಗೆ ಕಾರಣವಲ್ಲ; ಪ್ರಕೃತಿ ಮತ್ತು ಪುರುಷ, ಎಂದರೆ ಕ್ರಿಯಾತ್ಮಕವಾದ ಶಕ್ತಿಯೂ ತಟಸ್ಥವಾದ ಚೈತನ್ಯವೂ ಎರಡೂ ಸೃಷ್ಟಿಗೆ ಕಾರಣಗಳು. ಈ ರೀತಿಯಾಗಿ ಸಾಂಖ್ಯವು ಜಗತ್ತಿನ ಸೃಷ್ಟಿ ಸ್ಥಿತಿಗಳನ್ನು ನಿರೂಪಿಸುತ್ತದೆ. ಆದರೆ ನಮ್ಮಲ್ಲಿ ಬಹಳವಾಗಿ ಕಂಡುಬರುವ ಮತ್ತು ಅವು ಜಡಪ್ರಕೃತಿಗೆ ಸಂಬಂಧಿಸದೆ ಪುರುಷನಿಗೆ ಸಂಬಂಧಿಸಿದೆಯೆಂದು ಸಾಮಾನ್ಯವಾಗಿ ಹೇಳಲ್ಪಡುವ ಇಚ್ಛಾಶಕ್ತಿಯೂ ಜ್ಞಾನವೂ ಎಲ್ಲಿಂದ ಬಂದವು? ಸಾಂಖ್ಯ ಸಿದ್ಧಾಂತದ ಪ್ರಕಾರ ಇವೆರಡೂ ಪ್ರಕೃತಿಗೆ ಸಂಬಂಧಿಸಿವೆ. ಪುರುಷನ ಲಕ್ಷಣಗಳಲ್ಲ. ಅವು ಪ್ರಕೃತಿಯ ಇಪ್ಪತ್ತುನಾಲ್ಕು ತತ್ತ್ವಗಳಲ್ಲಿ ಒಂದಾದ ಬುದ್ಧಿಗೆ ಸೇರಿವೆ.

ಪ್ರಪಂಚದ ಸಂಸರಣದಲ್ಲಿ ಅಚೇತನವೂ ಅವ್ಯಕ್ತವೂ ಆದ ತ್ರಿಗುಣಾತ್ಮಕವಾದ ಪ್ರಕೃತಿಯು ತನ್ನನ್ನೆ ಆಧಾರವಮಾಡಿಕೊಂಡು ಪಂಚಭೂತಗಳನ್ನು ಅಥವಾ ಶಕ್ತಿ ರೂಪಗಳನ್ನು ಸೃಷ್ಟಿಸುತ್ತದೆ. (ಸಾಂಖ್ಯ ಶಾಸ್ತ್ರದಲ್ಲಿ ವಸ್ತುವಿಗೂ ಶಕ್ತಿಗೂ ವ್ಯತ್ಯಾಸ ವಿಲ್ಲ) ಪೂರ್ವಕಾಲದ ಶಾಸ್ತ್ರಜ್ಞರು ಹೇಳಿರುವ ಆಕಾಶ, ವಾಯು, ತೇಜಸ್ಸು, ಅಪ್ಪು ಮತ್ತು ಪ್ರಥಿವಿ, ಇವು ಈಗಿನ ವಿಜ್ಞಾನ ಶಾಸ್ತ್ರದಲ್ಲಿ ಹೇಳುವ ಮೂಲವಸ್ತುಗಳಲ್ಲ; ವಸ್ತು ಅಥವಾ ಶಕ್ತಿಯ ಸೂಕ್ಷ್ಮವಾದ ವಿವಿಧ ರೂಪಗಳು; ಸ್ಥೂಲ ಪ್ರಪಂಚದಲ್ಲಿ ಇವು ಶುದ್ಧ ರೂಪದಲ್ಲಿ ದೊರೆಯುವುದಿಲ್ಲ. ಈ ವಿಶ್ವದ ಎಲ್ಲ ವಸ್ತುಗಳೂ ಈ ಪಂಚ ಭೂತಗಳ ವಿವಿಧ ಮಿಶ್ರಣದಿಂದಲೆ ಉಂಟಾಗುತ್ತವೆ. ಅಲ್ಲದೆ ಈ ಪಂಚಭೂತಗಳಲ್ಲಿ ಪ್ರತಿಯೊಂದೂ, ಮನಸ್ಸಿಗೆ ವಸ್ತುಗಳನ್ನು ತಿಳಿಯಲು ಸಾಧನಗಳಾದ ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳೆಂಬ ದ್ರವ್ಯ ಅಥವಾ ಶಕ್ತಿಯ ಸೂಕ್ಷ್ಮ ಗುಣಗಳಿಗೆ ಆಧಾರ ವಾಗಿರುವುದು. ಈ ರೀತಿಯಲ್ಲಿ ಇಂದ್ರಿಯ ಗ್ರಾಹ್ಯವಾದ ವಿಶ್ವದ ಸ್ವರೂಪಕ್ಕೆ ಮೂಲ ಪ್ರಕೃತಿಯಿಂದ (ಅಥವಾ ಶಕ್ತಿಯಿಂದ) ಉತ್ಪನ್ನವಾದ ಪಂಚಭೂತಗಳೂ ಮತ್ತು ಶಬ್ದ ಸ್ಪರ್ಶಾದಿ ಐದು ತನ್ಮಾತ್ರೆಗಳೂ ಕಾರಣಗಳಾಗಿವೆ.

ಈ ಹತ್ತಲ್ಲದೆ ಈ ವಿಶ್ವದಲ್ಲಿ ಸೂಕ್ಷ್ಮವಾದ ಹದಿಮೂರು ತತ್ವಗಳಿವೆ. ಅವು ಯಾವುವೆಂದರೆ: ಮಹತ್ ಅಥವಾ ಬುದ್ಧಿ, ಅಹಂಕಾರ, ಮನಸ್ಸು, ಐದು ಜ್ಞಾನೇಂದ್ರಿಯಗಳು ಮತ್ತು ಐದು ಕರ್ಮೇಂದ್ರಿಯಗಳು. ಇವುಗಳ ವ್ಯಾಪಾರಗಳನ್ನೂ ಮತ್ತು ಬೇರೆ ಎಲ್ಲ ವಿಷಯಗಳನ್ನೂ ಗ್ರಹಿಸಿ ಪ್ರತಿಕ್ರಿಯೆಯನ್ನುಂಟುಮಾಡುವ, ಎಲ್ಲಕ್ಕೂ ಮೂಲಭೂತವಾದ ಇಂದ್ರಿಯವು ಮನಸ್ಸು. ಅದಕ್ಕೆ ಜ್ಞಾನಾತ್ಮಕವಾದ ಮತ್ತು ಕರ್ಮಾತ್ಮಕವಾದ ಎರಡು ವಿಧವಾದ ವ್ಯಾಪಾರಗಳಿವೆ. ಬಾಹ್ಯಸ್ಪರ್ಶಗಳಿಂದ ವಸ್ತುಗಳನ್ನು ತಿಳಿದು ಪ್ರಪಂಚದ ಸ್ವರೂಪವನ್ನು ಗ್ರಹಿಸಿ, ಅನಂತರ ಚೈತನ್ಯದ ಪ್ರತಿಕ್ರಿಯೆಗಳನ್ನು ಅವುಗಳಮೇಲೆ ಉಂಟುಮಾಡುತ್ತದೆ. ಸಾಮಾನ್ಯವಾಗಿ ವಸ್ತು ಗ್ರಹಣಕ್ಕಾಗಿ ಐದು ಜ್ಞಾನೇಂದ್ರಿಯಗಳನ್ನೂ, ತನ್ನ ಪ್ರತಿಕ್ರಿಯೆಗಾಗಿ ಐದು ಕರ್ಮೇಂದ್ರಿಯಗಳನ್ನೂ ಉಪಯೋಗಿಸುತ್ತದೆ. ವಿವೇಚನೆ ಮಾಡುವ ತತ್ವವಾದ ಬುದ್ಧಿಯು ಇಚ್ಛಾಶಕ್ತಿ, ಜ್ಞಾನಶಕ್ತಿಗಳೆರಡನ್ನೂ ಹೊಂದಿದೆ. ಈ ಪ್ರಪಂಚದಲ್ಲಿ ವಿವೇಚನೆ ಮಾಡಿ ಸಮನ್ವಯ ಮಾಡುವ ತತ್ವವು ಇದೇಯೆ. ಬುದ್ಧಿಯಲ್ಲಿ ಅಡ ಗಿರುವ **ನಾನು** ಎಂಬ ಭಾವನೆಯನ್ನುಂಟುಮಾಡುವುದು ಅಹಂಕಾರ. ಇದರಿಂದಲೆ ಪುರುಷನು ಪ್ರಕೃತಿಯೂ ಮತ್ತು ಅದರ ವ್ಯಾಪಾರಗಳೂ ತನ್ನವು ಎಂದು ತಿಳಿಯು ತ್ತಾನೆ.

ಇಂದ್ರಿಯಗೋಚರವಾದ ವ್ಯಾಪಾರಗಳಂತೆಯೆ ಧ್ಯಾನಿಕವಾದ, ಎಂದರೆ ಮನಸ್ಸಿನಿಂದ ಮಾತ್ರ. ಗ್ರಾಹ್ಯವಾದ ವ್ಯಾಪಾರಗಳೂ ಕೂಡ ಜಡವಾಗಿದ್ದು ಅಚೇತನವಾದ ಶಕ್ತಿಯ ಅಂಶಗಳೆ ಆಗಿವೆ. ಈ ರೀತಿಯಾಗಿ ಇಚ್ಛಾಶಕ್ತಿ ಜ್ಞಾನಶಕ್ತಿಗಳೂ ಅಚೇತನ ಜಡಪ್ರಕೃತಿಯ ಗುಣಗಳಾಗಿದ್ದು ಜಡವೆಂಬುವುದರಲ್ಲಿ ಸಂದೇಹ ಬರಬಹುದೇನೋ. ಆದರೆ ಆಧುನಿಕವಿಜ್ಞಾನಿಗಳೂ ಕೂಡ ಬೇರೆ ದಾರಿಯನ್ನು ಕಾಣದೆ ಇದೇ ಸಿದ್ಧಾಂತವನ್ನೆ ಒಪ್ಪಿಕೊಳ್ಳುತ್ತಿದ್ದಾರೆ.

ಜಡವಾದ ಪರಮಾಣುವಿನ ವ್ಯಾಪಾರದಲ್ಲಿಯೂ ಇಚ್ಛಾಶಕ್ತಿಯೆನ್ನಬಹುದಾದ ಒಂದು ಜಡಶಕ್ತಿಯಿರುವುದು. ಪ್ರಕೃತಿಯ ಎಲ್ಲಾ ವ್ಯಾಪಾರಗಳಲ್ಲಿಯೂ ವ್ಯಾಪಕವಾದ ಈ ಇಚ್ಛಾಶಕ್ತಿಯು, ತಿಳುವಳಿಕೆಯಿಂದ ಕೂಡಿದೆ, ಬುದ್ಧಿಪೂರ್ವಕವಾಗಿದೆ ಎನ್ನಬಹುದಾದ ಕೆಲಸಗಳನ್ನು ಯಾಂತ್ರಿಕವಾಗಿಯೆ ಮಾಡುತ್ತದೆ. ಬುದ್ಧಿಶಕ್ತಿಯೆಂದು ನಮ್ಮಿಂದ ಹೇಳಲ್ಪಡುವುದೂ, ಪ್ರಕೃತಿಯ ವ್ಯಾಪಾರಗಳಲ್ಲಿ ನಮಗೆ ಅರಿವಿಲ್ಲದೆಯೆ ವಿವೇಚನೆ ಮಾಡಿ ಸಮನ್ವಯಮಾಡುವ ಶಕ್ತಿಯೂ ಒಂದೆ ಎನ್ನಬಹುದು. ಅರಿವಿರುವ ನಮ್ಮ ಮನಸ್ಸೂ ಕೂಡ ಜಡಪ್ರಕೃತಿಯ ಯಾಂತ್ರಿಕ ವ್ಯಾಪಾರದ ಪರಿಣಾಮವೆಂದು ವಿಜ್ಞಾನಿಗಳು ಸಾಧಿಸಲು ಯತ್ನಿಸುತ್ತಿದ್ದಾರೆ. ಆದರೆ ಈಗಿನ ವಿಜ್ಞಾನಿಗಳಿಗೆ ಅಸ್ಪಷ್ಟವಾಗಿರುವುದನ್ನು ಸಾಂಖ್ಯವು ಸ್ಪಷ್ಟಪಡಿಸುತ್ತದೆ. ಪ್ರಜ್ಞಾರಹಿತವಾದುದು ಮತ್ತು ಜಡವಾದುದು ಹೇಗೆ ಪ್ರಜ್ಞಾಸಹಿತವಾಗಿ ಕಾಣಿಸಿಕೊಳ್ಳುತ್ತದೆ ಎಂಬುದನ್ನು ಸಾಂಖ್ಯವು ಈ ರೀತಿಯಾಗಿ ವಿವರಿಸುತ್ತದೆ. ಪ್ರಕೃತಿಯು ಪುರುಷನಲ್ಲಿ ಪ್ರತಿಬಿಂಬಿತವಾಗುವುದರಿಂದ, ಪುರುಷನಲ್ಲಿ ಕಂಡುಬರುವ ಚೈತನ್ಯಕ್ಕೆ ಜಡಪ್ರಕೃತಿಯ ವ್ಯಾಪಾರಗಳೆ ಕಾರಣ. ಇದರಿಂದಲೆ ಪ್ರಕೃತಿವ್ಯಾಪಾರಗಳಿಗೆ ಸಾಕ್ಷಿಯಾಗಿರುವ ಪುರುಷನು ತನ್ನ ನಿಜಸ್ವರೂಪವನ್ನು ಮರೆತು, ಪ್ರಕೃತಿಯಿಂದ ಮೋಹಿತನಾಗಿ, ಅನುಭವಿಸುವವನೂ, ಯೋಚಿಸುವನೂ, ಇಚ್ಛಿಸುವವವನೂ, ಮಾಡುವವನೂ ತಾನೆ ಎಂದು ತಿಳಿದುಕೊಳ್ಳುವನು. ವಾಸ್ತವವಾಗಿ ಈ ವ್ಯಾಪಾರಗಳಿಗೆಲ್ಲ ತ್ರಿಗುಣಾತ್ಮಕವಾದ ಪ್ರಕೃತಿಯೆ ಆಶ್ರಯವೆ ಹೊರತು ಪುರುಷನಲ್ಲ. ಪ್ರಕೃತಿ ವ್ಯಾಪಾರದ ಬಂಧನದಿಂದ ತಪ್ಪಿಸಿಕೊಂಡು ಪುರುಷನು ಮುಕ್ತಿಹೊಂದಲು ಈ ಭ್ರಮೆಯಿಂದ ಬಿಡುಗಡೆ ಹೊಂದುವುದೇ ಮೊದಲನೆಯ ಹೆಜ್ಜೆ.

ಆದರೆ ಪ್ರಪಂಚದ ಅನೇಕ ವಿಷಯಗಳಿಗೆ ಸಾಂಖ್ಯಶಾಸ್ತ್ರದಲ್ಲಿ ತೃಪ್ತಿಕರವಾದ ವಿವರಣೆಯು ದೊರಕುವುದಿಲ್ಲ. ಪ್ರಾಚೀನದರ್ಶನಗಳಿಗೆಲ್ಲ ಮುಖ್ಯಧ್ಯೇಯವು ಪ್ರಕೃತಿಯ ಬಂಧನದಿಂದ ಬಿಡುಗಡೆ ಹೊಂದುವುದಷ್ಟೆ. ಈ ಧ್ಯೇಯಕ್ಕೆ ಸಾಧನವು

ಪ್ರಪಂಚದ ಎಲ್ಲ ವ್ಯಾಪಾರಗಳನ್ನೂ (ಸೃಷ್ಟಿ, ಸ್ಥಿತಿ, ಲಯ) ತಿಳಿಸುವ ತತ್ವಗಳ ಅರಿವು. ನಮ್ಮ ಉದ್ದೇಶವು ಇಷ್ಟೆ ಆದಲ್ಲಿ, ಈ ಅರಿವನ್ನು ಉಂಟುಮಾಡುವುದಕ್ಕೆ ಇತರ ಶಾಸ್ತ್ರಗಳಷ್ಟೆ ಸಾಂಖ್ಯವೂ ಪ್ರಯೋಜನಕಾರಿಯಾಗಿದೆ. ನಾವು ಮುಂಚೆ ಗ್ರಹಿಸದೆ ಇರಬಹುದಾದ ಒಂದು ವಿಷಯವೇನೆಂದರೆ: ಏತಕ್ಕಾಗಿ ಸಾಂಖ್ಯವು ತನ್ನ ದ್ವೈತಸಿದ್ಧಾಂತದಲ್ಲಿ ಒಂದು ಪ್ರಕೃತಿಯೊಡನೆ ಅನೇಕ ಪುರುಷರನ್ನು ಹೇಳಿ ನಾನಾತ್ವವನ್ನು ಪ್ರತಿಪಾದಿಸಿದೆ?

ವಿಶ್ವದ ಸೃಷ್ಟಿ, ವಿಕಾಸಗಳನ್ನು ವಿವರಿಸಲು ಒಂದು ಪ್ರಕೃತಿ, ಒಂದು ಪುರುಷರ ಇರುವಿಕೆಯನ್ನು ಒಪ್ಪಿಕೊಂಡರೆ ಸಾಕೆಂದು ತೋರಬಹುದು. ಆದರೆ ಪ್ರಪಂಚದ ವ್ಯಾಪಾರಗಳನ್ನು ಪೂರ್ಣವಾಗಿ ವಿಭಜಿಸಿ ಪರೀಕ್ಷಿಸುವದರಿಂದ ಸಾಂಖ್ಯವು ನಾನಾತ್ವವನ್ನು ಪ್ರತಿಪಾದಿಸಲೆಬೇಕಾಯಿತು. ಮೊದಲನೆಯದಾಗಿ, ಪ್ರಪಂಚದಲ್ಲಿ ಪ್ರಜ್ಞೆಯುಳ್ಳ ಅನೇಕ ಜೀವಿಗಳಿದ್ದಾರೆ; ಪ್ರತಿಯೊಬ್ಬನೂ, ಒಂದೇ ಪ್ರಪಂಚವನ್ನು ತನ್ನದೆ ಆದ ಬೇರೆ ಬೇರೆ ದೃಷ್ಟಿಯಿಂದ ನೋಡುತ್ತಾನೆ ಮತ್ತು ತನ್ನದೆ ಆದ ಕರ್ಮೇಂದ್ರಿಯ ಮತ್ತು ಜ್ಞಾನೇಂದ್ರಿಯಗಳಿಂದ ವಿಶಿಷ್ಟವಾದ ಆಂತರಿಕ ಮತ್ತು ಬಾಹ್ಯವಾದ ಅನುಭವಗಳನ್ನು ಪಡೆಯುತ್ತಾನೆ. ಪುರುಷನು ಒಬ್ಬನೆ ಆದಲ್ಲಿ, ಪ್ರತಿಯೊಬ್ಬನಲ್ಲಿಯೂ ಈಗ ಕಂಡುಬರುವ ಪೃಥಕ್‌ಭಾವವು ಇರುತ್ತಿರಲಿಲ್ಲ. ಪ್ರತಿಯೊಬ್ಬನೂ ಬಾಹ್ಯವಾಗಿ ಮತ್ತು ಆಂತರವಾಗಿ ಪ್ರಪಂಚವನ್ನು ಒಂದೆ ರೀತಿಯಲ್ಲಿ ಒಂದೆ ದೃಷ್ಟಿಯಿಂದ ನೋಡುತ್ತಿದ್ದನು. ಪ್ರಕೃತಿಯು ಒಂದೆ ಆಗಿರುವುದರಿಂದ ಎಲ್ಲರೂ ಒಂದೆ ಪ್ರಪಂಚವನ್ನೆ ನೋಡುತ್ತಾರೆ. ಪ್ರಕೃತಿಜನ್ಯಗಳಾದ ತತ್ವಗಳು ಎಲ್ಲೆಲ್ಲಿಯೂ ಒಂದೆ ಆದುದರಿಂದ ಬಾಹ್ಯ ಮತ್ತು ಅಂತರ ಅನುಭವಗಳಿಗೆ ಆಧಾರಗಳಾದ ತತ್ವಗಳು ಎಲ್ಲರಿಗೂ ಒಂದೆ. ಆದರೆ ದೃಷ್ಟಿಯಲ್ಲಿ, ದೃಷ್ಟಿಕೋನದಲ್ಲಿ, ಕರ್ಮದಲ್ಲಿ, ಅನುಭವದಲ್ಲಿ ಮತ್ತು ಅನುಭವಗಳ ವರ್ಜನೆಯಲ್ಲಿ ಅನಂತವಾದ ವ್ಯತ್ಯಾಸಗಳು ಕಂಡುಬರುತ್ತವೆ. ಇದು ಪ್ರಕೃತಿಯಲ್ಲಿರುವ ವ್ಯತ್ಯಾಸವಲ್ಲ—ಸಾಕ್ಷಿಯಾದ ಚೈತನ್ಯಗಳಲ್ಲಿರುವ ಭೇದಗಳು. ಆದುದರಿಂದ ಅನೇಕ ಸಾಕ್ಷಿಗಳಾದ ಪುರುಷರಿದ್ದಾರೆ ಎನ್ನುವುದನ್ನು ಒಪ್ಪದಿದ್ದರೆ ಇದಕ್ಕೆ ಸರಿಯಾದ ಸಮಾಧಾನವು ದೊರಕುವುದಿಲ್ಲ. ಪ್ರತ್ಯೇಕಭಾವವನ್ನು ಉಂಟುಮಾಡುವ ಅಹಂಕಾರವೆ ಈ ದೃಷ್ಟಿವೈವಿಧ್ಯಕ್ಕೆ ಕಾರಣವೆಂದು ಹೇಳೋಣವೆಂದರೆ ಈ ಅಹಂಕಾರವು ಪ್ರಕೃತಿಯ ತತ್ವವಾದುದರಿಂದ ಅದರಲ್ಲಿ ಭೇದವು ಹುಟ್ಟಲು ಕಾರಣವಿಲ್ಲ. ಏತಕ್ಕೆಂದರೆ ಈ ಅಹಂಕಾರದ ಕಾರ್ಯವು ತಾನೇ ಪ್ರಕೃತಿಯೆಂಬ ಭಾವನೆಯನ್ನು ಪುರುಷನಲ್ಲಿ ಉಂಟುಮಾಡು

ವುದು. ಒಬ್ಬನೆ ಪುರುಷನಿದ್ದಲ್ಲಿ ಎಲ್ಲ ಜೀವಿಗಳಲ್ಲಿಯೂ ಒಂದೆ ಭಾವನೆಯಿರಬೇಕು ಈ ವೈವಿಧ್ಯಕ್ಕೆ ಅವಕಾಶವಿಲ್ಲ.

ಒಂದೆ ಪುರುಷನಿದ್ದರೆ ಕೇವಲ ಪ್ರಕೃತಿಯಲ್ಲಿರುವ ವ್ಯತ್ಯಾಸಗಳು ಈ ಒಂದೆ ಸಾಕ್ಷಿಯಲ್ಲಿ ದೃಷ್ಟಿ ಕೋನದ ಮತ್ತು ಅನುಭವಗಳ ವೈವಿಧ್ಯವನ್ನು ಇಷ್ಟರಮಟ್ಟಿಗೆ ಮಾಡುವುದು ಅಸಾಧ್ಯ. ಆದುದರಿಂದ ಒಂದೆ ಆತ್ಮನೆಂದು ಹೇಳುವ ವೇದಾಂತದಿಂದ ಸಾಂಖ್ಯವು ಜನಿಸಿದ್ದರೂ, ಅದರಿಂದ ಬೇರೆಯಾಗಿ, ಬಹು ಪುರುಷತ್ವದ ಸಿದ್ಧಾಂತವು ಇದರ ವಿಚಾರಸರಣಿಗೆ ಅನಿವಾರ್ಯವಾಯಿತು. ಈ ಪ್ರಪಂಚದ ವ್ಯಾಪಾರ ಗಳೆಲ್ಲವೂ ಒಂದು ಪ್ರಕೃತಿ ಮತ್ತು ಒಂದು ಪುರುಷನ ಸಿದ್ಧಾಂತದಿಂದ ವಿವರಿಸಲ್ಪಡ ಬಹುದು. ಆದರೆ ಈ ವಿಶ್ವದಲ್ಲಿರುವ ಜೀವಿಗಳ ಚೈತನ್ಯದ ನಾನಾತ್ವವನ್ನು ಇದರಿಂದ ನಿರೂಪಿಸಲು ಆಗುವುದಿಲ್ಲ.

ಇದಕ್ಕಿಂತಲೂ ಕಷ್ಟವಾದ ಇನ್ನೂ ಒಂದು ತೊಡಕಿದೆ. ಇತರ ದರ್ಶನಗಳಂತೆ ಈ ದರ್ಶನದ ಗುರಿಯು ಮೋಕ್ಷವೇ ಆಗಿದೆ. ಮೇಲೆ ಹೇಳಿರುವಂತೆ ಪುರುಷನು ತನ್ನ ಸ್ವಂತ ಇಚ್ಛೆಯಿಂದ ಪ್ರಕೃತಿವ್ಯಾಪಾರಗಳಲ್ಲಿ ಸಿಲುಕಿದನಷ್ಟೆ. ಹೀಗೆ ಕೊಟ್ಟಿರುವ ಒಪ್ಪಿಗೆಯನ್ನು ಹಿಂತೆಗೆದುಕೊಳ್ಳುವುದೇ ಮೋಕ್ಷ. ಆದರೆ ಹೀಗೆ ಹೇಳುವುದು ವಾಸ್ತವಾಂಶವಲ್ಲ. ವಾಸ್ತವವಾಗಿ ಪುರುಷನು ತಟಸ್ಥ ಎಂದರೆ ವ್ಯಾಪಾರರಹಿತ. ಒಪ್ಪಿಗೆ ಯನ್ನು ಕೊಡುವುದೂ, ಅದನ್ನು ಹಿಂತೆಗೆದುಕೊಳ್ಳುವುದೂ ಕೂಡ ಪ್ರಕೃತಿಯ ವ್ಯಾಪಾರವೆ ಆಗಿರಬೇಕು; ಪುರುಷನ ವ್ಯಾಪಾರವಾಗಲಾರವು. ನಾವು ಪರ್ಯಾಲೋ ಚನೆ ಮಾಡಿದರೆ ಹೀಗೆ ಒಪ್ಪಿಗೆಯನ್ನು ಹಿಂತೆಗೆದುಕೊಳ್ಳುವುದೆಂಬ ವ್ಯಾಪಾರವು ವಿವೇಚನಾಶಕ್ತಿಯುಳ್ಳ ಬುದ್ಧಿಯೆಂಬ ತತ್ವದ ಪರಾಙ್ಮುಖತ್ವವೆಂದು ತಿಳಿಯುತ್ತದೆ. ಮನಸ್ಸು ಮಾಡುವ ಗ್ರಹಣ ಕಾರ್ಯಕ್ಕೆ ಬುದ್ಧಿಯು ನೆರವಾಗಿದೆ; ಎಂದರೆ ವಿಶ್ವ ಶಕ್ತಿಯ ವ್ಯಾಪಾರಗಳನ್ನು ವಿವೇಚನೆಮಾಡಿ ಒಂದುಗೂಡಿಸುತ್ತದೆ. ಮತ್ತು ಅಹಂಕಾರ ತತ್ವದ ಸಹಾಯದಿಂದ ತಾನು ಮಾಡುವ ಜ್ಞಾನ, ಇಚ್ಛಾ, ಕ್ರಿಯಾ ವ್ಯಾಪಾರಗಳನ್ನು ಸಾಕ್ಷಿಯು ತನ್ನದೆಂದು ತಿಳಿಯುವಂತೆ ಮಾಡುತ್ತದೆ. ಕೊನೆಗೆ ತನ್ನ ವಿವೇಚನಾಶಕ್ತಿಯ ನೆರವಿನಿಂದ ಸಾಕ್ಷಿಯೆ ಕರ್ತೃವೆಂಬ ಭಾವನೆಯು ಕೇವಲ ಭ್ರಾಂತಿ ಯೆಂದು ತಿಳಿಯುತ್ತದೆ. ಅನಂತರ ಪುರುಷನೂ ಪ್ರಕೃತಿಯೂ, ಬೇರೆ ಬೇರೆ ಯೆಂದು ತಿಳಿದು ಎಲ್ಲವೂ ಗುಣಗಳ ಸಮಸ್ಥಿತಿಗೆ ಭಂಗ ಬಂದಿರುವುದರಿಂದ ಉಂಟಾ ಗಿದೆ ಯೆಂದು ತಿಳಿಯುತ್ತದೆ.

ಸಂಕಲ್ಪ ಮತ್ತು ಜ್ಞಾನಾತ್ಮಕವಾದ ಬುದ್ಧಿಯು ತಾನು ಇದುವರೆಗೆ ನೆರವು

ನೀಡಿದ್ದ ಮಿಥ್ಯಾಭಾವನೆಯಿಂದ ವಿಮುಖವಾಗುತ್ತದೆ. ಪುರುಷನು ತನ್ನ ಬಂಧವನ್ನು ಕಳೆದುಕೊಂಡು ಪ್ರಪಂಚ ವ್ಯಾಪಾರಗಳಲ್ಲಿ ಮಗ್ನವಾಗಿರುವ ಮನಸ್ಸಿನೊಡನೆ ಸಂಪರ್ಕವನ್ನು ಕಳೆದುಕೊಳ್ಳುತ್ತಾನೆ. ಇದರ ಅಂತಿಮ ಫಲವೇನೆಂದರೆ ಪುರುಷನಲ್ಲಿ ತನ್ನನ್ನು ಪ್ರತಿಬಿಂಬಿಸಿಕೊಳ್ಳುವ ಶಕ್ತಿಯನ್ನು ಪ್ರಕೃತಿಯು ಕಳೆದುಕೊಳ್ಳುತ್ತದೆ. ಇದಕ್ಕೆ ಕಾರಣವೇನೆಂದರೆ ಅಹಂಕಾರತತ್ವದ ಕಾರ್ಯವು ನಾಶವಾಗಿ ಜ್ಞಾನಾತ್ಮಕವಾದ ಬುದ್ಧಿಯು ತಾಟಸ್ಥ್ಯವನ್ನು ವಹಿಸುವುದರಿಂದ ಈ ಕೆಲಸಕ್ಕೆ ಸಾಧನವಾಗುವುದಿಲ್ಲ. ಆದುದರಿಂದ ಬೇರೆ ರೀತಿ ಇರಲು ಸಾಧ್ಯವಿಲ್ಲದೆ ಪ್ರಕೃತಿಯ ಗುಣಗಳು ಸಮಸ್ಥಿತಿಗೆ ಬರುತ್ತವೆ; ವಿಶ್ವವ್ಯಾಪಾರವು ನಿಲ್ಲುತ್ತದೆ; ಪುರುಷನಿಗೆ ಹಿಂದಿನ ಜಡಸ್ಥಿತಿಯು ಮತ್ತೊಮ್ಮೆ ಬರುತ್ತದೆ. ಒಬ್ಬನೆ ಪುರುಷನಿದ್ದಲ್ಲಿ, ಬುದ್ಧಿಯು ಈ ಮೋಹದಿಂದ ವಿಮುಖವಾದಾಗ ವಿಶ್ವವೆಲ್ಲವೂ ಇಲ್ಲದೆ ಹೋಗಬೇಕು. ವಾಸ್ತವವಾಗಿ ಈ ರೀತಿ ಆಗುವುದಿಲ್ಲವೆಂಬುದು ನಮಗೆ ಸ್ಪಷ್ಟವಾಗಿದೆ. ಅಸಂಖ್ಯಾತ ಲಕ್ಷ ಜೀವಿಗಳಲ್ಲಿ ಕೆಲವರು ಮಾತ್ರ ಮುಕ್ತಿಯನ್ನು ಪಡೆಯುತ್ತಾರೆ ಅಥವಾ ಮುಕ್ತಿಮಾರ್ಗದಲ್ಲಿ ಮುಂದುವರಿಯುತ್ತಾರೆ. ಇದರಿಂದ ಇತರರ ಮೇಲೆ ಏನೂ ಪರಿಣಾಮವಾಗುವುದಿಲ್ಲ. ಮತ್ತು ಈ ರೀತಿ ಕೆಲವರು ಸಂಪೂರ್ಣವಾಗಿ ಪ್ರಕೃತಿ ವ್ಯಾಪಾರವನ್ನು ನಿರಾಕರಿಸುವುದರಿಂದ ಉಳಿದವರ ಮೇಲೆ ಪ್ರಕೃತಿಯ ಪ್ರಭಾವವು ಎಳ್ಳಷ್ಟೂ ಕಡಿಮೆಯಾಗುವುದಿಲ್ಲ. ಆದುದರಿಂದ ಪುರುಷರು ಅನೇಕರಿದ್ದಾರೆ ಎಂಬುದನ್ನು ಒಪ್ಪದಿದ್ದರೆ ಈ ವಿಷಯಕ್ಕೆ ಸಮಂಜಸವಾದ ವಿವರಣೆಯು ದೊರಕುವುದಿಲ್ಲ. ಈ ಪ್ರಶ್ನೆಗೆ ಅದ್ವೈತ ವೇದಾಂತದ ಪ್ರಕಾರ ಸಮಂಜಸವಾದ ಉತ್ತರ ಕೊಡಬೇಕಾದರೆ ಅದು ಮಾಯಾವಾದದಿಂದ ಮಾತ್ರ. ಈ ಸಿದ್ಧಾಂತದಲ್ಲಾದರೋ ಎಲ್ಲವೂ ಸ್ವಪ್ನದಂತೆ; ಬಂಧಮೋಕ್ಷಗಳೆರಡೂ ಕೇವಲ ತೋರಿಕೆ–ಅಂದರೆ ಮಾಯಾಕಲ್ಪಿತ; ವಾಸ್ತವವಾಗಿ ಯಾರಿಗೂ ಬಂಧನವೂ ಇಲ್ಲ, ಮೋಕ್ಷವೂ ಇಲ್ಲ. ವಾಸ್ತವಿಕತೆಗೆ ಹೆಚ್ಚು ಪ್ರಾಮುಖ್ಯವನ್ನು ಕೊಡುವ ಸಾಂಖ್ಯದರ್ಶನವಾದರೋ ವಿಶ್ವವು ಕಾಲ್ಪನಿಕವೆಂಬುವುದನ್ನು ಒಪ್ಪುವುದಿಲ್ಲ. ಇಲ್ಲಿಯೂ ಕೂಡ ಸಾಂಖ್ಯದರ್ಶನದ ಪ್ರಕಾರ ಅನೇಕ ಜೀವರಿದ್ದಾರೆ ಎಂಬ ವಾದವನ್ನು ಒಪ್ಪಿಕೊಳ್ಳದೆ ವಿಧಿಯಿಲ್ಲ.

ಗೀತೆಯು ಯೋಗವನ್ನು ನಿರೂಪಿಸುವಾಗ ಮೊದಲು ಸಾಂಖ್ಯಶಾಸ್ತ್ರದ ಈ ಸಿದ್ಧಾಂತವನ್ನು ಸಂಪೂರ್ಣವಾಗಿ ಅಂಗೀಕರಿಸಿರುವಂತೆ ತೋರುತ್ತದೆ. ಪ್ರಕೃತಿಯನ್ನೂ, ಅದರ ಮೂರು ಗುಣಗಳನ್ನೂ, ಇಪ್ಪತ್ತುನಾಲ್ಕು ತತ್ವಗಳನ್ನೂ ಒಪ್ಪಿಕೊಳ್ಳುತ್ತದೆ. ವಿಶ್ವವ್ಯಾಪಾರಕ್ಕೆಲ್ಲವೂ ಪ್ರಕೃತಿಯು ಕಾರಣವೆಂಬುದನ್ನೂ, ಪುರುಷನು

ತಟಸ್ಥವೆಂಬುದನ್ನೂ, ಒಪ್ಪುತ್ತದೆ. ಈ ವಿಶ್ವದಲ್ಲಿ ಪ್ರಜ್ಞೆಯುಳ್ಳ ಅನೇಕ ಜೀವಿಗಳಿದ್ದಾರೆಂಬುದನ್ನು ಒಪ್ಪುತ್ತದೆ. ಅಹಂಕಾರತತ್ತ್ವದ ನಾಶದಿಂದಲೂ ಬುದ್ಧಿತತ್ತ್ವದ ವಿವೇಚನಾಶಕ್ತಿಯಿಂದಲೂ ತ್ರಿಗುಣಾತ್ಮಕವಾದ ಪ್ರಕೃತಿವ್ಯಾಪಾರಗಳಿಗೆ ಅತೀತವಾಗುವುದರಿಂದಲೂ ಮುಕ್ತಿಯನ್ನು ಪಡೆಯಬಹುದೆಂಬುದನ್ನು ಗೀತೆಯು ಒಪ್ಪುತ್ತದೆ. ನೀನು ಅಭ್ಯಾಸಮಾಡೆಂದು ಅರ್ಜುನನಿಗೆ ಮೊದಲಿನಿಂದಲೂ ಹೇಳುವ ಯೋಗವು ಬುದ್ಧಿಯೋಗ. ಆದರೆ ಇದರಲ್ಲಿ ಮುಖ್ಯವಾದ ಒಂದು ಬದಲಾವಣೆಯಿದೆ. ಪುರುಷನು ಒಬ್ಬನೆ, ಅನೇಕ ಪುರುಷರಿಲ್ಲ, ಎಂಬುದು. ಗೀತೆಯಲ್ಲಿ ಹೇಳುವ ಸ್ವತಂತ್ರನೂ, ಅಶರೀರನೂ, ಸೂಕ್ಷ್ಮನೂ, ಅಚಲನೂ, ಧ್ರುವನೂ, ಕೂಟಸ್ಥನೂ ಆದ ಆತ್ಮನಿಗೂ, ಸಾಂಖ್ಯದಲ್ಲಿ ಹೇಳುವ ಶಾಶ್ವತನೂ, ತಟಸ್ಥನೂ, ಅಚಲನೂ ಕೂಟಸ್ಥನೂ ಆದ ಪುರುಷನಿಗೂ, ಮುಖ್ಯವಾದ ಈ ಒಂದು ಅಂಶವನ್ನು ಬಿಟ್ಟರೆ ಬೇರೆ ಯಾವ ವ್ಯತ್ಯಾಸವೂ ಇಲ್ಲ. ಯಾವುದೆಂದರೆ, ಗೀತೆಯ ಆತ್ಮನು ಒಂದೆ, ಸಾಂಖ್ಯದ ಪುರುಷರು ಅನೇಕರು. ಇದರಿಂದ ಸಾಂಖ್ಯಸಿದ್ಧಾಂತಕ್ಕೆ ಅನುಸಾರವಾಗಿ ಏಳದೆ ಇರುವ ಹೊಸ ಆಕ್ಷೇಪಣೆಗಳು ತಲೆದೋರಿ ಅವಕ್ಕೆ ಸಮಾಧಾನ ಕೊಡಬೇಕಾಗುತ್ತದೆ. ಇದಕ್ಕೋಸ್ಕರ ಗೀತೆಯು ಸಾಂಖ್ಯದ ಸಿದ್ಧಾಂತಗಳೊಡನೆ ಯೋಗದ ತತ್ತ್ವಗಳನ್ನು ಸಮನ್ವಯಮಾಡಿ ಈ ಮೂಲಕ ಈ ಆಕ್ಷೇಪಣೆಗಳಿಗೆ ಸಮಾಧಾನವನ್ನು ಕೊಟ್ಟಿದೆ.

ಹೊಸದಾಗಿ ಹೇಳುವ ಅಂಶಗಳಲ್ಲಿ ಮೊದಲನೆಯದೇನೆಂದರೆ, ಪುರುಷನ ಸ್ವರೂಪದ ನಿರೂಪಣೆ. ಪ್ರಕೃತಿಯು ಪುರುಷನ ಭೋಗಕ್ಕಾಗಿ ತನ್ನ ವ್ಯಾಪಾರಗಳನ್ನು ನಡಸುತ್ತದೆಯಷ್ಟೆ; ಈ ಭೋಗದ ಸ್ವರೂಪವೇನು? ಸಾಂಖ್ಯಶಾಸ್ತ್ರದ ಪ್ರಕಾರ ಇದು ತಟಸ್ಥನಾದ ಸಾಕ್ಷಿಯ ಉದಾಸೀನದ ಒಪ್ಪಿಗೆಯಿಂದ ಸಾಧ್ಯ. ಬುದ್ಧಿಯ ಮತ್ತು ಅಹಂಕಾರದ ಕಾರ್ಯಗಳಿಗೆ ಪುರುಷನು ಔದಾಸೀನ್ಯದಿಂದಲೆ ಒಪ್ಪಿಕೊಳ್ಳುತ್ತಾನೆ; ಮತ್ತು ಔದಾಸೀನ್ಯದಿಂದಲೆ ಬುದ್ಧಿಯು ಅಹಂಕಾರದಿಂದ ವಿಮುಖವಾಗುವುದನ್ನೂ ಒಪ್ಪಿಕೊಳ್ಳುತ್ತಾನೆ. ಅವನು ಸಾಕ್ಷಿ, ಅನುಮೋದಿಸುವವನು, ಭರ್ತೃ ಇಷ್ಟು ಮಾತ್ರ; ಇನ್ನೇನೂ ಇಲ್ಲ. ಆದರೆ ಗೀತೆಯ ಪುರುಷನು ಪ್ರಕೃತಿಯ ಅಧಿಪತಿ, ಈಶ್ವರನು; ಬುದ್ಧಿ ವ್ಯಾಪಾರವು ಪ್ರಕೃತಿಗೆ ಸೇರಿದ್ದಾಗ್ಯೂ ಇಚ್ಛಾಶಕ್ತಿಯು ಪ್ರಕೃತಿಯ ಈಶ್ವರನಾದಪುರುಷನಿಗೆ ಸೇರಿದೆ. ಇಚ್ಛಾಶಕ್ತಿಯ ವ್ಯಾಪಾರಗಳೂ, ಬುದ್ಧಿಯೂ ಪ್ರಕೃತಿ ಧರ್ಮವಾದರೂ, ಆ ಬುದ್ಧಿಯನ್ನು ಬೆಳಗಿಸುವ ಜ್ಯೋತಿ ಮತ್ತು ಅದರ ಉಗಮಸ್ಥಾನ ಪುರುಷನೇಯೆ. ಅವನು ಸಾಕ್ಷಿ ಮಾತ್ರವಲ್ಲ, ಭರ್ತೃವೂ ಭೋಕ್ತೃವೂ ಜ್ಞಾತೃವೂ ಈಶ್ವರನೂ ಆಗಿದ್ದಾನೆ. ಪ್ರಕೃತಿ ವ್ಯಾಪಾರಕ್ಕೂ ಅದರ ವಿರಾಮಕ್ಕೂ ಇವನೆ ಮೂಲ

ಕಾರಣ. ಸಾಂಖ್ಯದರ್ಶನದ ಪ್ರಕಾರ ಪ್ರಕೃತಿ ಪುರುಷರಿಬ್ಬರೂ ಜಗತ್ತಿನ ಸೃಷ್ಟಿಗೆ ಕಾರಣರು; ಗೀತೆಯ ಸಾಂಖ್ಯದಲ್ಲಾದರೊ ಪುರುಷನು, ತನ್ನ ಪ್ರಕೃತಿಯ ಮೂಲಕ, ವಿಶ್ವಕ್ಕೆ ಕಾರಣನು. ಶುದ್ಧವಾದ ಸಾಂಖ್ಯ ಸಂಪ್ರದಾಯದಿಂದ ಗೀತೆಯ ಸಾಂಖ್ಯವು ಎಷ್ಟರಮಟ್ಟಿಗೆ ಬೇರೆಯಾಗಿದೆಯೆಂಬುದು ಮೇಲಿನಿಂದ ತಿಳಿಯುತ್ತದೆ.

ಗೀತೆಯು ಪ್ರಾರಂಭದಲ್ಲಿ ಹೇಳುವ ಅಕ್ಷರನೂ ಅಚಲನೂ ನಿತ್ಯಮುಕ್ತನೂ ಏಕನೂ ಆದ ಪುರುಷನ ವಿಚಾರವೇನು? ಇವನು ಅವಿಕಾರ, ಅಜ, ಅವ್ಯಕ್ತನಾದರೂ ಎಲ್ಲವನ್ನೂ ವ್ಯಾಪಿಸಿರುವ ಬ್ರಹ್ಮ ಎಂದು ಗೀತೆಯಲ್ಲಿ ಹೇಳಿದೆ. ಆದ್ದರಿಂದ ಈ ಏಕನಾದ ಬ್ರಹ್ಮನಲ್ಲಿ ಈಶ್ವರನ ತತ್ವವು ಅಡಗಿದೆಯೆಂದು ತೋರಬಹುದು. ಅವನು ಅಚಲನಾದರೂ ಎಲ್ಲ ವಿಧವಾದ ವ್ಯಾಪಾರಗಳಿಗೂ, ಚಲನೆಗಳಿಗೂ ಮೂಲ ಕಾರಣ ಮತ್ತು ಪ್ರಭು. ಇದು ಹೇಗೆ? ವಿಶ್ವದಲ್ಲಿರುವ ಪುರುಷರ ನಾನಾತ್ವವನ್ನು ಸಮರ್ಥಿಸುವುದು ಹೇಗೆ? ಅವರು ಈಶ್ವರನಾಗಿರುವಂತೆ ತೋರುವುದಿಲ್ಲ. ಅಷ್ಟು ಮಾತ್ರವಲ್ಲ; ಬಹುಮಟ್ಟಿಗೆ ಅಧೀನರಂತೆ ಕಾಣುತ್ತಾರೆ. ಅವರು ಪ್ರಕೃತಿಯ ಮೂರು ಗುಣಗಳಿಗೆ ಅಧೀನರಾಗಿರುವುದಲ್ಲದೆ ಅಹಂಭಾವವೆಂಬ ಮೋಹಕ್ಕೆ ವಶರಾಗಿದ್ದಾರೆ. ಗೀತೆಯು ಹೇಳುವಂತೆ ಇವರೆಲ್ಲರೂ ಏಕಮಾತ್ರನಾದ ಈಶ್ವರನೆ ಆಗಿದ್ದಲ್ಲಿ ಈ ಪರತಂತ್ರತೆಯೂ, ಮೋಹವೂ, ಪ್ರಕೃತಿಯೊಳಗಿನ ಪ್ರವೇಶವೂ ಹೇಗೆ ಉಂಟಾಯಿತು? ಪುರುಷನು ತಟಸ್ಥನೆಂದು ಒಪ್ಪದಿದ್ದರೆ ಇದನ್ನು ಸಮರ್ಥಿಸುವುದು ಹೇಗೆ? ಈ ನಾನಾತ್ವವು ಎಲ್ಲಿಂದ ಬಂತು? ಪುರುಷನು ಒಬ್ಬನೆ ಆಗಿರುವಾಗ ಒಂದು ಮನಸ್ಸಿನಲ್ಲಿಯೂ ಶರೀರದಲ್ಲಿಯೂ ಇರುವ ಒಬ್ಬನು ಮುಕ್ತಿಯನ್ನು ಪಡೆದರೂ ಇತರ ದೇಹ ಮತ್ತು ಮನಸ್ಸಿನಲ್ಲಿರುವವರು ಬದ್ಧರೆಂಬ ಭ್ರಮೆಗೆ ಒಳಗಾಗಿರುವುದು ಹೇಗೆ? ಈ ಸಮಸ್ಯೆಗಳನ್ನು ಬಿಡಿಸದೆ ಮುಂದೆ ಹೋಗುವುದು ಸಾಧ್ಯವಿಲ್ಲ.

ಈ ಪ್ರಶ್ನೆಗಳಿಗೆ ಗೀತೆಯು ಮುಂದಿನ ಅಧ್ಯಾಯಗಳಲ್ಲಿ ಉತ್ತರವನ್ನು ಕೊಡುತ್ತದೆ. ಅಲ್ಲಿ ಪ್ರಕೃತಿ ಪುರುಷರ ಸ್ವರೂಪದ ಬಗ್ಗೆ, ಸಾಂಖ್ಯ ಸಂಪ್ರದಾಯಕ್ಕೆ ವಿರುದ್ಧವಾದ—ಆದರೆ ವೇದಾಂತಕ್ಕೆ ಅನುಸಾರವಾದ—ಹೊಸ ಅಂಶಗಳ ನಿರೂಪಣೆಯಿದೆ. ಅಲ್ಲಿ ಗೀತೆಯು ಮೂರುವಿಧವಾದ ಪುರುಷರನ್ನು ಕುರಿತು–ಅಂದರೆ ಏಕಮಾತ್ರವಾದ ಪುರುಷನ ಮೂರು ಪದವಿಗಳನ್ನು ಕುರಿತು–ಹೇಳುತ್ತದೆ. ಸಾಂಖ್ಯಶಾಸ್ತ್ರದ ತತ್ವಗಳನ್ನು ವಿಮರ್ಶಿಸುವಾಗ ಉಪನಿಷತ್ತುಗಳು ಕೆಲವೆಡೆಗಳಲ್ಲಿ ಪುರುಷರು ಇಬ್ಬರೆಂದು ನಿರೂಪಿಸುವಂತೆ ತೋರುತ್ತದೆ. ಒಂದುಕಡೆ ಹೇಳಿರುವಂತೆ

ಮೂರು ಬಣ್ಣಗಳುಳ್ಳ ತ್ರಿಗುಣಾತ್ಮಕವಾದ ಅಜವಾದ ಪ್ರಕೃತಿಯು ಯಾವಾಗಲೂ ಸೃಷ್ಟಿಯಲ್ಲಿ ತೊಡಗಿದೆ. ಅಜರಾದ ಇಬ್ಬರು ಪುರುಷರಿದ್ದಾರೆ. ಅವರಲ್ಲಿ ಒಬ್ಬನು ಪ್ರಕೃತಿಗೆ ಅಂಟಿಕೊಂಡು ಅದನ್ನು ಅನುಭವಿಸುತ್ತಾನೆ. ಇನ್ನೊಬ್ಬನು ಈ ಭೋಗಗಳನ್ನೆಲ್ಲ ಮೊದಲೆ ಅನುಭವಿಸಿರುವುದರಿಂದ ಪ್ರಕೃತಿಯನ್ನು ತ್ಯಾಗಮಾಡಿದ್ದಾನೆ. ಇನ್ನೊಂದು ಮಂತ್ರವಲ್ಲಿ ಈ ಇಬ್ಬರು ಪುರುಷರನ್ನು ಒಂದು ಮರದ ಮೇಲೆ ಜೊತೆಯಲ್ಲಿ ಕುಳಿತಿರುವ ಎರಡು ಹಕ್ಕಿಗಳಿಗೆ ಹೋಲಿಸಿದೆ. ಒಂದು ಹಕ್ಕಿಯು ಆ ಮರದಲ್ಲಿರುವ ಫಲಗಳನ್ನು ತಿನ್ನುತ್ತದೆ--ಪ್ರಕೃತಿಸ್ಥನಾದ ಪುರುಷನು ಪ್ರಕೃತಿಯನ್ನು ಅನುಭವಿಸುವಂತೆ. ಇನ್ನೊಂದು ಹಕ್ಕಿಯು ಹಣ್ಣನ್ನು ತಿನ್ನುವುದಿಲ್ಲ, ಜೊತೆ ಪಕ್ಷಿಯು ತಿನ್ನುವುದನ್ನು ನೋಡುತ್ತದೆ—ಭೋಗಗಳಿಂದ ವಿಮುಖನಾಗಿ ತಟಸ್ಥನಾಗಿರುವ ಸಾಕ್ಷಿಯಾದ ಪುರುಷನಂತೆ. ಮೊದಲನೆಯ ಪಕ್ಷಿಯು ಎರಡನೆಯ ಪಕ್ಷಿಯನ್ನು ನೋಡಿ ಅದರ ಮಹಿಮೆಯನ್ನು ಅರಿತಾಗ ಅದು ದುಃಖದಿಂದ ಬಿಡುಗಡೆ ಹೊಂದುತ್ತದೆ. ಈ ಎರಡು ಶ್ಲೋಕಗಳ ದೃಷ್ಟಿಕೋಣವು ಬೇರೆಯಾದರೂ ತಾತ್ಪರ್ಯವು ಒಂದೆ ಆಗಿದೆ. ಇವೆರಡರಲ್ಲಿ ಒಂದು ಪಕ್ಷಿಯು ಯಾವಾಗಲೂ ತಟಸ್ಥನಾಗಿ ಬಂಧನಕ್ಕೆ ಸಿಲುಕದೆ ಇರುವ ಪುರುಷ. ಅವನಿಂದಲೆ ಈ ವಿಶ್ವವೆಲ್ಲವೂ ಹುಟ್ಟಿ ಬೆಳೆಯಿತು. ತನ್ನಿಂದ ಹೊರಹೊರಟ ಈ ವಿಶ್ವವನ್ನು ಅವನು ಅವಲೋಕಿಸುತ್ತಾನೆ, ನೋಡುತ್ತಾನೆ. ಆದರೆ ಅದಕ್ಕೆ ಸಿಕ್ಕಿಕೊಳ್ಳದೆ ತಟಸ್ಥನಾಗಿರುತ್ತಾನೆ. ಇನ್ನೊಂದು ಪಕ್ಷಿಯು ಪ್ರಕೃತಿಯಲ್ಲಿ ಸಿಕ್ಕಿಕೊಂಡಿರುವ ಪುರುಷ.

ಹಿಂದೆ ಹೇಳಿದ ಮೊದಲನೆಯ ಮಂತ್ರದ ಪ್ರಕಾರ ಅಜರಾದ ಈ ಎರಡು ಪುರುಷರೂ ಬೇರೆ ಬೇರೆಯಲ್ಲ; ಒಂದೆ ಚೈತನ್ಯದ ಎರಡು ಅವಸ್ಥೆಗಳನ್ನು, ಎಂದರೆ ಬಂಧನಕ್ಕೆ ಒಳಗಾದ ಮತ್ತು ಒಳಗಾಗದ ಎರಡು ಅವಸ್ಥೆಗಳನ್ನು ರೂಪಿಸುತ್ತಾರೆ. ಈ ಶ್ಲೋಕದಲ್ಲಿ ಹೇಳಲ್ಪಡದ ಒಂದು ವಿಷಯವು ಎರಡನೆಯ ಮಂತ್ರದಲ್ಲಿ ಸ್ಪಷ್ಟವಾಗುತ್ತದೆ: ಉತ್ತಮಲೋಕದ ಐಕ್ಯಸ್ಥಿತಿಯಲ್ಲಿ ಪುರುಷನು ಸದಾ ಮುಕ್ತ, ತಟಸ್ಥ ಮತ್ತು ಬಂಧರಹಿತ; ಕೆಳಗಿನ ಲೋಕಕ್ಕೆ ಬಂದು ಪ್ರಕೃತಿಯ ನಾನಾ ಜೀವಿಗಳಲ್ಲಿ ಪ್ರವೇಶಿಸುತ್ತಾನೆ; ನಿವೃತ್ತಿಮಾರ್ಗವನ್ನು ಅನುಸರಿಸುವಾಗ ಯಾವುದಾದರೂ ಒಂದು ವ್ಯಕ್ತಿಯಲ್ಲಿ ಮತ್ತೆ ಮೇಲಿನ ಲೋಕದ ಐಕ್ಯಸ್ಥಿತಿಗೆ ಹಿಂದಿರುಗುತ್ತಾನೆ. ಚೈತನ್ಯಯುಕ್ತನಾದ ಏಕಮಾತ್ರನಾದ ಪುರುಷನ ಉಭಯಸ್ವರೂಪದ ಈ ಸಿದ್ಧಾಂತವು ಸಮಸ್ಯೆಯನ್ನು ಬಗೆಹರಿಸಲು ದಾರಿ ತೋರಿಸುತ್ತದೆ. ಆದರೆ ಒಬ್ಬ ಪುರುಷನು ಅನೇಕವಾದ ಬಗೆ ಇನ್ನೂ ಅಸ್ಪಷ್ಟವಾಗಿಯೆ ಇದೆ.

ಈ ಎರಡು ಪುರುಷರ ಜೊತೆಗೆ ಗೀತೆಯು ಇನ್ನೂ ಒಬ್ಬ ಪುರುಷನನ್ನು ಸೇರಿಸುತ್ತದೆ. ಇವನೆ ಪುರುಷೋತ್ತಮ. ಈ ವಿಶ್ವವೆಲ್ಲವೂ ಇವನ ಮಹಿಮೆ. ಈ ರೀತಿಯಾಗಿ ಮೂರು ಪುರುಷರಿದ್ದಾರೆ : ಕ್ಷರ, ಅಕ್ಷರ ಮತ್ತು ಉತ್ತಮ. ಕ್ಷರಪುರುಷನೆಂದರೆ ಬದಲಾವಣೆಗೂ ನಾಶಕ್ಕೂ ಒಳಗಾದ ಪ್ರಕೃತಿಯ ನಾನಾತ್ವವು ಪುರುಷನಾಗುವುದು ; ಎಂದರೆ ಈ ಪುರುಷನು ಪರಮಾತ್ಮನ ಅನೇಕ ರೂಪ. ತನ್ನ ಸ್ವಭಾವ, ಶಕ್ತಿ, ಇಚ್ಛೆ ಮತ್ತು ಸಾಮರ್ಥ್ಯಗಳ ವ್ಯಾಪಾರ ಮತ್ತು ಚಲನವಲನಗಳಿಂದ ಪುರುಷನು ವಿಶ್ವವಾಗಿ ವ್ಯಕ್ತವಾಗುತ್ತಾನೆ. ಇದಕ್ಕಿಂತ ಮಿಗಿಲಾದ ಪ್ರಶಾಂತತೆ ಮತ್ತು ಅಚಲತೆಯಿಂದ ಅಕ್ಷರಸ್ಥಿತಿಯಲ್ಲಿ ಈ ವಿಶ್ವದ ವಿಷಯದಲ್ಲಿ ತಟಸ್ಥನಾಗಿರುತ್ತಾನೆ. ಮತ್ತು ಪುರುಷೋತ್ತಮ ಸ್ಥಿತಿಯಲ್ಲಿ ಅವನು ಪ್ರಕೃತಿಯಲ್ಲಿ ಸಂಬಂಧವುಳ್ಳ ಸ್ಥಿತಿಗೂ ಸಂಬಂಧವಿಲ್ಲದ ಸ್ಥಿತಿಗೂ, ಅತೀತನಾಗಿರುತ್ತಾನೆ. ಹೀಗೆ ಈ ಪುರುಷೋತ್ತಮನ ವಿಚಾರವನ್ನು ಹಿಂದೆ ಉಪನಿಷತ್ತುಗಳು ಸೂಚಿಸಿವೆ. ಗೀತೆಯು ಅದನ್ನು ಸ್ಪಷ್ಟವಾಗಿ ನಿರೂಪಿಸಿದೆ ; ಮತ್ತು ಭರತಖಂಡದ ಮತಗಳ ಬೆಳವಣಿಗೆಯ ಮೇಲೆ ವಿಶೇಷವಾದ ಪ್ರಭಾವವನ್ನು ಬೀರಿದೆ. ಅದ್ವೈತ ವೇದಾಂತದ ನಿಷ್ಕೃಷ್ಟವಾದ ಅರ್ಥಕ್ಕೆ ಅತೀತವಾದ ಶ್ರೇಷ್ಠರೀತಿಯ ಭಕ್ತಿಯೋಗಕ್ಕೆ ಈ ಪುರುಷೋತ್ತಮನ ತತ್ತ್ವವು ಆಧಾರವಾಗಿದೆ. ಭಕ್ತಿಪ್ರಧಾನವಾದ ಪುರಾಣಗಳಿಗೆ ಇದು ಹಿನ್ನೆಲೆಯಾಗಿದೆ.

ಪ್ರಕೃತಿಯ ವಿಚಾರದಲ್ಲಿಯೂ ಗೀತೆಯು ಸಾಂಖ್ಯಸಿದ್ಧಾಂತದ ಎಲ್ಲೆಗಳನ್ನು ಮೀರಿದೆ. ಸಾಂಖ್ಯಸಿದ್ಧಾಂತದ ಪ್ರಕಾರ ಅಹಂಕಾರವು ಮಾತ್ರ ಪ್ರಕೃತಿಯಲ್ಲಿ ಸೇರಿದೆ. ಪುರುಷರು ಅದಕ್ಕೆ ಒಳಪಡದೆ ಪ್ರಕೃತಿಯಿಂದ ಬೇರೆಯಾಗಿರುವರು. ಗೀತೆಯಾದರೂ ಈಶ್ವರನು ತನ್ನ ಪ್ರಕೃತಿಯನ್ನು ಅವಲಂಬಿಸಿ ಜೀವನಾಗುತ್ತಾನೆಂದು ಪ್ರತಿಪಾದಿಸುತ್ತದೆ. ಇಪ್ಪತ್ತುನಾಲ್ಕು ತತ್ವಗಳನ್ನು ಮಾತ್ರ ಹೊಂದಿರುವ ಪ್ರಕೃತಿಯಲ್ಲಿ ಇದು ಹೇಗೆ ಸಾಧ್ಯವಾದೀತು ? ಇದು ಸಾಧ್ಯವೆಂದು ಶ್ರೀ ಕೃಷ್ಣಪರಮಾತ್ಮನು ಗೀತೆಯಲ್ಲಿ ಹೇಳಿದ್ದಾನೆ. ತ್ರಿಗುಣಾತ್ಮಕವಾದ ಪ್ರಕೃತಿಯ ದೃಶ್ಯವ್ಯಾಪಾರಗಳ ವಿಷಯದಲ್ಲಿ ಸಾಂಖ್ಯಸಿದ್ಧಾಂತವು ಹೇಳುವುದು ಸಮಂಜಸವಾಗಿದೆ. ಮತ್ತು ಪ್ರಕೃತಿಯಲ್ಲಿ ಪುರುಷನ ಪ್ರವೃತ್ತಿ ಮತ್ತು ನಿವೃತ್ತಿಗಳನ್ನು ತಿಳಿದುಕೊಳ್ಳುವುದಕ್ಕೂ ಕೂಡ ಸಾಂಖ್ಯದಲ್ಲಿ ಹೇಳಿರುವ ಪ್ರಕೃತಿ-ಪುರುಷರ ಸಂಬಂಧವು ಸಮರ್ಪಕವಾಗಿದೆ. ಆದರೆ ಈ ಪ್ರಕೃತಿ ಅಪರಾಪ್ರಕೃತಿ, ಚೇತನರಹಿತವಾದುದು ; ತ್ರಿಗುಣಾತ್ಮಕವಾದುದು. ಇದಲ್ಲದೆ ಪರಾಪ್ರಕೃತಿಯೊಂದಿರುವುದು. ಇದು ಚೈತನ್ಯ ವಿಶಿಷ್ಟವಾದದ್ದು, ದೈವೀ ಸ್ವಭಾವವುಳ್ಳದ್ದು. ಈ ಪ್ರಕೃತಿಯೆ ಜೀವನಾಗಿರುವುದು.

ಅಪರಾಪ್ರಕೃತಿಯಲ್ಲಿ ಪ್ರತಿಯೊಬ್ಬ ಜೀವಿಯೂ ಅಹಂಕಾರ ವಿಶಿಷ್ಟನಾಗಿ ಕಾಣಿಸಿಕೊಳ್ಳುತ್ತಾನೆ. ಪರಾಪ್ರಕೃತಿಯಲ್ಲಾದರೊ ಪ್ರತ್ಯೇಕಪುರುಷನಾಗಿ ಕಾಣಿಸಿಕೊಳ್ಳುತ್ತಾನೆ. ಎಂದರೆ ನಾನಾತ್ವವು ಏಕವಾದ ಬ್ರಹ್ಮನ ಆಧ್ಯಾತ್ಮಿಕ ಸ್ವರೂಪಕ್ಕೆ ಸಹಜವಾದದ್ದು. ಶ್ರೀಕೃಷ್ಣನು ಹೀಗೆ ಹೇಳಿದ್ದಾನೆ "ಈ ಜೀವವು ನಾನೆ, ಸೃಷ್ಟಿಯಲ್ಲಿ ಆದು ನನ್ನ ಅಂಶವೆ; ನನ್ನ ಎಲ್ಲ ಶಕ್ತಿಗಳೂ ಜೀವನಲ್ಲಿವೆ. ಅವನು ಸಾಕ್ಷಿ, ಅನುಮೋದಿಸುವವನು, ಭರ್ತೃ, ಜ್ಞಾತೃ ಮತ್ತು ಪ್ರಭು. ಅವನು ಅಪರಾಪ್ರಕೃತಿಗೆ ಇಳಿದುಬಂದು ಕರ್ಮದಿಂದ ಬದ್ಧನಾಗಿದ್ದೇನೆಂದು ತಿಳಿದುಕೊಳ್ಳುತ್ತಾನೆ. ಇದರಿಂದ ಕೆಳಗಿನ ಲೋಕಗಳ ಅನುಭವವನ್ನು ಪಡೆಯುತ್ತಾನೆ. ಅವನಿಗೆ ಪುನಃ ಸ್ವಸ್ಥಾನಕ್ಕೆ ಹಿಂತಿರುಗಿ, ಕರ್ಮರಹಿತನಾದ ಉದಾಸೀನನಾದ ಪುರುಷನೆ ತಾನೆಂದು ತಿಳಿಯುವ ಶಕ್ತಿಯಿದೆ. ಅವನು ಮೂರು ಗುಣಗಳಿಗೆ ಅತೀತನಾಗಿ ಕರ್ಮಬಂಧದಿಂದ ಬಿಡುಗಡೆ ಹೊಂದಿಯೂ ನಾನು ಮಾಡುವಂತೆ ಕರ್ಮವನ್ನು ಮಾಡಬಹುದು" ಪುರುಷೋತ್ತಮನನ್ನು ಪೂಜಿಸುವುದರಿಂದಲೂ ಅವನಲ್ಲಿ ಐಕ್ಯವಾಗುವುದರಿಂದಲೂ ತನಗೆ ಸಹಜವಾದ ಈಶ್ವರತ್ವವನ್ನು ಪೂರ್ಣವಾಗಿ ಅನುಭವಿಸಬಹುದು.

ಗೀತೆಯ ವಿಷಯ ನಿರೂಪಣೆಯು ಮೇಲೆ ಹೇಳಿದ ರೀತಿಯಲ್ಲಿದೆ. ಕಣ್ಣಿಗೆ ಗೋಚರವಾಗುವ ವಿಶ್ವವ್ಯಾಪಾರಗಳನ್ನು ಮಾತ್ರವಲ್ಲದೆ ಬುದ್ಧಿಗೆ ಅತೀತವಾಗಿರುವ ಪ್ರಕೃತಿಯ ರಹಸ್ಯಗಳನ್ನೂ ಗಮನದಲ್ಲಿಟ್ಟುಕೊಂಡು ಗೀತೆಯು ವೇದಾಂತ, ಸಾಂಖ್ಯ ಮತ್ತು ಯೋಗದ ಸಮನ್ವಯವನ್ನೂ ಭಕ್ತಿ, ಜ್ಞಾನ ಮತ್ತು ಕರ್ಮಗಳ ಸಮನ್ವಯವನ್ನೂ ಮಾಡುತ್ತದೆ. ಕೇವಲ ಸಾಂಖ್ಯದರ್ಶನದ ಪ್ರಕಾರ, ಮುಕ್ತನಾಗಿಯೂ ಕರ್ಮವನ್ನು ಮಾಡುವುದು ಅಸಾಧ್ಯ. ಅದ್ವೈತ ವೇದಾಂತವನ್ನು ಮಾತ್ರ ತೆಗೆದುಕೊಂಡರೆ ಅದರ ಪ್ರಕಾರ ಸಂಪೂರ್ಣವಾದ ಜ್ಞಾನವೂ, ಮುಕ್ತಿಯೂ ಲಭಿಸಿದನಂತರ ಯೋಗದ ಅಂಗವಾಗಿ ಕರ್ಮನಿರತನಾಗುವುದೂ, ಭಕ್ತಿಯನ್ನು ಮಾಡುವುದೂ ಅಸಾಧ್ಯವಲ್ಲದಿದ್ದರೂ ಅರ್ಥವಿಲ್ಲದ್ದಾಗಿಯೂ, ಅನವಶ್ಯಕವಾಗಿಯೂ ಆಗುವುದು. ಗೀತೆಯ ಸಾಂಖ್ಯವೂ ಯೋಗವೂ ಈ ತೊಂದರೆಗಳನ್ನು ನಿವಾರಿಸುತ್ತವೆ.

# ಒಂಬತ್ತನೆಯ ಪ್ರಕರಣ

## ಸಾಂಖ್ಯ, ಯೋಗ ಮತ್ತು ವೇದಾಂತ

ಗೀತೆಯ ಮೊದಲನೆಯ ಆರು ಅಧ್ಯಾಯಗಳ ಉಪದೇಶದ ಉದ್ದೇಶವೇನೆಂದರೆ ಬೇರೆ ಬೇರೆಯೆಂದೂ, ಪರಸ್ಪರ ವಿರುದ್ಧವೆಂದೂ ಭಾವಿಸಲ್ಪಟ್ಟಿರುವ ಸಾಂಖ್ಯ ಮತ್ತು ಯೋಗ ಸಿದ್ಧಾಂತ ತತ್ವಗಳನ್ನು ವ್ಯಾಪಕವಾದ ವೇದಾಂತದ ಹಿನ್ನೆಲೆಯಲ್ಲಿ ಸಮನ್ವಯಮಾಡುವುದು. ಇದಕ್ಕೆ ಸಾಂಖ್ಯದಿಂದ ಮೊದಲುಮಾಡಿ ಅದನ್ನೆ ತಳಹದಿಯನ್ನಾಗಿಟ್ಟುಕೊಂಡಿದೆ. ಆದರೆ ಸಾಂಖ್ಯವು ಪ್ರಾರಂಭದಲ್ಲಿಯೆ ಯೋಗಸಿದ್ಧಾಂತದೊಡನೆ ಮಿಶ್ರವಾಗಿ, ಕ್ರಮ ಕ್ರಮವಾಗಿ ಹೆಚ್ಚಾಗಿ ಯೋಗದ ಸ್ವರೂಪವನ್ನು ಹೊಂದಿದೆ. ಆಗಿನ ಕಾಲದ ಆಸ್ತಿಕರ ದೃಷ್ಟಿಯಲ್ಲಿ ಸಾಂಖ್ಯ ಮತ್ತು ಯೋಗ ಇವೆರಡಕ್ಕೂ ತೋರುತ್ತಿದ್ದ ವ್ಯತ್ಯಾಸವೇನೆಂದರೆ: ಮೊದಲನೆಯದಾಗಿ ಸಾಂಖ್ಯವು ಜ್ಞಾನದಿಂದಲೂ ಬುದ್ಧಿಯೋಗದಿಂದಲೂ ಮುಂದುವರೆಯತಕ್ಕದ್ದು, ಯೋಗವಾದರೊ ಕರ್ಮದಿಂದಲೂ ಮತ್ತು ಜಾಗ್ರದವಸ್ಥೆಯಲ್ಲಿನ ಪ್ರಜ್ಞೆಯ ಮಾರ್ಪಾಟಿನಿಂದಲೂ ಮುಂದುವರಿಯುವ ಸ್ವಭಾವವುಳ್ಳದ್ದು. ಇದರ ಪರಿಣಾಮವಾಗಿ ಎರಡನೆಯ ವ್ಯತ್ಯಾಸವೇನೆಂದರೆ, ಸಾಂಖ್ಯವು ಕೊನೆಗೆ ಸಂಪೂರ್ಣವಾದ ತಾಟಸ್ಥ್ಯಕ್ಕೂ, ಸನ್ಯಾಸಕ್ಕೂ ಒಯ್ಯುತ್ತದೆ; ಯೋಗದ ಪ್ರಕಾರವಾದರೊ ಮನಸ್ಸಿನಲ್ಲಿ ಕಾಮವನ್ನು ತ್ಯಜಿಸಿದರೆ ಸಾಕು; ಎಂದರೆ ಕರ್ಮವನ್ನು ಪ್ರೇರಿಸುವ ಮನಸ್ಸನ್ನು ಶುದ್ಧಿಮಾಡಿದರೆ ಸಾಕು; ಆಗ ನಾವು ಮಾಡುವ ಕರ್ಮಗಳನ್ನೆಲ್ಲ ಈಶ್ವರಾರ್ಪಣೆ ಮಾಡಿ ಮುಕ್ತಿಯನ್ನು ಪಡೆಯಬಹುದು. ಆದರೆ ಇವೆರಡರ ಗುರಿಯು ಒಂದೆ: ಜನ್ಮ ಮತ್ತು ಇಹಸಂಸಾರದಿಂದ ಬಿಡಿಸಿಕೊಂಡು ಜೀವನು ಪರಮಾತ್ಮನಲ್ಲಿ ಏಕತ್ವವನ್ನು ಹೊಂದುವುದು. ಗೀತೆಯಲ್ಲಿ ನಿರೂಪಿತವಾಗಿರುವಂತೆ ಸಾಂಖ್ಯಕ್ಕೂ ಯೋಗಕ್ಕೂ ಇರುವ ವ್ಯತ್ಯಾಸವಷ್ಟೇ.

ಈ ಎರಡು ಸಿದ್ಧಾಂತಗಳ ಸಮನ್ವಯವನ್ನು ತಿಳಿಯಲು ಅರ್ಜುನನಿಗಾದ ಪ್ರಯಾಸವನ್ನು ನೋಡಿದರೆ ಆಗಿನ ಕಾಲದ ಜನರ ಮನಸ್ಸಿನಲ್ಲಿ ಇವೆರಡಕ್ಕೂ ಎಷ್ಟು ವಿರೋಧವಿತ್ತೆಂಬುದು ತಿಳಿಯುತ್ತದೆ. ಶ್ರೀಕೃಷ್ಣನು ಮೊದಲು ಕರ್ಮಕ್ಕೂ ಬುದ್ಧಿಯೋಗಕ್ಕೂ ಸಮನ್ವಯ ಮಾಡುತ್ತಾನೆ. ಬುದ್ಧಿಯೋಗವು ಬರಿಯ ಕರ್ಮಕ್ಕಿಂತಲೂ ಯಾವಾಗಲೂ ಶ್ರೇಷ್ಠ. ಬುದ್ಧಿಯೋಗದ ಸಹಾಯದಿಂದ ಮನಸ್ಸನ್ನು ಕಾಮದ ಹಿಡಿತದಿಂದ ಬಿಡಿಸಿಕೊಂಡು ಶುದ್ಧವಾಗಿಯೂ ಸಮಸ್ಥಿತಿಯುಳ್ಳದ್ದನ್ನಾಗಿಯೂ

ಮಾಡಿ ಆ ಮೂಲಕ ಬ್ರಾಹ್ಮೀಸ್ಥಿತಿಗೆ ತರುವುದರಿಂದ ಕರ್ಮಕ್ಕೆ ಸಾರ್ಥಕ್ಯವುಂಟೆಂದು ಹೇಳುತ್ತಾನೆ. ಕರ್ಮವು ಮೋಕ್ಷಕ್ಕೆ ಸಾಧನವೆಂಬುದು ಸರಿ; ಆದರೆ ಆ ಕರ್ಮವು ಜ್ಞಾನದಿಂದ ಶುದ್ಧವಾಗಿರಬೇಕು. ಆ ಕಾಲದಲ್ಲಿದ್ದ ನಂಬಿಕೆಗಳಿಂದ ಕೂಡಿದವನಾಗಿ, ವೇದಾಂತದಲ್ಲಿ ಹೇಳಿರುವ ಸಾಂಖ್ಯತತ್ವಕ್ಕೆ ಎಂದರೆ ಇಂದ್ರಿಯನಿಗ್ರಹ, ಮನಸ್ಸನ್ನು ಆತ್ಮನಲ್ಲಿ ಲಯಮಾಡುವುದು, ಬ್ರಾಹ್ಮೀಸ್ಥಿತಿಯ ಮಟ್ಟಕ್ಕೇರುವುದು, ಅಹಂಕಾರ ವಿಶಿಷ್ಟವಾದ ನಮ್ಮ ಸ್ವಭಾವವನ್ನು ಅಹಂಕಾರರಹಿತವಾದ ಬ್ರಹ್ಮನಿರ್ವಾಣದಲ್ಲಿ ಲಯಮಾಡಿಸುವುದು—ಇವೆ ಮೊದಲಾದ ತತ್ವಗಳಿಗೆ ಶ್ರೀಕೃಷ್ಣನು ಕೊಟ್ಟ ಪ್ರಾಧಾನ್ಯವನ್ನು ಅರ್ಜುನನು ತಪ್ಪುತಿಳಿದುಕೊಳ್ಳುತ್ತಾನೆ. ಇದಕ್ಕೆ ಕಾರಣವೇ ನೆಂದರೆ ಇಲ್ಲಿಯ ವರೆಗೆ ಯೋಗದ ತತ್ವಗಳನ್ನು ಹೆಚ್ಚಾಗಿ ವಿವರಿಸಿಲ್ಲ. ಹೀಗೆ ತಪ್ಪಾಗಿ ಅರ್ಥಮಾಡಿಕೊಂಡ ಅರ್ಜುನನ ಮನಸ್ಸಿನಲ್ಲಿ ಗೊಂದಲವುಂಟಾಗಿ ಅವನು ಹೀಗೆ ಕೇಳುತ್ತಾನೆ. "ಕರ್ಮಕ್ಕಿಂತಲೂ ಬುದ್ಧಿಯೆ ಹೆಚ್ಚೆಂದು ನಿನ್ನ ಅಭಿಪ್ರಾಯ ವಾದರೆ ಏತಕ್ಕಾಗಿ ಘೋರವಾದ ಕರ್ಮವನ್ನು ಮಾಡೆಂದು ನನಗೆ ಹೇಳುತ್ತೀಯೆ? ಎರಡು ರೀತಿಯ ಮಾತುಗಳಿಂದ ನನ್ನನ್ನು ಭ್ರಾಂತಿಗೊಳಿಸುತ್ತಿದ್ದೀಯೆ. ಯಾವ ಒಂದರಿಂದ ನನಗೆ ಶ್ರೇಯಸ್ಸು ದೊರೆಯುವುದು ? ಅದನ್ನು ನಿರ್ಣಯವಾಗಿ ಹೇಳು."

ಇದಕ್ಕೆ ಉತ್ತರವನ್ನು ಶ್ರೀಕೃಷ್ಣನು ಈ ರೀತಿ ಕೊಡುತ್ತಾನೆ. " ಸಾಂಖ್ಯದ ಮಾರ್ಗವು ಜ್ಞಾನ ಮತ್ತು ತ್ಯಾಗ; ಯೋಗದ ಮಾರ್ಗವು ಕರ್ಮ; ಆದರೆ ನಿಜವಾದ ತ್ಯಾಗವು ಯೋಗವಿಲ್ಲದೆ ಸಾಧ್ಯವಿಲ್ಲ. ಎಂದರೆ ಯಜ್ಞಾರ್ಥಕವಾಗಿಯೂ, ಸಮತ್ವ ಬುದ್ಧಿಯಿಂದಲೂ, ಫಲಾಪೇಕ್ಷೆಯಿಲ್ಲದೆಯೂ ಮತ್ತು ಕರ್ಮವನ್ನು ಮಾಡುವುದು ಪ್ರಕೃತಿಯೆ ಹೊರತು ಪುರುಷನಲ್ಲವೆಂಬ ಜ್ಞಾನಸಹಿತವಾಗಿಯೂ ಮಾಡುವ ಕರ್ಮ ದಿಂದಲೆ ನಿಜವಾದ ತ್ಯಾಗವು ಸಾಧ್ಯ." ಆದರೆ ಹೀಗೆ ಹೇಳಿದನಂತರವೇ ಶ್ರೀಕೃಷ್ಣನು ಪುನಃ " ಜ್ಞಾನಯಜ್ಞವೆ ಎಲ್ಲಕ್ಕಿಂತಲೂ ಶ್ರೇಷ್ಠವಾದುದು ; ಎಲ್ಲ ಕರ್ಮಗಳೂ ಜ್ಞಾನದಲ್ಲಿ ಸಮಾಪ್ತಿಹೊಂದುವುವು ; ಜ್ಞಾನಾಗ್ನಿಯಿಂದ ಎಲ್ಲ ಕರ್ಮಗಳನ್ನೂ ಭಸ್ಮ ಮಾಡಬಹುದು" ಎಂಬುದಾಗಿಯೂ ಹೇಳುತ್ತಾನೆ. ಆತ್ಮನಲ್ಲಿ ನೆಲೆಸಿರುವವನು (ಆತ್ಮಸಂಸ್ಥ) ಯೋಗದಿಂದ ಕರ್ಮಗಳನ್ನು ತ್ಯಜಿಸಿ ಅವುಗಳ ಬಂಧನದಿಂದ ಮುಕ್ತ ನಾಗುವನು.

ಅರ್ಜುನನ ಮನಸ್ಸಿಗೆ ಪುನಃ ಸಂಶಯವುಂಟಾಯಿತು. ಸಾಂಖ್ಯದ ಕರ್ಮತ್ಯಾಗವೂ ಯೋಗದ ನಿಷ್ಕಾಮಕರ್ಮವೂ ಎರಡೂ ಗೀತೆಯಲ್ಲಿ ಒಟ್ಟಿಗೆ ಹೇಳಲ್ಪಟ್ಟಿವೆ. ಆದರೆ ಇವೆರಡಕ್ಕೂ ಕಂಡುಬರುವ ವಿರೋಧವು ಪರಿಹಾರವಾಗಿಲ್ಲ.

ಶ್ರೀಕೃಷ್ಣನೂ ಪರಿಹಾರವನ್ನು ಆಗಲೆ ಹೇಳಿದ್ದಾನೆ—ಬಾಹ್ಯವಾಗಿ ಕರ್ಮವಿಲ್ಲದಿರು ವಿಕೆಯಲ್ಲಿಯೂ ಕರ್ಮವನ್ನು ನೋಡುವುದು ಮತ್ತು (ಜೀವನು ತಾನೇ ಕರ್ತೃವೆಂಬ ಭ್ರಾಂತಿಯನ್ನು ಬಿಟ್ಟು ಎಲ್ಲ ಕರ್ಮವನ್ನೂ ಯಜ್ಞಪ್ರಭುವಾದ ಭಗವಂತನಲ್ಲಿ ಅರ್ಪಿಸುವುದರಿಂದ) ಬಾಹ್ಯವಾಗಿ ಕರ್ಮವನ್ನು ಮಾಡುವುದರಲ್ಲಿಯೂ ನಿಜವಾದ ಕರ್ಮತ್ಯಾಗವನ್ನು ಕಾಣುವುದು. ಇದು ಬಾಹ್ಯಪ್ರಪಂಚದಲ್ಲೆ ದೃಷ್ಟಿಯುಳ್ಳ ಅರ್ಜುನನ ಮನಸ್ಸಿಗೆ ಗ್ರಹಿಸಲಾರದಷ್ಟು ಸೂಕ್ಷ್ಮವಾಗಿಯೂ, ಒಗಟಿಯಂತೆಯೂ ಕಂಡುಬರುತ್ತದೆ. ಅವನು ಅದರ ಅರ್ಥವನ್ನು ಗ್ರಹಿಸಲಿಲ್ಲ; ಅದರ ನಿಜವಾದ ಅಂತರಾರ್ಥವನ್ನು ತಿಳಿಯಲಿಲ್ಲ. ಆದುದರಿಂದ ಅವನು ಮತ್ತೆ ಶ್ರೀಕೃಷ್ಣನನ್ನು ಹೀಗೆ ಕೇಳುತ್ತಾನೆ. "ಕರ್ಮಗಳ ಸನ್ಯಾಸವನ್ನೂ ಯೋಗವನ್ನೂ ನೀನು ಜೊತೆಯಲ್ಲಿಯೆ ಉಪದೇಶಿಸುತ್ತೀಯೆ. ಇವೆರಡರಲ್ಲಿ ಯಾವುದೊಂದು ಶ್ರೇಷ್ಠವೊ ಅದನ್ನು ನಿಶ್ಚಿತವಾಗಿ ತಿಳಿಸು"

ಭಗವಂತನು ಇದಕ್ಕೆ ಕೊಡುವ ಉತ್ತರವು ಬಹಳ ಗಮನಾರ್ಹವಾಗಿದೆ. ಏತಕ್ಕೆಂದರೆ ಈ ಉತ್ತರವು ಸಾಂಖ್ಯಕ್ಕೂ ಯೋಗಕ್ಕೂ ಇರುವ ಭೇದವನ್ನು ಸ್ಪಷ್ಟಪಡಿಸುವುದು ಮತ್ತು ಇವೆರಡನ್ನು ಪೂರ್ಣವಾಗಿ ಸಮನ್ವಯ ಮಾಡದಿದ್ದರೂ ಹಾಗೆ ಮಾಡುವ ರೀತಿಯನ್ನು ಸೂಚಿಸುವುದು. "ಸನ್ಯಾಸವೂ ಕರ್ಮಯೋಗವೂ ಎರಡೂ ಮೋಕ್ಷವನ್ನು ದೊರಕಿಸುವುವು; ಆದರೆ ಕರ್ಮಸನ್ಯಾಸಕ್ಕಿಂತಲೂ ಕರ್ಮಯೋಗವು ಶ್ರೇಷ್ಠ. ಕರ್ಮವನ್ನು ಮಾಡುತ್ತಿದ್ದರೂ ಯಾವನಿಗೆ ದ್ವೇಷವೂ ಆಕಾಂಕ್ಷೆಯೂ ಇಲ್ಲವೊ ಅವನನ್ನು ನಿತ್ಯಸನ್ಯಾಸಿಯೆಂದು ತಿಳಿಯಬೇಕು. ದ್ವಂದ್ವಕ್ಕೆ ಸಿಲುಕದಿರುವ ಅವನು ಸುಲಭವಾಗಿಯೂ ಸುಖವಾಗಿಯೂ ಬಂಧನದಿಂದ ಬಿಡುಗಡೆ ಹೊಂದುತ್ತಾನೆ. ಸಾಂಖ್ಯವೂ ಯೋಗವೂ ಬೇರೆಬೇರೆಯೆಂದು ತಿಳಿಯದವರು ಹೇಳುತ್ತಾರೆಯೆ ಹೊರತು ಪಂಡಿತರು ಹೇಳುವುದಿಲ್ಲ. ಅವುಗಳಲ್ಲಿ ಯಾವ ಒಂದನ್ನು ಚೆನ್ನಾಗಿ ಅನುಷ್ಠಾನಮಾಡಿದರೂ ಎರಡರ ಫಲವೂ ದೊರಕುತ್ತದೆ. ಸಾಂಖ್ಯದಿಂದ ಯಾವ ಸ್ಥಾನ ದೊರೆಯುವುದೊ, ಯೋಗದಿಂದಲೂ ಅದೆ ದೊರೆಯುವುದು. ಸಾಂಖ್ಯವೂ ಯೋಗವೂ ಒಂದೆ ಎಂದು ಯಾವನು ತಿಳಿಯುತ್ತಾನೊ ಅವನೇ ಸರಿಯಾದ ದೃಷ್ಟಿಯುಳ್ಳವನು. ಯೋಗವಿಲ್ಲದೆ ಸನ್ಯಾಸದ ಸಿದ್ಧಿಯು ಕಷ್ಟ. ಯೋಗಯುಕ್ತನು ಶೀಘ್ರವಾಗಿ ಬ್ರಹ್ಮನಲ್ಲಿ ಸೇರುತ್ತಾನೆ. ಅವನ ಆತ್ಮವು ಸರ್ವಭೂತಗಳ ಆತ್ಮನಲ್ಲಿ ಒಂದಾಗುತ್ತದೆ. ಅವನು ಕರ್ಮವನ್ನು ಮಾಡುತ್ತಿದ್ದರೂ ನಿರ್ಲಿಪ್ತನಾಗಿರುತ್ತಾನೆ."

ಕರ್ಮಗಳು ತನ್ನವಲ್ಲವೆಂದೂ, ಪ್ರಕೃತಿಗೆ ಸೇರಿರುವುದೆಂದೂ ತಿಳಿದಿರುವುದರಿಂದ ಅವನು ಕರ್ಮಬಂಧಕ್ಕೆ ಸಿಕ್ಕುವುದಿಲ್ಲ. ಅವನು ಕರ್ಮಗಳನ್ನು ತ್ಯಜಿಸಿದ್ದಾನೆ; ತಾನು ಯಾವಕರ್ಮವನ್ನೂ ಮಾಡುವುದಿಲ್ಲ. ಆದರೆ ಅವನ ಮೂಲಕ ಕರ್ಮಗಳು ಮಾಡಲ್ಪಡುತ್ತವೆ. ಅವನು ಬ್ರಹ್ಮನಾಗುತ್ತಾನೆ ; ತಾನೂ ಸೇರಿ ಎಲ್ಲ ಭೂತಗಳೂ ಆ ಬ್ರಹ್ಮನ ಒಂದೇ ಆದ ಅಂಶಗಳೆಂದೂ ಮುಂದೆ ಅವನಲ್ಲೇ ಐಕ್ಯವನ್ನು ಹೊಂದುವವರೆಂದೂ ತಿಳಿಯುತ್ತಾನೆ. ಎಲ್ಲ ಜೀವಿಗಳು ಮಾಡುವ ಕರ್ಮಗಳೂ ಅವರ ಸ್ವಭಾವದ ಮೂಲಕ ಪ್ರಕೃತಿಯು ಮಾಡಿಸುತ್ತಿರುವ ವ್ಯಾಪಾರಗಳೆಂದು ತಿಳಿಯುತ್ತಾನೆ ; ಹಾಗೆಯೆ ತಾನುಮಾಡುವ ಕರ್ಮವೂ ಪ್ರಕೃತಿಯ ವ್ಯಾಪಾರವೆಂದು ತಿಳಿಯುತ್ತಾನೆ. ಗೀತೆಯ ಉಪದೇಶವು ಇಷ್ಟೇ ಅಲ್ಲ. ಇಲ್ಲಿಯವರೆಗೆ ವಿಶ್ವದ ಸೃಷ್ಟಿಗೆ ಕಾರಣರಾದ ಪ್ರಕೃತಿಯ ಮತ್ತು ಪುರುಷ ಅಥವಾ ಅಕ್ಷರಬ್ರಹ್ಮನ ಪ್ರಸ್ತಾಪವನ್ನು ಮಾತ್ರ ಮಾಡಿದೆ. ಈಶ್ವರ ಅಥವಾ ಪುರುಷೋತ್ತಮನನ್ನು ಕುರಿತು ಸ್ಪಷ್ಟವಾಗಿ ಏನನ್ನೂ ಹೇಳಿಲ್ಲ ; ಜ್ಞಾನ ಮತ್ತು ಕರ್ಮಗಳ ಸಮನ್ವಯವನ್ನು ಮಾತ್ರ ಈವರೆಗೆ ಹೇಳಿದೆ. ಆದರೆ ಬಹುಮುಖ್ಯವಾದ ಸಾಧನವೆಂದು ಮುಂದೆ ಹೇಳುವ ಭಕ್ತಿಯ ವಿಷಯವಾಗಿ ಕೆಲವು ಸೂಚನೆಗಳಿವೆಯೆ ಹೊರತು ಸ್ಪಷ್ಟವಾದ ಉಪದೇಶವೇನೂ ಇಲ್ಲ. ತಟಸ್ಥನಾದ ಒಬ್ಬ ಪುರುಷನ ಮತ್ತು ಅಪರಾಪ್ರಕೃತಿಯ ವಿಷಯವನ್ನು ತಿಳಿಸಿದೆಯೆ ಹೊರತು ಮೂರು ಪುರುಷರ ಮತ್ತು ಎರಡು ಪ್ರಕೃತಿಗಳ ವಿಷಯವನ್ನು ಹೇಳಿಲ್ಲ. ಈಶ್ವರನ ಪ್ರಸ್ತಾಪವನ್ನು ಮಾಡಿದ್ದರೂ ಅವನಿಗೂ ಆತ್ಮನಿಗೂ ಮತ್ತು ಪ್ರಕೃತಿಗೂ ಇರುವ ಸಂಬಂಧವನ್ನು ಸ್ಪಷ್ಟಪಡಿಸಿಲ್ಲ. ಮೇಲೆ ಹೇಳಿದ ಮುಖ್ಯವಾದ ವಿಷಯಗಳನ್ನು ಮೊದಲಿನ ಆರು ಅಧ್ಯಾಯಗಳಲ್ಲಿ ಸ್ಥೂಲರೀತಿಯಲ್ಲಿಮಾತ್ರ ಹೇಳಿದೆ ; ಮುಂದಿನ ಅಧ್ಯಾಯದಲ್ಲಾದರೊ ಇವುಗಳ ವಿಷಯವಾಗಿ ಹೆಚ್ಚು ವಿವರಗಳನ್ನು ತಿಳಿಸಿದೆ. ಹಿಂದಿನ ಉಪದೇಶವನ್ನು ವಿಸ್ತರಿಸಿ ಸ್ವಲ್ಪಮಟ್ಟಿಗೆ ಬೇರೆರೂಪವನ್ನು ಕೊಟ್ಟಿದೆ.

"ಆತ್ಮನಿಷ್ಠೆಯ ಸಾಧನಗಳು ಎರಡಿವೆ. ಸಾಂಖ್ಯದಲ್ಲಿ ಹೇಳುವ ಜ್ಞಾನಮಾರ್ಗ ಮತ್ತು ಯೋಗದಲ್ಲಿ ಹೇಳುವ ಕರ್ಮಮಾರ್ಗ" ಎಂದು ಶ್ರೀಕೃಷ್ಣನು ಹೇಳುತ್ತಾನೆ. ಈ ರೀತಿಯಾಗಿ ಸಾಂಖ್ಯವೆಂದರೆ ಜ್ಞಾನವೆಂದೂ, ಯೋಗವೆಂದರೆ ಕರ್ಮವೆಂದೂ ಹೇಳಿರುವುದು ಗಮನಾರ್ಹವಾಗಿದೆ. ಏತಕ್ಕೆಂದರೆ ಆಗಿನ ಅಭಿಪ್ರಾಯಗಳಿಗೂ ಇಂದಿನ ಅಭಿಪ್ರಾಯಗಳಿಗೂ ಬಹಳ ವ್ಯತ್ಯಾಸಗಳಿವೆ. ಗೀತೆಯ ಕಾಲದನಂತರ ವೇದಾಂತ ಶಾಸ್ತ್ರದಲ್ಲಿ ಆಗಿರುವ ಬೆಳವಣಿಗೆಯೆ ಇದಕ್ಕೆ ಕಾರಣ. ಗೀತೆಯಲ್ಲಿ ಹೇಳಿರುವ ಮಾತನ್ನು ನೋಡಿದರೆ ಪ್ರಾಯಶಃ ಆಗಿನ ಕಾಲನಲ್ಲಿ ಜ್ಞಾನಮಾರ್ಗದ ಅನುಯಾಯಿ

ಗಳು* ವಿಶೇಷವಾಗಿ ಸಾಂಖ್ಯಸಿದ್ಧಾಂತವನ್ನೇ ಅನುಸರಿಸುತ್ತಿದ್ದರೆಂದು ಕಾಣುತ್ತದೆ. ಕಾಲಕ್ರಮೇಣ ಬೌದ್ಧಮತವು ಏಳಿಗೆಗೆ ಬಂದಾಗ ಈ ಮತದ ಜ್ಞಾನಮಾರ್ಗವು ಸಾಂಖ್ಯದ ಮಾರ್ಗವನ್ನು ಹಿಂದಕ್ಕೆ ಹಾಕಿತು.

ಸಾಂಖ್ಯದಂತೆ ಬೌದ್ಧಮತವೂ ಕೂಡ ಈಶ್ವರವಾದವನ್ನೂ, ಅದ್ವೈತವನ್ನೂ ಒಪ್ಪುವುದಿಲ್ಲ. ವಿಶ್ವಶಕ್ತಿಯನ್ನು ಪ್ರಕೃತಿಯೆಂದು ಹೇಳದೆ ಕರ್ಮವೆಂದು ಹೇಳಿ ಅದರ ವ್ಯಾಪಾರದ ನಶ್ವರತ್ವವನ್ನು ಮುಖ್ಯವಾಗಿ ಗಮನಿಸಿದೆ. ಈ ಮತವು ವೇದಾಂತಿಗಳ ಬ್ರಹ್ಮನನ್ನಾಗಲಿ, ಸಾಂಖ್ಯರ ಪುರುಷನನ್ನಾಗಲಿ ಅಂಗೀಕರಿಸುವುದಿಲ್ಲ. ಈ ಕರ್ಮವ್ಯಾಪಾರದ ನಶ್ವರತ್ವವನ್ನು ವಿವೇಕಯುಕ್ತವಾದ ಮನಸ್ಸಿನಿಂದ ಗ್ರಹಿಸುವುದನ್ನೆ ಮುಕ್ತಿಗೆ ಸಾಧನವನ್ನಾಗಿ ಬೌದ್ಧಮತವು ಎಣಿಸುತ್ತದೆ. ಈ ದೇಶದಲ್ಲಿ ಬೌದ್ಧಮತದ ಪ್ರಾಬಲ್ಯವು ಕ್ಷೀಣವಾಗಿ ಹಿಂದೂಮತಕ್ಕೆ ಹೊಸ ಚೈತನ್ಯವು ಬಂದಾಗ ಅದು ಸಾಂಖ್ಯಸಂಪ್ರದಾಯವನ್ನು ಬಿಟ್ಟು ಶಂಕರಾಚಾರ್ಯರು ಪ್ರಚಾರಮಾಡಿದ ವೇದಾಂತ ತತ್ವಗಳನ್ನು ಆಧಾರವನ್ನಾಗಿಟ್ಟುಕೊಂಡಿತು. ಅದು ಬೌದ್ಧಮತದ ಕ್ಷಣಿಕವಾದಕ್ಕೆ ಬದಲಾಗಿ ಇದಕ್ಕೆ 'ಸದೃಶವಾದ ಶಂಕರಾಚಾರ್ಯರ ಮಾಯಾವಾದವನ್ನು ಒಪ್ಪಿಕೊಂಡಿತು. ಬೌದ್ಧಮತದ ಅಸತ್ತಾದ, ಅನಿರ್ವಚನೀಯವಾದ, ಶೂನ್ಯರೂಪವಾದ ನಿರ್ವಾಣವನ್ನು ನಿರಾಕರಿಸಿ, ಇದಕ್ಕೆ ವಿರುದ್ಧವಾದರೂ ಸದೃಶವಾದ ವೇದಾಂತದ ಸದ್ರೂಪವಾದ, ಅನಿರ್ವಚನೀಯವಾದ ಬ್ರಹ್ಮವನ್ನು ಪ್ರತಿಪಾದಿಸಿತು. ಪರಮಾರ್ಥತಃ ಯಾವ ವಿಧವಾದ ಲಕ್ಷಣಗಳೂ ಕರ್ಮಗಳೂ ಶಕ್ತಿಗಳೂ ಈ ಬ್ರಹ್ಮನಲ್ಲಿ ಯಾವಾಗಲೂ ಇರಲಿಲ್ಲವಾದುದರಿಂದ ಅವು ಯಾವುವೂ ಈ ಬ್ರಹ್ಮನಲ್ಲಿಲ್ಲವೆಂದೂ, ಅವು ಕೇವಲ ಮಾಯೆಯೆಂದೂ ಹೇಳಿತು. ನಾವು ಈಗ ಜ್ಞಾನಯೋಗವನ್ನು ಕುರಿತು ವಿಚಾರಮಾಡುವಾಗ ನಮ್ಮ ಮನಸ್ಸಿನಲ್ಲಿರುವುದು ಶಂಕರಾಚಾರ್ಯರ ವಿಚಾರಸರಣಿಯನ್ನನುಸರಿಸಿ ಈ ಸಂಸಾರವು ಮಾಯೆಯೆಂಬ ಅಭಿಪ್ರಾಯ. ಆದರೆ ಗೀತೆಯ ಕಾಲದಲ್ಲಿ ಮಾಯೆಯು ವೇದಾಂತದ ಪ್ರಧಾನ ಸಿದ್ಧಾಂತಗಳಲ್ಲೊಂದಾಗಿರಲಿಲ್ಲ. ಮತ್ತು ಮಾಯೆಯೆಂಬ ಪದಕ್ಕೂಕೂಡ ಆಗಿನ ಆಗಿನ ಕಾಲದಲ್ಲಿ ಈ ವಿಧವಾದ ಅರ್ಥವಿರಲಿಲ್ಲ. ಶಂಕರಾಚಾರ್ಯರು ತಮ್ಮ ಪ್ರತಿಭೆಯಿಂದ ಆ ಪದದಲ್ಲಿ ಅಡಗಿದ್ದ ಅರ್ಥವನ್ನು ಹೊರಗೆಡಹಿದರು. ಗೀತೆಯಲ್ಲಿ ಮಾಯೆಯ ಪ್ರಸ್ತಾಪವು ಹೆಚ್ಚಾಗಿಲ್ಲ,

* ಪುರಾಣಗಳಲ್ಲಿಯೂ ತಂತ್ರಗಳಲ್ಲಿಯೂ ಸಾಂಖ್ಯದರ್ಶನದ ಅನೇಕ ತತ್ವಗಳು ಕಂಡುಬರುತ್ತವೆ. ಆದರೆ ಇವೆಲ್ಲವೂ ಇತರ ದರ್ಶನಗಳ ತತ್ವಗಳೊಡನೆ ಮಿಶ್ರವಾಗಿವೆ; ಮತ್ತು ಇವನ್ನು ವೇದಾಂತಶಾಸ್ತ್ರದ ತತ್ವಗಳಿಗೆ ವಿರೋಧವಿಲ್ಲದ ರೀತಿಯಲ್ಲಿ ತೋರಿಸಿದೆ,

ಪ್ರಕೃತಿಯು ಪ್ರಸ್ತಾಪವೆ ಹೆಚ್ಚಾಗಿದೆ. ಮಾಯೆಯೆಂಬ ಪದವನ್ನು ಉಪಯೋಗಿಸಿರುವಾಗಲೂ ಅದನ್ನು ತ್ರಿಗುಣಾತ್ಮಕವಾದ ಅಪರಾಪ್ರಕೃತಿಗೆ ಮತ್ತೊಂದು ಹೆಸರಿನಂತೆ ಉಪಯೋಗಿಸಲಾಗಿದೆ. ಗೀತೆಯ ಉಪದೇಶದ ಪ್ರಕಾರ ವಿಶ್ವಕ್ಕೆ ಕಾರಣವಾಗಿರುವುದು ಪ್ರಕೃತಿಯೆ ಹೊರತು ಭ್ರಾಂತಿರೂಪವಾದ ಮಾಯೆಯಲ್ಲ.

ಆದಾಗ್ಯೂ ಗೀತೆಯಲ್ಲಿ ಹೇಳಲ್ಪಟ್ಟಿರುವ ಸಾಂಖ್ಯಕ್ಕೂ ಯೋಗಕ್ಕೂ ಇರುವ ಭೇದವು, ಈಗಿನ ಕಾಲದ ವೇದಾಂತದಲ್ಲಿನ ಜ್ಞಾನಯೋಗ ಮತ್ತು ಕರ್ಮಯೋಗಗಳಿಗಿರುವ ಭೇದದಂತೆಯೆ ಇದೆ; ಸಾಂಖ್ಯ ಮತ್ತು ಯೋಗಗಳ ಅನುಯಾಯಿಗಳ ಆಚರಣೆಯಲ್ಲಿರುವ ಭೇದವೂ, ಜ್ಞಾನಯೋಗ ಮತ್ತು ಕರ್ಮಯೋಗಗಳನ್ನನುಸರಿಸುವವರ ಆಚರಣೆಯಲ್ಲಿರುವ ವ್ಯತ್ಯಾಸವೂ ಕೂಡ ಒಂದೆ ಆಗಿದೆ. ವೇದಾಂತಿಗಳ ಜ್ಞಾನಮಾರ್ಗದಂತೆ ಸಾಂಖ್ಯಕ್ಕೂ ಸಹ ಬುದ್ಧಿಯೇ ಮೊದಲನೆಯ ಮೆಟ್ಟಲಾಗಿತ್ತು.

ಈ ಪ್ರಪಂಚವು ತೋರಿಕೆಯೆಂದೂ, ಇದು ಆತ್ಮನಲ್ಲಿ ಆರೋಪಿಸಲ್ಪಟ್ಟು ತಾನೇ ವಿಶ್ವವೆಂಬ ಮಾಯೆಯನ್ನು ಉಂಟುಮಾಡುವುದೆಂದು ತಿಳಿಯುವುದು ಹೇಗೆ ವೇದಾಂತದ ಗುರಿಯೋ, ಅದೇ ರೀತಿ ವಿಚಾರದ ಮೂಲಕ ಆತ್ಮನ ನಿಜಸ್ವರೂಪವನ್ನು ತಿಳಿದು ಆತ್ಮನು ಪ್ರಕೃತಿಯ ಸಂಗದಿಂದ ಮೋಹಿತನಾಗಿ ಪ್ರಕೃತಿಯ ವ್ಯಾಪಾರಗಳು ತನ್ನದೆ ಎಂಬ ಭ್ರಾಂತಿಗೆ ಒಳಗಾಗುತ್ತಾನೆಂಬುದನ್ನು ತಿಳಿದು ವಿವೇಕದ ಮೂಲಕ ಆತ್ಮನು ನಿಜಸ್ವರೂಪವನ್ನು ಹೊಂದುವುದೆ ಸಾಂಖ್ಯದ ಗುರಿ.

ವೇದಾಂತದ ಪ್ರಕಾರ ಆತ್ಮನು ತನ್ನ ನೈಜವಾದ ಮತ್ತು ಶಾಶ್ವತವಾದ ಸ್ಥಾನವನ್ನು ಸೇರಿದಾಗ–ಎಂದರೆ ಬ್ರಹ್ಮನಲ್ಲಿ ಐಕ್ಯವಾದಾಗ–ಮಾಯೆಯೂ ಸಂಸಾರವೂ ಇಲ್ಲವಾಗುವುವು. ಸಾಂಖ್ಯದಪ್ರಕಾರ ಜೀವನು ತನ್ನ ನಿಜವಾದ ಮತ್ತು ನಿತ್ಯವಾದ ಸ್ವರೂಪವನ್ನು ಹೊಂದಿದಾಗ–ಎಂದರೆ ತಟಸ್ಥನಾದ ಪುರುಷನಾದಾಗ–ತ್ರಿಗುಣಗಳ ವ್ಯಾಪಾರಗಳೂ ಸಂಸಾರವೂ ಇಲ್ಲವಾಗುವುವು. ಮಾಯಾವಾದಿಗಳ ಬ್ರಹ್ಮನು ಮೌನಿ, ಅಕ್ಷರ ಮತ್ತು ನಿಷ್ಕ್ರಿಯ; ಸಾಂಖ್ಯರ ಪುರುಷನೂ ಹಾಗೆಯೆ. ಆದುದರಿಂದ ಇಬ್ಬರಿಗೂ ಕರ್ಮಗಳ ಮತ್ತು ಸಂಸಾರದ ತ್ಯಾಗವು ಮುಕ್ತಿಗೆ ಸಹಾಯಕಗಳು ಮಾತ್ರ. ಆದರೆ ಗೀತೆಯ ಯೋಗಕ್ಕೆ ವೇದಾಂತದ ಕರ್ಮಯೋಗದಂತೆ ಕರ್ಮವು ಮುಕ್ತಿಗೆ ಸಹಾಯಕಮಾತ್ರವಲ್ಲ, ಮುಖ್ಯ ಸಾಧನವೆ ಆಗಿರುವುದು. ಈ ಅಭಿಪ್ರಾಯದ ಸತ್ಯತೆಯನ್ನೆ ಗೀತೆಯಲ್ಲಿ ಹಲವಾರು ಕಡೆಗಳಲ್ಲಿ ಒತ್ತಿ ಹೇಳಿದೆ. ಆದರೂ ಕೂಡ ಆಗ ನಮ್ಮ ದೇಶದಲ್ಲಿ ಬೌದ್ಧಮತದ ಪ್ರಬಲ

ವಾದ ಪ್ರಭಾವದ ಎದುರಿಗೆ ಇದು ತಲೆಯೆತ್ತಲಿಲ್ಲ. ಅನಂತರ ಸಂಸಾರವನ್ನು ಮಾಯೆಯೆಂದು ತ್ಯಜಿಸಿದ ವಿರಕ್ತರಾದ ಸಾಧುಗಳ ಮತ್ತು ಭಕ್ತರ ವೈರಾಗ್ಯದ ಭರದಲ್ಲಿ ಈ ಮೇಲಿನ ಅಭಿಪ್ರಾಯವು ಮುಳುಗಿಹೋಯಿತು. ಈಗತಾನೆ ನಮ್ಮ ದೇಶದ ಜನರ ಮನಸ್ಸಿನ ಮೇಲೆ ಇದು ತನ್ನ ಕಲ್ಯಾಣಕರವಾದ ಪ್ರಭಾವವನ್ನು ಬೀರಲು ತೊಡಗಿದೆ.

ಸನ್ಯಾಸವೇನೊ ಅತ್ಯವಶ್ಯಕವಾದುದು; ಆದರೆ ಮಮತೆ ಮತ್ತು ಕಾಮಗಳನ್ನು ಮನಸ್ಸಿನಿಂದ ದೂರಮಾಡುವುದೆ ನಿಜವಾದ ಸನ್ಯಾಸ. ಮನಸ್ಸು ಅವುಗಳ ಹಿಡಿತದಲ್ಲಿ ಸಿಕ್ಕಿರುವಾಗ ಬಾಹ್ಯವಾದ ಕರ್ಮಸನ್ಯಾಸವು ಮಿಥ್ಯವೂ ನಿಷ್ಪ್ರಯೋಜಕವೂ ಆಗುತ್ತದೆ. ಮತ್ತು ನಿಜವಾದ ಆಂತರಿಕ ತ್ಯಾಗವಿದ್ದರೆ ಬಾಹ್ಯವಾದ ಕರ್ಮಸನ್ಯಾಸವು ಅನವಶ್ಯಕ; ಆದರೆ ನಿಷಿದ್ಧವಲ್ಲ. ಜ್ಞಾನವು ಅತ್ಯವಶ್ಯಕವಾದುದ್ದು; ಮುಕ್ತಿಗೆ ಅದಕ್ಕಿಂತ ಉತ್ತಮಸಾಧನವಿಲ್ಲ. ಆದರೆ ಜ್ಞಾನಸಹಿತವಾದ ಕರ್ಮವೂ ಇರಬೇಕು. ಜ್ಞಾನಸಹಿತವಾಗಿ ಕರ್ಮವನ್ನು ಮಾಡುವವನಿಗೆ ಕರ್ಮವನ್ನು ಮಾಡದೆ ಶಾಂತವಾಗಿರುವಾಗಲೂ ಕರ್ಮಮಾಡುವುದರಲ್ಲಿ ಮಗ್ನನಾಗಿರುವಾಗಲೂ ಬ್ರಾಹ್ಮೀಸ್ಥಿತಿಯು ಇರುವುದು. ಭಕ್ತಿಯು ಮುಖ್ಯವಾದುದ್ದಾದರೂ ಭಕ್ತಿಯುತವಾದ ಕರ್ಮವೂ ಮುಖ್ಯವಾದುದು. ಭಕ್ತಿ, ಜ್ಞಾನ ಮತ್ತು ಕರ್ಮಗಳ ಸಹಯೋಗದಿಂದ ಜೀವನು ಈಶ್ವರನ ಪರಮೋನ್ನತವಾದ ಮಟ್ಟಕ್ಕೆ ಏರುತ್ತಾನೆ. ಮತ್ತು ಶಾಶ್ವತವಾದ ಆಧ್ಯಾತ್ಮಿಕ ಶಾಂತಿಗೂ ನಿರಂತರವಾದ ವಿಶ್ವವ್ಯಾಪಾರಕ್ಕೂ ಪ್ರಭುವಾದ ಪುರುಷೋತ್ತಮನಲ್ಲಿ ನೆಲೆಸುತ್ತಾನೆ. ಇದೇ ಗೀತೆಯಲ್ಲಿ ಹೇಳುವ ಸಮನ್ವಯ.

ಗೀತೆಯು ಪರಿಹರಿಸುವುದು ಸಾಂಖ್ಯದ ಜ್ಞಾನಮಾರ್ಗಕ್ಕೂ ಯೋಗದ ಕರ್ಮಮಾರ್ಗಕ್ಕೂ ಇರುವ ವಿರೋಧವೊಂದನ್ನುಮಾತ್ರವಲ್ಲ. ವೇದಾಂತದಲ್ಲಿಯೆ ಬೇರೊಂದು ಇದೇ ವಿಧವಾದ ವಿರೋಧವಿತ್ತು. ಇದನ್ನೂ ಕೂಡ ಆರ್ಯಸಂಸ್ಕೃತಿಯ ವ್ಯಾಪಕವಾದ ನಿರೂಪಣೆಮಾಡುತ್ತಿರುವ ಗೀತೆಯು ಪರಿಹಾರಮಾಡಿದೆ. ಈ ವಿರೋಧವು ಯಾವುದೆಂದರೆ: ವೇದದಲ್ಲಿರುವ ಕರ್ಮಕಾಂಡಕ್ಕೂ ಜ್ಞಾನಕಾಂಡಕ್ಕೂ ಇರುವ ವಿರೋಧ; ಎಂದರೆ ವೇದಮಂತ್ರಗಳನ್ನೆ ಆಧಾರವಾಗಿಟ್ಟುಕೊಂಡು ಯಜ್ಞಾದಿ ಕರ್ಮಗಳನ್ನು ಮಾಡಲೇಬೇಕೆಂಬ ಪೂರ್ವಮೀಮಾಂಸಕರ ವೇದವಾದಕ್ಕೂ ಮತ್ತು ಇವೆಲ್ಲವೂ ಅಪರಾವಿದ್ಯೆಯೆಂದು ಕಡೆಗಣಿಸಿ ಉಪನಿಷತ್ತುಗಳಲ್ಲಿರುವ ಭವ್ಯವಾದ ವೇದಾಂತ ವಿಚಾರವನ್ನೆ ಎತ್ತಿ ಹೇಳುವ ಉತ್ತರಮೀಮಾಂಸಕರ ಬ್ರಹ್ಮವಾದಕ್ಕೂ ಇರುವ ವಿರೋಧ.

ಫಲದಲ್ಲೇ ಲಕ್ಷ್ಯವುಳ್ಳ ವೇದವಾದಿಗಳ ದೃಷ್ಟಿಯಲ್ಲಿ ಋಷಿಗಳ ಆರ್ಯಧರ್ಮ ವೆಂದರೆ ವೇದಮಂತ್ರಗಳನ್ನು ಉಚ್ಚರಿಸಿ ಯಜ್ಞಾದಿ ಕರ್ಮಗಳನ್ನು ತಪ್ಪದೆಮಾಡಿ, ಅವುಗಳಮೂಲಕ ಐಶ್ವರ್ಯ, ಪುತ್ರ-ಪೌತ್ರರು, ಜಯ, ಸರ್ವವಿಧವಾದ ಕಲ್ಯಾಣ, ಸ್ವರ್ಗಸುಖ ಮತ್ತು ಅಮರತ್ವಗಳನ್ನು ಹೊಂದುವುದು. ಬ್ರಹ್ಮವಾದಿಗಳ ದೃಷ್ಟಿಯಲ್ಲಿ ಇವೆಲ್ಲವೂ ನಿಜವಾದ ಪುರುಷಾರ್ಥಕ್ಕೆ ಪೂರ್ವಸಿದ್ಧತೆಗಳು ಮಾತ್ರ. ಬ್ರಹ್ಮಜ್ಞಾನದ ಕಡೆಗೆ ತನ್ನ ದೃಷ್ಟಿಯನ್ನು ತಿರುಗಿಸಿದಾಗ ಆ ಪುರುಷಾರ್ಥದ ಪ್ರಯತ್ನವು ಪ್ರಾರಂಭ ವಾಗುವುದು. ಆ ಬ್ರಹ್ಮಜ್ಞಾನದಿಂದ ಸಾಧಕನಿಗೆ ಈ ಲೋಕದ ಮತ್ತು ಸ್ವರ್ಗ ಲೋಕದ ಸುಖಗಳಿಗಿಂತ ಬಹಳ ಉತ್ಕೃಷ್ಟವಾದ, ಅವರ್ಣನೀಯವಾದ, ಆಧ್ಯಾತ್ಮಿಕ ಆನಂದವುಳ್ಳ ಅಮೃತತತ್ವವು ದೊರಕುವುದು. ವೇದದ ನಿಜವಾದ ಅರ್ಥವು ಹಿಂದೆ ಏನಾಗಿದ್ದಿತೊ ತಿಳಿಯದು. ಗೀತೆಯಕಾಲಕ್ಕೆ ಬಹು ಹಿಂದಿನಿಂದಲೇ ಮೇಲೆ ಹೇಳಿದ ಎರಡು ಪಕ್ಷಗಳು ಇದ್ದು, ಗೀತೆಯ ಸಮನ್ವಯದಲ್ಲಿ ಇದೂ ಸೇರಬೇಕಾಯಿತು.

ವೇದವಾದದ ನಿಂದೆಯಿಂದಲೆ ಈ ಸಮನ್ವಯವು ಮೊದಲಾಗುತ್ತದೆ. "ಕಾಮ ಪೂರಿತರೂ ಸ್ವರ್ಗಪರಾಯಣರೂ ಆದ ಪಂಡಿತರಲ್ಲದವರು, ಜನ್ಮಕರ್ಮಗಳನ್ನೇ ಫಲವನ್ನಾಗಿ ಕೊಡತಕ್ಕ, ಅನೇಕವಿಧವಾದ ಕ್ರಿಯೆಗಳನ್ನೊಳಗೊಂಡಿರುವ, ಭೋಗ, ಐಶ್ವರ್ಯ ಇವುಗಳ ಮಾರ್ಗವನ್ನು ಕುರಿತು 'ಇದನ್ನು ಬಿಟ್ಟರೆ ಬೇರೆ ಯಾವುದೂ ಇಲ್ಲ' ಎಂಬ ಹೂವಿನಂತೆ ಇರುವ ಈ ಮಾತನ್ನು ಹೇಳುತ್ತಾರೆ."

(ಗೀತೆ ಅಧ್ಯಾಯ ೨ ಶ್ಲೋಕ ೪೨)

ಗೀತೆಯು ವೇದವನ್ನೆ ಟೀಕಿಸುವಂತೆ ತೋರುತ್ತದೆ. ವೇದಗಳು ಮೂಲೆ ಗೊತ್ತಲ್ಪಟ್ಟಿದ್ದರೂ ಹಿಂದೂಗಳ ಮನಸ್ಸಿನಲ್ಲಿ ಅವು ಅತಿ ಪವಿತ್ರವಾದುವು, ಆಕ್ಷೇಪಣೆ ಗಳಿಗೆ ಅತೀತವಾದುವು, ಹಿಂದೂದರ್ಶನ ಮತ್ತು ಮತಗಳಿಗೆ ಪವಿತ್ರವಾದ ಮೂಲ ಸ್ಥಾನವಾದುವು ಎಂಬ ಅಭಿಪ್ರಾಯಗಳು ಬೇರೂರಿವೆ. 'ತ್ರಿಗುಣಗಳ ವ್ಯಾಪಾರವೆ ವೇದಗಳ ವಿಷಯ; ನೀನು ತ್ರೈಗುಣ್ಯರಹಿತನಾಗು'; ತಿಳಿದಿರುವ ಮನುಷ್ಯನಿಗೆ ವೇದ ಗಳು—ಎಲ್ಲ ವೇದಗಳು; ಇದರಲ್ಲಿ ಉಪನಿಷತ್ತುಗಳೂ ಸೇರಿವೆ—ಅನವಶ್ಯಕವೆಂದು ಗೀತೆಯು ಹೇಳುತ್ತದೆ. "ಎಲ್ಲ ಕಡೆಯಲ್ಲಿಯೂ ಸಮೃದ್ಧಿಯಾಗಿ ನೀರಿರುವ ಕಡೆಯಲ್ಲಿ ಬಾವಿಯಿಂದ ಹೇಗೆ ಪ್ರಯೋಜನವಿಲ್ಲವೊ ತಿಳಿದ ಬ್ರಾಹ್ಮಣನಿಗೆ ಸಮಸ್ತ ವೇದ ಗಳಿಂದಲೂ ಅಷ್ಟೇ" (ಪ್ರಯೋಜನವಿಲ್ಲ) (ಗೀತೆ ೨-೪೬).

ಅಷ್ಟೇ ಅಲ್ಲ; ಜ್ಞಾನವನ್ನು ತಿಳಿಯಬೇಕು ಎನ್ನುವವನಿಗೆ ವೇದಗಳು ಒಂದು ಅಡ್ಡಿ ಎಂದೇ ಹೇಳಬಹುದು. ಶ್ರುತಿವಾಕ್ಯಗಳಲ್ಲಿ ತೋರಿಬರುವ ವಿರೋಧ ಮತ್ತು ಈ

ವಾಕ್ಯಗಳಿಗೆ ಮಾಡಿರುವ ಪರಸ್ಪರ ವಿರುದ್ಧವಾದ ನಾನಾಮುಖವಾದ ವ್ಯಾಖ್ಯಾನ, ಇವು ಗಳಿಂದ ಪ್ರಾಯಶಃ ಶ್ರುತಿಗಳ ಅಕ್ಷರಾರ್ಥವು ನಮ್ಮ ಮನಸ್ಸನ್ನು ಭ್ರಮೆಗೊಳಿಸುತ್ತದೆ. ಈ ಭ್ರಮೆಯು ಹೋಗಿ ನಮಗೆ ಏಕಾಗ್ರತೆಯೂ ನಿಶ್ಚಿತಜ್ಞಾನವೂ ಬರಬೇಕಾದರೆ ಆಂತರವಾದ ಬೆಳಕಿನಿಂದಲೇ ಸಾಧ್ಯ. " ಯಾವಾಗ ನಿನ್ನ ಬುದ್ಧಿಯು ಮೋಹದಿಂದ ಉಂಟಾಗಿರುವ ಕಳವಳಸ್ಥಿತಿಯನ್ನು ದಾಟುವುದೊ ಆವಾಗ ನೀನು ಕೇಳಬೇಕಾದುದರ ಮತ್ತು ಕೇಳಲ್ಪಟ್ಟದ್ದರ ವಿಚಾರವಾಗಿ ಉದಾಸೀನಭಾವವನ್ನು ಹೊಂದುತ್ತೀಯೆ. ಶ್ರುತಿಯಿಂದ ಅತ್ತಿತ್ತ ಹೋಗದೆ ನಿನ್ನ ಬುದ್ಧಿಯು ಯಾವಾಗ ಅಲ್ಲಾಡದೆ ಸಮಾಧಿ ಯಲ್ಲಿ ನಿಲ್ಲುತ್ತದೆಯೊ ಆವಾಗ ನೀನು ಯೋಗವನ್ನು ಹೊಂದುವೆ." (ಗೀತಾ ೨— ೫೨,೫೩) ಇವೆಲ್ಲವೂ ಸಂಪ್ರದಾಯಸ್ಥರ ಮನಸ್ಸನ್ನು ಬಹಳವಾಗಿ ಉದ್ರೇಕಗೊಳಿಸಿದೆ. ಇಂತಹ ಸಂದರ್ಭದಲ್ಲಿ ಅವರು ಸಾಮಾನ್ಯವಾದ ಪದ್ಧತಿಪ್ರಕಾರ ಈ ಶ್ಲೋಕಗಳಿಗೆ ಅರ್ಥಮಾಡದೆ ಅವನ್ನು ತಿರುಚಿ ತಮ್ಮ ಸಂಪ್ರದಾಯಬದ್ಧವಾದ ಅಭಿಪ್ರಾಯಗಳಿಗೆ ಸರಿಯಾಗುವಂತೆ ಅರ್ಥಮಾಡಲು ಪ್ರಯತ್ನಿಸಿದ್ದಾರೆ. ಆದರೆ ಶ್ಲೋಕಗಳ ಅರ್ಥವು ಸ್ಪಷ್ಟವಾಗಿದೆ, ಮತ್ತು ಹಿಂದಿನ ಉಪದೇಶದೊಡನೆ ಸಂಗತವಾಗಿದೆ. ಮುಂದೆ ಹೇಳಿರುವ ಶ್ಲೋಕದಿಂದಲೂ ಸಹ ಇದು ದೃಢಪಡುತ್ತದೆ—" ಯೋಗಿಯ ಜ್ಞಾನವು ವೇದ ಮತ್ತು ಉಪನಿಷತ್ತುಗಳಿಗೆ ಅತೀತವಾಗಿದೆ." (೬-೪೪) ಹೀಗೆ ಹೇಳುವುದರ ಅಭಿಪ್ರಾಯವೇನೆಂಬುದನ್ನು ವಿಚಾರ ಮಾಡೋಣ.

ವಿಶಾಲವಾದ ದೃಷ್ಟಿಯಿಂದ ಎಲ್ಲವನ್ನೂ ಸಮನ್ವಯಮಾಡಲು ಹೊರ ಟಿರುವ ಗೀತೆಯು ಆರ್ಯಧರ್ಮಕ್ಕೆ ಆಧಾರವಾದ ಶ್ರುತಿಗಳನ್ನು ನಿಂದಿಸಿ ಅಲ್ಲಗ ಳೆಯಲಾರದು. ಕರ್ಮಗಳ ಮೂಲಕ ಮುಕ್ತಿಯೆಂಬ ಯೋಗಸಿದ್ಧಾಂತವನ್ನೂ, ಜ್ಞಾನದ ಮೂಲಕ ಮುಕ್ತಿಯೆಂಬ ಸಾಂಖ್ಯಸಿದ್ಧಾಂತವನ್ನೂ ಗೀತೆಯು ಸಮನ್ವಯ ಮಾಡಬೇಕಾಗಿದೆ. ಎಂದರೆ ಕರ್ಮವನ್ನೂ, ಜ್ಞಾನವನ್ನೂ ಒಂದುಮಾಡಬೇಕಾಗಿದೆ. ಯೋಗ ಮತ್ತು ಸಾಂಖ್ಯಗಳಲ್ಲಿ ಹೇಳಿರುವ ಪುರುಷ ಮತ್ತು ಪ್ರಕೃತಿಗಳ ಸಿದ್ಧಾಂತ ವನ್ನು ವೇದಾಂತದಲ್ಲಿ ಹೇಳಿರುವ ಪುರುಷ ಜೀವ ಮತ್ತು ಈಶ್ವರ ಇವರೆಲ್ಲರೂ ಸರ್ವ ವ್ಯಾಪಕವಾದ ಅಕ್ಷರವಾದ ಬ್ರಹ್ಮನಲ್ಲಿ ಲೀನವಾಗುತ್ತಾರೆ ಎಂಬ ಬ್ರಹ್ಮವಾದದೊಡನೆ ಸಮನ್ವಯಮಾಡಬೇಕಾಗಿದೆ. ಯೋಗದಲ್ಲಿ ಹೇಳಿರುವ ಈಶ್ವರನು ವೇದಾಂತದ ಬ್ರಹ್ಮ ನಿಂದ ಹಿಂದಕ್ಕೆ ತಳ್ಳಲ್ಪಟ್ಟಿದ್ದರೂ ನಿರಾಕರಿಸಲ್ಪಟ್ಟಿಲ್ಲವೆಂಬುದನ್ನು ಗೀತೆಯು ಸ್ಪಷ್ಟ ಪಡಿಸಬೇಕಾಗಿದೆ. ಅಲ್ಲದೆ ಗೀತೆಯು ತನ್ನದೇ ಆಗಿರುವ ಮತ್ತು ಅದರ ಸಮನ್ವಯಕ್ಕೆ ಕಿರೀಟದಂತಿರುವ ಒಂದು ಹೊಸ ತತ್ವವನ್ನು ನಿರೂಪಿಸಬೇಕಾಗಿದೆ. ಇದೆ ಪುರುಷೋ

ತ್ತಮನನ್ನೊಳಗೊಂಡ ಪುರುಷತ್ರಯದ ತತ್ವ. ಈ ತತ್ವವನ್ನು ಉಪನಿಷತ್ತುಗಳು ಸೂಕ್ಷ್ಮವಾಗಿ ಸೂಚಿಸಿವೆ, ಅಷ್ಟೆ; ಸ್ಪಷ್ಟವಾಗಿ ನಿರೂಪಿಸಿಲ್ಲ. ವಾಸ್ತವವಾಗಿ ಈ ವಿಚಾರ ವನ್ನು ಮೊದಲು ಕೇಳುವಾಗ ಪುರುಷರು ಇಬ್ಬರೆಂದು ಹೇಳುವ ಉಪನಿಷತ್ತಿಗೆ ಈ ತತ್ವವು ವಿರುದ್ಧವಾಗಿದೆಯೆಂದು ಭಾಸವಾಗುತ್ತದೆ. ಜ್ಞಾನವನ್ನೂ ಕರ್ಮವನ್ನೂ ಗೀತೆಯು ಸಮನ್ವಯ ಮಾಡುವಾಗ ಸಾಂಖ್ಯಕ್ಕೂ ಯೋಗಕ್ಕೂ ಇರುವ ವಿರೋಧ ದೊಂದಿಗೆ ವೇದಾಂತದಲ್ಲಿ ಜ್ಞಾನಮಾರ್ಗ ಕರ್ಮಮಾರ್ಗಗಳಿಗಿರುವ ವಿರೋಧವನ್ನೂ ಪರಿಹರಿಸಬೇಕಾಗಿದೆ. ಏತಕ್ಕೆಂದರೆ ಕರ್ಮ ಮತ್ತು ಜ್ಞಾನ ಎಂಬ ಪದಗಳಿಗೆ ಸಾಂಖ್ಯ ಮತ್ತು ಯೋಗಗಳು ಹೇಳುವ ಅರ್ಥಕ್ಕೂ ವೇದಾಂತವು ಹೇಳುವ ಅರ್ಥಕ್ಕೂ ವ್ಯತ್ಯಾಸವಿದೆ. ಈ ವ್ಯತ್ಯಾಸದಿಂದ ಜ್ಞಾನ ಮತ್ತು ಕರ್ಮಮಾರ್ಗಗಳಿಗೆ ಇರುವ ವಿರೋಧವು ಬೇರೆ ವಿಧವಾದುದು.

ವೇದ ಮತ್ತು ಉಪನಿಷತ್ತುಗಳನ್ನೆ ಆಧಾರವನ್ನಾಗಿ ಹೊಂದಿರುವ ವಿವಿಧ ದರ್ಶನಗಳಲ್ಲಿ ಪರಸ್ಪರ ವಿರೋಧವು ಕಂಡುಬರುವಾಗ ಮನುಷ್ಯನ ಮನಸ್ಸು ಶ್ರುತಿ ಗಳಿಂದ ನಾನಾದಿಕ್ಕುಗಳಲ್ಲಿ ಎಳೆಯಲ್ಪಟ್ಟು ಭ್ರಮೆಗೊಳ್ಳುವುದೆಂದು ಗೀತೆಯು ಹೇಳು ವುದರಲ್ಲಿ ಆಶ್ಚರ್ಯವೇನೂ ಇಲ್ಲ. ಈಗಲೂ ಕೂಡ ಶ್ರುತಿವಾಕ್ಯಗಳ ಅರ್ಥದ ವಿಷಯ ವಾಗಿ ಪಂಡಿತರಲ್ಲಿ ಎಷ್ಟು ವಿಧವಾದ ವಾದವಿವಾದಗಳು ನಡೆಯುವುವು ಮತ್ತು ಇವುಗಳ ಆಧಾರದ ಮೇಲೆ ಎಷ್ಟು ಭಿನ್ನವಾದ ಸಿದ್ಧಾಂತಗಳನ್ನು ಅವರು ಮಾಡಿ ದ್ದಾರೆ! ಇದರಿಂದ ಮನಸ್ಸಿಗೆ ಬಹಳ ಬೇಸರವಾಗಿ, ಪುರಾತನವಾದ ಶ್ರುತಿಗಳನ್ನಾಗಲಿ ಹೊಸದಾದ ವಾಕ್ಯಗಳನ್ನಾಗಲಿ ಕೇಳಲು ನಿರಾಕರಿಸಿ, ಆಂತರಿಕವಾದ ಮತ್ತು ನೇರವಾದ ಅನುಭವದಿಂದಲೆ ಸತ್ಯವನ್ನು ತಿಳಿಯಬೇಕೆಂದು ಮನಸ್ಸಿಗೆ ತೋರಿದರೆ ಅದು ನ್ಯಾಯವಾಗಿಯೆ ಇದೆ.

ಮೊದಲನೆಯ ಆರು ಅಧ್ಯಾಯಗಳಲ್ಲಿ ಗೀತೆಯು ಕರ್ಮ ಮತ್ತು ಜ್ಞಾನಗಳ ಸಮನ್ವಯಕ್ಕೂ, ಸಾಂಖ್ಯ, ಯೋಗ ಮತ್ತು ವೇದಾಂತಗಳ ಸಮನ್ವಯಕ್ಕೂ ವಿಸ್ತಾರವಾದ ಪೀಠಿಕೆಯನ್ನು ಹಾಕಿದೆ. '**ಕರ್ಮ**' ಎಂಬ ಪದಕ್ಕೆ ವೇದಾಂತಿಗಳ ಪ್ರಕಾರ ಒಂದು ವಿಶೇಷವಾದ ಅರ್ಥವಿದೆಯೆಂದು ಅದು ನಿರೂಪಿಸುತ್ತದೆ. ವೇದಾಂತದ ಪ್ರಕಾರ ಕರ್ಮವೆಂದರೆ ಯಜ್ಞಾದಿಗಳು; ಅಥವಾ ಇನ್ನೂ ವ್ಯಾಪಕವಾದ ಅರ್ಥವನ್ನು ಹೇಳಬೇಕೆಂದರೆ, ಗೃಹ್ಯಸೂತ್ರಗಳಲ್ಲಿ ಹೇಳಿರುವಂತೆ ದಿನಚರಿಯನ್ನು ನಡೆಸುವುದು. ಈ ಕರ್ಮಗಳನ್ನು ಮಾಡುವುದೆ ವೈದಿಕ ಜೀವನದ ಸಾರ. ಕರ್ಮ ವೆಂದರೆ ವೇದಾಂತಿಗಳು ಯಜ್ಞವೆಂದು ತಿಳಿದಿದ್ದರು– ಎಂದರೆ ಅನೇಕ ವಿಧಿಗಳಿಗೆ

ಒಳಪಟ್ಟು ಬಹಳವಾದ ಕಲಾಪಗಳಿಂದ ಕೂಡಿದ (ಕ್ರಿಯಾ ವಿಶೇಷ ಬಹುಳಾಂ) ಯಜ್ಞ.

ಯೋಗವಲ್ಲಾದರೊ ಕರ್ಮಕ್ಕೆ ಇನ್ನೂ ವ್ಯಾಪಕವಾದ ಅರ್ಥವಿರುವುದು. ಗೀತೆಯು ಈ ವ್ಯಾಪಕವಾದ ಅರ್ಥವನ್ನು ಒತ್ತಿ ಹೇಳುತ್ತದೆ. ಆಧ್ಯಾತ್ಮಿಕ ವ್ಯಾಪಾರವು ಎಲ್ಲ ಕರ್ಮಗಳನ್ನೂ ಒಳಗೊಂಡಿರಬೇಕು. ಗೀತೆಯು ಬೌದ್ಧಮತದಂತೆ ಯಜ್ಞವನ್ನು ನಿರಾಕರಿಸುವುದಿಲ್ಲ. ವೇದಾಂತಿಗಳ ಸಂಕುಚಿತ ಅಭಿಪ್ರಾಯವನ್ನೂ ಒಪ್ಪುವುದಿಲ್ಲ. ತನ್ನದೆ ಆದ ಹೊಸ ಹಾದಿಯನ್ನು ಹಿಡಿದು ಯಜ್ಞಕ್ಕೆ ವ್ಯಾಪಕವಾದ ಅರ್ಥವನ್ನು ಕೊಟ್ಟು ಅದನ್ನು ಮೇಲ್ಮಟ್ಟಕ್ಕೆ ಒಯ್ಯುತ್ತದೆ. ಮಾಡಬೇಕಾದ ಕೆಲಸಗಳನ್ನು ತಿಳಿವಳಿಕೆಯಿಲ್ಲದವರು ಜ್ಞಾನವಿಲ್ಲದೆಯೆ ಮಾಡುತ್ತಿರಬಹುದು; ಇನ್ನೂ ಅಜ್ಞರಾಗಿರುವವರು ವಿಧಿಯನ್ನು ಬಿಟ್ಟೂ ಮಾಡುತ್ತಿರಬಹುದು. ಆದಾಗ್ಯೂ ಗೀತೆಯ ದೃಷ್ಟಿಯಲ್ಲಿ ಯಜ್ಞವು ಜೀವನದ ಮುಖ್ಯವಾದ ಭಾಗ ಮಾತ್ರವಲ್ಲ; ಜೀವನವೆಲ್ಲವನ್ನು—ಎಲ್ಲಾ ಕಾರ್ಯಗಳನ್ನೂ—ಯಜ್ಞವೆಂದು ಪರಿಗಣಿಸಬೇಕು.

ಯಜ್ಞವು ಜೀವನದ ಮುಖ್ಯವಾದ ತತ್ವ. ಸೃಷ್ಟಿಕರ್ತನು ಯಜ್ಞಸಹಿತವಾಗಿಯೆ ಪ್ರಜೆಗಳನ್ನು ಸೃಷ್ಟಿಮಾಡಿದನು. ವೇದವಾದಿಗಳು ಭೋಗೇಚ್ಛೆಯಿಂದಲೂ, ಕರ್ಮಫಲವನ್ನು ಹೊಂದುವ ಆಸೆಯಿಂದಲೂ, ಸ್ವರ್ಗಸುಖವನ್ನೇ ಅನುರತ್ವ ಮತ್ತು ಮುಕ್ತಿ ಎಂದು ಭಾವಿಸಿ ಅದನ್ನು ಪಡೆಯುವ ಕಾಮದಿಂದಲೂ, ಯಜ್ಞವನ್ನು ಮಾಡುತ್ತಾರೆ. ಇದನ್ನು ಗೀತೆಯು ಒಪ್ಪುವುದಿಲ್ಲ. ಏತಕ್ಕೆಂದರೆ ಗೀತೆಯು ಎಲ್ಲಕ್ಕಿಂತ ಮೊದಲೆ ಕಾಮವನ್ನು ತ್ಯಾಗಮಾಡಬೇಕೆಂದೂ, ಅದು ಆತ್ಮನ ಶತ್ರುವೆಂದು ತಿಳಿದು ಅದನ್ನು ನಾಶಮಾಡಬೇಕೆಂದೂ ಹೇಳುತ್ತದೆ. ಆದರೂ ವೈದಿಕ ಯಜ್ಞದಿಂದ ಉಪಯೋಗವುಂಟೆಂಬುದನ್ನು ಗೀತೆಯು ನಿರಾಕರಿಸುವುದಿಲ್ಲ; ಅಂಗೀಕರಿಸುತ್ತದೆ. ಅದರಿಂದ ಐಹಿಕ ಭೋಗವೂ ಸ್ವರ್ಗವಾಸವೂ ಲಭಿಸುವುವೆಂದು ಗೀತೆಯು ಒಪ್ಪಿಕೊಳ್ಳುತ್ತದೆ. "ಈ ಯಜ್ಞಗಳನ್ನು ಮಾಡುವುದು ನನಗಾಗಿಯೆ. ಅದನ್ನು ಸ್ವೀಕರಿಸುವವನು ನಾನೆ. ಈ ರೀತಿಯಲ್ಲಿ ನನ್ನನ್ನು ಭಜಿಸುವವರಿಗೆ ಅವರ ಇಷ್ಟದೇವತೆಗಳ ರೂಪದಲ್ಲಿ ಫಲವನ್ನು ಕೊಡುವವನು ನಾನೆ. ಆದರೆ ಇದು ಸರಿಯಾದ ಮಾರ್ಗವಲ್ಲ. ಸ್ವರ್ಗಸುಖದ ಅನುಭವವು ಮುಕ್ತಿಯೂ ಅಲ್ಲ; ಜೀವನದ ಗುರಿಯೂ ಅಲ್ಲ. ಬೇರೆ ದೇವತೆಗಳನ್ನು ಪೂಜಿಸುವವರು ಅಜ್ಞರು, ಅವರಿಗೆ ತಾವು ಈ ರೂಪಗಳಲ್ಲಿ ಯಾರನ್ನು ಪೂಜಿಸುತ್ತೇವೆಂಬ ಅರಿವಿಲ್ಲ." ಅರಿವಿಲ್ಲದಿದ್ದಾಗ್ಯೂ ಅವರು ಪೂಜಿಸುವುದು ಒಬ್ಬನೆ ಆದ ಈಶ್ವರನನ್ನೇ; ಅವರ ಪೂಜೆಯನ್ನು ಸ್ವೀಕರಿಸುವವನೂ ಅವನೆ.

ಈ ಈಶ್ವರನಿಗೇ ನಿಜವಾದ ಯಜ್ಞವನ್ನು—ಎಂದರೆ ಜೀವನದ ಎಲ್ಲ ವಿಧವಾದ ವ್ಯಾಪಾರಗಳನ್ನೂ ಕರ್ಮಗಳನ್ನೂ—ಭಕ್ತಿಯಿಂದಲೂ ಫಲಾಪೇಕ್ಷೆಯಿಲ್ಲದೆಯೂ ಈಶ್ವರಪ್ರೀತಿಗಾಗಿಯೂ ಲೋಕಕಲ್ಯಾಣಕ್ಕಾಗಿಯೂ ಅರ್ಪಿಸಬೇಕು. ಈ ತತ್ತ್ವವು ವೇದವಾದದಲ್ಲಿ ಮರೆಯಾಗಿದೆ; ನಿಯಮ ಮತ್ತು ವಿಧಿಗಳ ಗೊಂದಲದಲ್ಲಿ ಸಿಲುಕಿ ಮನುಷ್ಯನು ತ್ರಿಗುಣಾತ್ಮಕವಾದ ಕರ್ಮಗಳಲ್ಲಿ ಬದ್ಧನಾಗಿ ತೊಳಲುತ್ತಾನೆ. ಆದುದರಿಂದಲೇ ವೇದವಾದವನ್ನು ಗೀತೆಯು ಕಟುವಾಗಿ ಟೀಕಿಸಿ ಬದಿಗೊತ್ತಿದೆ. ಆದರೆ ಅದರಲ್ಲಿರುವ ಸತ್ಯಾಂಶವನ್ನು ತಿರಸ್ಕರಿಸಿಲ್ಲ. ಅದಕ್ಕೆ ಬೇರೆ ರೂಪವನ್ನು ಕೊಟ್ಟು, ಮೇಲ್ಮಟ್ಟಕ್ಕೇರಿಸಿ, ನಿಜವಾದ ಆಧ್ಯಾತ್ಮಿಕ ಅನುಭವ ಮತ್ತು ಮುಕ್ತಿಯನ್ನು ಪಡೆಯಲು ಅದನ್ನು ಸಾಧನವನ್ನಾಗಿ ಮಾಡಿದೆ.

ವೇದಾಂತದಲ್ಲಿ ಜ್ಞಾನವೆಂಬ ಪದಕ್ಕೆ ಹೇಳಿರುವ ಅರ್ಥವು ಈ ವಿಧವಾದ ತೊಡಕಿಗೆ ಅವಕಾಶಕೊಡುವುದಿಲ್ಲ. ಆ ಅರ್ಥವನ್ನು ಗೀತೆಯು ಅಂಗೀಕರಿಸಿ ಮೊದಲನೆಯ ಆರು ಅಧ್ಯಾಯಗಳಲ್ಲಿಯೂ ಸಾಂಖ್ಯದ ತಟಸ್ಥರೂ, ನಿರ್ವಿಕಾರರೂ ಅನೇಕರೂ ಆದ ಪುರುಷರ ಸ್ಥಾನದಲ್ಲಿ ವೇದಾಂತಿಗಳ ತಟಸ್ಥವೂ ನಿರ್ವಿಕಾರವೂ ಏಕವೂ ಅದ್ವಿತೀಯವೂ ಸರ್ವಾಂತರ್ಯಾಮಿಯೂ ಆದ ಬ್ರಹ್ಮನನ್ನು ಹೇಳುವುದು. ಈ ಆರು ಅಧ್ಯಾಯಗಳಲ್ಲಿಯೂ ಮುಕ್ತಿಗೆ ಜ್ಞಾನವೂ ಬ್ರಹ್ಮಸಾಕ್ಷಾತ್ಕಾರವೂ ಅತ್ಯವಶ್ಯಕವೆಂದು ಹೇಳುತ್ತದೆ. ಆದರೆ ಜ್ಞಾನಕ್ಕೆ ನಿಷ್ಕಾಮ ಕರ್ಮವು ಒಂದು ಮುಖ್ಯವಾದ ಅಂಗವೆಂದು ಹೇಳುತ್ತದೆ. ಹಾಗೆಯೆ ಗೀತೆಯು ನಿರ್ವಾಣವನ್ನು—ಎಂದರೆ ನಿರ್ವಿಕಾರವೂ, ನಿರಾಕಾರವೂ, ಸಮವೂ, ಅನಂತವೂ, ಆದ ಬ್ರಹ್ಮನಲ್ಲಿ ಐಕ್ಯಹೊಂದುವುದನ್ನು—ಮುಕ್ತಿಯೆಂದು ಎಣಿಸುತ್ತದೆ. ಸಾಂಖ್ಯದಲ್ಲಿ ಹೇಳುವಂತೆ ನಿರ್ವಿಕಾರನೂ ತಟಸ್ಥನೂ ಆದ ಪುರುಷನು ಪ್ರಕೃತಿವ್ಯಾಪಾರಗಳಿಂದ ನಿವೃತ್ತನಾಗಿ ತನ್ನ ಪೂರ್ವಸ್ಥಿತಿಗೆ ಹಿಂದಿರುಗುವುದೆ ಈ ನಿರ್ವಾಣವೆಂದು ಗೀತೆಯು ಒಪ್ಪಿಕೊಳ್ಳುತ್ತದೆ ಎಂದು ಹೇಳಬಹುದು. ಕೆಲವು ಉಪನಿಷತ್ತುಗಳು ಮಾಡಿರುವಂತೆ ಗೀತೆಯೂ ಸಾಂಖ್ಯದ ಮತ್ತು ವೇದಾಂತದ ಪಾರಿಭಾಷಿಕಪದಗಳನ್ನು ಒಟ್ಟಿಗೆ ಉಪಯೋಗಿಸುತ್ತದೆ. ಆದರೂ ವೇದಾಂತದಲ್ಲಿರುವ ಒಂದು ಲೋಪವನ್ನು ಗೀತೆಯು ನರಿಪಡಿಸಬೇಕಾಗಿದೆ. ಆಗ ವೇದಾಂತದ ದೃಷ್ಟಿಯು ಈಶ್ವರೋಪಾಸನೆಯ ಮೇಲೆ ಹೆಚ್ಚಾಗಿ ಇರಲಿಲ್ಲವೆಂದು ಕಾಣುತ್ತದೆ. ಇದು ಉಪನಿಷತ್ತುಗಳಲ್ಲಿ ಸ್ವಲ್ಪ ಮಟ್ಟಿಗೆ ಕಂಡುಬರುತ್ತದೆ. ಆದರೆ ಅಷ್ಟು ಮುಖ್ಯವಾಗಿಲ್ಲ. ಈಚಿನಕಾಲದ ವೈಷ್ಣವ ವೇದಾಂತದಲ್ಲಿ ಇದು ಬಹಳ ಮುಖ್ಯವಾಗಿದೆ. ಆಗಿನ ಕಾಲದ ಸಂಪ್ರದಾಯಸ್ಥರ ವೇದಾಂತಕೆ

ಸರ್ವವೂ ಬ್ರಹ್ಮ ಎಂಬ ಭಾವನೆಯು ಆಧಾರವಾಗಿತ್ತು; ಬ್ರಹ್ಮವು ಒಂದೇ ಎಂಬ ಅದ್ವೈತ ತತ್ವವು ಅದರ ಶಿಖರವಾಗಿತ್ತು. ಒಂದೇ ಆದ ಅದ್ವಿತೀಯ ಬ್ರಹ್ಮದ ವಿಷಯವು ಆಗ ಗೊತ್ತಿದ್ದಿತು. ಅಲ್ಲದೆ ಬ್ರಹ್ಮದೊಂದಿಗೆ ಒಂದೇ ಆಗುವ ಬ್ರಹ್ಮ ವಿಷ್ಣು ಶಿವ ಮೊದಲಾದ ದೇವತೆಗಳ ವಿಷಯವೂ ಗೊತ್ತಿದ್ದಿತು. ಆದರೆ ಅದ್ವಿತೀಯವಾದ ಈ ಪರಬ್ರಹ್ಮವು ಒಬ್ಬನೆ ಆದ ಈಶ್ವರನೆಂಬ (ಜೀವ ಅಥವಾ ಪುರುಷ) ತತ್ವವು ಬದಿಗೊತ್ತಲ್ಪಟ್ಟಿತ್ತು. ನಿಷ್ಕೃಷ್ಟವಾದ ಬ್ರಹ್ಮವಾದದ ಮಾತು ಗಳಲ್ಲಿ ಈಶ್ವರ ಪುರುಷ ಅಥವಾ ಜೀವ ಎಂಬ ಪದಗಳು ಅದ್ವಿತೀಯವಾದ ಪರಬ್ರಹ್ಮ ವನ್ನು ನಿರ್ದೇಶಿಸುವುದಿಲ್ಲ. ಕೆಳಮಟ್ಟದ ದೇವತೆಗಳಿಗೆ ಮಾತ್ರ ಅನ್ವಯಿಸುತ್ತವೆ. ಈ ಪದಗಳಿಗೆ ಮತ್ತು ಅವು ಸೂಚಿಸುವ ತತ್ವಕ್ಕೆ ಗೀತೆಯು ಹಿಂದೆ ಇದ್ದ ಅರ್ಥವನ್ನೆ ಕೊಡುವುದಲ್ಲದೆ ಇನ್ನೂ ಒಂದುಹೆಜ್ಜೆ ಮುಂದೆ ಹೋಗುತ್ತದೆ. ಬ್ರಹ್ಮವೇ ಪುರುಷ ನೆಂದೂ, ಅಪರಾಕೃತಿಯೇ ಅದರ ಮಾಯೆಯೆಂದೂ ಹೇಳಿ, ಗೀತೆಯು ಸಾಂಖ್ಯವನ್ನೂ ವೇದಾಂತವನ್ನೂ ಸಮನ್ವಯಮಾಡುತ್ತದೆ. ಮತ್ತು ಬ್ರಹ್ಮವೇ ಈಶ್ವರನೆಂದು ಹೇಳಿ ಸಾಂಖ್ಯ ಮತ್ತು ವೇದಾಂತಗಳೆರಡನ್ನೂ ಯೋಗದೊಡನೆ ಸಮನ್ವಯಮಾಡುತ್ತದೆ. ಆದರೆ ಗೀತೆಯು ಪುರುಷೋತ್ತಮ ಅಥವಾ ಈಶ್ವರನು ತಟಸ್ಥವಾದ ಮತ್ತು ನಿರ್ವಿಕಾರವಾದ ಬ್ರಹ್ಮಕ್ಕಿಂದ ಮೇಲಿನದೆಂದು ಹೇಳುತ್ತದೆ. ಮತ್ತು ಜೀವನು ತನ್ನ ಅಹಂಕಾರಕ್ಕೆ ಅತೀತನಾಗಿ ಅಕ್ಷರದಲ್ಲಿ ಒಂದಾಗುವುದು ಅವಶ್ಯಕವೂ ಮುಖ್ಯವೂ ಆದ ಒಂದನೆಯ ಹಂತಮಾತ್ರವೆಂದೂ, ಇದಾದಮೇಲೆ ಪುರುಷೋತ್ತಮನಲ್ಲಿ ಅವನು ಐಕ್ಯ ಹೊಂದುವನೆಂದೂ ಹೇಳುತ್ತದೆ. ಪುರುಷೋತ್ತಮನೆ ಪರಬ್ರಹ್ಮವು. ಈ ರೀತಿಯಲ್ಲಿ ಗೀತೆಯು ಆಗಿನಕಾಲದಲ್ಲಿ ಪಂಡಿತರು ವೇದ ಮತ್ತು ಉಪನಿಷತ್ತುಗಳಿಗೆ ಮಾಡು ತ್ತಿದ್ದ ಅರ್ಥಕ್ಕಿಂತ ಒಂದುಹೆಜ್ಜೆ ಮುಂದೆಹೋಗಿ ಅವುಗಳ ಆಧಾರದ ಮೇಲೆ ರಚಿಸಿ ದ್ದರೂ ತನ್ನದೆ ಆದ ಸಿದ್ಧಾಂತವನ್ನು ಮುಂದಿಡುತ್ತದೆ. ಸಂಪ್ರದಾಯಸ್ಥರಾದ ವೇದಾಂತಿಗಳು ಶ್ರುತಿಗಳಿಗೆ ಕೊಡುವ ಅರ್ಥದ ಚೌಕಟ್ಟಿನಲ್ಲಿ ಇದು ಅಂತರ್ಗತವಾಗದೆ ಇರಬಹುದು; ವಸ್ತುತಃ ಪರಸ್ಪರ ವಿರುದ್ಧವಾದ ಅನೇಕ ಮತಗಳು ಇದ್ದ ಆ ಕಾಲ ದಲ್ಲಿ ಶ್ರುತಿವಾಕ್ಯಗಳಿಗೆ ಸಂಪ್ರದಾಯಕ್ಕನುಸಾರವಾಗಿ ಅರ್ಥಮಾಡುವುದನ್ನು ಬಿಟ್ಟು ಹೀಗೆ ಸ್ವತಂತ್ರವಾದ ರೀತಿಯಲ್ಲಿ ಅರ್ಥಮಾಡದೆ ಇದ್ದಿದ್ದರೆ ಗೀತೆಗೆ ವ್ಯಾಪಕವಾದ ಸಮನ್ವಯವನ್ನು ಮಾಡಲು ಸಾಧ್ಯವಾಗುತ್ತಿರಲಿಲ್ಲ.

ಗೀತೆಯು ಮುಂದಿನ ಅಧ್ಯಾಯಗಳಲ್ಲಿ ವೇದ ಮತ್ತು ಉಪನಿಷತ್ತುಗಳನ್ನು ಕುರಿತು ಬಹಳ ಗೌರವದಿಂದ ಪ್ರಸ್ತಾಪಿಸಿದೆ. ವೇದಗಳು ಅಪೌರುಷೇಯವೆಂದೂ,

ಈಶ್ವರನಿಂದಲೆ ಹೇಳಲ್ಪಟ್ಟವೆಂದೂ, ವೇದಾಂತವನ್ನು ಮಾಡಿದವನೂ ವೇದವನ್ನು ತಿಳಿದವನೂ (**ವೇದಾಂತಕೃತ್ ವೇದವಿದ್ಯೈವ ಚಾಹಂ** ಅ. ೧೫ ಶ್ಲೋಕ ೧೫) ಭಗವಂತನೆ ಎಂದೂ ಹೇಳುತ್ತದೆ. ಎಲ್ಲ ವೇದಗಳಿಂದಲೂ ತಿಳಿಯಲ್ಪಡುವವನೂ ಇವನೆ. ಇದರಿಂದ ವೇದಗಳು ಜ್ಞಾನಭಂಡಾರವೆಂದೂ, ಇವುಗಳಿಗೆ ವೇದವೆಂಬ ಹೆಸರು ಅನ್ವರ್ಥವೆಂದೂ ಸ್ಪಷ್ಟವಾಗುತ್ತದೆ. ಕ್ಷರ ಮತ್ತು ಅಕ್ಷರಗಳೆರಡಕ್ಕೂ ಅತೀತನಾಗಿರುವುದರಿಂದ ಅವನು ಪುರುಷೋತ್ತಮನೆಂದು ಲೋಕದಲ್ಲೂ, ವೇದದಲ್ಲೂ ಪ್ರಸಿದ್ಧನಾಗಿದ್ದಾನೆ. ಆದರೂ ಶ್ರುತಿಗಳಿಗೆ ವ್ಯಾಕರಣಬದ್ಧವಾಗಿ ಅರ್ಥವನ್ನು ಮಾಡಿದರ ಕೆಲವು ವೇಳೆ ಭ್ರಾಂತಿಯೂ ಸಂಕುಚಿತದೃಷ್ಟಿಯೂ ಉಂಟಾಗುತ್ತವೆ. ಕ್ರೈಸ್ತಮತದ ಒಬ್ಬ ಉಪದೇಶಕನು ವ್ಯಾಕರಣಕ್ಕನುಸಾರವಾದ ಅರ್ಥವು ಕೊಲ್ಲುತ್ತದೆ, ಭಾವಾರ್ಥವಾದರೂ ಜೀವಕಳೆಯನ್ನು ತುಂಬುತ್ತದೆ, ಎಂದು ಹೇಳಿದ್ದಾನೆ. ಅಲ್ಲದೆ ಶ್ರುತಿವಾಕ್ಯಗಳಿಂದ ಒಂದು ಮಟ್ಟದವರೆಗೆ ಮಾತ್ರ ಪ್ರಯೋಜನವುಂಟು. ಜ್ಞಾನಕ್ಕೆ ನಿಜವಾದ ಮೂಲವು ಹೃದಯಸ್ಥನಾದ ಈಶ್ವರ. "ಎಲ್ಲರಹೃದಯದಲ್ಲೂ ನಾನು ಇದ್ದೇನೆ. ನನ್ನಿಂದಲೇ ಜ್ಞಾನವು ಉಂಟಾಗುತ್ತದೆ". ಎಂದು ಗೀತೆಯಲ್ಲಿ ಭಗವಂತನು ಹೇಳಿದ್ದಾನೆ. ಶ್ರುತಿಯೆಂಬುದು ಈ ಸ್ವಪ್ರಕಾಶವಾದ ಆಂತರಿಕಜ್ಞಾನದ ಶಬ್ದರೂಪ ಮಾತ್ರ. ಮಂತ್ರವು ಸತ್ಯದ ಗೂಢಸ್ಥಾನದಿಂದ, ಹೃದಯದಿಂದ ಬಂದಿದೆಯೆಂದು ವೇದವು ಹೇಳುತ್ತದೆ. ಈ ಮೂಲದಿಂದ ಬಂದಿರುವುದರಿಂದಲೇ ವೇದಕ್ಕೆ ಅಷ್ಟು ಗೌರವವಿದೆ. ಆದರೂ ಸತ್ಯದ ಸ್ವರೂಪವನ್ನು ಮಾತುಗಳ ರೂಪದಲ್ಲಿ ತಿಳಿಸುವ ವೇದಕ್ಕಿಂತ ಸತ್ಯವೇ ದೊಡ್ಡದು; ಅದು ಅಪಾರವಾದುದು. ವೇದವಾದಿಗಳು ವೇದದ ವಿಷಯದಲ್ಲಿ ನಾನ್ಯದಸ್ತಿ ಎಂದು ಹೇಳುವಂತೆ ಯಾವ ಶ್ರುತಿ ಅಥವಾ ಆಗಮಗ್ರಂಥದ ವಿಷಯದಲ್ಲಿಯೂ ಯಾರೂ "ಇದು ಸತ್ಯದ ಸಮಗ್ರಸ್ವರೂಪ; ಇದನ್ನುಳಿದು ಯಾವಸತ್ಯವೂ ಇಲ್ಲ" ಎಂದು ಹೇಳಲಾಗುವುದಿಲ್ಲ. ಪ್ರಪಂಚದ ಎಲ್ಲ ಶ್ರುತಿಗಳನ್ನೂ ತೆಗೆದುಕೊಳ್ಳೋಣ; ಬೈಬಲ್, ಕೊರಾನ್, ಚೀನಾದೇಶದ ಮತಗ್ರಂಥಗಳು, ವೇದಗಳು, ಉಪನಿಷತ್ತುಗಳು, ಪುರಾಣಗಳು, ತಂತ್ರ ,ಶಾಸ್ತ್ರಗಳು, ಗೀತೆ ಇತ್ಯಾದಿ; ಮತ್ತು ಎಲ್ಲಾ ತಾತ್ವಿಕರ, ಋಷಿಗಳ, ಪ್ರವಾದಿಗಳ ಮತ್ತು ಅವತಾರಪುರುಷರ ಉಪದೇಶಗಳು; ಆದರೂ ಇವುಗಳಲ್ಲಲ್ಲದೆ ಬೇರೆ ಸತ್ಯವು ಇಲ್ಲ, ಎಂದಾಗಲಿ; ನಮಗೆ ಯಾವುದೊ ತತ್ವವು ಇವುಗಳಲ್ಲಿ ಇರುವಂತೆ ಕಂಡುಬರದೆ ಇರುವುದರಿಂದ ಅದು ಸತ್ಯವಲ್ಲ ಎಂದಾಗಲಿ, ಹೇಳುವುದಕ್ಕಾಗುವುದಿಲ್ಲ. ಹೀಗೆ ಹೇಳುವುದು ತಮ್ಮ ಸಂಪ್ರದಾಯವೊಂದನ್ನೇ ಸತ್ಯವೆಂದು ನಂಬಿರುವವರ ಸಂಕುಚಿತಭಾವನೆ ಅಥವಾ ಎಲ್ಲ ಮತಗಳಿಂದಲೂ ತಮಗೆ ಬೇಕಾದ

ಅಂಶಗಳನ್ನು ಮಾತ್ರ ಆರಿಸಿಕೊಂಡಿರುವವರ ಮಾತು. ಯಾವ ನಿರ್ಬಂಧಕ್ಕೂ ಒಳಗಾಗದೆ ಸತ್ಯವನ್ನು ಹುಡುಕುತ್ತಾ, ಪಕ್ಷಪಾತರಹಿತವಾದ ಮತ್ತು ಜ್ಞಾನದಿಂದ ಬೆಳಗಲ್ಪಟ್ಟ ಮನಸ್ಸುಳ್ಳವರಾಗಿ ಸತ್ಯವನ್ನು ಸಾಕ್ಷಾತ್ಕಾರಮಾಡಿಕೊಂಡವರ ಮಾತಲ್ಲ. ಹಿಂದೆ ಕೇಳಿರಲಿ ಅಥವಾ ಕೇಳದೆ ಇರಲಿ; ಮನುಷ್ಯನ ಜ್ಞಾನದೀಪಿತವಾದ ಹೃದಯಾಂತರಾಳದಲ್ಲಿ ಯಾವುದು ಭಾಸವಾಗುವುದೊ ಅಥವಾ ಅಂತರಾಳದಲ್ಲಿ ಶಾಶ್ವತವಾದ ವೇದದ ವೇತೃವೂ ಮತ್ತು ಸಮಸ್ತಜ್ಞಾನದ ಪ್ರಭುವೂ ಆದ ಆತ್ಮನು ಏನನ್ನು ಹೇಳುತ್ತಾನೆಯೋ ಅದೆ ಯಾವಾಗಲೂ ಸತ್ಯ.



# ಹತ್ತನೆಯ ಪ್ರಕರಣ

## ಬುದ್ಧಿಯೋಗ

ಹಿಂದಿನ ಎರಡು ಪ್ರಕರಣಗಳಲ್ಲಿ ನಾವು ಗೀತೆಯ ವಿಷಯವನ್ನು ಬಿಟ್ಟು ನೀರಸವಾದ ವೇದಾಂತ ವಿಚಾರವನ್ನು ಸ್ಥೂಲವಾಗಿಯೂ ಅಪೂರ್ಣವಾಗಿಯೂ ಮಾಡಬೇಕಾಯಿತು. ಗೀತೆಯಲ್ಲಿ ಈ ರೀತಿಯಲ್ಲಿಯೆ ಉಪದೇಶವನ್ನು ಮಾಡಿದೆ ಎಂಬುದನ್ನು ತಿಳಿಯಲು ಅವು ಅವಶ್ಯಕವಾಗಿದ್ದುದರಿಂದ ಅದನ್ನು ನಾವು ತಿಳಿಯ ಬೇಕಾಯಿತು. ಮೊದಲು ಸತ್ಯದ ಒಂದು ಅಂಶವನ್ನು ಮಾತ್ರ ವಿಸ್ತಾರವಾಗಿ ನಿರೂಪಿಸಿ, ಅದರಲ್ಲಿ ಆಳವಾಗಿ ಹೋದಾಗ ಇತರ ಅಂಶಗಳೂ ಅಡಗಿರುವುವೆಂದು ಸೂಚಿಸಿದೆ; ಆಮೇಲೆ ಆ ಸೂಚನೆಗಳನ್ನು ತೆಗೆದುಕೊಂಡು, ಆ ವಿಷಯಗಳನ್ನು ವಿಸ್ತಾರವಾಗಿ ವಿಮರ್ಶಿಸಿ, ಕೊನೆಯಲ್ಲಿ ಶ್ರೇಷ್ಠವಾದ ತತ್ವವನ್ನು, ಪರಮರಹಸ್ಯವನ್ನು ಸೂಚಿಸಿ, ಅದನ್ನು ವಿಸ್ತರಿಸದೆ, ಅನುಭವದಿಂದ ತಿಳಿಯಲು ಬಿಟ್ಟುಬಿಡುತ್ತದೆ. ಈಚಿನ ಕಾಲದ ಸಾಧಕರು ಹೀಗೆ ಉತ್ಕಟವಾದ ಪ್ರೇಮ, ಭಕ್ತಿ ಮತ್ತು ಆತ್ಮ ನಿವೇದನೆಗಳ ಮೂಲಕ ಇದನ್ನು ಅನುಭವಿಸಿ ತಿಳಿಯಲು ಪ್ರಯತ್ನಿಸಿದ್ದಾರೆ. ಗೀತೆಯ ಗಮನವು ಯಾವಾಗಲೂ ಸಮನ್ವಯದ ಮೇಲೆ ಇದೆ. ಅದರ ಉಪದೇಶಗಳೆಲ್ಲವೂ ಕೊನೆಗೆ ಪರಾತ್ಪರವನ್ನು ಕ್ರಮಕ್ರಮವಾಗಿ ಮುಟ್ಟುವುದಕ್ಕೆ ಸಹಾಯಕಗಳಾಗಿವೆ.

ಶ್ರೀಕೃಷ್ಣನು ಅರ್ಜುನನಿಗೆ ಹೀಗೆ ಹೇಳುತ್ತಾನೆ. "ಜ್ಞಾನದಿಂದ ಸಮತ್ವ ಸ್ಥಿತಿಯನ್ನು ಪಡೆಯಬಹುದೆಂಬ ಸಾಂಖ್ಯದ ತತ್ವವನ್ನು ಹೇಳಿದ್ದೇನೆ. ಈಗ ಬುದ್ಧಿಯೋಗದಿಂದ ಹೊಂದಬಹುದಾದ ಸ್ಥಿತಿಯನ್ನು ತಿಳಿಸುತ್ತೇನೆ. ನೀನು ಮಾಡಬೇಕಾದ ಕರ್ಮದ ಪರಿಣಾಮವನ್ನು ಯೋಚಿಸಿ ಹೆದರಿದ್ದೀಯ. ಈ ಪರಿಣಾಮಗಳು ನಿನಗೆ ಬೇಕಿಲ್ಲ; ಬೇರೆ ಫಲಗಳು ಬೇಕಾಗಿವೆ. ನಿನಗೆ ಬೇಕಾದ ಫಲಗಳು ದೊರೆಯುವುದಿಲ್ಲವೆಂಬ ಕಾರಣದಿಂದ ನಿನ್ನ ಕರ್ತವ್ಯದಿಂದ ವಿಮುಖನಾ ಗುತ್ತಿದ್ದೀಯೆ. ಆದರೆ ಫಲದ ದೃಷ್ಟಿಯಿಂದ ಕರ್ಮವನ್ನು ಮಾಡಿ, ಆ ಫಲವನ್ನೆ ಉದ್ದೇಶವನ್ನಾಗಿಟ್ಟುಕೊಂಡು, ಈ ಇಷ್ಟಪೂರ್ತಿಗಾಗಿ ಕರ್ಮಮಾಡಿ ಅಜ್ಞರು ಬಂಧನಕ್ಕೆ ಸಿಕ್ಕಿಕೊಳ್ಳುತ್ತಾರೆ. ಅವರಿಗೆ ಕರ್ಮವೆಂದರೆ ಏನು, ಅದರ ನಿಜವಾದ ಮೂಲಯಾವುದು, ಅದು ಹೇಗೆ ಫಲಕೊಡುತ್ತದೆ ಮತ್ತು ಅದರ ಮುಖ್ಯ ಪ್ರಯೋಜನವೇನು ಎಂಬ ವಿಷಯಗಳೆ ತಿಳಿದಿಲ್ಲ. ಈಗ ನಾನು ಹೇಳುವ ಯೋಗವು

ಕರ್ಮಬಂಧನದಿಂದ ನಿನ್ನನ್ನು ಬಿಡುಗಡೆ ಮಾಡುತ್ತದೆ. ನಿನಗೆ ಅನೇಕ ವಿಷಯಗಳಲ್ಲಿ ಭೀತಿಯಿದೆ: ಪಾಪಬರುವುದೆಂಬ ಭೀತಿ; ಕ್ಲೇಶವುಂಟಾಗುವುದೆಂಬ ಭೀತಿ; ನರಕಭಯ; ದೇವರ ಭಯ; ಈ ಲೋಕದ ಮತ್ತು ಪರಲೋಕದ ಭಯ ಮತ್ತು ನಿನ್ನಿಂದಲೂ ಭಯ. ಪ್ರಪಂಚದ ವೀರಾಗ್ರಣಿಯೂ ಕ್ಷತ್ರಿಯಶ್ರೇಷ್ಠನೂ ಆದ ನಿನಗೆ ಈಗ ಯಾವ ವಿಷಯದಲ್ಲಿ ತಾನೆ ಭಯವಿಲ್ಲ! ಪಾಪದ ಭಯ, ಇಹಲೋಕದಲ್ಲಿ ಮತ್ತು ಪರಲೋಕದಲ್ಲಿ ಕಷ್ಟದ ಭಯ, ನಿಜಸ್ವರೂಪವು ತಮಗೆ ತಿಳಿಯದಿರುವ ಸಂಸಾರದಲ್ಲಿ ಭಯ, ನಿಜಸ್ವರೂಪವು ತಿಳಿಯದಿರುವ, ಅವನ ಸೃಷ್ಟಿ ಸಂಕಲ್ಪ ತಿಳಿಯದಿರುವ ಈಶ್ವರನ ವಿಷಯದಲ್ಲಿ ಭಯ—ಇವೆ ಜನರನ್ನು ಬಾಧಿಸುವ ಭಯಗಳು. ಈ ಮಹತ್ತಾದ ಭಯಗಳಿಂದ ನಾನು ಹೇಳುವ ಯೋಗವು ನಿನ್ನನ್ನು ಕಾಪಾಡುತ್ತದೆ. ಅದನ್ನು ಕಿಂಚಿತ್ತಾದರೂ ತಿಳಿದುಕೊಂಡರೂ ಮುಕ್ತಿಯುಂಟಾಗುತ್ತದೆ. ಈ ಮಾರ್ಗದಲ್ಲಿ ನೀನು ಕಾಲಿಟ್ಟರೆ ನಿನ್ನ ಒಂದು ಹೆಜ್ಜೆಯೂ ವ್ಯರ್ಥವಾಗುವುದಿಲ್ಲ. ಒಂದೊಂದು ಹೆಜ್ಜೆಯೂ ಲಕ್ಷ್ಯದ ಕಡೆಗೆ ಒಯ್ಯುತ್ತದೆ. ನಿನ್ನ ಪ್ರಗತಿಯನ್ನು ತಡೆಯಬಲ್ಲ ಯಾವ ಪ್ರತಿಬಂಧಕವೂ ಈ ಮಾರ್ಗದಲ್ಲಿಲ್ಲ." ಇದೇನೊ ಖಂಡಿತವಾದ ಮತ್ತು ಭಯವನ್ನು ಹೋಗಲಾಡಿಸುವ ಭರವಸೆಯೆ ಹೌದು. ಆದರೂ ಭಯದಿಂದಲೂ ಸಂಶಯದಿಂದಲೂ ಕೂಡಿ, ದಾರಿಯಲ್ಲಿ ಎಡವುತ್ತಿರುವವನ ಮನಸ್ಸಿಗೆ ಇದರಿಂದ ಪೂರ್ಣವಾದ ನಂಬಿಕೆಯೂ ಭರವಸೆಯೂ ಬರಲಾರವು. ಗೀತೆಯು ಕೊನೆಯಲ್ಲಿರುವ "ಎಲ್ಲ ಧರ್ಮಗಳನ್ನೂ ಬಿಟ್ಟು ನನ್ನೊಬ್ಬನನ್ನು ಶರಣುಹೊಂದು; ನಾನು ನಿನ್ನನ್ನು ಎಲ್ಲ ಪಾಪಗಳಿಂದಲೂ ಬಿಡುಗಡೆ ಮಾಡುತ್ತೇನೆ; ಶೋಕಿಸಬೇಡ" ಎಂಬ ಉಪದೇಶವನ್ನು ಮೇಲಿನ ಉಪದೇಶದೊಂದಿಗೆ ಸೇರಿಸಿದರೆ ಮೇಲಿನ ಮಾತುಗಳ ಸಂಪೂರ್ಣವಾದ ಅರ್ಥವು ತಿಳಿಯುವುದೆ ಹೊರತು ಹಾಗೆ ಮಾಡದಿದ್ದರೆ ಇಲ್ಲ.

ಭಗವಂತನು ಮನುಷ್ಯನಿಗೆ—ಎಂದರೆ ಅಂತರಾತ್ಮನಿಗೆ—ಬೋಧಿಸಿದ ಸಾರವತ್ತಾದ ಮತ್ತು ಪ್ರಭಾವಶಾಲಿಯಾದ ಈ ಉಪದೇಶದಿಂದ ಗೀತೆಯು ಪ್ರಾರಂಭವಾಗುವುದಿಲ್ಲ. ಪ್ರಾರಂಭದಲ್ಲಿರುವ ಉಪದೇಶವು ಮನುಷ್ಯನ ಬುದ್ಧಿಯಿಂದ ಗ್ರಹಿಸಲ್ಪಡುವಂತಹದೂ, ಅಧ್ಯಾತ್ಮಮಾರ್ಗದಲ್ಲಿ ಕಾಲಿಡುವವರಿಗೆ ಬೆಳಕು ತೋರಿಸುವಂತಹದೂ ಆಗಿದೆ. ಈ ಉಪದೇಶವು ಕ್ಷೇಮವನ್ನು ಬಯಸುವ ಸ್ನೇಹಿತನ ಉಪದೇಶದಂತಿಲ್ಲ; ಆದರೆ ಮನುಷ್ಯನಿಗೆ ತನ್ನ ನಿಜಸ್ವರೂಪದ ವಿಚಾರವಾಗಿಯೂ ಪ್ರಪಂಚದ ಸ್ವರೂಪದ ವಿಚಾರವಾಗಿಯೂ ಮತ್ತು ತನ್ನ ಕರ್ಮಗಳ ಮೂಲದ

ವಿಚಾರದಲ್ಲಿಯೂ ಇರುವ ಅಜ್ಞಾನವನ್ನು ಹೋಗಲಾಡಿಸುವ ಗುರು ಮತ್ತು ಮಾರ್ಗದರ್ಶಿಯ ದೃಷ್ಟಿಯಿಂದ ಉಪದೇಶವು ಮೊದಲಾಗುತ್ತದೆ. ಏತಕ್ಕೆಂದರೆ, ಸರಿಯಾದ ತಿಳಿವಳಿಕೆಯಿಲ್ಲದೆ ಅಶುದ್ಧಸಂಕಲ್ಪದಿಂದ ವರ್ತಿಸುವುದರಿಂದ ಮನುಷ್ಯನು ಕರ್ಮಬಂಧನಕ್ಕೆ ಒಳಗಾದಂತೆ ಕಾಣಿಸಿಕೊಳ್ಳುತ್ತಾನೆಯೆ ಹೊರತು ಸ್ವತಂತ್ರವಾದ ಆತ್ಮನನ್ನು ಕರ್ಮವು ಬಂಧಿಸುವುದಿಲ್ಲ. ಆದುದರಿಂದಲೆ ಅರ್ಜುನನಿಗೆ ಮೊದಲು ಬುದ್ಧಿಯೋಗವನ್ನು ಉಪದೇಶಿಸಿದೆ. ಸಮ್ಯಕ್‌ಜ್ಞಾನವನ್ನು ಪಡೆದಿರುವುದರಿಂದ ಸಮ್ಯಕ್ ಸಂಕಲ್ಪದಿಂದ ಕೂಡಿ, ಏಕವಾದ ಬ್ರಹ್ಮದಲ್ಲಿ ದೃಷ್ಟಿಯನ್ನು ನೆಟ್ಟು, ಎಲ್ಲದರಲ್ಲಿಯೂ ಆ ಒಂದು ಬ್ರಹ್ಮವೆ ಇರುವುದೆಂದು ತಿಳಿದು, ಅಶುದ್ಧ ಮನಸ್ಸಿನಲ್ಲಿ ಉಂಟಾಗುವ ನೂರಾರು ವೃತ್ತಿಗಳಿಗನುಸಾರವಾಗಿ ಮನಸ್ಸು ನಾನಾ ಮುಖವಾಗಿ ಹೋಗದಂತೆ ಅಧೀನ ಮಾಡಿಕೊಂಡು, ಶಾಂತಿಯುಕ್ತವಾದ ಸಮತ್ವಸ್ಥಿತಿಯಲ್ಲಿದ್ದುಕೊಂಡು ವರ್ತಿಸುವುದೆ ಬುದ್ಧಿಯೋಗ.

ಮನುಷ್ಯನಲ್ಲಿ ಎರಡು ವಿಧವಾದ ಬುದ್ಧಿಗಳಿವೆ ಎಂದು ಗೀತೆಯು ಹೇಳುತ್ತದೆ. ಒಂದು ಏಕಾಗ್ರವಾದ ಸ್ಥಿರವಾದ ಮತ್ತು ಯಾವಾಗಲೂ ತತ್ತ್ವದಲ್ಲಿ ಲಕ್ಷ್ಯವನ್ನಿಟ್ಟಿರುವ ಬುದ್ಧಿ; ಏಕತ್ವವೆ ಇದರ ಲಕ್ಷಣ. ಲಕ್ಷ್ಯದಲ್ಲಿ ಏಕಾಗ್ರತೆಯೆ ಇದರ ಸ್ವರೂಪ. ಇನ್ನೊಂದು ವಿಧವಾದ ಬುದ್ಧಿಯಲ್ಲಿ ಒಂದೆ ಸಂಕಲ್ಪವಾಗಲಿ, ಏಕತ್ವವಾಗಲಿ, ಕಂಡು ಬರುವುದಿಲ್ಲ. ಸಂಸಾರ ಮತ್ತು ಜೀವನ ಸನ್ನಿವೇಶ ಇವುಗಳ ಮಧ್ಯೆ ಉಂಟಾಗುವ ಅನೇಕ ಆಸೆಗಳಿಗೆ ಒಳಗಾಗಿ, ನಾನಾ ದಿಕ್ಕುಗಳಲ್ಲಿ ಚಲಿಸುವ ಅನಂತವಾದ ಭಾವನೆಗಳಿಗೆ ಒಳಗಾಗುವುದು ಇದರ ಸ್ವಭಾವ. ಬುದ್ಧಿಯೆಂದರೆ ಮನಸ್ಸಿನ ಗ್ರಹಣಶಕ್ತಿಯೆಂದರ್ಥ. ಗೀತೆಯಲ್ಲಿ ಈ ಪದವನ್ನು ಇನ್ನೂ ವ್ಯಾಪಕವಾದ ಅರ್ಥದಲ್ಲಿ ಉಪಯೋಗಿಸಿದೆ. ನಮ್ಮ ಯೋಚನೆಗಳು ಮತ್ತು ಕ್ರಿಯೆಗಳು, ಇವುಗಳ ರೀತಿಯನ್ನೂ ಗುರಿಯನ್ನು ವಿವೇಚಿಸಿ ನಿರ್ಣಯಿಸುವ ಮನಸ್ಸಿನ ವ್ಯಾಪಾರವನ್ನು ಬುದ್ಧಿಯೆಂದು ಗೀತೆಯಲ್ಲಿ ಹೇಳಲಾಗಿದೆ. ಯೋಚನೆ, ಬುದ್ಧಿಶಕ್ತಿ, ನಿರ್ಣಯಿಸುವುದು, ವಿಷಯಗ್ರಹಣದ ಮತ್ತು ಗುರಿಯ ಆರಿಸುವಿಕೆ ಇವುಗಳೆಲ್ಲ ಬುದ್ಧಿಯ ವ್ಯಾಪಾರದಲ್ಲಿ ಅಡಕವಾಗಿವೆ. ವಿಷಯಗ್ರಹಣದಲ್ಲಿ ಏಕಾಗ್ರತೆ ಮಾತ್ರವಲ್ಲದೆ, ಒಂದು ನಿಶ್ಚಯಕ್ಕೆ ಬಂದು ಅದರಿಂದ ಕದಲದೆ ಇರುವುದೆ ಏಕಾಗ್ರಬುದ್ಧಿಯ ಲಕ್ಷಣ. ಏಕಾಗ್ರವಲ್ಲದ ಬುದ್ಧಿಯ ಲಕ್ಷಣವಾದರೊ ವಿಷಯಗ್ರಹಣ ಮತ್ತು ಯೋಚನೆಗಳಲ್ಲಿ ಮಾತ್ರ ಚಂಚಲತೆಯಲ್ಲ; ಅದಕ್ಕಿಂತ ಹೆಚ್ಚಾಗಿ ಗುರಿಯಲ್ಲಿ ಮತ್ತು ಉದ್ದೇಶದಲ್ಲಿ, ಆದುದರಿಂದ ಸಂಕಲ್ಪದಲ್ಲಿ ಚಂಚಲವಾಗಿರುವಿಕೆ. ಈ ರೀತಿಯಾಗಿ ಬುದ್ಧಿಯ

ವ್ಯಾಪಾರಗಳು ಎರಡು : ವಿಷಯಗ್ರಹಣ ಮತ್ತು ಸಂಕಲ್ಪ. ಏಕಾಗ್ರವಾದ ಬುದ್ಧಿಯು ಆತ್ಮನಲ್ಲಿ ನೆಲೆಸಿರುವುದು ; ಆತ್ಮಜ್ಞಾನದಲ್ಲೇ ನಿರತವಾಗಿರುವುದು. ನಾನಾ ಶಾಖೆಗಳುಳ್ಳ, ಬಹುಮುಖವಾದ ಬುದ್ಧಿಯು ಅನೇಕ ವಿಧವಾದ ವಿಷಯಗಳಲ್ಲಿ ಆಸಕ್ತವಾಗಿರುತ್ತದೆ; ಆದರೆ ಅತ್ಯಂತ ಅವಶ್ಯಕವಾದ ವಿಚಾರದಲ್ಲಿ ಆಸಕ್ತವಾಗಿರುವುದಿಲ್ಲ. ಇದು ಚಂಚಲವ್ಯಾಪಾರವುಳ್ಳ ಮನಸ್ಸಿಗೆ ವಶವಾಗಿ, ಬಾಹ್ಯವಾದ ಕರ್ಮಗಳಲ್ಲಿಯೂ ಅವರ ಫಲಗಳಲ್ಲಿಯೂ ನಿರತವಾಗಿರುತ್ತದೆ. "ಬುದ್ಧಿಯೋಗಕ್ಕಿಂತ ಕರ್ಮವು ಬಹಳ ಕೆಳಗಿನ ಮಟ್ಟದ್ದು. ಬುದ್ಧಿಯಲ್ಲಿಯೆ ಶರಣವನ್ನು ಹೊಂದು. ಫಲದಲ್ಲಿ ಆಸಕ್ತಿಯಿಟ್ಟು ಕರ್ಮವನ್ನು ಮಾಡುವವರು ಹೀನಮನುಷ್ಯರು (ಕೃಪಣರು)"ಎಂಬುದಾಗಿ ಶ್ರೀಕೃಷ್ಣನು ಹೇಳಿದ್ದಾನೆ.

ಗೀತೆಗೆ ಸಮ್ಮತವಾದ ಸಾಂಖ್ಯದರ್ಶನದಲ್ಲಿರುವ ತತ್ವಗಳ ಕ್ರಮವನ್ನು ನಾವು ನೆನಪಿನಲ್ಲಿಡಬೇಕು. ಒಂದು ಕಡೆ ಶಾಂತನೂ, ತಟಸ್ಥನೂ, ಅಕ್ಷರನೂ, ಏಕನೂ ಮತ್ತು ನಿರ್ವಿಕಾರನೂ ಆದ ಪುರುಷನಿದ್ದಾನೆ. ಇನ್ನೊಂದು ಕಡೆ ಪ್ರಕೃತಿ : ಇದು ಚೇತನವಿಲ್ಲದ್ದು ; ಜಡ; ಪುರುಷನ ಸಾನ್ನಿಧ್ಯದಿಂದ (ಸಂಯೋಗದಿಂದ ಎಂದೆ ಹೇಳಬಹುದು) ವ್ಯಾಪಾರ ಸಾಮರ್ಥ್ಯವುಳ್ಳದ್ದು ; ತ್ರಿಗುಣಾತ್ಮಕವಾದದ್ದು ; ಏಕವೆಂದು ಹೇಳವುದಕ್ಕಾಗದಿದ್ದರೂ ಅಳತೆಗೆ ಒಳಪಡದೆ ಇರುವುದು ಮತ್ತು ಸಂಕೋಚ ವಿಕಾಸಗಳಿಗೆ ಒಳಪಟ್ಟದ್ದೂ ಆಗಿದೆ. ಪ್ರಕೃತಿ ಮತ್ತು ಪುರುಷರ ಸಂಯೋಗದಿಂದ ನಾನು ಮತ್ತು ಹೊರಗಿನ ಪ್ರಪಂಚ ಎಂಬ ಜೀವನದ ಅನುಭವವು ಮೊದಲಾಗುವುದು. ಅಹಂ ಎಂದು ನಾವು ತಿಳಿದಿರುವ ವಸ್ತುವು ಮೊದಲು ವಿಕಾಸವಾಗುತ್ತದೆ. ಏತಕ್ಕೆಂದರೆ ನಾನು ಎಂಬ ಅರಿವೆ ಮೊದಲನೆಯ ಕಾರಣ ; ಚೇತನವಿಲ್ಲದ ಪ್ರಕೃತಿಯು ಇದಕ್ಕೆ ಅಧೀನವಾದ ಎರಡನೆಯ ಕಾರಣ ಮಾತ್ರ. ಆದಾಗ್ಯೂ, ಅಹಂ ಎಂಬ ನಮ್ಮ ಅರಿವಿಗೆ ಬೇಕಾದ ಉಪಕರಣಗಳನ್ನು ಒದಗಿಸುವುದು ಪ್ರಕೃತಿಯೆ ಹೊರತು ಪುರುಷನಲ್ಲ. ಹೀಗೆ ಪ್ರಕೃತಿಯಿಂದ ಮೊದಲು ವ್ಯಕ್ತವಾಗುವುದು ಬುದ್ಧಿ—ಎಂದರೆ ವಿವೇಚಿಸುವ ಮತ್ತು ನಿರ್ಣಯಿಸುವ ಸಾಮರ್ಥ್ಯ ಮತ್ತು ಇದಕ್ಕೆ ಅಧೀನವಾದ ಅಹಂಕಾರ. ಇದಾದಮೇಲೆ ವಿಷಯಗ್ರಹಣ ಸಾಮರ್ಥ್ಯವುಳ್ಳ ಮನಸ್ಸೆಂಬ ತತ್ವವು ವ್ಯಕ್ತವಾಗುತ್ತದೆ. ಮೂರನೆಯದಾಗಿ, ಮನಸ್ಸಿನಿಂದ ಐದು ಜ್ಞಾನೇಂದ್ರಿಯಗಳು, ಐದು ಕರ್ಮೇಂದ್ರಿಯಗಳು, ಒಟ್ಟು ಹತ್ತು ತತ್ವಗಳು ಉಂಟಾಗುತ್ತವೆ. ಕೊನೆಯದಾಗಿ ಈ ಪಂಚೇಂದ್ರಿಯಗಳು ಗ್ರಹಿಸುವ ಶಬ್ದ, ಸ್ಪರ್ಶ, ರೂಪ, ರಸ ಮತ್ತು ಗಂಧ ಎಂಬ ಐದು ತನ್ಮಾತ್ರೆಗಳೂ ಮತ್ತು ಇವುಗಳಿಗೆ ಆಧಾರವಾದ ಆಕಾಶ, ವಾಯು, ತೇಜಸ್ಸು, ಅಪ್ಪು ಮತ್ತು ಪೃಥಿವಿ

ಎಂಬ ಪಂಚಭೂತಗಳೂ ಉಂಟಾಗುತ್ತವೆ. ಈ ಪಂಚಭೂತಗಳ ನಾನಾ ವಿಧವಾದ ಸಂಯೋಗದಿಂದಲೆ ಈ ಪ್ರಪಂಚದ ವಸ್ತುಗಳೆಲ್ಲವೂ ರಚಿತವಾಗಿವೆ. ಪುರುಷನ ಶುದ್ಧವಾದ ಚೈತನ್ಯದಲ್ಲಿ ಪ್ರಕೃತಿಯ ಈ ಶಕ್ತಿಗಳೆಲ್ಲವೂ ಪ್ರತಿಬಿಂಬಿತವಾಗಿ ನಮ್ಮ ಅಶುದ್ಧವಾದ ಜ್ಞಾನಕ್ಕೆ ವಿಷಯಗಳಾಗುವುವು. ಹೀಗೆ ಉಂಟಾಗುವ ಜ್ಞಾನವು ಶುದ್ಧವಲ್ಲ. ಏತಕ್ಕೆಂದರೆ ಇಂದ್ರಿಯಗಳ ಮೂಲಕ ಬಾಹ್ಯಪ್ರಪಂಚದ ವಿಷಯದಲ್ಲಿ ಉಂಟಾಗುವ ಅರಿವಿಗೂ ತನ್ಮೂಲಕ ಮನಸ್ಸಿನಲ್ಲಿ ಉಂಟಾಗುವ ಪರಿಣಾಮಕ್ಕೂ ಈ ಜ್ಞಾನವು ಅಧೀನವಾಗಿರುವುದರಿಂದ ಅಶುದ್ಧವೆಂದು ಪರಿಗಣಿಸಲ್ಪಡುತ್ತದೆ. ಬುದ್ಧಿ ಅಥವಾ ವಿವೇಚನಾ ಸಾಮರ್ಥ್ಯಕ್ಕೆ ಸ್ವಯಂ ಚೈತನ್ಯವಿಲ್ಲ; ಆದರೂ ಅದು ಜಡ ಪ್ರಕೃತಿಯ ವ್ಯಾಪಾರಗಳನ್ನು ನಿಯಾಮಕ ಮಾಡಿ, ನಮಗೆ ಸಂಕಲ್ಪ ಮತ್ತು ಜ್ಞಾನದರೂಪದಲ್ಲಿ ಕಾಣಿಸಿಕೊಳ್ಳುತ್ತದೆ. ಮನಸ್ಸೆಂಬ ಜಡಶಕ್ತಿಯು ಪ್ರಕೃತಿವ್ಯಾಪಾರಗಳನ್ನು ಬಾಹ್ಯವಾದ ಕ್ರಿಯೆ ಮತ್ತು ಪ್ರತಿಕ್ರಿಯೆಗಳಿಂದ ಗ್ರಹಿಸಿ, ಅವುಗಳಿಂದ ಆಕರ್ಷಿತವಾಗಿ ಅವಕ್ಕೆ ಅಂಟಿಕೊಂಡು ಇಂದ್ರಿಯಗ್ರಹಣ ಸಾಮರ್ಥ್ಯವೂ, ಆಸೆಯೂ ಆಗುವುದು. ಇವೆರಡೂ ಜ್ಞಾನ ಮತ್ತು ಸಂಕಲ್ಪಶಕ್ತಿಗಳ ತುಚ್ಛ ರೂಪಗಳು. ಇದಲ್ಲದೆ ಮನಸ್ಸೆ ವಿಷಯಾಸಕ್ತವಾಗಿ ಇಚ್ಛಾಶಕ್ತಿಯ ವಿಕಾರಗಳಾದ ಆಸೆ, ನಿರೀಕ್ಷೆ, ಕಾಮನೆ, ಪ್ರೇರಣೆ ಮುಂತಾದುವುಗಳಾಗಿ ಪರಿಣಮಿಸುತ್ತದೆ. ಇಂದ್ರಿಯಗಳು ಮನಸ್ಸಿನ ಉಪಕರಣಗಳಾಗುತ್ತವೆ. ಐದು ಜ್ಞಾನೇಂದ್ರಿಯಗಳು ವಿಷಯಗ್ರಹಣಕ್ಕೂ ಐದು ಕರ್ಮೇಂದ್ರಿಯಗಳು ಪ್ರಾಣಕರ್ಮಗಳಿಗೂ ಪ್ರಚೋದನೆಗಳಿಗೂ ಉಪಕರಣಗಳಾಗಿ, ಆತ್ಮನಿಗೂ ಬಾಹ್ಯ ಪ್ರಪಂಚಕ್ಕೂ ಸಂಬಂಧವನ್ನು ಉಂಟುಮಾಡುತ್ತವೆ. ಉಳಿದ ತತ್ವಗಳೆಲ್ಲವೂ ಇಂದ್ರಿಯ ಗೋಚರವಾದ ವಿಷಯಗಳಾಗಿವೆ.

ಈಗ ನಾವು ಹೇಳಿರುವ ವಿಕಾಸಕ್ರಮವು ಜಡವಸ್ತುವಿನ ವಿಕಾಸಕ್ರಮಕ್ಕೆ ವ್ಯತಿರಿಕ್ತವೆಂದು ತೋರಬಹುದು. ಆದರೆ ಬುದ್ಧಿಯೆ ಜಡಪ್ರಕೃತಿಯ ವ್ಯಾಪಾರದ ಪರಿಣಾಮ; ಮತ್ತು ಪರಮಾಣುವಿನಲ್ಲೂ ಜಡವಾದ ಸಂಕಲ್ಪ ಮತ್ತು ಜ್ಞಾನ ಶಕ್ತಿಗಳು—ಎಂದರೆ ವಿವೇಚಿಸುವ ಮತ್ತು ನಿರ್ಣಯಿಸುವ ಸಾಮರ್ಥ್ಯ—ಇವೆ. ಮತ್ತು ಸಸ್ಯಗಳಲ್ಲೂ ಕೀಳ್ಮಟ್ಟದ ಜಂತುಗಳಲ್ಲೂ ಸಹ ಜಡವಾದ ಮತ್ತು ಸ್ಥೂಲವಾದ ವಿಷಯಾನುಭವಗಳು, ಭಾವನೆಗಳು, ಸ್ಮೃತಿ ಮತ್ತು ಪ್ರೇರಣೆಗಳು ಕಂಡುಬರುತ್ತವೆ. ಈ ಪ್ರಕೃತಿ ಶಕ್ತಿಗಳು ವಿಕಾಸಗೊಳ್ಳುತ್ತಿರುವ ಪ್ರಾಣಿಗಳಲ್ಲಿ ಮನಸ್ಸಿನ ರೂಪವನ್ನೂ ಮನುಷ್ಯರಲ್ಲಿ ಅಂತಃಕರಣದ ರೂಪವನ್ನೂ ತಾಳುತ್ತವೆ. ಇವೆಲ್ಲವನ್ನೂ ಗಮನಿಸಿದರೆ ಆಧುನಿಕವಿಜ್ಞಾನದ ತಿಳಿವಳಿಕೆಗೂ

ಸಾಂಖ್ಯದ ನಿರ್ಣಯಗಳಿಗೂ ಪ್ರಾಯಿಕವಾಗಿ ಯಾವ ವಿರೋಧವೂ ಇಲ್ಲವೆಂದು ಕಂಡುಬರುತ್ತದೆ.

ನಿವೃತ್ತಿ ಮಾರ್ಗದಲ್ಲಿ ಮೇಲಿನ ವಿಕಾಸಕ್ರಮವು ಹಿಂದುಮುಂದಾಗುತ್ತದೆ. ಉಪನಿಷತ್ತುಗಳಲ್ಲಿಯೂ, ಹೆಚ್ಚುಕಡಿಮೆ ಅದೆ ಮಾತುಗಳಲ್ಲಿ ಹೇಳುವ ಗೀತೆಯಲ್ಲಿಯೂ, ಮನುಷ್ಯನ ಪ್ರಜ್ಞೆಯ ಬೆಳವಣಿಗೆಯ ಕ್ರಮವನ್ನು ಈ ರೀತಿಯಲ್ಲಿಯೆ ನಿರೂಪಿಸಿದೆ. "ಇಂದ್ರಿಯಗಳು ಶ್ರೇಷ್ಠ; ಇಂದ್ರಿಯಗಳಿಗಿಂತ ಮನಸ್ಸೂ, ಮನಸ್ಸಿಗಿಂತ ಬುದ್ಧಿಯೂ ಶ್ರೇಷ್ಠ; ಬುದ್ಧಿಗಿಂತಲೂ ಪುರುಷನು ಹೆಚ್ಚು" ಆದುದರಿಂದ ಎಲ್ಲಕ್ಕಿಂತಲೂ ಶ್ರೇಷ್ಠನಾದ ಪುರುಷನನ್ನೆ ನಾವು ಬುದ್ಧಿಯಿಂದ ಅರಿತು ಕೊಳ್ಳಬೇಕೆಂದು ಗೀತೆಯು ಹೇಳುತ್ತದೆ. ಇದಕ್ಕಾಗಿ ನಾವು ದೃಢಸಂಕಲ್ಪಮಾಡಬೇಕು. ಪ್ರಕೃತಿಬಂಧನದಲ್ಲಿ ಸಿಕ್ಕಿರುವ ಬುದ್ಧಿಯನ್ನು ಬಂಧನದಿಂದ ಬಿಡಿಸಿ ಚೈತನ್ಯಮಯನಾದ ಪುರುಷನಿಂದ ಆ ಬುದ್ಧಿಯನ್ನು ನಿಯಂತ್ರಿಸಿ, ಸಮಸ್ಥಿತಿಯಲ್ಲಿಟ್ಟರೆ, ನಾವು ಶಾಂತಿಯನ್ನೂ ನಮ್ಮ ಮೇಲಿನ ಪ್ರಭುತ್ವವನ್ನೂ ಪಡೆಯಲು ಇರುವ ದೊಡ್ಡ ಹಗೆಯಾದ ಕಾಮವನ್ನು ನಿಗ್ರಹಿಸಬಹುಹು.

ಬುದ್ಧಿಯು ಎರಡು ರೀತಿಗಳಲ್ಲಿ ವ್ಯಾಪಾರಮಾಡಬಲ್ಲದೆಂಬುದು ಸ್ಪಷ್ಟ; ಬಹಿರ್ಮುಖವಾಗಿ ಮತ್ತು ಅಂತರ್ಮುಖವಾಗಿ. ಇಚ್ಛಾಶಕ್ತಿ ಮತ್ತು ಇಂದ್ರಿಯಗಳು ತ್ರಿಗುಣಾತ್ಮಕವಾದ ಪ್ರಕೃತಿಯಲ್ಲಿ ಬಹುಮುಖವಾಗಿ ಮಾಡುವ ವ್ಯಾಪಾರಗಳ ಸಂಬಂಧದಲ್ಲಿ ಬುದ್ಧಿಯು ಕೆಳಮುಖವಾಗಿ ಮತ್ತು ಬಹಿರ್ಮುಖವಾಗಿ ಪ್ರವರ್ತಿಸಬಹುದು. ಅಥವಾ ಪ್ರಕೃತಿಯ ಸೆಳೆತಕ್ಕೆ ಒಳಗಾಗದೆ ಶಾಂತನೂ, ಶುದ್ಧನೂ, ಅಕ್ಷರನೂ, ನಿಷ್ಕ್ರಿಯನೂ ಮತ್ತು ಚೈತನ್ಯಸ್ವರೂಪನೂ ಆದ ಪುರುಷನ ಶಾಂತಿ ಮತ್ತು ಸಮತ್ವಗಳ ಸಂಬಂಧದಲ್ಲಿ ಬುದ್ಧಿಯು ಊರ್ಧ್ವಮುಖವಾಗಿಯೂ, ಅಂತರ್ಮುಖವಾಗಿಯೂ ಪ್ರವರ್ತಿಸಬಹುದು. ಮೊದಲನೆಯ ರೀತಿಯನ್ನನುಸರಿಸುವಾಗ ಅಂತರಾತ್ಮನು ವಿಷಯಗಳಿಗೆ ವಶನಾಗಿ ಬಾಹ್ಯಸ್ಪರ್ಶಗಳಲ್ಲೆ ಮಗ್ನನಾಗಿರುತ್ತಾನೆ. ಈ ವಿಧವಾದ ಜೀವನವು ಆಸೆಗೆ ಒಳಪಟ್ಟ ಜೀವನ. ವಿಷಯಗಳಿಂದ ಚೇತನಗೊಳಿಸಲ್ಪಟ್ಟ ಇಂದ್ರಿಯಗಳು ಮನಸ್ಸನ್ನು ಚಂಚಲವನ್ನಾಗಿಯೂ, ಆಲ್ಲೋಲಕಲ್ಲೋಲವನ್ನಾಗಿಯೂ ಮಾಡುತ್ತವೆ; ಮತ್ತು ವಿಷಯಗಳನ್ನು ಗ್ರಹಿಸಿ ಉಪಭೋಗಿಸುವ ಅಪೇಕ್ಷೆಯಿಂದ, ವಾಯುವು ಹಡಗನ್ನು ಸಮುದ್ರದಮೇಲೆ ರಭಸದಿಂದ ಒಯ್ಯುವಂತೆ, ಮನಸ್ಸು ಪ್ರಜ್ಞೆಯನ್ನು ಬಹಿರ್ಮುಖವಾಗಿ ಒಯ್ಯುತ್ತದೆ. ಹೀಗೆ ರಾಗ, ಭಾವ, ಆಸೆಗಳು ಮತ್ತು ಬಾಹ್ಯ ವಿಷಯಗಳ ಕಡೆ ಓಡುತ್ತಿರುವ ಇಂದ್ರಿಯಗಳ ಪ್ರೇರಣೆ

ಗಳಿಗೆ ಒಳಪಟ್ಟು, ಮನಸ್ಸು ಬುದ್ಧಿಯನ್ನೂ ಒಯ್ಯುತ್ತದೆ. ಆದುದರಿಂದ ಬುದ್ಧಿಯು ತನ್ನ ವಿವೇಕವನ್ನೂ ಮತ್ತು ಮನಸ್ಸನ್ನು ನಿಯಂತ್ರಿಸುವ ಸಾಮರ್ಥ್ಯವನ್ನೂ ಕಳೆದುಕೊಳ್ಳುತ್ತದೆ. ತ್ರಿಗುಣಾತ್ಮಕವಾದ ಪ್ರಕೃತಿಯ ಅನಂತವಾದ ಹೆಣೆದುಕೊಂಡಿರುವ ಮತ್ತು ಪರಸ್ಪರ ವಿರುದ್ಧವಾದ ವ್ಯಾಪಾರಗಳಿಗೆ ಪುರುಷನು ವಶನಾಗುವುದು ; ಅಜ್ಞಾನ; ತಪ್ಪಾದ ವಿಷಯಾಸಕ್ತವಾದ ಜೀವನ ; ಮತ್ತು ದುಃಖ, ಕ್ರೋಧ, ಸಂಗ ಮತ್ತು ಕಾಮಗಳಿಗೆ ಅಡಿಯಾಳಾಗುವಿಕೆ ; ಇವೆಲ್ಲವೂ ಬುದ್ಧಿಯ ಕೀಳ್ಮುಖವಾದ ಪ್ರವರ್ತನೆಯ ಪರಿಣಾಮಗಳು. ಇದೇ ತಿಳಿವಳಿಕೆ ಮತ್ತು ನೀತಿನಿಯಮಗಳಿಲ್ಲದ—ಆದುದರಿಂದ ಶಾಂತಿಯಿಲ್ಲದ—ಜೀವನಕ್ರಮ. ವೇದವಾದಿಗಳು ಹೇಳುವಂತೆ ವಿಷಯಭೋಗವೆ ಕರ್ಮಗಳ ಗುರಿಯೆಂದೂ, ಅವುಗಳನ್ನು ಪಡೆಯುವುದೆ ಪರಮಪುರುಷಾರ್ಥವೆಂದೂ ಹೇಳುವವರು ತಪ್ಪು ದಾರಿಯನ್ನು ತೋರಿಸುವಂತಹವರು. ಅಂತರವಾದ ಮತ್ತು ಬಾಹ್ಯವಾದ ವಿಷಯಗಳನ್ನು ಅಪೇಕ್ಷಿಸದಿರುವ ಆತ್ಮಾನಂದವೆ ನಮ್ಮ ನಿಜವಾದ ಗುರಿ; ಮುಕ್ತಿ ಮತ್ತು ಶಾಂತಿಯು ವ್ಯಾಪಕವಾದ ಮತ್ತು ಉನ್ನತವಾದ ಸ್ಥಿತಿ.

ಆದುದರಿಂದ ಊರ್ಧ್ವಮುಖವಾದ ಮತ್ತು ಅಂತರ್ಮುಖವಾದ ಬುದ್ಧಿಯ ಪ್ರವರ್ತನೆಯನ್ನೆ ನಾವು ಸ್ಥಿರಮನಸ್ಸಿನಿಂದ ಆಯ್ದುಕೊಂಡು ಬಿಡದೆ ವ್ಯವಸಾಯ ಮಾಡಬೇಕು. ಇದನ್ನು ಪುರುಷನ ಪ್ರಶಾಂತವಾದ ಜ್ಞಾನದಲ್ಲಿ ದೃಢವಾಗಿ ನೆಲೆಸುವಂತೆ ಮಾಡಬೇಕು. ಎಲ್ಲ ದುಃಖಗಳಿಗೂ ಮೂಲವಾದ ಆಸೆಯನ್ನು ತೊರೆಯುವುದೆ ಮೊದಲನೆಯ ಹೆಜ್ಜೆ. ಇದು ಸ್ಪಷ್ಟ. ಇದಕ್ಕೆ ಆಸೆಯ ಕಾರಣವನ್ನು— ಎಂದರೆ ವಿಷಯಗಳನ್ನು ಗ್ರಹಿಸಿ ಭೋಗಿಸಬೇಕೆಂಬ ಇಚ್ಛೆಯಿಂದ ಅವುಗಳ ಕಡೆ ಓಡುವ ಇಂದ್ರಿಯಗಳನ್ನು—ಸ್ವಾಧೀನ ಪಡಿಸಿಕೊಳ್ಳಬೇಕು. ವಿಷಯಗಳ ಕಡೆಗೆ ಇಂದ್ರಿಯಗಳು ಓಡಬೇಕೆನ್ನುವಾಗ, ಆಮೆಯು ತನ್ನ ಅಂಗಗಳನ್ನು ಚಿಪ್ಪಿನೊಳಗೆ ಎಳೆದುಕೊಳ್ಳುವಂತೆ ನಾವು ಇಂದ್ರಿಯಗಳನ್ನು ಹಿಂದಕ್ಕೆ ಮನಸ್ಸಿನೊಳಕ್ಕೆ ಎಳೆದು ಶಾಂತವನ್ನಾಗಿ ಮಾಡಬೇಕು. ಮನಸ್ಸನ್ನು ಬುದ್ಧಿಯೊಳಗೂ, ಬುದ್ಧಿಯನ್ನು ಆತ್ಮನಲ್ಲು ಆತ್ಮಜ್ಞಾನದಲ್ಲೂ ಸ್ಥಾಪಿಸಿ ಸ್ವಸ್ಥವನ್ನಾಗಿ ಮಾಡಬೇಕು. ಪ್ರಕೃತಿ ವ್ಯಾಪಾರಗಳಿಗೆ ಸಾಕ್ಷಿಯಾಗಿದ್ದರೂ ಅದಕ್ಕೆ ವಶವಾಗದೆ, ಬಾಹ್ಯ ಪ್ರಪಂಚದಲ್ಲಿ ದೊರೆಯುವ ಯಾವ ವಿಷಯವನ್ನೂ ಅಪೇಕ್ಷಿಸದೆ ಜೀವಿಸಬೇಕು.

ಈ ಸಂದರ್ಭದಲ್ಲಿ ಉಂಟಾಗಬಹುದಾದ ತಪ್ಪು ತಿಳಿವಳಿಕೆಯನ್ನು ನಿವಾರಿಸಲು ಶ್ರೀಕೃಷ್ಣನು ಕೂಡಲೆ ಹೀಗೆ ಹೇಳುತ್ತಾನೆ "ನಾನು ಉಪದೇಶಿಸುವುದು ಸುಮ್ಮನೆ

ವಿಷಯಗಳನ್ನು ತ್ಯಜಿಸುವ ಬಾಹ್ಯ ಸನ್ಯಾಸವಲ್ಲ; ಸಾಂಖ್ಯದ ಸನ್ಯಾಸವೂ ಅಲ್ಲ; ಮತ್ತು ಉಪವಾಸವೆ ಮುಂತಾದ ಕಠಿಣ ವ್ರತಗಳಿಂದ ಶರೀರವನ್ನು ದಂಡಿಸುವ ಯತಿಯ ಸನ್ಯಾಸವೂ ಅಲ್ಲ. ನನ್ನ ಅಭಿಪ್ರಾಯದಲ್ಲಿರುವ ಆತ್ಮಸಂಯಮವೂ ತ್ಯಾಗವೂ ಇದಲ್ಲ. ನಾನು ಹೇಳುವುದು ಆಂತರವಾದ ತ್ಯಾಗ—ಎಂದರೆ ಇಚ್ಛೆಯ ತ್ಯಾಗ. ದೇಹಿಯು ದೇಹದಲ್ಲಿ ವ್ಯವಹರಿಸಬೇಕಾಗಿರುವುದರಿಂದ, ದೇಹವು ತನ್ನ ವ್ಯಾಪಾರಗಳನ್ನು ನಡೆಸಲು ಸಮರ್ಥವಾಗಿರುವುದಕ್ಕೋಸ್ಕರ ಅದಕ್ಕೆ ಆಹಾರವನ್ನು ಕೊಡಬೇಕು. ಆಹಾರವನ್ನು ತ್ಯಜಿಸುವುದರಿಂದ ದೇಹಿಯು ವಿಷಯಗಳೊಡನೆ ಬಾಹ್ಯ ಸಂಪರ್ಕವನ್ನು ತ್ಯಜಿಸಿದಂತಾಗುವುದೆ ಹೊರತು ಈ ಸಂಪರ್ಕವನ್ನು ಅಹಿತವನ್ನಾಗಿ ಮಾಡುವ ಆಂತರವಾದ ಸಂಬಂಧವನ್ನು ತ್ಯಜಿಸಿದಂತಾಗುವುದಿಲ್ಲ. ವಿಷಯ ಭೋಗದಲ್ಲಿ ಇಂದ್ರಿಯಗಳಿಗೆ ಇರುವ ರಸವು—ಎಂದರೆ ರಾಗದ್ವೇಷಗಳೆರಡೂ— ಇನ್ನೂ ಇರುತ್ತವೆ. ಆದರೆ ರಾಗದ್ವೇಷಗಳಿಲ್ಲದೆಯೆ ವಿಷಯಗಳೊಡನೆ ಇಂದ್ರಿಯ ಸಂಪರ್ಕವನ್ನು ಮಾಡುವ ಸಾಮರ್ಥ್ಯವನ್ನು ದೇಹಿಯು ಪಡೆಯಬೇಕು. ಇಲ್ಲದಿದ್ದರೆ, ವಿಷಯಗಳಿಂದ ಇಂದ್ರಿಯಗಳಿಗೆ ಬಾಹ್ಯವಾದ ನಿವೃತ್ತಿ ಇರುವುದೆ ಹೊರತು, ದೇಹಿಗೆ ಮನಸ್ಸಿನಲ್ಲಿ ನಿವೃತ್ತಿ ಇರುವುದಿಲ್ಲ. ಆದರೆ ಇಂದ್ರಿಯಗಳು ಮನಸ್ಸಿಗೆ ಸಂಬಂಧಿಸಿವೆ. ಆದುದರಿಂದ ಮನಸ್ಸಿನ ನಿವೃತ್ತಿಯೆ ನಿಜವಾದ ಇಂದ್ರಿಯ ನಿಗ್ರಹ. ಆದರೆ ರಾಗವಿಲ್ಲದೆ ವಿಷಯಗಳೊಡನೆ ಸಂಪರ್ಕವನ್ನಿಟ್ಟುಕೊಳ್ಳುವುದು ಮತ್ತು ರಸಾನುಭವವಿಲ್ಲದೆ ಇಂದ್ರಿಯ ವ್ಯಾಪಾರವೂ ಹೇಗೆ ಸಾಧ್ಯ? ಪರಾತ್ಪರನನ್ನು ನೋಡಿದಾಗ, ಅದರೊಡನೆ ಅಂತರಾತ್ಮವನ್ನು ಯೋಗದಿಂದ ಐಕ್ಯ ಮಾಡಿದಾಗ ಇದು ಸಾಧ್ಯವಾಗುತ್ತದೆ. ಈ ಪರಾತ್ಪರನು ಸದಾ ಪ್ರಶಾಂತನಾಗಿಯೂ ತನ್ನಲ್ಲಿ ತಾನೆ ತೃಪ್ತನಾಗಿಯೂ ಇರುತ್ತಾನೆ. ಪರಾತ್ಪರನನ್ನು ನೋಡಿ ಅವನಲ್ಲಿ ಮನಸ್ಸನ್ನೂ ಬುದ್ಧಿಯನ್ನೂ ಸೇರಿಸಿದಾಗ, ವಿಷಯ ಸುಖದಿಂದ ಉಂಟಾಗುವ ರಸಾನುಭವವೂ ಅವುಗಳ ಮೇಲಿರುವ ರಾಗದ್ವೇಷಗಳೂ ಮಾಯವಾಗಿ ಅವಕ್ಕೆ ಬದಲಾಗಿ ಈ ದ್ವಂದ್ವಾತೀತವಾದ ಆನಂದವು ಇರುತ್ತದೆ. ಮುಕ್ತಿಗೆ ಇದೆ ನಿಜವಾದ ಮಾರ್ಗ.

ಇಂದ್ರಿಯಗಳನ್ನು ಸ್ವಾಧೀನಪಡಿಸಿಕೊಳ್ಳುವುದು ಸುಲಭವಲ್ಲವೆಂಬುದು ನಿರ್ವಿವಾದವಾದ ಸಂಗತಿ. ಕೆಲವು ವಿಧಗಳಲ್ಲಾದರೂ ಇದು ಅವಶ್ಯಕವೆಂಬುದನ್ನು ತಿಳಿವಳಿಕೆಯುಳ್ಳವರೆಲ್ಲರೂ ಒಪ್ಪುತ್ತಾರೆ. ಇಂದ್ರಿಯಗಳನ್ನು ನಿಗ್ರಹಿಸೆಂಬ ಬುದ್ಧಿವಾದವನ್ನು ಕೊಡುವುದು ಬಹಳ ಸಾಮಾನ್ಯವಾಗಿದೆ. ಆದರೆ ಸಂಪೂರ್ಣವಾದ ಇಂದ್ರಿಯನಿಗ್ರಹವನ್ನು ಮಾಡಬೇಕೆಂದು ಹೇಳುವುದು ವಾಡಿಕೆಯಿಲ್ಲ. ಹಾಗೆ ನಡೆಯುವುದೂ ವಾಡಿಕೆಯಲ್ಲಿಲ್ಲ.

ಇಂದ್ರಿಯನಿಗ್ರಹವನ್ನು ಅನುಷ್ಠಾನಮಾಡಬೇಕೆಂದು ಪ್ರಯತ್ನಿಸುವವರು ಯಾವುದೊ ಕೆಲವು ವಿಷಯಗಳಲ್ಲಿ ಮಾತ್ರ ಮಾಡುತ್ತಾರೆ. ಅದನ್ನೂ ಸರಿಯಾಗಿ ಮಾಡುವುದಿಲ್ಲ. ಪೂರ್ಣವಾಗಿ ಆತ್ಮಸಂಯಮ ಮಾಡಬೇಕೆಂದು ದೃಢ ಸಂಕಲ್ಪ ಮಾಡಿರುವ ಮುನಿಯನ್ನೂ, ಸ್ಪಷ್ಟವಾದ ತಿಳಿವವಳಿಕೆಯುಳ್ಳ ವಿವೇಕಿಯಾದ ಜ್ಞಾನಿಯನ್ನೂ ಕೂಡ ಇಂದ್ರಿಯಗಳು ಸೆಳೆಯುತ್ತವೆ. ಏತಕ್ಕೆಂದರೆ ಮನಸ್ಸು ಸ್ವಾಭಾವಿಕವಾಗಿಯೆ ಇಂದ್ರಿಯಗಳನ್ನು ಅನುಸರಿಸುತ್ತದೆ. ವಿಷಯಗಳನ್ನು ಆಸಕ್ತಿಯಿಂದ ನೋಡಿ ಅವುಗಳಲ್ಲೆ ನೆಲೆಸುತ್ತದೆ. ಬುದ್ಧಿಯು ಅದರಲ್ಲಿ ಮಗ್ನವಾಗುವಂತೆಯೂ ಮತ್ತು ಇಚ್ಛಾಶಕ್ತಿಯು ಅದರಕಡೆ ತಿರುಗುವಂತೆಯೂ ಮಾಡುತ್ತದೆ. ಇದರಿಂದ ವಿಷಯದಲ್ಲಿ ಸಂಗವುಂಟಾಗುತ್ತದೆ. ಸಂಗದಿಂದ ಕಾಮವುಂಟಾಗುತ್ತದೆ. ಈ ಕಾಮಕ್ಕೆ ಯಾವುದಾದರೂ ಅಡ್ಡಿ ಬಂದು ಅದು ತೃಪ್ತವಾಗದಿದ್ದರೆ ಆಗ ದುಃಖವೂ ಕ್ರೋಧವೂ ಉಂಟಾಗುತ್ತವೆ. ಇದರಿಂದ ಆತ್ಮವು ಮೋಹದಿಂದ ಆವರಿಸಲ್ಪಡುತ್ತದೆ. ಬುದ್ಧಿಯೂ ಇಚ್ಛಾಶಕ್ತಿಯೂ ಪ್ರಶಾಂತವಾದ ಆತ್ಮನಲ್ಲಿ ನೆಲೆಸಿ ಸರಿಯಾಗಿ ನೋಡುವುದನ್ನು ಮರೆಯುತ್ತವೆ. ಸ್ವಸ್ವರೂಪವನ್ನು ಮರೆಯುವುದರಿಂದ ಬುದ್ಧಿಯು ಭ್ರಂಶವಾಗುತ್ತದೆ; ನಾಶವಾಗುವುದೂ ಉಂಟು. ತತ್ಕಾಲಕ್ಕೆ ಅದು ನಮ್ಮ ಸ್ಮೃತಿಯಲ್ಲಿರುವುದಿಲ್ಲ, ಕಾಮದ ಆವೇಗದಲ್ಲಿ ಆವರಿಸಲ್ಪಟ್ಟು ಮರೆಯಾಗುತ್ತದೆ. ನಾವು ಆತ್ಮ-ಬುದ್ಧಿ-ಮನೋಮಯವಾಗಿರುವುದಕ್ಕೆ ಬದಲಾಗಿ ಕಾಮ-ಕ್ರೋಧ-ಶೋಕಮಯರಾಗುತ್ತೇವೆ. ಇದನ್ನು ತಡೆಯಬೇಕು. ಎಲ್ಲ ಇಂದ್ರಿಯಗಳನ್ನೂ ಸಂಪೂರ್ಣವಾಗಿ ವಶಪಡಿಸಿಕೊಳ್ಳಬೇಕು. ಇಂದ್ರಿಯಗಳನ್ನು ಸಂಪೂರ್ಣವಾಗಿ ವಶಮಾಡಿಕೊಳ್ಳುವುದರಿಂದಲೆ ಚಂಚಲವಾದ ಬುದ್ಧಿಯ ಸ್ಥಾನದಲ್ಲಿ ಪ್ರಶಾಂತವಾದ ಬುದ್ಧಿಯು ಸುಪ್ರತಿಷ್ಠಿತವಾಗುವುದು.

ಈ ಕಾರ್ಯವು ಮನಸ್ಸಿನಿಂದಲೆ—ಮನಸ್ಸಿನ ನಿಗ್ರಹವೊಂದರಿಂದಲೆ, ಸಾಧ್ಯವಾಗುವುದಿಲ್ಲ. ಮನಸ್ಸಿಗಿಂತಲೂ ಮೇಲ್ಮಟ್ಟದಲ್ಲಿರುವ, ಶಾಂತಿಗೂ ಆತ್ಮಸಂಯಮಕ್ಕೂ ನೆಲೆಬೀಡಾಗಿರುವ ತತ್ವದೊಡನೆ ಒಂದಾಗುವುದರಿಂದ (ಯೋಗದಿಂದ) ಮಾತ್ರವೆ ಇದು ಸಾಧ್ಯ. ಈ ಯೋಗವು ಸಿದ್ಧಿಸಬೇಕಾದರೆ ನಮ್ಮನ್ನು ನಾವು ಸಂಪೂರ್ಣವಾಗಿ ಈಶ್ವರನಿಗೆ ಅರ್ಪಣೆಮಾಡಿಕೊಳ್ಳಬೇಕು. ಮುಕ್ತಿದಾತನು ನಮ್ಮಲ್ಲಿಯೆ ಇದ್ದಾನೆ; ಆದರೆ ಮೋಕ್ಷವನ್ನು ಕೊಡುವ ಇವನು ನಮ್ಮ ಮನಸ್ಸು ಅಲ್ಲ, ಬುದ್ಧಿಯೂ ಅಲ್ಲ ಮತ್ತು ನಮ್ಮ ಇಚ್ಛಾಶಕ್ತಿಯೂ ಅಲ್ಲ. ಇವೆಲ್ಲವೂ ಸಾಧನಗಳು

ಮಾತ್ರ. ಇವನು ಈಶ್ವರನೇಯೆ. ಗೀತೆಯ ಕೊನೆಯ ಅಧ್ಯಾಯದಲ್ಲಿ ಹೇಳಿರುವಂತೆ ನಾವು ಇವನನ್ನು ಶರಣುಹೋಗಬೇಕು. ಇದಕ್ಕಾಗಿ ಮೊದಲು ನಾವು ಸರ್ವಭಾವದಿಂದಲೂ ಅವನನ್ನು ಲಕ್ಷ್ಯವನ್ನಾಗಿಟ್ಟುಕೊಂಡು ಆತ್ಮನ ಮೂಲಕ ಅವನೊಡನೆ ಸಂಬಂಧವನ್ನು ಬೆಳೆಸಬೇಕು. **ಉಪವಿಶ್ಯಾಸನೇ ಯುಂಜ್ಯಾತ್**............ ............ **ಯುಕ್ತ ಆಸೀತ ಮತ್ಪರಃ** ಯೋಗದಲ್ಲಿ ಸ್ಥಿರವಾಗಿದ್ದು ನನ್ನಲ್ಲಿ ಸಂಪೂರ್ಣವಾಗಿ ಅರ್ಪಣೆ ಮಾಡಿಕೊಳ್ಳಬೇಕು ಎಂಬ ಭಗವಂತನ ಮಾತಿಗೆ ಇದೆ ಅರ್ಥ. ಇಲ್ಲಿ **ಯುಕ್ತ ಆಸೀತ ಮತ್ಪರಃ** ಎಂಬ ಪದಗಳು ಸೂಚನೆ ಮಾತ್ರವಾದರೂ ಗೀತೆಯ ಉಪದೇಶ ಸಾರವನ್ನೆಲ್ಲ ಒಳಗೊಂಡಿವೆ. ಹೀಗೆ ಮೊದಲು ಸೂಚಿಸಿ ಅನಂತರ ವಿಸ್ತರಿಸುವುದು ಗೀತೋಪದೇಶದ ರೀತಿ.

ಹೀಗೆ ಯೋಗದಲ್ಲಿ ಸ್ಥಿರವಾಗಿದ್ದು ಈಶ್ವರನಿಗೆ ಆತ್ಮಾರ್ಪಣೆ ಮಾಡಿಕೊಂಡರೆ, ವಿಷಯಗಳ ಮಧ್ಯದಲ್ಲಿದ್ದು ಅವುಗಳ ಸಂಪರ್ಕವೂ ಇದ್ದರೂ, ಇಂದ್ರಿಯಗಳು ಸಂಪೂರ್ಣವಾಗಿ ಆತ್ಮನ ಸ್ವಾಧೀನದಲ್ಲಿ ಇರುತ್ತವೆ. ವಿಷಯಗಳಿಗೂ ಅವುಗಳ ಸಂಪರ್ಕದಿಂದುಂಟಾಗುವ ಪ್ರತಿಕ್ರಿಯೆಗಳಿಗೂ ಅಧೀನವಾಗಿರುವುಧಿಲ್ಲ. ಈ ಆತ್ಮನು ಈಶ್ವರನಿಗೆ ಅಧೀನನಾಗಿರುತ್ತಾನೆ. ಆಗ ಇಂದ್ರಿಯಗಳು ರಾಗದ್ವೇಷಗಳಿಂದಲೂ, ಇಚ್ಛೆಯ ಆಕರ್ಷಣ ವಿಕರ್ಷಣಗಳಿಂದಲೂ ಬಿಡುಗಡೆ ಹೊಂದುವುವು. ಆಗ ಶಾಂತಿಯೂ, ಸ್ಪಷ್ಟವಾದ ದೃಷ್ಟಿಯೂ, ಸಮಾಧಾನವೂ, ಪ್ರಸನ್ನತೆಯೂ ಮತ್ತು ಆತ್ಮಪ್ರಸಾದವೂ ಮನುಷ್ಯನಲ್ಲಿ ನೆಲೆಗೊಳ್ಳುವುವು. ಈ ಸಮಾಧಾನ ಸ್ಥಿತಿಯೆ ಮನುಷ್ಯನಿಗೆ ಶಾಶ್ವತವಾದ ಸುಖವನ್ನು ಕೊಡಬಲ್ಲದು. ಹೀಗೆ ಪ್ರಸನ್ನತೆ ಇರುವ ಮನುಷ್ಯನನ್ನು ದುಃಖಗಳು ತಟ್ಟಲಾರವು. ಆತ್ಮನ ಶಾಂತಿಯಲ್ಲಿ ಬುದ್ಧಿಯು ಪ್ರತಿಷ್ಠಿತವಾಗುವುದು ; ದುಃಖನಾಶವಾಗುವುದು. ಈ ರೀತಿ ಶಾಂತವಾಗಿ, ರಾಗದ್ವೇಷವಿಲ್ಲದೆ, ದುಃಖರಹಿತವಾಗಿದ್ದು, ಆತ್ಮನಲ್ಲೂ ಆತ್ಮನ ಸಮಸ್ಥಿತಿಯಲ್ಲೂ ಬುದ್ಧಿಯು ಸ್ಥಿರವಾಗಿರುವ ಸ್ಥಿತಿಯನ್ನೆ ಗೀತೆಯು **ಸಮಾಧಿ** ಎಂದು ಹೇಳುತ್ತದೆ.

ಸಮಾಧಿಯೆಂದರೆ ಮನುಷ್ಯನು ತನ್ನ ಸುತ್ತಲು ಇರುವ ವಸ್ತುಗಳ ಮತ್ತು ತನ್ನ ದೇಹ ಮತ್ತು ಮನಸ್ಸುಗಳ ವಿಷಯವಾಗಿ ಪ್ರಜ್ಞೆಯನ್ನು ಕಳೆದುಕೊಳ್ಳುವುದೆಂದೂ ; ದೇಹವನ್ನು ಹಿಂಸಿಸಿದರೂ, ಸುಟ್ಟರೂ ಪ್ರಜ್ಞೆಗೆ ಗೋಚರವಾಗದೆ ಇರುವ ಸ್ಥಿತಿಯೆಂದೂ ಸಾಮಾನ್ಯವಾದ ತಿಳಿವಳಿಕೆಯಿದೆ. ಆದರೆ ಇದು ಸಮಾಧಿಯ ನಿಜವಾದ ಲಕ್ಷಣವಲ್ಲ. ಸಮಾಧಿಯಲ್ಲಿರುವವರು ಬಾಹ್ಯ ಪ್ರಜ್ಞೆಯನ್ನು ಕಳೆದುಕೊಳ್ಳಲೇಬೇಕೆಂಬ ನಿಯಮವಿಲ್ಲ. ಆನೆಗಳನ್ನು ಓಡಿಸಿ ಅವುಗಳಿಗೆ ಮನಸ್ಸು ಸಿಲುಕ

ದಿರುವಂತೆ ಮಾಡುವುದೆ ಸಮಾಧಿಯ ನಿಜವಾದ ಗುರುತು. ಈ ವಿಧವಾದ ಮನಸ್ಸಿನ ಸ್ವಾತಂತ್ರ್ಯಕ್ಕೆ ಮೂಲವಾದ ಅಂತರಂಗಸ್ಥಿತಿಯೆ ಸಮಾಧಿ. ಪ್ರಾಪಂಚಿಕ ಜೀವನದ ಸುಖದುಃಖಗಳಿಗೂ ರಾಗದ್ವೇಷಗಳಿಗೂ ಅತೀತವಾದ ಉನ್ನತಮಟ್ಟದಲ್ಲಿ ಮನಸ್ಸು ಪ್ರಶಾಂತವಾಗಿಯೂ ಸಮತ್ವದಲ್ಲಿಯೂ ಇದ್ದು, ಆತ್ಮವು ತನ್ನಲ್ಲಿ ತಾನೆ ಆನಂದವನ್ನು ಅನುಭವಿಸುವ ಸ್ಥಿತಿಯು ನಿಜವಾದ ಸಮಾಧಿ. ಬಾಹ್ಯ ಪ್ರಪಂಚದಲ್ಲಿ ವ್ಯವಹರಿಸುತ್ತಿರುವಾಗಲೂ ಪ್ರಜ್ಞೆಯು ಅಂತಃಸ್ಥಿತಿಯಲ್ಲಿಯೆ ಇರುವುದು. ಬಾಹ್ಯ ವಿಷಯಗಳನ್ನು ನೋಡುವಾಗಲೂ ಆತ್ಮನಲ್ಲಿಯೆ ನೆಲೆಗೊಂಡಿರುವುದು. ಪ್ರಾಪಂಚಿಕ ವ್ಯವಹಾರಗಳಲ್ಲಿ ಮಗ್ನವಾಗಿರುವಂತೆ ಕಂಡರೂ, ಸಂಪೂರ್ಣವಾಗಿ ಪರಮಾತ್ಮನಲ್ಲಿಯೆ ಲಕ್ಷ್ಯವನ್ನಿಟ್ಟಿರುವುದು. ಸಾಮಾನ್ಯ ಮನುಷ್ಯನಪ್ರತಿನಿಧಿಯಾದ ಅರ್ಜುನನು ಈ ಸಮಾಧಿಸ್ಥಿತಿಯನ್ನು ಅರಿಯುವುದಕ್ಕೆ ಬಾಹ್ಯವಾದ, ಸ್ಥೂಲವಾದ, ಸುಲಭವಾಗಿ ಗೋಚರವಾಗುವ ಗುರುತುಗಳು ಯಾವುವು ಎಂದು ಕೇಳುತ್ತಾನೆ. ಹೇಗೆ ಕುಳಿತು ಕೊಳ್ಳುತ್ತಾನೆ, ಹೇಗೆ ನಡೆಯುತ್ತಾನೆ? ಹೀಗೆಂದೆಲ್ಲ ಕೇಳುತ್ತಾನೆ. ಆದರೆ ಈ ವಿಧವಾದ ಬಾಹ್ಯ ಚಿಹ್ನೆಗಳು ಯಾವುವೂ ಇಲ್ಲ; ಮತ್ತು ಇವುಗಳನ್ನು ಹೇಳು ವುದಕ್ಕೆ ಭಗವಂತನು ಪ್ರಯತ್ನಿಸುವುದೂ ಇಲ್ಲ. ಸಮಾಧಿಸ್ಥಿತಿಯನ್ನು ತೋರಿಸುವ ನಿಜವಾದ ಒರೆಗಲ್ಲು ಹೊರಗಡೆ ಇಲ್ಲ; ಅಂತರಂಗದಲ್ಲಿದೆ. ಸಮಾಧಿಯನ್ನು ಭಂಗ ಪಡಿಸಲು ಯತ್ನಿಸುವ ಅನೇಕ ಮಾನಸಿಕ ಶಕ್ತಿಗಳಿವೆ. ಇವುಗಳಿಂದಲೂ ಸಮಾಧಿಯು ಇದೆಯೊ ಇಲ್ಲವೊ ಎಂಬ ಪರೀಕ್ಷೆಯಾಗುವುದು. ಸಮತ್ವವು ಸಮಾಧಿಸ್ಥನ ಹೆಗ್ಗು ರುತು. ಈ ಸಮತ್ವಸ್ಥಿತಿಯಿದೆ ಎಂಬುದನ್ನು ವ್ಯಕ್ತಪಡಿಸುವ ಚಿಹ್ನೆಗಳೆಲ್ಲವೂ ಮಾನಸಿಕವಾದುವು; ಬಾಹ್ಯಗೋಚರವಲ್ಲ. "ದುಃಖದಿಂದ ಮನಸ್ಸು ಉದ್ವೇಗ ಗೊಳ್ಳದೆ, ಸುಖದಲ್ಲಿ ಬಯಕೆಯಿಲ್ಲದೆ, ರಾಗ, ಭಯ ಮತ್ತು ಕ್ರೋಧಗಳಿಲ್ಲದ ಮುನಿಯು ಸ್ಥಿತಪ್ರಜ್ಞನೆಂದು ಹೇಳಲ್ಪಡುತ್ತಾನೆ. ತ್ರಿಗುಣಾತ್ಮಕವಾದ ಪ್ರಕೃತಿ ವ್ಯಾಪಾರಗಳಿಂದ ನಿರ್ಲಿಪ್ತನಾಗಿಯೂ, ಯಾವಾಗಲೂ ಸತ್ವದಲ್ಲೆ ಇರುವವನೂ ದ್ವಂದ್ವರಹಿತನೂ, ಯೋಗಕ್ಷೇಮರಹಿತನೂ ಮತ್ತು ಆತ್ಮವಂತನೂ ಆಗಿರುತ್ತಾನೆ." ಮುಕ್ತನಾದ ಆತ್ಮನಿಗೆ ಯೋಗಕ್ಷೇಮಗಳು ಯಾವುವು? ಆತ್ಮವೊಂದನ್ನು ನಾವು ಹೊಂದಿದರೆ ಎಲ್ಲವನ್ನೂ ಹೊಂದಿದಂತಾಯಿತು.

ಹೀಗಿದ್ದರೂ ಕೂಡ, ಅವನು ಕರ್ಮಮಾಡುವುದನ್ನು ಬಿಡುವುದಿಲ್ಲ. ಗೀತೆಯ ಹಿರಿಮೆಯೂ, ವೈಶಿಷ್ಟ್ಯವೂ ಏನೆಂದರೆ, ಪ್ರಕೃತಿಗೆ ಅತೀತವಾಗಿರುವ ಈ ಸಮಾಧಿಸ್ಥಿತಿ ಯನ್ನು ವರ್ಣಿಸಿ, ಮುಕ್ತರಾದ ಜೀವರಿಗೆ ಸಾಮಾನ್ಯವಾದ ಪ್ರಕೃತಿ ವ್ಯಾಪಾರಗಳು

ನಿಷ್ಪ್ರಯೋಜಕ ಮತ್ತು ಅಸಾರವೆಂದು ಹೇಳಿದ ಮೇಲೆಯೂ ಇವರು ಪ್ರಾಪಂಚಿಕ ವಾದ ಕರ್ಮಗಳನ್ನು ಮುಂದುವರಿಸಬೇಕೆಂದು ಉಪದೇಶಿಸುತ್ತದೆ. ಕರ್ಮವನ್ನು ಮಾಡದಿರುವ ಸನ್ಯಾಸವನ್ನು ಬೋಧಿಸುವ ದರ್ಶನಗಳಿಲ್ಲಿರುವ ದೊಡ್ಡ ದೋಷವು ಗೀತೆಯಲ್ಲಿ ಕಂಡುಬರುವುದಿಲ್ಲ. ಈ ದರ್ಶನಗಳ ಅನುಯಾಯಿಗಳು ಸಹ ಈಗ ಈ ಕೊರತೆಯನ್ನು ನಿವಾರಿಸಲು ಯತ್ನಿಸುತ್ತಿದ್ದಾರೆ. "ಕರ್ಮ ವನ್ನು ಮಾಡಲು ಅಧಿಕಾರವಿದೆಯೆ ಹೊರತು ಫಲಗಳಿಗಿಲ್ಲ. ಫಲವನ್ನು ಲಕ್ಷ್ಯವ ನ್ನಾಗಿಟ್ಟುಕೊಂಡು ಕರ್ಮವನ್ನು ಮಾಡಬೇಡ, ಕರ್ಮವನ್ನು ಮಾಡದೆ ಉದಾಸೀನ ನಾಗಿರಬೇಡ" ಎಂದು ಗೀತೆಯು ವಿಧಿಸುವ ಕರ್ಮವು ಫಲಾಪೇಕ್ಷೆಯಿಂದ ಮಾಡುವ ವೇದವಾದಿಗಳ ಕರ್ಮವಲ್ಲ; ಚಂಚಲವಾದ ಮತ್ತು ಪಟುವಾದ ಮನಸ್ಸಿನ ತೃಪ್ತಿಗಾಗಿ ಯಾವಾಗಲೂ ಮಾಡಬೇಕೆಂದು ಉದ್ಯಮಶೀಲರಾದ ಲೌಕಿಕರು ಹೇಳುವ ಕರ್ಮವೂ ಅಲ್ಲ. "ಯೋಗದಲ್ಲಿದ್ದುಕೊಂಡು ಸಂಗವನ್ನು ತೊರೆದು ಕರ್ಮಗಳನ್ನು ಮಾಡು. ಸಿದ್ಧಿಯಾಗಲಿ ಅಥವಾ ಆಗದಿರಲಿ, ಸಮಬುದ್ಧಿಯುಳ್ಳವನಾಗಿರು. ಈ ಸಮತ್ವವೆ ಯೋಗ." ಕರ್ಮವನ್ನು ಮಾಡುವಾಗ ಇದು ಒಳ್ಳೆಯದೊ ಅಥವಾ ಕೆಟ್ಟದ್ದೊ, ಇದರಿಂದ ಪಾಪವುಂಟಾಗುತ್ತದೆಯೊ ಇಲ್ಲವೆ ಪುಣ್ಯವುಂಟಾಗುತ್ತದೆಯೊ ಎಂಬ ಎರಡು ಮಾರ್ಗಗಳಲ್ಲಿ ಒಂದನ್ನು ಚುನಾಯಿಸುವುದರಿಂದ ಕರ್ಮವು ದೋಷಕ್ಕೆ ಈಡಾಗು ತ್ತದೆ. ಮುಕ್ತನಾದವನು ತನ್ನ ಬುದ್ಧಿ ಮತ್ತು ಇಚ್ಛೆಗಳನ್ನು ಪರಮಾತ್ಮನಲ್ಲಿ ಸೇರಿಸಿರುತ್ತಾನೆ. ಆದುದರಿಂದ ಅವನು ದ್ವಂದ್ವಗಳಿಂದ ಕೂಡಿರುವ ಈ ಪ್ರಪಂಚ ದಲ್ಲಿ ವ್ಯವಹರಿಸುವಾಗಲೂ, ಈ ಕರ್ಮವು ಒಳ್ಳೆಯದು ಅಥವಾ ಕೆಟ್ಟದ್ದು ಎಂಬ ಭೇದಭಾವನೆಯನ್ನು ಕಿತ್ತೊಗೆದಿರುತ್ತಾನೆ. ದ್ವಂದ್ವಕ್ಕೆ ಅತೀತನಾಗಿರುವ ಆತ್ಮನಲ್ಲಿ ನೆಲೆಗೊಂಡಿರುವುದರಿಂದ ಸ್ವತಂತ್ರನಾಗಿದ್ದಾನೆ. ಈ ವಿಧವಾದ ನಿಷ್ಕಾಮಕರ್ಮಕೆ ಗುರಿಯಿಲ್ಲವೆಂದೂ, ಹೆಚ್ಚಿನ ರಚನಾತ್ಮಕಶಕ್ತಿಯಿಲ್ಲವೆಂದೂ, ಅದು ಪರಿಣಾಮಕಾರಿ ಯಲ್ಲವೆಂದೂ ಹೇಳೋಣವೆ? ಹಾಗೆ ಹೇಳಲಾಗುವುದಿಲ್ಲ. ಯೋಗದಲ್ಲಿದ್ದುಕೊಂಡು ಮಾಡುವ ಕರ್ಮವು ಅತ್ಯಂತ ಶ್ರೇಷ್ಠವಾದುದೂ, ಶಕ್ತಿಯುತವಾದುದೂ, ಮತ್ತು ಈ ಲೋಕದ ವ್ಯವಹಾರದಲ್ಲೂ ವಿಶೇಷ ಪರಿಣಾಮಕಾರಿಯಾದುದೂ ಆಗಿರುತ್ತದೆ. ಏತಕ್ಕೆಂದರೆ ಈ ಕರ್ಮವು, ಎಲ್ಲ ಕರ್ಮಗಳ ಪ್ರಭುವಿನ ಜ್ಞಾನ ಮತ್ತು ಇಚ್ಛೆಗಳಿಂದ ಕೂಡಿದೆ. "ಯೋಗವೆಂದರೆ ಕರ್ಮಗಳಲ್ಲಿ ಕೌಶಲ್ಯ." ಕಷ್ಟಮಯವಾದ ಮತ್ತು ದುಃಖಮಯವಾದ ಜನ್ಮಪರಂಪರೆಯಿಂದ ಬಿಡುಗಡೆಹೊಂದುವುದೆ ಯೋಗಿಯ ಗುರಿಯೆಂಬುದು ಸರ್ವಸಮ್ಮತವಾಗಿದೆಯಷ್ಟೆ. ಜೀವನಕ್ಕೆ ಸಂಬಂಧಿಸಿದ ಕರ್ಮಗಳೆ

ಲ್ಲವೂ ಈ ಗುರಿಯನ್ನು ಬಿಟ್ಟು ನಮ್ಮನ್ನು ಅಡ್ಡದಾರಿಗೆ ಒಯ್ಯುವುದಿಲ್ಲವೆ? ಹಾಗಲ್ಲ. ಬ್ರಾಹ್ಮೀಸ್ಥಿತಿಯಲ್ಲಿದ್ದುಕೊಂಡು, ಫಲಾಪೇಕ್ಷೆಯಿಲ್ಲದೆ ಕರ್ಮಮಾಡುವ ಮುನಿಯು ಜನ್ಮಬಂಧನದಿಂದ ಬಿಡುಗಡೆ ಹೊಂದಿರುತ್ತಾನೆ. ಸಾಮಾನ್ಯವಾಗಿ ಮನುಷ್ಯರನ್ನೂ ಅವರ ಮನಸ್ಸನ್ನೂ ಪೀಡಿಸುವ ಯಾವ ದುಃಖಗಳಿಗೂ ಒಳಗಾಗದ ಸ್ಥಿತಿಯಲ್ಲಿ ಅವರಿರುತ್ತಾರೆ— ಎಂದರೆ ಅವರು ಬ್ರಾಹ್ಮೀಸ್ಥಿತಿಯಲ್ಲಿರುತ್ತಾರೆ. ಸಾಮಾನ್ಯ ಮನುಷ್ಯರ ಅನುಭವಗಳು, ಜ್ಞಾನ ಮತ್ತು ದೃಷ್ಟಿಗಳಿಗೆ ಇದು ತೀರಾ ವಿರುದ್ಧವಾಗಿದೆ. ಸಾಮಾನ್ಯ ಮನುಷ್ಯರ ಜೀವನವು, ಎಂದರೆ ಅವರ ಹಗಲು, ಅವರ ಜಾಗ್ರದವಸ್ಥೆ, ಪ್ರಾಪಂಚಿಕ ಕರ್ಮಗಳಲ್ಲಿ ಅವರು ತೋರಿಸುವ ಉತ್ಸಾಹ, ಇವೆಲ್ಲವೂ ಇವರಿಗೆ ರಾತ್ರಿಯಂತೆ, ಅಶಾಂತವಾದ ನಿದ್ರೆ, ಮತ್ತು ಆವರಿಸುತ್ತಿರುವ ತಮಸ್ಸಿನಂತೆ ಕಾಣುವುದು. ಸಾಮಾನ್ಯಮನುಷ್ಯರಿಗೆ ರಾತ್ರಿಯಂತೆಯೂ, ಎಲ್ಲ ಜ್ಞಾನವೂ ಶೂನ್ಯವಾಗುವ ನಿದ್ರೆಯಂತೆಯೂ ಕಾಣುವ ಮೇಲ್ಮಟ್ಟದ ಜೀವನವು, ಆತ್ಮಜ್ಞಾನಿಯಾದ ಮುನಿಗೆ ನಿಜವಾದ ವ್ಯಾಪಾರಗಳು, ಜ್ಞಾನ ಮತ್ತು ಶಕ್ತಿಗಳಿಗೆ ಆಶ್ರಯವಾದ ಪ್ರಕಾಶಮಾನವಾದ ಹಗಲಿನಂತೆ ಇರುತ್ತದೆ. ಪ್ರತಿಯೊಂದು ಸಣ್ಣ ಆಸೆಯೂ ಸಾಮಾನ್ಯ ಮನುಷ್ಯರ ಮನಸ್ಸನ್ನು ಹೊಕ್ಕು ಕಲಕಿ, ಅದನ್ನು ಅಶುದ್ಧಮಾಡಿ ಪೀಡಿಸುತ್ತದೆ. ಮುನಿಯಾದರೊ ಅಪಾರವಾದ ಪ್ರಜ್ಞೆಯುಳ್ಳ ಸಾಗರದಂತೆ; ಹೊಸ ಅನುಭವಗಳು ಪ್ರತಿಕ್ಷಣದಲ್ಲೂ ಬರುತ್ತಿದ್ದರೂ ಅವನ ಸಮಸ್ಥಿತಿಗೆ ಭಂಗಬರುವುದಿಲ್ಲ. ಸಮುದ್ರವನ್ನು ನೀರು ಪ್ರವೇಶಿಸುವಂತೆ ಎಲ್ಲ ಆಸೆಗಳೂ ಇವನನ್ನು ಪ್ರವೇಶಿಸಿದರೂ, ಇವನಿಗೆ ಯಾವ ಆಸೆಗಳೂ ಇಲ್ಲ; ಇವನನ್ನು ಯಾವುದೂ ಪೀಡಿಸುವುದೂ ಇಲ್ಲ. ಸಾಮಾನ್ಯ ಮನುಷ್ಯರು ಅಹಂಕಾರಮಮಕಾರಗಳಿಗೆ ಒಳಗಾಗಿ "ನಾನು" "ಇತರರು" ಬೇರೆ ಎಂದು ಯೋಚಿಸುತ್ತಾರೆ. ಮುನಿಯಾದರೊ ಅದ್ವಿತೀಯವಾದ ಬ್ರಹ್ಮನಲ್ಲಿ ಒಂದಾಗಿ ಅವನಿಗೆ "ನಾನು" "ನನ್ನದು" ಎಂಬ ಭಾವವೆ ಇಲ್ಲ. ಅವನು ಇತರರಂತೆಯೆ ಕರ್ಮಗಳನ್ನು ಮಾಡುತ್ತಿದ್ದರೂ ಎಲ್ಲ ಆಸೆಗಳನ್ನೂ ತೊರೆದಿದ್ದಾನೆ. ಪರಮನಿರ್ವಾಣದ ಶಾಂತಿಯನ್ನು ಹೊಂದಿರುವುದರಿಂದ ತೋರಿಕೆಯ ಪ್ರಪಂಚದಿಂದ ಭ್ರಾಂತನಾಗುವುದಿಲ್ಲ. ತನ್ನ ಜೀವಾತ್ಮನನ್ನು ಅದ್ವಿತೀಯವಾದ ವಸ್ತುವಿನಲ್ಲಿ ಲೀನಮಾಡಿ, ಆ ಐಕ್ಯಸ್ಥಿತಿಯಲ್ಲಿ ಜೀವಿಸುತ್ತಾನೆ. ಆ ಸ್ಥಿತಿಯಲ್ಲಿದ್ದುಕೊಂಡು, ಕೊನೆಯಲ್ಲಿ ಬ್ರಹ್ಮನಲ್ಲಿ ನಿರ್ವಾಣಹೊಂದುತ್ತಾನೆ. ಈ ನಿರ್ವಾಣವು ಬೌದ್ಧರು ಹೇಳುವ ಆತ್ಮನಾಶವಲ್ಲ; ಅನಂತವೂ ನಿರ್ವಿಶೇಷವೂ ನಿರಾಕಾರವೂ ಆದ ಅಖಂಡವಾದ ಸತ್ಯವಸ್ತುವಿನಲ್ಲಿ ತನ್ನ ಬೇರೆಯಾದ ಜೀವಾತ್ಮನನ್ನು ಲೀನಗೊಳಿಸುವುದು.

ಹೀಗೆ ಗೀತೆಯು ಸಾಂಖ್ಯವನ್ನೂ ವೇದಾಂತವನ್ನೂ ಯೋಗವನ್ನೂ ಒಟ್ಟು ಗೂಳಿಸುವ ಉಪದೇಶವನ್ನು ತಳಹದಿಯನ್ನಾಗಿ ಹೊಂದಿದೆ. ಇದು ಗೀತೋಪ ದೇಶದ ಸರ್ವಸ್ವವಲ್ಲ; ಆದರೆ ಅತ್ಯವಶ್ಯಕವಾದ ಕರ್ಮ ಮತ್ತು ಜ್ಞಾನಗಳ ಸಮ ನ್ವಯ. ಇದರ ಜೊತೆಗೆ ಮೂರನೆಯದಾದ, ಮುಕುಟಪ್ರಾಯವಾದ, ಪರಿಪೂರ್ಣತೆಗೆ ಅತ್ಯವಶ್ಯಕವಾದ ಭಕ್ತಿಯ ಮುನ್ಸೂಚನೆಯನ್ನೂ ಮಾಡಿದೆ.

# ಹನ್ನೊಂದನೆಯ ಪ್ರಕರಣ

## ಕರ್ಮಗಳೂ, ಯಜ್ಞವೂ

ಇಲ್ಲಿಯವರೆಗೆ ವಿವರಿಸಿರುವ ಬುದ್ಧಿಯೋಗವೂ, ಇದರಿಂದ ಸಿದ್ಧಿಯಾಗುವ ಬ್ರಾಹ್ಮೀಸ್ಥಿತಿಯೂ, ಗೀತೆಯ ಎರಡನೆಯ ಅಧ್ಯಾಯದ ಕೊನೆಯಲ್ಲಿ ವರ್ಣಿಸಲ್ಪ ಟ್ಟಿವೆ. ಗೀತೆಯ ಉಪದೇಶದ ಬಹು ಭಾಗವು—ಎಂದರೆ ನಿಷ್ಕಾಮಕರ್ಮ, ಸಮತ್ವ, ಬಾಹ್ಯಸನ್ಯಾಸದ ನಿರಾಕರಣೆ ಮತ್ತು ಪರಮಾತ್ಮನಲ್ಲಿ ಭಕ್ತಿ ; ಇವೆಲ್ಲವೂ —ಇದರಲ್ಲಿ ಸಂಕ್ಷೇಪವಾಗಿ ಹೇಳಲ್ಪಟ್ಟಿದೆ. ಆದರೂ ಸಹ ಸ್ಪಷ್ಟವಾಗಿ, ವಿಶದವಾಗಿ ಹೇಳಲ್ಪಟ್ಟಿಲ್ಲ. ಇಲ್ಲಿಯವರೆಗೆ ಒತ್ತಿಹೇಳಲ್ಪಟ್ಟ ವಿಷಯಗಳು ಯಾವುವೆಂದರೆ: ಸಾಮಾನ್ಯ ಮನುಷ್ಯರ ಕರ್ಮಗಳನ್ನು ಪ್ರೇರಿಸುವ ಆಸೆಗೆ ಬುದ್ಧಿಯು ಒಳಗಾಗದೆ ಇರುವುದು ; ವಿಷಯಾಭಿಮುಖವಾದ, ರಾಗ, ದ್ವೇಷ ಮತ್ತು ಅಜ್ಞಾನಗಳಿಂದ ಕೂಡಿರುವ ಮನಸ್ಸಿಗೆ ಬುದ್ಧಿಯು ಒಳಗಾಗದೆ ಇರುವುದು ; ನಾನಾಮುಖವಾದ ಯೋಚನೆಗಳಿಗೆ ಮತ್ತು ಆಸೆಗಳಿಗೆ ಒಳಗಾಗಿ ವ್ಯಾಕುಲಪಡದಂತೆ ಮನಸ್ಸನ್ನು ಇಡುವುದು ; ಮತ್ತು ರಾಗದ್ವೇಷವಿಲ್ಲದಿರುವ ಶಾಂತಿ ಮತ್ತು ಪ್ರಸನ್ನತೆಯಿಂದ ಕೂಡಿರುವ ಬ್ರಾಹ್ಮೀಸ್ಥಿತಿಯಲ್ಲಿ ಬುದ್ಧಿಯನ್ನು ಇಡುವುದು. ಇಷ್ಟು ವಿಷಯಗಳನ್ನು ಅರ್ಜುನನು ಗ್ರಹಿಸಿದ್ದಾನೆ. ಅವನಿಗೆ ಇದು ಯಾವುದೂ ಹೊಸದಲ್ಲ. ಮನುಷ್ಯನು ಪರಿಪೂರ್ಣತೆಯನ್ನು ಹೊಂದುವುದಕ್ಕೆ ಸಾಧನವೆಂದು ಆ ಕಾಲದಲ್ಲಿ ಉಪದೇಶಿಸು ತ್ತಿದ್ದ ಮಾರ್ಗ ಇದೇಯೆ—ಜ್ಞಾನಮಾರ್ಗ ಮತ್ತು ಕರ್ಮಗಳ ಬಿಡುವಿಕೆ. ಬುದ್ಧಿಯು

ವಿಷಯಗಳಿಂದಲೂ, ಆಸೆಗಳಿಂದಲೂ ಮತ್ತು ಪ್ರತಿ ದಿನದ ಜೀವನದ ವ್ಯಾಪಾರಗಳಿಂದಲೂ ವಿಮುಖವಾಗಿ, ಪರಾತ್ಪರವೂ, ಏಕವೂ, ಅದ್ವಿತೀಯವೂ, ನಿಷ್ಕ್ರಿಯನಾದ ಪುರುಷನೂ, ಅಚಲವೂ ಮತ್ತು ನಿರ್ವಿಶೇಷವೂ ನಿರ್ಗುಣವೂ ಆದ ಬ್ರಹ್ಮದ ಕಡೆ ತಿರುಗುವುದೇ ಶಾಶ್ವತವಾದ ಜ್ಞಾನದ ಮೂಲವು. ಹೀಗಿರುವಾಗ ಕರ್ಮಗಳಿಗೆ ಸ್ಥಾನವೇ ಇಲ್ಲ. ಯಾಕೆಂದರೆ ಕರ್ಮಗಳು ಅವಿದ್ಯೆಗೆ ಸಂಬಂಧಿಸಿದವು. ಕರ್ಮವು ಜ್ಞಾನಕ್ಕೆ ತೀರಾ ವಿರುದ್ಧವಾದುದು. ಇದಕ್ಕೆ ಆಸೆಯೇ ಮೂಲವು ಮತ್ತು ಬಂಧನವೇ ಪರಿಣಾಮವು. ಸಂಪ್ರದಾಯಕ್ಕನುಸಾರವಾದ ಉಪದೇಶವು ಬೋಧಿಸುತ್ತಿದ್ದುದು ಹೀಗೆ. ಕರ್ಮವು ಬುದ್ಧಿಯೋಗಕ್ಕಿಂತ ಬಹಳ ನಿಕೃಷ್ಟವೆಂದು ಶ್ರೀಕೃಷ್ಣನು ಹೇಳಿರುವುದರಿಂದ ಅವನೂ ಈ ಅಭಿಪ್ರಾಯವನ್ನು ಒಪ್ಪಿರುವಂತೆ ತೋರಬಹುದು. ಆದರೂ ಯೋಗಕ್ಕೆ ಸೇರಿದಹಾಗೆ ಕರ್ಮಗಳನ್ನು ಮಾಡಬೇಕೆಂದು ಒತ್ತಿಹೇಳಿದ್ದಾನೆ. ಈ ರೀತಿಯಾಗಿ ಅವನ ಉಪದೇಶದಲ್ಲಿ ಪರಸ್ಪರ ವಿರೋಧವಿರುವಂತೆ ಕಾಣುತ್ತದೆ. ಅಷ್ಟುಮಾತ್ರವಲ್ಲ. ಯಾರಿಗೂ ಎಳ್ಳಷ್ಟೂ ತೊಂದರೆಯನ್ನುಂಟುಮಾಡದ ರೀತಿಯಲ್ಲಿ, ಕನಿಷ್ಠಪ್ರಮಾಣದಲ್ಲಿ ಕರ್ಮವನ್ನು ಕೆಲವು ಕಾಲ ಮುಂದುವರಿಸಬಹುದು. ಆದರೆ ಇಲ್ಲಿ ಅರ್ಜುನನು ಮಾಡಬೇಕಾಗಿರುವ ಕರ್ಮವು, ಆತ್ಮರತಿಯುಳ್ಳ ಜೀವನ ಶಾಂತಿ ಮತ್ತು ಜ್ಞಾನಕ್ಕೆ ಸಂಪೂರ್ಣವಾಗಿ ವಿರುದ್ಧವಾಗಿರುವ, ಘೋರವಾದ ಮತ್ತು ರೌದ್ರವಾದ ಕರ್ಮ—ರಕ್ತಪಾತದಿಂದ ಕೂಡಿದ ನಿಷ್ಕರುಣವಾದ ಸಂಗ್ರಾಮ, ಮಹತ್ತರವಾದ ಪ್ರಮಾಣದಲ್ಲಿ ಕೊಲೆ. ಆದರೂ ಉಪದಿಷ್ಟವಾಗಿರುವುದು ಈ ಕರ್ಮವೇ; ಆಂತರವಾದ ಶಾಂತಿ, ನಿಷ್ಕಾಮವಾದ ಸಮತ್ವಸ್ಥಿತಿ ಮತ್ತು ಬ್ರಾಹ್ಮೀಸ್ಥಿತಿಯನ್ನು ಕುರಿತ ಉಪದೇಶವು ಸಮರ್ಥಿಸುತ್ತಿರುವುದು ಈ ಕಾರ್ಯವನ್ನು ! ಇಲ್ಲಿ ಸಮನ್ವಯ ಮಾಡಲು ಆಗದಿರುವ ವಿರೋಧವಿದೆ. ಆದುದರಿಂದಲೇ ಅರ್ಜುನನು ಈ ಉಪದೇಶವು ಪರಸ್ಪರ ವಿರೋಧಗಳಿಂದ ಕೂಡಿದೆಯೆಂದೂ, ಮನುಷ್ಯನು ತನ್ನ ಬುದ್ಧಿಯ ಸಹಾಯದಿಂದ ನೇರವಾಗಿ ಮತ್ತು ಖಂಡಿತವಾಗಿ ತನ್ನ ಶ್ರೇಷ್ಠವಾದ ಗುರಿಯನ್ನು ಮುಟ್ಟಬಲ್ಲ ಸ್ಪಷ್ಟವಾದ ಮತ್ತು ಏಕೈಕವಾದ ಮಾರ್ಗವು ಉಪದೇಶಿಸಲ್ಪಟ್ಟಿಲ್ಲವೆಂದೂ, ಮೊರೆಯಿಡುತ್ತಾನೆ. ಇದಕ್ಕೆ ಉತ್ತರವಾಗಿಯೇ ಶ್ರೀಕೃಷ್ಣನು ಸ್ಪಷ್ಟವಾದ ಮತ್ತು ನಿಚ್ಚಳವಾದ ಮಾತುಗಳಲ್ಲಿ ಕರ್ಮಯೋಗವನ್ನು ಉಪದೇಶಿಸಲು ಪ್ರಾರಂಭಿಸುತ್ತಾನೆ.

ಈ ಲೋಕದಲ್ಲಿ ಜನರು ಮೋಕ್ಷಸಾಧನೆಗಾಗಿ ತದೇಕಚಿತ್ತರಾಗಿ ಅನುಸರಿಸಬಹುದಾದ ಬೇರೆಬೇರೆಯಾದ ಎರಡು ಮಾರ್ಗಗಳು ಇವೆಯೆಂದು ಮೊದಲು

ಶ್ರೀಕೃಷ್ಣನು ಸ್ಪಷ್ಟಪಡಿಸುತ್ತಾನೆ--ಕರ್ಮಯೋಗ ಮತ್ತು ಜ್ಞಾನಯೋಗದ ಮಾರ್ಗಗಳು. ಜ್ಞಾನಮಾರ್ಗದಲ್ಲಿ ಹೋಗುವವರಿಗೆ ಕರ್ಮವು ಪ್ರತಿಬಂಧಕವೆಂದೂ, ತ್ಯಾಜ್ಯವೆಂದೂ ಸಾಮಾನ್ಯವಾದ ತಿಳಿವಳಿಕೆ. ಇನ್ನೊಂದು ಮಾರ್ಗದಲ್ಲಾದರೋ, ಕರ್ಮವೇ ಮುಕ್ತಿಗೆ ಸಾಧನವು. ಇವೆರಡನ್ನೂ ಸಮನ್ವಯಮಾಡುವುದಕ್ಕೆ ಶ್ರೀಕೃಷ್ಣನು ಈಗಲೇ ತೊಡಗುವುದಿಲ್ಲ. ಆದರೆ ಸಾಂಖ್ಯದವರ ಕರ್ಮಗಳ ಬಾಹ್ಯ ಸನ್ಯಾಸವೊಂದೇ ಮುಕ್ತಿಗೆ ಮಾರ್ಗವಲ್ಲವೆಂದೂ, ಇದು ಶ್ರೇಷ್ಠತರವಾದ ಮಾರ್ಗ ವಲ್ಲವೆಂದೂ ಸ್ಪಷ್ಟಪಡಿಸುತ್ತಾನೆ. ಪುರುಷನು ಹೊಂದಬೇಕಾದ ಸ್ಥಿತಿಯು ಕರ್ಮ ಗಳಿಲ್ಲದಿರುವ (ನೈಷ್ಕರ್ಮ್ಯ) ಶಾಂತಿಸ್ಥಿತಿಯೆಂಬುದೇನೋ ನಿಜ. ಯಾಕೆಂದರೆ ಕರ್ಮವನ್ನು ಮಾಡುವುದು ಪ್ರಕೃತಿ; ಪುರುಷನು ಪ್ರಕೃತಿಯ ಸಂಬಂಧದಿಂದ ಬಿಡಿಸಿಕೊಂಡು ಪ್ರಕೃತಿವ್ಯಾಪಾರಗಳಿಗೆ ಅತೀತನಾಗಿ ಸ್ವಚ್ಛಂದವಾದ ಶಾಂತಿ ಮತ್ತು ಸಮಸ್ಥಿತಿಗಳಲ್ಲಿರಬೇಕು; ಪ್ರಕೃತಿವ್ಯಾಪಾರಗಳಿಗೆ ಸಾಕ್ಷಿಯಾದರೂ, ಅವುಗಳಿಂದ ನಿರ್ಲಿಪ್ತನಾಗಿರಬೇಕು. ಇದು ನೈಷ್ಕರ್ಮ್ಯವೇ ಹೊರತು ಕರ್ಮಗಳನ್ನು ಬಿಡುವುದಲ್ಲ. ಆದುದರಿಂದ ಕರ್ಮಗಳನ್ನು ಮಾಡದೆ ಸುಮ್ಮನೆ ಕುಳಿತಿರುವುದರಿಂದ ಈ ನೈಷ್ಕರ್ಮ್ಯ ಸ್ಥಿತಿಯು ಸಿದ್ಧಿಸುವುದೆಂದು ತಿಳಿದುಕೊಳ್ಳುವುದು ತಪ್ಪು. ಕರ್ಮಸನ್ಯಾಸವು ಮುಕ್ತಿಗೆ ಸರಿಯಾದ ಸಾಧನವಲ್ಲ. "ಕರ್ಮಗಳಿಗೆ ಕೈಹಾಕದೆ ಇರುವುದರಿಂದ ಮನುಷ್ಯನಿಗೆ ನೈಷ್ಕರ್ಮ್ಯವು ದೊರೆಯುವುದಿಲ್ಲ; ಕರ್ಮಸನ್ಯಾಸಮಾತ್ರದಿಂದಲೇ ಅವನ ಲಕ್ಷ್ಯವು ಸಿದ್ಧಿಸುವುದಿಲ್ಲ" ಎಂದು ಶ್ರೀಕೃಷ್ಣನು ಹೇಳಿದ್ದಾನೆ. ಆದರೂ, ಕರ್ಮಸನ್ಯಾಸವು ಮುಖ್ಯವಾದ ಮತ್ತು ಅವಶ್ಯಕವಾದ ಸಾಧನಗಳಲ್ಲಿ ಒಂದಾದರೂ ಆಗಿರಬೇಡವೆ? ಪ್ರಕೃತಿವ್ಯಾಪಾರಗಳು ನಡೆಯುತ್ತಿರುವಾಗ ಪುರುಷನು ಅದರಲ್ಲಿ ಮಗ್ನನಾಗದೆ ಹೇಗಿರಲಾದೀತು? ನಾನು ಯುದ್ಧಮಾಡುತ್ತಿದ್ದರೂ, ನಾನು, ಅರ್ಜುನನು, ಯುದ್ಧಮಾಡುತ್ತಿದ್ದೇನೆ; ಎಂಬ ಭಾವನೆಯನ್ನು ಬಿಡುವುದು ಹೇಗೆ? ಜಯವನ್ನು ಅಪೇಕ್ಷಿಸದೆ ಅಥವಾ ಅಪಜಯದಿಂದ ಖಿನ್ನಮನಸ್ಕನಾಗದೆ ಇರುವುದು ಹೇಗೆ ಸಾಧ್ಯ? ಸಾಂಖ್ಯಸಿದ್ಧಾಂತದ ಪ್ರಕಾರ, ಪ್ರಕೃತಿವ್ಯಾಪಾರಗಳಲ್ಲಿ ತೊಡಗುವ ಪುರುಷನ ಬುದ್ಧಿಯು ಅಹಂಕಾರ, ಅಜ್ಞಾನ ಮತ್ತು ಆಸೆಗಳಿಂದ ಆವರಿಸಲ್ಪಟ್ಟು ಕರ್ಮಗಳಿಗೇ ಸೆಳೆಯಲ್ಪಡುತ್ತದೆ. ಬುದ್ಧಿಯು ಕರ್ಮದಿಂದ ವಿಮುಖವಾದರೆ, ಈ ಅಜ್ಞಾನ ಮತ್ತು ಆಸೆಯು ನಿಂತಕೂಡಲೇ ಕರ್ಮವೂ ನಿಲ್ಲಬೇಕು. ಆದುದ ರಿಂದ ಜೀವನದ ಮತ್ತು ಕರ್ಮದ ತ್ಯಾಗವು ಮುಕ್ತಿಯನ್ನು ಹೊಂದಲು ಅವಶ್ಯಕ ವಾದ ಮತ್ತು ಅಂತ್ಯದಲ್ಲಿ ಅನುಸರಿಸಲೇಬೇಕಾದ ಸಾಧನವು.

ಆಗಿನ ಕಾಲದ ಈ ತರ್ಕಸರಣಿಯನ್ನು ಅರ್ಜುನನು ವ್ಯಕ್ತಪಡಿಸದೆ ಇದ್ದರೂ, ಇದು ಅವನ ಮನಸ್ಸಿನಲ್ಲಿರಬಹುದೆಂದು ಊಹಿಸಿ ಶ್ರೀಕೃಷ್ಣನು ಇದಕ್ಕೆ ಉತ್ತರವನ್ನು ಕೊಡುತ್ತಾನೆ. ಈ ವಿಧವಾದ ಕರ್ಮಸನ್ಯಾಸವು ಅವಶ್ಯಕವೆಂಬುದಷ್ಟೆ ಅಲ್ಲ; ಅದು ಎಂತಹವನಿಗೂ ಅಸಾಧ್ಯವೆಂದು ಸ್ಪಷ್ಟಪಡಿಸುತ್ತಾನೆ. "ಕರ್ಮವನ್ನು ಮಾಡದೆ ಒಂದು ಕ್ಷಣಕಾಲವೂ ಯಾರೂ ಇರುವುದಿಲ್ಲ. ಪ್ರಕೃತಿಯ ಗುಣಗಳಿಗೆ ವಶರಾಗಿ ಎಲ್ಲರೂ ಬೇರೆ ರೀತಿಯಲ್ಲಿರಲು ಸಾಧ್ಯವಿಲ್ಲದೆ, ಕರ್ಮಗಳನ್ನು ಮಾಡುತ್ತಲೆ ಇರುತ್ತಾರೆ." ವಿಶ್ವವನ್ನೆಲ್ಲ ಆವರಿಸಿರುವ ಪ್ರಕೃತಿವ್ಯಾಪಾರ, ಪ್ರಕೃತಿಯ ನಿರಂತರವಾದ ಕ್ರಿಯೆ ಮತ್ತು ಶಕ್ತಿ ಇವುಗಳ ಮಹತ್ವವನ್ನು ಸ್ಪಷ್ಟವಾಗಿ ನಿರೂಪಿಸಿರುವುದು ಗೀತೆಯ ವೈಶಿಷ್ಟ್ಯಗಳಲ್ಲೊಂದು. ಅಲ್ಲಿಂದ ಈಚೆಗೆ ಹುಟ್ಟಿದ ತಂತ್ರಶಾಸ್ತ್ರದ ಅನುಯಾಯಿಗಳಾದ ಶಾಕ್ತೇಯರು ಈ ಅಂಶವನ್ನು ಒತ್ತಿ ಹೇಳಿರುವುದು ಮಾತ್ರವಲ್ಲದೆ, ಪ್ರಕೃತಿ (ಅಥವಾ ಶಕ್ತಿ) ಯನ್ನು ಪುರುಷನಿಗಿಂತ ಶ್ರೇಷ್ಠವನ್ನಾಗಿ ಎಣಿಸಿದ್ದಾರೆ. ಗೀತೆಯಲ್ಲಿ ಈ ಅಂಶವು ಗೌಣವಾಗಿದ್ದರೂ ಸಹ ಭಕ್ತಿಯ ಮತ್ತು ಭಗವದ್ವಿಷಯವಾದ ಗೀತೆಯ ಇತರ ಉಪದೇಶಗಳೊಡನೆ ಸೇರಿಕೊಂಡಿದೆ. ಮತ್ತು ಜ್ಞಾನವನ್ನೆ ಹೇಳುವ, ಕರ್ಮಸನ್ಯಾಸವನ್ನು ಉಪದೇಶಿಸುವ ಪ್ರಾಚೀನ ವೇದಾಂತದಲ್ಲಿ ಕಂಡುಬರದೆ ಇರುವ ಕರ್ಮಶೀಲತೆ (ಕ್ರಿಯಾಶೀಲತೆ) ಯನ್ನು ಗೀತೆಯು ತನ್ನ ಉಪದೇಶದಲ್ಲಿ ಅಳವಡಿಸಿದೆ. ಪ್ರಪಂಚದಲ್ಲಿ ದೇಹಧಾರಿಯಾಗಿರುವ ಮನುಷ್ಯನು ಒಂದು ಕ್ಷಣಕಾಲವೂ ಕರ್ಮವನ್ನು ಮಾಡದೆ ಇರಲಾರನು. ಅವನ ಇರುವಿಕೆಯೆ ಒಂದು ಕರ್ಮ. ಈ ವಿಶ್ವವು ಭಗವಂತನ ಒಂದು ಕರ್ಮ; ಯಾವ ಕೆಲಸವನ್ನೂ ಮಾಡದೆ ಜೀವಿಸುವುದೂ ಕೂಡ ಅವನ ಚಲನೆ.

ಈ ಲೋಕದಲ್ಲಿ ನಮ್ಮ ಜೀವನವು—ಎಂದರೆ ಶರೀರವನ್ನು ಧರಿಸಿರುವುದು ಅಥವಾ ಶರೀರಮಾತ್ರೆಯು—ಕರ್ಮಮಾಡದೆ ಸಾಗುವುದಿಲ್ಲ. ಒಂದುವೇಳೆ ಮನುಷ್ಯನು ತನ್ನ ದೇಹವನ್ನು ಪೋಷಿಸದೆ ಮರ ಅಥವಾ ಕಲ್ಲಿನಂತೆ ಶರೀರವನ್ನು ಸ್ತಬ್ಧವಾಗಿಯೂ ನಿಶ್ಚಲವಾಗಿಯೂ ಇಟ್ಟರೂ ಅವನು ಪ್ರಕೃತಿವ್ಯಾಪಾರದಿಂದ ಪಾರಾಗುವುದಿಲ್ಲ. ಏತಕ್ಕೆಂದರೆ ಕರ್ಮವೆಂದರೆ ಕೇವಲ ನಮ್ಮ ಸ್ಥೂಲಶರೀರದ ಚಲನವಲನಗಳು ಮಾತ್ರವಲ್ಲ; ನಮ್ಮ ಮಾನಸಿಕ ಜೀವನವೂ ಒಂದು ದೊಡ್ಡ ಕರ್ಮವೆ. ವಾಸ್ತವವಾಗಿ ಪ್ರಕೃತಿಶಕ್ತಿಯ ನಿರಂತರವ್ಯಾಪಾರಗಳಲ್ಲಿ ಇದೆ ಹೆಚ್ಚು ಮುಖ್ಯವಾದುದು. ಸ್ಥೂಲದೇಹದ ಕರ್ಮಗಳಿಗೆ ಮನಸ್ಸಿನ ವ್ಯಾಪಾರಗಳೆ ಕಾರಣವೂ ನಿಯಾಮಕವೂ ಆಗಿವೆ. ನಮ್ಮ ಬಂಧನಕ್ಕೆ ಇಂದ್ರಿಯಭೋಗ್ಯವಾದ ವಿಷಯಗಳು

ನಿಮಿತ್ತ ಮಾತ್ರ; ಅವುಗಳನ್ನು ಪಡೆಯಬೇಕೆಂಬ ಮನಸ್ಸಿನ ಹಠವೆ ನಮ್ಮ ಬಂಧನದ ನಿಜವಾದ ಕಾರಣ. ಮನುಷ್ಯನು ತನ್ನ ಕರ್ಮೇಂದ್ರಿಯಗಳನ್ನು ನಿಗ್ರಹಿಸಿ ಅವುಗಳಿಗೆ ಸಹಜವಾದ ವ್ಯಾಪಾರಗಳನ್ನು ತಡೆಗಟ್ಟಬಹುದು. ಆದರೆ ಅವನ ಮನಸ್ಸು ವಿಷಯಗಳನ್ನು ಚಿಂತಿಸುತ್ತಲೆ ಇದ್ದರೆ, ಅವನಿಗೆ ಈ ಇಂದ್ರಿಯನಿಗ್ರಹ ದಿಂದ ಹೆಚ್ಚು ಪ್ರಯೋಜನವಾಗುವುದಿಲ್ಲ. ಇಂತಹ ಮನುಷ್ಯನು ಸಂಯಮದ ವಿಷಯದಲ್ಲಿ ತಪ್ಪು ತಿಳಿವಳಿಕೆಯನ್ನು ಹೊಂದಿ ಭ್ರಾಂತನಾಗಿದ್ದಾನೆ. ಅವನು ಸಂಯಮದ ಉದ್ದೇಶವನ್ನಾಗಲಿ, ತತ್ತ್ವವನ್ನಾಗಲಿ ಅರಿತಿಲ್ಲ. ತನ್ನ ಮನಸ್ಸಿನ ಸ್ವರೂಪವಾಗಿಯೂ ಅವನಿಗೆ ಯಾವ ತಿಳಿವಳಿಕೆಯೂ ಇಲ್ಲ. ಆದುದರಿಂದ ಅವನು ಅನುಸರಿಸುತ್ತಿರುವ ಸಾಧನೆಯ ಕ್ರಮವು ತಪ್ಪು ಮತ್ತು ನಿರರ್ಥಕ. ದೇಹದ ಕ್ರಿಯೆ ಗಳಾಗಲಿ, ಮನಸ್ಸಿನ ವ್ಯಾಪಾರಗಳಾಗಲಿ, ಸ್ವರೂಪತಃ ಬಂಧನವೂ ಅಲ್ಲ; ಬಂಧನಕ್ಕೆ ಕಾರಣವೂ ಅಲ್ಲ. ಮುಖ್ಯವಾದುದು ಯಾವುದೆಂದರೆ ಪ್ರಕೃತಿಯ ಅಪಾರವಾದ ಶಕ್ತಿ. ಮನಸ್ಸು, ಜೀವನ ಮತ್ತು ದೇಹಗಳೆಂಬ ಕ್ಷೇತ್ರಗಳಲ್ಲಿ ಈ ಶಕ್ತಿಯು ತನ್ನ ವ್ಯಾಪಾರ ಗಳನ್ನು ನಡೆಸಿಯೆ ನಡೆಸುತ್ತದೆ. ಇದರಲ್ಲಿರುವ ಅಪಾಯವೇನೆಂದರೆ, ಈ ಪ್ರಕೃತಿಯ ಮೂರು ಗುಣಗಳು ನಮ್ಮ ಬುದ್ಧಿಗೆ ಭ್ರಾಂತಿಯನ್ನುಂಟುಮಾಡಿ, ಅದನ್ನು ಮೋಹ ಗೊಳಿಸಿ, ಆತ್ಮನನ್ನು ಮರೆಮಾಡುತ್ತವೆ. ಗೀತೆಯಲ್ಲಿ ಮುಂದೆ ಹೇಳುವಂತೆ ಕರ್ಮ ಮತ್ತು ಮುಕ್ತಿಯ ಸಮನ್ವಯವು ಇದೇಯೆ. ಪ್ರಕೃತಿಯ ಗುಣಗಳಿಂದ ಭ್ರಾಂತನಾಗ ಕೂಡದು. ಆತ್ಮನು ಮರೆಯಾಗಲು ಅವಕಾಶಕೊಡಕೂಡದು. ಪ್ರಕೃತಿವ್ಯಾಪಾರವು ನಡೆಯುತ್ತಿರಬಹುದು; ನಡೆಯುತ್ತಲೆ ಇರಬೇಕು. ಇದು ಮಹತ್ತಾದ, ಅತಿ ಪರಿಣಾಮಕಾರಿಯಾದ, ಗುರುತರವಾದ ಅಥವಾ ಘೋರವಾದ ಕರ್ಮವೆ ಆಗಿದ್ದರೂ ಬಾಧಕವಿಲ್ಲ. ಏತಕ್ಕೆಂದರೆ ಈಗ ಪುರುಷನಿಗೆ ಯಾವುದೂ ತಟ್ಟುವುದಿಲ್ಲ; ಪುರುಷನು ನೈಷ್ಕರ್ಮ್ಯಸ್ಥಿತಿಯಲ್ಲಿದ್ದಾನೆ.

ಸದ್ಯದಲ್ಲಿ ಗೀತೆಯು ಈ ವಿಚಾರವಾಗಿ ಹೆಚ್ಚು ಹೇಳುವುದಿಲ್ಲ. ಬಂಧನಕ್ಕೆ ಮನಸ್ಸೆ ಮುಖ್ಯ ಕಾರಣವಾದುದರಿಂದಲೂ, ಕರ್ಮವನ್ನು ಮಾಡದೆ ಇರುವುದು ಅಸಾಧ್ಯವಾದುದರಿಂದಲೂ, ಯುಕ್ತಿಯುಕ್ತವಾದ, ಅವಶ್ಯಕವಾದ ಮತ್ತು ಸರಿಯಾದ ಮಾರ್ಗವೇನೆಂದರೆ, ಶರೀರವನ್ನೂ ಮನಸ್ಸನ್ನೂ ನಮ್ಮ ವಶದಲ್ಲಿಟ್ಟುಕೊಂಡು ಕರ್ಮ ಮಾಡುವುದು. ಮನಸ್ಸು ಬುದ್ಧಿಗೆ ಸಾಧಕವಾಗಿ ವರ್ತಿಸುತ್ತ, ಇಂದ್ರಿಯಗಳನ್ನು ತನಗೆ ಅಧೀನಪಡಿಸಿಕೊಳ್ಳಬೇಕು; ಕರ್ಮೇಂದ್ರಿಯಗಳು ತಮ್ಮ ತಮ್ಮ ಕಾರ್ಯ ಗಳನ್ನು ಮಾಡಬೇಕು—ಆದರೆ ಯೋಗಯುಕ್ತವಾಗಿ ಮಾಡಬೇಕು. ಆತ್ಮನಿಗ್ರಹ

ವೆಂದರೇನು ? ಯೋಗಯುಕ್ತವಾಗಿ ಕರ್ಮವನ್ನು ಮಾಡುವುದೆಂದರೇನು ? ಸಂಗವಿಲ್ಲದೆ ಇರುವುದು ; ಕರ್ಮಗಳನ್ನು ಮಾಡುತ್ತಿದ್ದರೂ ಮನಸ್ಸು ಇಂದ್ರಿಯವಿಷಯಗಳಿಗೂ, ಕರ್ಮಫಲಕ್ಕೂ ಅಂಟಿಕೊಳ್ಳದೆ ಇರುವುದು. ಮುಕ್ತಸ್ಥಿತಿಯ ರಹಸ್ಯವೇನೆಂದರೆ, ರಾಗದ್ವೇಷಗಳಿಗೆ ಒಳಗಾಗದೆ, ಫಲಾಪೇಕ್ಷೆಯಿಲ್ಲದೆ, ಸಂಗವಿಲ್ಲದೆ, ಸಂಪೂರ್ಣ ಸ್ವಾತಂತ್ರ್ಯದಿಂದ ಕರ್ಮಮಾಡುವುದು ; ಯಾವ ಕರ್ಮವನ್ನೂ ಮಾಡದೆ ಸುಮ್ಮನೆ ಇರುವುದಲ್ಲ. ಹಾಗೆ ಏನನ್ನೂ ಮಾಡದೆ ಸುಮ್ಮನೆ ಇರಬೇಕೆಂಬುದು ತಪ್ಪು ; ತಪ್ಪು ತಿಳಿವಳಿಕೆ, ಭ್ರಾಂತಿ ಮತ್ತು ಅಸಾಧ್ಯ. "ನೀನು ನಿಯತನಾಗಿ ಕರ್ಮವನ್ನು ಮಾಡು." ಜ್ಞಾನವೂ ಬುದ್ಧಿಯೂ ಕರ್ಮಕ್ಕಿಂತ ಮೇಲೆಂದು ಹೇಳಿದೆ. ಆದರೆ ಕರ್ಮವನ್ನು ಮಾಡದೆ ಇರುವುದು ಕರ್ಮವನ್ನು ಮಾಡುವುದಕ್ಕಿಂತ ಮೇಲೆಂದು ಹೇಳಲಿಲ್ಲ. ವಾಸ್ತವವಾಗಿ ಕರ್ಮವನ್ನು ಮಾಡುವುದೆ, ಮಾಡದೆ ಇರುವುದಕ್ಕಿಂತ ಉತ್ತಮ.

ಬುದ್ಧಿಯೋಗವೆಂದರೆ ಕರ್ಮಸನ್ಯಾಸವಲ್ಲ ; ಸಮತ್ವದಿಂದಿರುವುದು ಮತ್ತು ಇಂದ್ರಿಯ ವಿಷಯಗಳಿಗೂ, ಆಸೆಗಳಿಗೂ ಅಂಟಿಕೊಳ್ಳದೆ ಇರುವುದು ಎಂದು ಅದರ ಅರ್ಥ. ಬುದ್ಧಿಯೋಗವೆಂದರೆ ಕೀಳ್ಮಟ್ಟದ ಪ್ರಕೃತಿವ್ಯಾಪಾರಗಳಿಗೆ ಸಿಕ್ಕದೆ, ಸ್ವತಂತ್ರವಾಗಿಯೂ ಮೇಲ್ಮಟ್ಟದಲ್ಲಿಯೂ ಬುದ್ಧಿಯನ್ನು ಇಟ್ಟುಕೊಂಡು ಆತ್ಮನಲ್ಲಿ ನಿಲ್ಲಿಸುವುದು ; ಮತ್ತು ಆತ್ಮಜ್ಞಾನದ ಪ್ರಭಾವದಿಂದಲೂ, ಆತ್ಮಸಾಕ್ಷಾತ್ಕಾರದ ಶುದ್ಧವಾದ ಮತ್ತು ನಿರ್ವಿಷಯವಾದ ಆನಂದದಿಂದಲೂ, ದೇಹ, ಇಂದ್ರಿಯಗಳು ಮತ್ತು ಮನಸ್ಸಿನ ವ್ಯಾಪಾರಗಳನ್ನು ನಿಯಂತ್ರಿಸುವುದು. ಬುದ್ಧಿಯೋಗವು ಕರ್ಮಯೋಗದಿಂದ ಪೂರ್ಣತೆಯನ್ನು ಹೊಂದುತ್ತದೆ. ನಿಷ್ಕಾಮ ಕರ್ಮಯೋಗದಿಂದ ಬಂಧನದಿಂದ ಬಿಡುಗಡೆ ಮಾಡುವ ಬುದ್ಧಿಯೋಗದ ಸಂಪೂರ್ಣವಾದ ಅರ್ಥವು ತಿಳಿಯುವುದು. ಈ ರೀತಿಯಾಗಿ ಗೀತೆಯು ನಿಷ್ಕಾಮಕರ್ಮದ ಅವಶ್ಯಕತೆಯನ್ನು ತನ್ನ ಉಪದೇಶದ ತಳಹದಿಯನ್ನಾಗಿ ಮಾಡಿಕೊಂಡು, ಸಾಂಖ್ಯದ ಸಾಧನಕ್ರಮವನ್ನು ಯೋಗದ ಸಾಧನಕ್ರಮದೊಂದಿಗೆ ಸಮನ್ವಯಮಾಡಿದೆ.

ಆದರೂ ಸಹ ಒಂದು ಮುಖ್ಯವಾದ ಸಮಸ್ಯೆಗೆ ಇನ್ನೂ ಪರಿಹಾರ ಹೇಳದೆ ಉಳಿದಿದೆ. ಮನುಷ್ಯನು ಮಾಡುವ ಎಲ್ಲ ಕಾರ್ಯಗಳನ್ನೂ ಆಸೆಯೆ ಪ್ರಚೋದಿಸುತ್ತದೆ. ಪುರುಷನು ಆಶಾರಹಿತನಾಗಿದ್ದರೆ ಕರ್ಮಮಾಡಲು ಕಾರಣವೆ ಇಲ್ಲವಲ್ಲ? ದೇಹಭರಣೆ ಮಾಡಲು ಕೆಲವು ಆವಶ್ಯಕವಾದ ಕರ್ಮಗಳನ್ನು ಪುರುಷನು ಮಾಡಬೇಕಾಗಬಹುದು. ಆದರೆ ಇದಕ್ಕೂ ಸಹ ದೇಹದ ಆಸೆಯೆ ಕಾರಣ. ಮೋಕ್ಷವನ್ನು

ಪಡೆಯಲು ನಾವು ಈ ಆಸೆಯನ್ನೂ ಬಿಡಬೇಕು. ಇದು ಅಸಾಧ್ಯವೆಂದು ಒಪ್ಪಿಕೊಂಡರೆ ಉಳಿಯುವ ಮಾರ್ಗವು ಒಂದೆ. ಕರ್ಮಗಳನ್ನು ಮಾಡಲು ನಮಗೆ ಬಾಹ್ಯವಾಗಿರುವ ಒಂದು ವಿಧಿಯನ್ನು ಅನುಸರಿಸುವುದು. ಎಂದರೆ ನಮ್ಮ ಸ್ವಂತ ಇಚ್ಛೆಯ ಪ್ರೇರಣೆಯಿಂದಲ್ಲ; ವೇದವಿಹಿತವಾದ ನಿತ್ಯಕರ್ಮಗಳನ್ನು ಮಾಡುವುದು. ನಿತ್ಯಕರ್ಮಗಳನ್ನೂ, ಧರ್ಮವನ್ನೂ ಮತ್ತು ಆಚಾರಗಳನ್ನೂ ಅನುಸರಿಸುವ ಮುಮುಕ್ಷುವು ಶಾಸ್ತ್ರೋಕ್ತವಾಗಿದೆಯೆಂಬ ಕಾರಣದಿಂದ ಈ ರೀತಿ ವರ್ತಿಸುತ್ತಾನೆಯೆ ಹೊರತು ಸ್ವಾರ್ಥದೃಷ್ಟಿಯಿಂದಲೂ, ಸ್ವಂತಹಿತಕ್ಕಾಗಿಯೂ ಅಲ್ಲ. ಪೂರ್ಣವಾದ ಅನಾಸಕ್ತಿಯಿಂದ ಮಾಡುತ್ತಾನೆ; ತನ್ನ ಸ್ವಭಾವದಿಂದ ಬದ್ಧನಾಗಲ್ಲ. ಹಾಗಲ್ಲದೆ, ಬಾಹ್ಯವಾದ ವಿಧಿಯನ್ನು ಅನುಸರಿಸದೆ, ತನ್ನ ಸ್ವಭಾವದಿಂದಲೆ ಪ್ರೇರಿತನಾಗಿ, ಸ್ವಭಾವನಿಯತನಾಗಿ, ಕರ್ಮವನ್ನು ಮಾಡಬೇಕಾದರೆ, ಮುಕ್ತನಾದ ಮುನಿಯೂ ಕೂಡ ತನ್ನ ಸ್ವಭಾವಕ್ಕನುಸಾರವಾಗಿಯೆ ಕರ್ಮವನ್ನು ಮಾಡಬೇಕಾದರೆ, ಆಗ ಕರ್ಮವನ್ನು ಪ್ರಚೋದಿಸುವ ಏಕೈಕ ಕಾರಣವು ಆಸೆಯೆ ಆಗುತ್ತದೆ. ಈ ಆಸೆಯು ಸ್ಥೂಲದೇಹದ್ದಾಗಿರಬಹುದು; ಅಥವಾ ಹೃದಯದ ಆಸೆಯಾಗಿರಬಹುದು; ಇಲ್ಲವೆ ಮನಸ್ಸಿನ ಉದಾತ್ತವಾದ ಅಥವಾ ನೀಚವಾದ ಸಂಕಲ್ಪವಾಗಿರಬಹುದು. ಹೇಗಾದರೂ ಈ ಕರ್ಮಗಳೆಲ್ಲವೂ ಪ್ರಕೃತಿಯ ಗುಣಗಳಿಗೆ ಒಳಪಟ್ಟಿವೆ. ಆದ್ದರಿಂದ ಗೀತೆಯಲ್ಲಿ ಹೇಳಿರುವ ನಿಯತಕರ್ಮವು ವೇದದಲ್ಲಿ ಹೇಳಿರುವ ನಿತ್ಯಕರ್ಮವೆಂದು ಅರ್ಥಮಾಡೋಣವೆ? ಎಂದರೆ, ಆರ್ಯರ ಧರ್ಮಕ್ಕನುಸಾರವಾಗಿ ಮಾಡಬೇಕಾದ ಕರ್ಮವೆಂದು ತಿಳಿಯೋಣವೆ? ಹಾಗೆಯೆ ಯಜ್ಞದಂತೆ ಕರ್ಮವನ್ನು ಮಾಡಬೇಕು ಎಂಬ ಗೀತೆಯಮಾತಿಗೆ ವೇದೋಕ್ತವಾದ ಯಜ್ಞಗಳನ್ನು ಮಾಡಬೇಕು ಎಂದೂ, ಈ ವಿಧ್ಯುಕ್ತಧರ್ಮವನ್ನು ಆಸಕ್ತಿಯಿಲ್ಲದೆಯೂ ಸ್ವಾರ್ಥದೃಷ್ಟಿಯಿಲ್ಲದೆಯೂ ಮಾಡಬೇಕೆಂದೂ ಅರ್ಥಮಾಡೋಣವೆ? ನಿಷ್ಕಾಮಕರ್ಮವನ್ನು ಮಾಡಬೇಕೆಂಬ ಗೀತೆಯ ಉಪದೇಶಕ್ಕೆ ಈ ರೀತಿ ಅರ್ಥಮಾಡುವುದೆ ವಾಡಿಕೆಯಾಗಿದೆ. ಆದರೆ ಗೀತೆಯ ಉಪದೇಶವು ಇಷ್ಟು ಸಂಕುಚಿತವಾಗಿ—ಎಂದರೆ ಯಾವುದೊ ಒಂದು ದೇಶ, ಒಂದು ಕಾಲ, ಒಂದು ಸನ್ನಿವೇಶಗಳಿಗೆ ಮಾತ್ರ ಅನ್ವಯಿಸುವುದೆಂದು ತೋರುವುದಿಲ್ಲ. ಗೀತೆಯ ಉಪದೇಶವು ವ್ಯಾಪಕವಾಗಿದೆ; ಸ್ವತಂತ್ರವಾಗಿದೆ; ನಿರಪೇಕ್ಷವಾಗಿದೆ; ಸೂಕ್ಷ್ಮವೂ, ಗಂಭೀರವೂ ಆಗಿದೆ; ಅದು ಎಲ್ಲ ಕಾಲಕ್ಕೂ ಅನ್ವಯಿಸುವುದು; ಎಲ್ಲ ಜನರಿಗೂ ಅನ್ವಯಿಸುವುದು; ಯಾವುದೊ ಒಂದು ದೇಶ ಮತ್ತು ಒಂದುಕಾಲಕ್ಕೆ ಮಾತ್ರ ಅನ್ವಯಿಸುವಂತಹುದಲ್ಲ. ಮುಖ್ಯವಾಗಿ ಗೀತೆಯ ಉಪದೇಶವು ಬಾಹ್ಯವಾದ ಆಚರಣೆಗಳು, ವಿವರಗಳು ಮತ್ತು

ಸಂಪ್ರದಾಯಬದ್ಧವಾದ ನಂಬಿಕೆಗಳು ಇವುಗಳನ್ನೆಲ್ಲಾ ಬದಿಗೊತ್ತಿ ಆತ್ಮನ ಮತ್ತು ಪ್ರಕೃತಿಯ ಮೂಲತತ್ತ್ವಗಳಿಗೆ ಮಾತ್ರ ಗಮನಕೊಟ್ಟಿದೆ. ಗೀತೆಯು ವ್ಯಾಪಕವಾದ ಆಧ್ಯಾತ್ಮಿಕ ತತ್ತ್ವಗಳನ್ನೂ ಸಾಧನೆಯನ್ನೂ ಬೋಧಿಸುವ ಗ್ರಂಥವೆ ಹೊರತು ಸಂಕುಚಿತವಾದ ಒಂದು ಮತ, ಸಿದ್ಧಾಂತ ಅಥವಾ ಸಂಪ್ರದಾಯವನ್ನು ಹೇಳುವ ಗ್ರಂಥವಲ್ಲ.

ಇಲ್ಲಿರುವ ಸಮಸ್ಯೆ ಇದು: ನಮ್ಮ ಸ್ವಭಾವವು ಹೀಗಿರುವಾಗ, ಎಲ್ಲ ಕರ್ಮಗಳನ್ನೂ ಆಸೆಯೆ ಪ್ರೇರಿಸುವಾಗ ನಿಷ್ಕಾಮಕರ್ಮವನ್ನು ಮಾಡುವುದು ಸಾಧ್ಯವೆ? ನಿಷ್ಕಾಮಕರ್ಮವೆಂದು ತಿಳಿದು ಸಾಮಾನ್ಯವಾಗಿ ನಾವು ಮಾಡುವ ಕರ್ಮಗಳನ್ನೂ ಸಹ ನಿಜವಾಗಿಯೂ ಕಾಮಸಹಿತವಾಗಿಯೆ ಮಾಡುತ್ತೇವೆ; ಈ ಕರ್ಮಗಳಲ್ಲಿ ಸಂಕುಚಿತವಾದ, ಕ್ಷುದ್ರವಾದ, ನಮ್ಮ ಸ್ವಂತ ಹಿತಕ್ಕೆ ಸಂಬಂಧ ಪಡುವ ಆಸೆಗಳಿಗೆ ಬದಲಾಗಿ, ಹೆಚ್ಚುವ್ಯಾಪಕವಾದ, ನಿಃಸ್ವಾರ್ಥವೆಂದು ವೇಷಹಾಕಿರುವ ಇತರ ಆಸೆಗಳು ಕರ್ಮವನ್ನು ಪ್ರೇರಿಸುತ್ತವೆ— ಉದಾಹರಣೆಗೆ ಸ್ವದೇಶದ ಹಿತ, ಮಾನವವರ್ಗದ ಹಿತ ಅಥವಾ ಸದ್ಗುಣ. ಶ್ರೀಕೃಷ್ಣನು ಒತ್ತಿ ಹೇಳುವಂತೆ ಎಲ್ಲ ಕರ್ಮಗಳಿಗೂ ಪ್ರಕೃತಿಯ ಗುಣಗಳೆ, ಎಂದರೆ ನಮ್ಮ ಸ್ವಭಾವವೆ ಕಾರಣ. ಅನೇಕ ವೇಳೆ ನಾವು ಶಾಸ್ತ್ರದ ಹೆಸರಿನಲ್ಲಿ ಮಾಡುವ ಕರ್ಮಗಳಿಗೆ ನಮ್ಮ ಆಸೆಗಳು, ಪಕ್ಷಪಾತ, ರಾಗ, ಅಹಂಕಾರ, ನಮ್ಮ ವ್ಯಕ್ತಿ ಜನಾಂಗ ಮತ್ತು ದೇಶಕ್ಕೆ ಸಂಬಂಧಿಸಿದ ದಂಭ ಭಾವನೆಗಳು ಮತ್ತು ಇಷ್ಟಗಳು ನಿಜವಾದ ಕಾರಣವಾಗಿರುತ್ತವೆ. ಒಂದು ವೇಳೆ ಹಾಗಿಲ್ಲದೆ ಶಾಸ್ತ್ರವಿಧಿಗಾಗಿಯೆ ಕರ್ಮವನ್ನು ಮಾಡಿದರೂ, ನಿಜವಾಗಿ ಆಗಲೂ ನಮ್ಮ ಸ್ವಭಾವವೆ ಕರ್ಮವನ್ನು ಮಾಡುತ್ತದೆ. ಅತ್ಯಂತ ಉದಾತ್ತವಾದ, ಶುದ್ಧವಾದ ಕಾರಣದಿಂದ ಮಾಡುವಾಗಲೂ ನಮ್ಮ ಸ್ವಭಾವಕ್ಕೆ ಅನುಗುಣವಾಗಿಯೆ ಕರ್ಮವನ್ನು ಮಾಡುತ್ತೇವೆ. ನಮ್ಮ ಸ್ವಭಾವವು ಬೇರೆ ರೀತಿಯಿದ್ದರೆ, ಎಂದರೆ ನಮ್ಮ ಬುದ್ಧಿ ಮತ್ತು ಮನಸ್ಸಿನ ಮೇಲೆ ಪ್ರಕೃತಿಯ ಗುಣಗಳು ಬೀರುವ ಪ್ರಭಾವವು ಬೇರೆ ರೀತಿಯಾಗಿದ್ದರೆ, ಆಗ ನಾವು ಶಾಸ್ತ್ರವನ್ನು ಒಪ್ಪದೆ, ಸ್ವೇಚ್ಛೆಯಿಂದ ನಮ್ಮ ಮನಸ್ಸು ಬಂದಂತೆ ಜೀವಿಸುತ್ತಿದ್ದೆವೊ ಏನೊ! ಅಥವಾ ಸಮಾಜವನ್ನು ತೊರೆದು, ಏಕಾಂಗಿಯಾಗಿ ಮುನಿಯಂತೆ ಜೀವಿಸುತ್ತಿದ್ದೆವೊ ಏನೊ! ಬಾಹ್ಯವಾದ ಒಂದು ವಿಧಿಯನ್ನು ಅನುಸರಿಸುವ ಮಾತ್ರದಿಂದ, ನಾವು ನಮ್ಮ ಅಹಂತಾ ಅಥವಾ ವ್ಯಕ್ತಿತ್ವಕ್ಕೆ ಅತೀತರಾದಂತಾಗುವುದಿಲ್ಲ. ಹಾಗಾಗಬೇಕಾದರೆ ನಾವು ನಮ್ಮಲ್ಲಿ ಅತ್ಯಂತ ಗೂಢವಾಗಿರುವ ಆತ್ಮನಲ್ಲಿ ಒಂದಾಗಬೇಕು. ಈ ಆತ್ಮನು ಒಂದೆ;

ಎಲ್ಲರಲ್ಲಿಯೂ ಇದ್ದಾನೆ; ಆದುದರಿಂದ ಇವನಲ್ಲಿ ಅಹಂತಾ ಅಥವಾ ವ್ಯಕ್ತಿತ್ವದ ನೆರಳೂ ಕೂಡ ಇರುವುದಿಲ್ಲ. ಈ ಆತ್ಮನು ವಿಶ್ವವನ್ನೆಲ್ಲ ವ್ಯಾಪಿಸಿ ಅದಕ್ಕೂ ಅತೀತ ನಾಗಿದ್ದಾನೆ. ಆದುದರಿಂದ ವಿಶ್ವದ ವ್ಯಾಪಾರದಿಂದಾಗಲಿ, ನಮ್ಮ ಕರ್ಮದಿಂದಾಗಲಿ ಬದ್ಧನಾಗಿಲ್ಲ. ಗೀತೆಯ ಉಪದೇಶವು ಇದೇಯೆ.

ಆಸೆಯನ್ನು ಬಿಡಬೇಕಾಗಿರುವುದು ಇದನ್ನು ಸಾಧಿಸಲು ಒಂದು ಸಾಧನವೆ ಹೊರತು ಅದೆ ಒಂದು ಗುರಿಯಲ್ಲ. ಆದರೆ ಇದನ್ನು ಸಾಧಿಸುವುದು ಹೇಗೆ? ಎಲ್ಲ ಕೆಲಸಗಳನ್ನೂ ಯಜ್ಞಾರ್ಥವಾಗಿ ಮಾಡುವುದರಿಂದ—ಎಂದು ಇದಕ್ಕೆ ಶ್ರೀಕೃಷ್ಣನ ಉತ್ತರ. "ಯಜ್ಞಾರ್ಥವಾಗಿ ಅಲ್ಲದೆ ಬೇರೆ ರೀತಿಯಲ್ಲಿ ಮಾಡುವ ಕರ್ಮಗಳಿಂದ ಲೋಕವು ಬದ್ಧವಾಗುತ್ತದೆ. ಆದುದರಿಂದ, ಎಲೈ ಅರ್ಜುನನೆ, ಯಜ್ಞಾರ್ಥವಾಗಿ ಕರ್ಮಗಳನ್ನು ಮಾಡಿ, ಸಂಗದಿಂದ ಬಿಡುಗಡೆ ಹೊಂದು." ವೇದೋಕ್ತವಾದ ಪೂಜೆ, ಸಮಾಜ ಸೇವೆಗಳಲ್ಲದೆ ಎಲ್ಲ ಕರ್ಮಗಳನ್ನೂ ಯಜ್ಞದಂತೆ ಮಾಡಬಹುದೆಂಬುದು ಸ್ಪಷ್ಟ. ಎಲ್ಲ ಕೆಲಸಗಳನ್ನೂ ಎರಡು ದೃಷ್ಟಿಯಿಂದ ಮಾಡಬಹುದು—ಸಂಕುಚಿತ ಅಥವಾ ವಿಶಾಲವಾದ ಸ್ವಾರ್ಥ ಭಾವನೆಯಿಂದ; ಇಲ್ಲವೆ ಈಶ್ವರಪ್ರೀತಿಗಾಗಿ. ಈ ವಿಶ್ವವೂ, ಪ್ರಕೃತಿಯ ಎಲ್ಲ ವ್ಯಾಪಾರಗಳೂ ಇರುವುದು ಈಶ್ವರನಿಗಾಗಿಯೆ. ಅವನಿಂದಲೆ ಎಲ್ಲವೂ ಹುಟ್ಟಿದೆ; ಅವನಿಂದಲೆ ಬದುಕಿದೆ; ಮತ್ತು ಅವನ ಕಡೆಗೆ ಸಾಗುತ್ತಿದೆ. ಎಲ್ಲಿಯವರೆಗೆ ನಾವು ಅಹಂಕಾರಕ್ಕೆ ವಶವಾಗಿರುತ್ತೇವೆಯೊ ಅಲ್ಲಿಯವರೆಗೆ ನಾವು ಈ ತತ್ತ್ವವನ್ನು ತಿಳಿದು ಅದರಂತೆ ನಡೆಯುವುದಿಲ್ಲ. **ನಮ್ಮ** ತೃಪ್ತಿಗಾಗಿಯೂ ಮತ್ತು **ನಮ್ಮ** ದೃಷ್ಟಿಯಿಂದಲೂ ಕರ್ಮಗಳನ್ನು ಮಾಡುತ್ತೇವೆಯೆ ಹೊರತು ಯಜ್ಞಾರ್ಥವಾಗಲ್ಲ. ಅಹಂಕಾರವೆ ಬಂಧನದ ಗುರುತು. **ನಾನು** ಎಂಬುದನ್ನು ಮರೆತು, ಈಶ್ವರಾರ್ಥವಾಗಿ ಕೆಲಸಮಾಡುತ್ತಿದ್ದರೆ, ನಾವು ಈ ಬಂಧನವನ್ನು ಸಡಿಲಪಡಿಸಿಕೊಂಡು, ಕೊನೆಗೆ ಸ್ವತಂತ್ರರಾಗುತ್ತೇವೆ.

ಮೊಟ್ಟಮೊದಲು ಗೀತೆಯು ವೇದದಲ್ಲಿ ಹೇಳಿರುವ ಯಜ್ಞದ ವಿಷಯವನ್ನು ಪ್ರಸ್ತಾಪಿಸಿ, ಆಗಿನ ಕಾಲದ ಮಾತುಗಳಲ್ಲಿ ಯಜ್ಞದ ತತ್ವವನ್ನು ನಿರೂಪಿಸುತ್ತದೆ. ಹೀಗೆ ಮಾಡಲು ಒಂದು ಉದ್ದೇಶವಿದೆ. "ಕರ್ಮವನ್ನು ಮಾಡಬೇಕು" ಮತ್ತು "ಕರ್ಮವನ್ನು ಬಿಡಬೇಕು" ಎಂಬ ವಿಷಯದಲ್ಲಿನ ವಿರೋಧವು ಎರಡು ವಿಧವಾಗಿದೆ. ಒಂದು ಸಾಂಖ್ಯ ಮತ್ತು ಯೋಗಗಳಲ್ಲಿರುವುದು—ಇದನ್ನು ಸೂಕ್ಷ್ಮವಾಗಿ ಸಮನ್ವಯ ಮಾಡಲಾಗಿದೆ. ಎರಡನೆಯದು ವೇದ ಮತ್ತು ವೇದಾಂತಗಳಲ್ಲಿರುವ ವಿರೋಧ—ಇದನ್ನೂ ಶ್ರೀಕೃಷ್ಣನು ಸಮನ್ವಯ ಮಾಡಬೇಕಾಗಿದೆ. ಸಾಂಖ್ಯಕ್ಕೂ

ಯೋಗಕ್ಕೂ ಇರುವ ವಿರೋಧವು ಹೆಚ್ಚುಪ್ರಬಲವಾದುದು. ಕರ್ಮ ಎಂಬ ಪದಕ್ಕೂ ಕೂಡ ಅರ್ಥವು ಹೆಚ್ಚು ವ್ಯಾಪಕವಾಗಿದೆ. ಪುರುಷನು ಅಕ್ಷರನು ತಟಸ್ಥನು ಎಂಬುದನ್ನು ಸಾಂಖ್ಯವು ಮೊದಲು ನಿರೂಪಿಸುತ್ತದೆ. ಎಲ್ಲರೂ ಈ ಪುರುಷನೆ ಆಗಿರುವುದರಿಂದ ಪುರುಷನ ತಾಟಸ್ಥ್ಯಕ್ಕೂ ಪ್ರಕೃತಿಯ ವ್ಯಾಪಾರಗಳಿಗೂ ಇರುವ ವಿರೋಧವನ್ನು ಒತ್ತಿ ಹೇಳುತ್ತದೆ. ಆದುದರಿಂದ ಸಾಂಖ್ಯ ಸಿದ್ಧಾಂತದ ಪ್ರಕಾರ ಕರ್ಮರಾಹಿತ್ಯವೆ ಅಂತಿಮ ಲಕ್ಷ್ಯ. ಯೋಗವಾದರೊ ಈಶ್ವರನು ಪ್ರಕೃತಿವ್ಯಾಪಾರಗಳಿಗೆ ಒಡೆಯನೆಂದೂ, ಆದುದರಿಂದ ಅವುಗಳಿಗೆ ಅತೀತನೆಂದೂ ಹೇಳುತ್ತದೆ. ಆದುದರಿಂದ ಈ ಸಿದ್ಧಾಂತದ ಪ್ರಕಾರ ಕರ್ಮರಾಹಿತ್ಯವು ಲಕ್ಷ್ಯವಲ್ಲ. ನಾವು ಕರ್ಮಗಳನ್ನು ಮಾಡಿದರೂ ಅವುಗಳಿಂದ ಬದ್ಧರಾಗದೆ ಅತೀತರಾಗಿರುವುದೆ ಇದರ ಗುರಿ. ವೇದ ಮತ್ತು ವೇದಾಂತಗಳ ನಡುವೆ ಇರುವ ವಿವಾದದಲ್ಲಿ ವೇದದ ಪ್ರಕಾರ ಕರ್ಮವೆಂದರೆ ವೇದವಿಹಿತವಾದ ಯಜ್ಞ, ಪೂಜಾದಿ ಕಾರ್ಯಗಳು. ಉಳಿದ ಎಲ್ಲ ಕರ್ಮಗಳನ್ನೂ ಮೋಕ್ಷಸಾಧನಗಳಲ್ಲವೆಂದು ಉಪೇಕ್ಷಿಸಿದೆ. ವೈದಿಕರಾದ ಮೀಮಾಂಸಕರ ಪ್ರಕಾರ ವೇದೋಕ್ತವಾದ ಈ ಯಜ್ಞಾದಿಕರ್ಮಗಳು ಅತ್ಯವಶ್ಯಕವಾದ ಸಾಧನಗಳು. ಉಪನಿಷತ್ತುಗಳೆ ಆಧಾರವಾಗಿರುವ ವೇದಾಂತವಾದರೊ, ಪ್ರಾರಂಭದಲ್ಲಿ ಅವಿದ್ಯಾವಸ್ಥೆಯಲ್ಲಿರುವ ಜೀವಿಗಳಿಗೆ ಮಾತ್ರ ಈ ಕರ್ಮಗಳು ಅವಶ್ಯಕವೆಂದೂ, ಈ ಅವಸ್ಥೆಯನ್ನು ದಾಟಿದ ಮೇಲೆ ಕರ್ಮಗಳು ಮುಕ್ತಿಗೆ ಪ್ರತಿಬಂಧಕವೆಂದೂ, ಅವುಗಳನ್ನು ತ್ಯಜಿಸಿ ಅವುಗಳಿಗೆ ಅತೀತರಾಗಬೇಕೆಂದೂ ಹೇಳುತ್ತದೆ. ವೈದಿಕರು ಯಜ್ಞಗಳಿಂದ ದೇವತೆಗಳನ್ನು ಪೂಜಿಸಿ ಮೋಕ್ಷವನ್ನು ಪಡೆಯಲು ಅವರು ಸಹಾಯ ಮಾಡುವರೆಂದು ನಂಬಿದ್ದರು. ವೇದಾಂತಿಗಳಾದರೋ ದೇವತೆಗಳು ಮನಸ್ಸಿನ ಮತ್ತು ಈ ಪ್ರಪಂಚದ ಶಕ್ತಿಗಳೆಂದೂ, ನಮ್ಮ ಮೋಕ್ಷಕ್ಕೆ ಅಡ್ಡಿಯಾಗುವರೆಂದೂ ತಿಳಿದಿದ್ದರು. ("ಮನುಷ್ಯರು ದೇವತೆಗಳ ಪಶುಗಳು; ಮನುಷ್ಯರು ಜ್ಞಾನವನ್ನು ಹೊಂದಿ ಮೋಕ್ಷವನ್ನು ಪಡೆಯುವುದು ದೇವತೆಗಳಿಗೆ ಇಷ್ಟವಿಲ್ಲ" ಎಂದು ಉಪನಿಷತ್ತಿನಲ್ಲಿ ಹೇಳಿದೆ) ಪರವಸ್ತುವು ಅಕ್ಷರನಾದ ಬ್ರಹ್ಮವೆಂದೂ, ಅದನ್ನು ಜ್ಞಾನದಿಂದ ಸಾಧಿಸಬೇಕೆ ಹೊರತು ಪೂಜೆ,ಯಜ್ಞಗಳಿಂದ ಸಾಧ್ಯವಿಲ್ಲವೆಂದೂ ವೇದಾಂತಿಗಳ ಅಭಿಪ್ರಾಯ. ಇವರ ಪ್ರಕಾರ ಕರ್ಮಗಳು ಕೇವಲ ವಿಷಯಸುಖವನ್ನೂ, ನಿಕೃಷ್ಟವಾದ ಸ್ವರ್ಗಸುಖವನ್ನೂ ಕೊಡುತ್ತವೆ. ಆದುದರಿಂದ ಅವುಗಳನ್ನು ತ್ಯಾಗಮಾಡಬೇಕು.

ಈ ವಿರೋಧವನ್ನು ಗೀತೆಯು ಹೀಗೆ ಪರಿಹರಿಸುತ್ತದೆ—ದೇವತೆಗಳೆಲ್ಲರೂ ದೇವಾಧಿದೇವನಾದ ಈಶ್ವರನ ರೂಪಗಳು. ಈ ಈಶ್ವರನು ಎಲ್ಲಯಜ್ಞಗಳ, ಯೋಗದ

ಮತ್ತು ತಪಸ್ಸಿನ ಒಡೆಯ. ದೇವತೆಗಳಿಗಾಗಿ ಮಾಡಲ್ಪಟ್ಟ ಕರ್ಮಗಳು ಐಹಿಕ ಸುಖವನ್ನೂ, ಸ್ವರ್ಗಸುಖವನ್ನು ಕೊಡುವುದು ನಿಜವಾದಲ್ಲಿ, ದೇವಾಧಿದೇವನಾದ ಈಶ್ವರನಿಗೆ ಅರ್ಪಿಸಲ್ಪಟ್ಟ ಯಜ್ಞವು ಸ್ವರ್ಗಸುಖಕ್ಕೆ ಮೀರಿದ ಮುಕ್ತಿಯನ್ನು ಕೊಡುತ್ತದೆ. ಈಶ್ವರನೂ ಪರಬ್ರಹ್ಮವೂ ಬೇರೆ ಬೇರೆಯಲ್ಲ; ಒಂದೆ. ಇದರಲ್ಲಿ ಯಾವ ಒಂದನ್ನು ಮನುಷ್ಯನು ಉಪಾಸಿಸಿದರೂ ಏಕನಾದ ಪರಬ್ರಹ್ಮವನ್ನೆ ಉಪಾಸಿಸುತ್ತಾನೆ. ಎಲ್ಲ ಕರ್ಮಗಳೂ ಜ್ಞಾನದಲ್ಲೆ ಸಮಾಪ್ತಿ ಹೊಂದುತ್ತವೆ. ಬ್ರಹ್ಮಜ್ಞಾನವನ್ನು ಪಡೆಯಲು ಕರ್ಮಗಳು ಅಡ್ಡಿಗಳಲ್ಲ; ಸಾಧನಗಳು. ಈ ರೀತಿಯಲ್ಲಿ ಈ ವಿರೋಧವನ್ನು ಕೂಡ ಗೀತೆಯು ಯಜ್ಞ ಎಂಬ ಶಬ್ದಕ್ಕೆ ವ್ಯಾಪಕವಾದ ಅರ್ಥವನ್ನು ಕೊಟ್ಟು ಪರಿಹಾರ ಮಾಡಿದೆ. ವೈದಿಕರಿಗೂ ವೇದಾಂತಿಗಳಿಗೂ ಇರುವ ಈ ವಿರೋಧವು ವಾಸ್ತವವಾಗಿ ಸಾಂಖ್ಯ ಮತ್ತು ಯೋಗಗಳಿಗೆ ಇರುವ ವಿರೋಧದ ಒಂದು ಅಂಶ ಮಾತ್ರ.

ವೈದಿಕಮತವನ್ನು ಯೋಗದರ್ಶನದ ಒಂದು ವಿಶಿಷ್ಟವಾದ ಭಾಗವೆಂದು ಹೇಳಬಹುದು. ವೇದಾಂತಿಗಳ ಮೂಲತತ್ತ್ವವೂ ಸಾಂಖ್ಯದ ಮೂಲತತ್ತ್ವವೂ ಒಂದೆ ಎಂದು ಹೇಳಬಹುದು. ಇವೆರಡರ ಪ್ರಕಾರವೂ ಮೋಕ್ಷವೆಂದರೆ ಪ್ರಕೃತಿಯ ನಾನಾತ್ವದಿಂದಲೂ, ಅಹಂತೆಯಿಂದಲೂ, ಮತ್ತು ಇಂದ್ರಿಯಗಳಿಂದಲೂ ಮತ್ತು ಅವುಗಳ ವಿಷಯಗಳಿಂದಲೂ ಬುದ್ಧಿಯು ವಿಮುಖವಾಗಿ, ನಾನಾತ್ವವಿಲ್ಲದ ಮತ್ತು ಏಕವಾದ ಅಕ್ಷರವಸ್ತುವಿಗೆ ಹಿಂತಿರುಗುವುದು. ಮೇಲೆ ಹೇಳಿದ ವಿರೋಧವನ್ನು ಪರಿಹರಿಸುವ ಉದ್ದೇಶದಿಂದಲೆ, ಶ್ರೀಕೃಷ್ಣನು ಮೊದಲು ಯಜ್ಞದ ತತ್ತ್ವವನ್ನು ಪ್ರತಿಪಾದಿಸುತ್ತಾನೆ. ಮೊದಲಿನಿಂದ ಕೊನೆಯವರೆಗೂ, "ಯಜ್ಞ" ಮತ್ತು "ಕರ್ಮ" ಎಂಬ ಪದಗಳಿಗೆ ವೇದದಲ್ಲಿರುವಂತೆ ಸಂಕುಚಿತವಾದ ಅರ್ಥವನ್ನು ಕೊಡದೆ, ವ್ಯಾಪಕವಾದ ಅರ್ಥವನ್ನು ಕೊಟ್ಟಿದ್ದಾನೆ.

ಈರೀತಿಯಾಗಿ ಪದಗಳಿಗೆ ಸಂಪ್ರದಾಯಬದ್ಧವಾದ ಅರ್ಥದ ಬದಲು, ವ್ಯಾಪಕವಾದ ಮತ್ತು ಎಲ್ಲ ದೇಶ ಕಾಲಗಳಿಗೂ ಅನ್ವಯಿಸುವ ಅರ್ಥವನ್ನು ಕೊಡುವುದೇ ಗೀತೆಯ ಪದ್ಧತಿ.



# ಹನ್ನೆರಡನೆಯ ಪ್ರಕರಣ

## ಯಜ್ಞದ ರಹಸ್ಯ

ಯಜ್ಞದ ವಿಷಯವಾಗಿ ಗೀತೆಯ ಸಿದ್ಧಾಂತವನ್ನು ಎರಡುಕಡೆ ಹೇಳಿದೆ—ಮೂರನೆಯ ಮತ್ತು ನಾಲ್ಕನೆಯ ಅಧ್ಯಾಯಗಳಲ್ಲಿ. ಯಜ್ಞವೆಂದರೆ ವೇದವಿಹಿತವಾದ ಕರ್ಮವೆಂದು ಅರ್ಥಬರುವಂತೆ ಮೂರನೆಯ ಅಧ್ಯಾಯದಲ್ಲಿ ನಿರೂಪಿಸಿದೆ. ನಾಲ್ಕನೆಯ ಅಧ್ಯಾಯದಲ್ಲಾದರೊ ಯಜ್ಞವೆಂಬ ಪದವನ್ನು ವ್ಯಾಪಕವಾದ ತತ್ತ್ವದ ಪ್ರತೀಕವನ್ನಾಗಿ ಮಾಡಿ, ಅದರ ಅರ್ಥವನ್ನು ಮಾರ್ಪಡಿಸಿ, ಅದನ್ನು ಒಂದು ಶ್ರೇಷ್ಠವಾದ ಮಾನಸಿಕ ಮತ್ತು ಆಧ್ಯಾತ್ಮಿಕತತ್ತ್ವವನ್ನಾಗಿ ಮಾಡಿದೆ.

“ ಪೂರ್ವದಲ್ಲಿ ಬ್ರಹ್ಮನು ಪ್ರಜೆಗಳನ್ನು ಯಜ್ಞಸಹಿತವಾಗಿ ಸೃಷ್ಟಿಸಿ, ಅವರಿಗೆ ಹೀಗೆ ಹೇಳಿದನು : ‘ಇದರಿಂದಲೆ ನೀವು ಪ್ರಜಾಭಿವೃದ್ಧಿಯನ್ನು ಮಾಡಿಕೊಳ್ಳ ತಕ್ಕದ್ದು; ಇದು ನಿಮಗೆ ಬೇಕಾದ ವಸ್ತುಗಳನ್ನು (ಹಸುವು ಹಾಲನ್ನು ಕೊಡುವಂತೆ) ಕೊಡತಕ್ಕದ್ದಾಗಲಿ. ಇದರಿಂದ ನೀವು ದೇವತೆಗಳನ್ನು ಪೋಷಿಸಿ; ದೇವತೆಗಳು ನಿಮ್ಮನ್ನು ಪೋಷಿಸಲಿ ; ಒಬ್ಬರನ್ನೊಬ್ಬರು ಪೋಷಿಸುತ್ತಾ ನೀವು ಅತಿಶಯವಾದ ಶ್ರೇಯಸ್ಸನ್ನು ಹೊಂದುವರಾಗಿ.’ ಯಜ್ಞದಿಂದ ತೃಪ್ತಿಪಟ್ಟ ದೇವತೆಗಳು ಮನುಷ್ಯರಿಗೆ ಇಷ್ಟಾರ್ಥಗಳನ್ನು ಕೊಡುತ್ತಾರೆ. ಅವರಿಂದ ಕೊಡಲ್ಪಟ್ಟಂತಹುದನ್ನು ಅವರಿಗೆ ಕೊಡದೆ ಅನುಭವಿಸತಕ್ಕ ಮನುಷ್ಯನು ಕಳ್ಳನೆ ಸರಿ. ಯಜ್ಞಶೇಷವನ್ನು ಊಟಮಾಡುವ ಸತ್ಪುರುಷರು ಸಮಸ್ತ ಪಾಪಗಳಿಂದಲೂ ಬಿಡುಗಡೆ ಹೊಂದುತ್ತಾರೆ ; ತಮಗೋಸ್ಕರವಾಗಿಯೆ ಅಡುಗೆಮಾಡಿಕೊಂಡು ತಿನ್ನುವ ಪಾಪಾತ್ಮರು ಪಾಪವನ್ನೆ ತಿನ್ನುತ್ತಾರೆ. ಪ್ರಾಣಿಗಳು ಅನ್ನದಿಂದ ಉತ್ಪನ್ನವಾಗುತ್ತವೆ. ಅನ್ನವು ಮಳೆಯಿಂದ ಉಂಟಾಗುತ್ತದೆ. ಮಳೆಯು ಯಜ್ಞದಿಂದ ಉಂಟಾಗುತ್ತದೆ. ಯಜ್ಞವು (ನಿಷ್ಕಾಮ) ಕರ್ಮದಿಂದುಂಟಾಗುತ್ತದೆ. ಕರ್ಮವನ್ನು ಬ್ರಹ್ಮದಿಂದಲೂ, ಬ್ರಹ್ಮವನ್ನು ಅಕ್ಷರದಿಂದಲೂ ಹುಟ್ಟಿದುದನ್ನಾಗಿ ತಿಳಿ. ಆದುದರಿಂದ ಎಲ್ಲವನ್ನೂ ವ್ಯಾಪಿಸಿರುವ ಬ್ರಹ್ಮವು ಯಾವಾಗಲೂ ಯಜ್ಞದಲ್ಲಿ ಸ್ಥಾಪಿಸಲ್ಪಟ್ಟಿದೆ. ಯಾವ ಮನುಷ್ಯನು ಈ ಪ್ರಕಾರ ಸುತ್ತುತ್ತಿರುವ ಚಕ್ರವನ್ನು ಸುತ್ತಿಸದೆ ಸುಮ್ಮನೆ ಇರುವನೊ, ಅವನು ಪಾಪಜೀವಿ ಮತ್ತು ಇಂದ್ರಿಯಲಂಪಟ. ಅವನ ಜೀವಿತವು ವ್ಯರ್ಥ.” (ಗೀತೆ III, 10 ರಿಂದ 16)

ಈ ರೀತಿಯಾಗಿ ಯಜ್ಞದ ಅವಶ್ಯಕತೆಯನ್ನು ಶ್ರೀಕೃಷ್ಣನು ಹೇಳಿದ್ದಾನೆ. ಮೊದಲನೋಟಕ್ಕೆ ಇದು ಸಾಂಪ್ರದಾಯಿಕವಾದ ವೈದಿಕಕರ್ಮಗಳ ಸಿದ್ಧಾಂತವನ್ನೂ, ಅವುಗಳ ಅವಶ್ಯಕತೆಯನ್ನೂ ಪ್ರತಿಪಾದಿಸುವಂತೆ ತೋರುತ್ತದೆ. ಇದನ್ನು ಯಾವ ರೀತಿ ಅರ್ಥಮಾಡಬೇಕೆಂಬುದನ್ನು ಮುಂದೆ ಪರಿಶೀಲಿಸೋಣ. ಇದನ್ನು ಹೇಳಿದ ಮೇಲೆ, ಶ್ರೀಕೃಷ್ಣನೆ ಮುಂದಿನ ಶ್ಲೋಕದಲ್ಲಿ ಆತ್ಮಜ್ಞಾನಿಯು ಯಜ್ಞಕರ್ಮವನ್ನು ಮಾಡುವವನಿಗಿಂತ ಶ್ರೇಷ್ಠನೆಂದು ಹೇಳಿದ್ದಾನೆ. "ಯಾವ ಮನುಷ್ಯನು ಆತ್ಮನಲ್ಲಿಯೆ ಆನಂದಿಸುತ್ತ, ಆತ್ಮದಲ್ಲಿಯೆ ತೃಪ್ತಿಗೊಂಡು, ಆತ್ಮನಲ್ಲಿಯೆ ಸಂತುಷ್ಟನಾಗಿರುವನೊ ಅವನು ಏನನ್ನೂ ಮಾಡಬೇಕಾದುದಿಲ್ಲ. ಇಂತಹವನು ಕರ್ಮವನ್ನು ಮಾಡಲಿ ಅಥವಾ ಬಿಡಲಿ; ಯಾವುದರಲ್ಲಿಯೂ ಯಾವ ಪ್ರಯೋಜನವೂ ಇಲ್ಲ. ಮತ್ತು ಇವನು ಯಾವುದೊಂದು ಪ್ರಯೋಜನಕ್ಕೂ ಯಾವ ಪ್ರಾಣಿಯನ್ನೂ, ಆಶ್ರಯಿಸಬೇಕಾಗಿಲ್ಲ." (ಗೀತೆ III, 17–18)

ಈ ರೀತಿಯಲ್ಲಿ ವೈದಿಕರಿಗೂ ವೇದಾಂತಿಗಳಿಗೂ ಇರುವ ಬೇರೆ ಬೇರೆಯೂ ಮತ್ತು ಪರಸ್ಪರ ವಿರುದ್ಧವೂ ಆದ ಅಭಿಪ್ರಾಯಗಳನ್ನು ಗೀತೆಯು ಸ್ಪಷ್ಟವಾಗಿ ನಿರೂಪಿಸಿದೆ. ವೈದಿಕರ ಅಭಿಪ್ರಾಯದ ಪ್ರಕಾರ ಯಜ್ಞಗಳನ್ನು ಮಾಡುವುದರಿಂದಲೂ, ಮನುಷ್ಯರ ಮತ್ತು ದೇವತೆಗಳ ಪರಸ್ಪರ ಸಹಕಾರದಿಂದಲೂ, ಬದುಕಿರುವಷ್ಟು ಕಾಲ ಇಲ್ಲಿ ಭೋಗವನ್ನೂ, ಅನಂತರ ಪರಲೋಕಗಳಲ್ಲಿ ಅತ್ಯಂತ ಸುಖವನ್ನೂ ಹೊಂದಬಹುದು. ವೇದಾಂತಿಗಳ ಪ್ರಕಾರ ಮುಕ್ತನಾದವನ ಗುರಿ ಪರಬ್ರಹ್ಮನ ಶಾಂತಿಯಲ್ಲಿ ನಿವಸಿಸುವುದು ಮತ್ತು ಬ್ರಹ್ಮಾನಂದವನ್ನು ಅನುಭವಿಸುವುದು. ಇವನು ಇಹಲೋಕದ ಭೋಗಗಳನ್ನಾಗಲಿ ಪರಲೋಕಗಳ ಸುಖವನ್ನಾಗಲಿ ಅಪೇಕ್ಷಿಸುವುದಿಲ್ಲ; ಕರ್ಮಗಳಿಗೆ ಅಂಟಿಕೊಳ್ಳದೆ ತಟಸ್ಥನಾಗಿಯೂ ಸ್ವತಂತ್ರನಾಗಿಯೂ ಇರುತ್ತಾನೆ. ಮುಂದಿನ ಶ್ಲೋಕಗಳು ಈ ಎರಡು ವಿರುದ್ಧಾಭಿಪ್ರಾಯಗಳ ಸಮನ್ವಯಕ್ಕೆ ಪೂರ್ವಸಿದ್ಧತೆಯನ್ನು ಮಾಡುತ್ತವೆ. ಇಲ್ಲಿ ಮುಖ್ಯ ತತ್ತ್ವವೇನೆಂದರೆ ಪರತತ್ವದ ಕಡೆಗೆ ಮುಖವನ್ನು ತಿರುಗಿಸಿರುವವನಿಗೆ ಕರ್ಮವನ್ನು ಮಾಡದೆ ಇರುವುದು ಸಾಧನವಲ್ಲ; ಗುರಿಯನ್ನು ಮುಟ್ಟುವ ಮೊದಲೂ, ಮುಟ್ಟಿದ ನಂತರವೂ ಕೂಡ, ನಿಷ್ಕಾಮಕರ್ಮವನ್ನು ಮಾಡಬಹುದು. ಮುಕ್ತನಾದವನಿಗೆ ಕರ್ಮವನ್ನು ಮಾಡುವುದರಿಂದ ಏನೂ ಲಾಭವಿಲ್ಲ; ಮಾಡದೆ ಇರುವುದರಿಂದಲೂ ಏನೂ ಲಾಭವಿಲ್ಲ. ಈ ಎರಡರಲ್ಲಿ ಯಾವ ಒಂದು ಮಾರ್ಗವನ್ನೂ ಅವನು ಸ್ವಾರ್ಥಕ್ಕಾಗಿ ಅನುಸರಿಸಬೇಕಾಗಿಲ್ಲ. "ಆದುದರಿಂದ ಯಾವಾಗಲೂ ಮಾಡಬೇಕಾದ

(ಎಂದರೆ ಲೋಕಸಂಗ್ರಹಕ್ಕಾಗಿ ಮಾಡಬೇಕಾದ) ಕರ್ಮವನ್ನು ಸಂಗವಿಲ್ಲದೆ ಚೆನ್ನಾಗಿ ಮಾಡು. ಸಂಗವಿಲ್ಲದೆ ಕೆಲಸಗಳನ್ನು ಮಾಡುವವನು ಪರವಸ್ತುವನ್ನು ಹೊಂದುತ್ತಾನೆ. ಜನಕನೆ ಮೊದಲಾದವರು ಕೆಲಸದಿಂದಲೆ ಸಿದ್ಧಿಯನ್ನು ಹೊಂದಿದರು." (ಗೀತೆ : III. 19, 20)

ಕರ್ಮಗಳೂ, ಯಜ್ಞವೂ ಪರಮಶ್ರೇಯಸ್ಸಿಗೆ ಸಾಧನವೆಂಬುದು ನಿಜ. ಆದರೆ ಕರ್ಮಗಳು ಮೂರು ವಿಧವಾಗಿವೆ. (1) ತನ್ನ ಸುಖಕ್ಕಾಗಿ ಮಾತ್ರ, ಯಜ್ಞಾರ್ಥವಾಗಿ ಅಲ್ಲದೆ ಮಾಡಲ್ಪಟ್ಟದ್ದು. ಇದು ಕೇವಲ ಸ್ವಾರ್ಥದಿಂದಲೂ, ಅಹಂಭಾವದಿಂದಲೂ ಕೂಡಿದೆ. ಇದು ಜೀವನದ ಗುರಿಗೂ ಧರ್ಮಕ್ಕೂ ಅನುಸಾರ ವಾಗಿಲ್ಲ. (2) ಫಲಾಪೇಕ್ಷೆಯಿದ್ದರೂ ಯಜ್ಞಾರ್ಥವಾಗಿ ಮಾಡಲ್ಪಟ್ಟು ತನ್ಮೂಲಕ ಭೋಗವನ್ನು ಪಡೆಯಲು ಮಾಡಲ್ಪಡುವ ಕರ್ಮ; ಆದುದರಿಂದ ಕೊಂಚಮಟ್ಟಿಗೆ ಇದು ಶುದ್ಧವಾದುದು ಮತ್ತು ಅರ್ಪಿತವಾದುದು. (3) ಯಾವ ವಿಧವಾದ ಆಸೆಯೂ, ಸಂಗವೂ ಇಲ್ಲದೆ ಮಾಡಲ್ಪಟ್ಟ ಕರ್ಮ. ಇದೇಯೆ ಮನುಷ್ಯನಿಗೆ ಪರಮ ಶ್ರೇಯಸ್ಸನ್ನು ಕೊಡತಕ್ಕದ್ದು.

ಗೀತೆಯ ಈ ವಾಕ್ಯಗಳ ಸರಣಿಯನ್ನೂ, ನಿಷ್ಕೃಷ್ಟವಾದ ಅರ್ಥವನ್ನೂ ತಿಳಿಯಬೇಕಾದರೆ, ಮೊದಲು ಕರ್ಮ, ಯಜ್ಞ ಮತ್ತು ಬ್ರಹ್ಮ ಎಂಬ ಪದಗಳ ಸರಿಯಾದ ಅರ್ಥವನ್ನು ಗೊತ್ತುಮಾಡಬೇಕು. ಯಜ್ಞವೆಂದರೆ ವೇದೋಕ್ತವಾದ ಯಜ್ಞವೆಂದೂ, ಕರ್ಮವೆಂದರೆ ವೈದಿಕಕರ್ಮವೆಂದೂ ಮತ್ತು ಬ್ರಹ್ಮ ಎಂದರೆ ಶಬ್ದಬ್ರಹ್ಮ—ಎಂದರೆ ವೇದಾಕ್ಷರವೆಂದೂ ಅರ್ಥಮಾಡಿದರೆ, ಆಗ ವೈದಿಕರ ಸಿದ್ಧಾಂತವನ್ನು ನಾವು ಒಪ್ಪಬೇಕು. ಯಾವ ಆಕ್ಷೇಪಣೆಯನ್ನೂ ಮಾಡಲಾಗುವುದಿಲ್ಲ. ಅವರ ಸಿದ್ಧಾಂತದ ಪ್ರಕಾರ ಸಂತಾನ, ಸಂಪತ್ತು ಮತ್ತು ಭೋಗಗಳನ್ನು ಪಡೆಯಲು ವೈದಿಕಯಜ್ಞವು ಸರಿಯಾದ ಸಾಧನ. ಯಜ್ಞದಿಂದ ಮಳೆಯುಂಟಾಗಿ, ಜನಾಂಗದ ಏಳಿಗೆಯೂ ಬೆಳವಳಿಕೆಯೂ ಖಂಡಿತವಾಗಿ ಮುಂದುವರಿಯುತ್ತವೆ. ಜೀವನ ವೆಂದರೆ ಮನುಷ್ಯರಿಗೂ ದೇವತೆಗಳಿಗೂ ಯಾವಾಗಲೂ ನಡೆಯುವ ವ್ಯವಹಾರ. ದೇವತೆಗಳಿ ಕೊಟ್ಟಿರುವ ವಸ್ತುಗಳ ಸ್ವಲ್ಪ ಭಾಗವನ್ನು ಮನುಷ್ಯನು ಅವರಿಗೆ ಯಜ್ಞ ರೂಪವಾಗಿ ಅರ್ಪಿಸುತ್ತಾನೆ. ಅದರಿಂದ ಅವನಿಗೆ ಸಂಪತ್ತು, ಕ್ಷೇಮ, ಅಭಿವೃದ್ಧಿ ಇವೆ ಲ್ಲವೂ ಉಂಟಾಗುತ್ತವೆ. ಆದುದರಿಂದ ಮನುಷ್ಯನು ಮಾಡುವ ಎಲ್ಲ ಕರ್ಮಗಳೂ ವೈದಿಕಯಜ್ಞಗಳ ಮತ್ತು ಪೂಜಾಕರ್ಮಗಳ ರೂಪದಲ್ಲಿರಬೇಕು. ಹೀಗೆ ಅರ್ಪಿತ ವಾಗದೆ ಮಾಡಲ್ಪಟ್ಟ ಕರ್ಮವು ನಿಂದ್ಯವಾದುದು; ಯಜ್ಞ ಮತ್ತು ಪೂಜೆಗಳನ್ನು

ಮಾಡದೆಯೆ ಭೋಗವನ್ನು ಅನುಭವಿಸುವುದು ಪಾಪ. ಮೋಕ್ಷವೂ, ಪರಮ ಶ್ರೇಯಸ್ಸೂ ಸಹ, ಯಜ್ಞದಿಂದಲೆ ದೊರಕುತ್ತವೆ. ಯಜ್ಞಮಾಡುವುದನ್ನು ಯಾವಾಗಲೂ ಬಿಡಕೂಡದು. ಮುಮುಕ್ಷುವೂ ಕೂಡ ಯಜ್ಞಕರ್ಮಗಳನ್ನು ಮಾಡುತ್ತಲೆ ಇರಬೇಕು—ಆದರೆ ಸಂಗವಿಲ್ಲದೆ ಮಾಡಬೇಕು. ಈ ರೀತಿ ಸಂಗವಿಲ್ಲದೆ ಯಜ್ಞ ಮತ್ತು ಪೂಜಾಕರ್ಮಗಳನ್ನು ಮಾಡಿದ್ದರಿಂದಲೆ ಜನಕನಂತಹ ಮನುಷ್ಯರು ಮೋಕ್ಷವನ್ನು ಪಡೆದರು. ಇದು ವೈದಿಕರ ಸಿದ್ಧಾಂತ.

ಗೀತೆಯ ಅರ್ಥವು ಈ ರೀತಿ ಇರಲಾರದೆಂಬುದು ಸ್ಪಷ್ಟ; ಏತಕ್ಕೆಂದರೆ, ಗೀತೆಯ ಉಳಿದ ಭಾಗಗಳಲ್ಲಿರುವ ಉಪದೇಶವು ಇದಕ್ಕೆ ವಿರೋಧವಾಗಿದೆ. ನಾಲ್ಕನೆಯ ಅಧ್ಯಾಯದಲ್ಲಿ ಕೊಟ್ಟಿರುವ ವಿವರಣೆ ಹಾಗಿರಲಿ; ಈ ಸಂದರ್ಭದಲ್ಲಿಯೆ ಕೂಡ, ವ್ಯಾಪಕವಾದ ಅರ್ಥವನ್ನು ಮಾಡುವುದಕ್ಕೆ ಸೂಚನೆ ಇದೆ. "ಯಜ್ಞವು ಕರ್ಮದಿಂದ (ಎಂದರೆ ನಿಷ್ಕಾಮಕರ್ಮದಿಂದ) ಉಂಟಾಗುತ್ತದೆ. ಕರ್ಮವು ಬ್ರಹ್ಮ (ಅಥವಾ ವೇದದಿಂದ) ದಿಂದ ಹುಟ್ಟಿದೆಯೆಂದೂ, ಬ್ರಹ್ಮವು ಅಕ್ಷರದಿಂದ ಹುಟ್ಟಿದೆ ಯೆಂದೂ ತಿಳಿ. ಆದುದರಿಂದ ಎಲ್ಲವನ್ನೂ ವ್ಯಾಪಿಸಿರುವ ಬ್ರಹ್ಮವು ಯಜ್ಞದಲ್ಲಿ ಪ್ರತಿಷ್ಠಿತವಾಗಿದೆ" (ಗೀತೆ III, ೧೪, ೧೫). ಇಲ್ಲಿ ಪ್ರಯೋಗಿಸಿರುವ "ಆದುದರಿಂದ" ಎಂಬ ಪದವನ್ನೂ, 'ಬ್ರಹ್ಮ' ಎಂಬುದನ್ನು ಎರಡುಬಾರಿ ಉಪಯೋಗಿಸಿರುವುದನ್ನೂ ನಾವು ಗಮನಿಸಬೇಕು. ಕರ್ಮಗಳಿಗೆ ಉತ್ಪತ್ತಿಸ್ಥಾನವಾದ ಬ್ರಹ್ಮವು ವೈದಿಕರು ತಿಳಿದಿರುವಂತೆ ವೇದರೂಪವಾದ ಬ್ರಹ್ಮವಲ್ಲ. ಈ ಬ್ರಹ್ಮವು ಸೃಷ್ಟಿಯಲ್ಲೆಲ್ಲ ಮತ್ತು ಪ್ರಕೃತಿವ್ಯಾಪಾರಗಳಲ್ಲೆಲ್ಲ ವ್ಯಾಪಿಸಿರುವ ಸರ್ವವ್ಯಾಪಿಯಾದ ಮತ್ತು ಶಾಶ್ವತವಾದ ಬ್ರಹ್ಮ ಎಂಬುದು ಇದರಿಂದ ಸ್ಪಷ್ಟವಾಗುತ್ತದೆ. ವೇದವೆಂದರೆ ಶಾಶ್ವತನಾದ ಬ್ರಹ್ಮನ ವಿಷಯವಾದ ಜ್ಞಾನ. ಶ್ರೀಕೃಷ್ಣನು ಮುಂದಿನ ಒಂದು ಅಧ್ಯಾಯದಲ್ಲಿ "ಎಲ್ಲ ವೇದ ಗಳಿಂದಲೂ ತಿಳಿಯಲ್ಪಡುವವನು ನಾನೆ" ಎಂದು ಹೇಳಿದ್ದಾನೆ. ವೇದದ ಜ್ಞಾನವು ಪ್ರಕೃತಿಯ ಕ್ರಿಯೆಗಳಲ್ಲಿಯೂ ತ್ರಿಗುಣಗಳ ವ್ಯಾಪಾರಗಳಲ್ಲಿಯೂ ವ್ಯಕ್ತವಾಗುವ ಬ್ರಹ್ಮನ ವಿಷಯವಾದ ಜ್ಞಾನ.(ತ್ರೈಗುಣ್ಯ ವಿಷಯಾ ವೇದಾಃ)ಪ್ರಕೃತಿವ್ಯಾಪಾರಗಳಲ್ಲಿ ವ್ಯಕ್ತವಾಗುವ ಈ ಬ್ರಹ್ಮನು ಅಕ್ಷರವೂ, ಅವ್ಯಯವೂ ಮತ್ತು ಪ್ರಕೃತಿವ್ಯಾಪಾರ ಗಳಿಗೂ ತ್ರಿಗುಣಗಳಿಗೂ ಅತೀತವೂ ಆದ ಬ್ರಹ್ಮದಿಂದ ಉತ್ಪನ್ನವಾಗಿದೆಯೆಂದು ತಿಳಿಯಬಹುದು. ಬ್ರಹ್ಮವು ಒಂದೆ ಆಗಿದ್ದರೂ ಎರಡು ವಿಧದಲ್ಲಿ ವ್ಯಕ್ತವಾಗುತ್ತದೆ. ಒಂದು ಅಕ್ಷರ; ಇನ್ನೊಂದು ಸೃಷ್ಟಿಕರ್ತ. ಇದು ಕ್ಷರವಾದ ಪ್ರಪಂಚದಲ್ಲಿ ಕರ್ಮಗಳ ಕಾರಣಕರ್ತ; ತನ್ನಲ್ಲೆ ಸಮಸ್ಥಿತಿಯಲ್ಲಿರುವ ಪುರುಷನ ಮತ್ತು ಪ್ರಕೃತಿಯ ವ್ಯಾಪಾರ

ಗಳಲ್ಲಿ ಮಗ್ನನಾದ ಪುರುಷ. ಈ ಎರಡು ವಿಧಗಳಲ್ಲಿಯೂ ಪುರುಷೋತ್ತಮನು ವ್ಯಕ್ತನಾಗುತ್ತಾನೆ. ಒಂದನೆಯದು ಅಕ್ಷರರೂಪ–ಇದರಲ್ಲಿ ಅವನು ನಿರ್ವಿಕಾರನು ಮತ್ತು ಸಮತ್ವವುಳ್ಳವನು. ಈ ಅಕ್ಷರನಿಂದಲೆ ಪ್ರಕೃತಿ ಮತ್ತು ಅದರ ವ್ಯಾಪಾರಗಳಲ್ಲಿ ವ್ಯಕ್ತವಾಗುವ ಸಗುಣಬ್ರಹ್ಮರೂಪವು ಉಂಟಾಗುತ್ತದೆ. ಪ್ರಕೃತಿಸ್ಥನಾದ ಈ ಸಗುಣ ಬ್ರಹ್ಮನಿಂದ ಮನುಷ್ಯನಲ್ಲಿಯೂ ಎಲ್ಲ ಭೂತಗಳಲ್ಲಿಯೂ ಇರುವ ಎಲ್ಲ ಕರ್ಮಗಳೂ ಉಂಟಾಗುತ್ತವೆ. ಈ ಕರ್ಮದಿಂದಲೆ ಯಜ್ಞತತ್ವವು ಹುಟ್ಟುತ್ತದೆ. ದೇವತೆಗಳಿಗೂ ಮನುಷ್ಯರಿಗೂ ನಡುವೆ ಆಗುವ ಭೌತ ಪದಾರ್ಥಗಳ ವಿನಿಮಯವೂ ಈ ತತ್ವವನ್ನೆ ಅವಲಂಬಿಸಿದೆ. ಮಳೆಯೂ ಮತ್ತು ಅದರಿಂದ ಉಂಟಾಗುವ ಅನ್ನವೂ, ಅದರಿಂದ ಜೀವಿಗಳ ಹುಟ್ಟುವಿಕೆಯೂ ಈ ವಿನಿಮಯದಿಂದಲೆ ಉಂಟಾಗುತ್ತವೆ. ಪ್ರಕೃತಿ ವ್ಯಾಪಾರಗಳೆಲ್ಲವೂ ಒಂದು ದೃಷ್ಟಿಯಿಂದ ಯಜ್ಞವೇಯೆ ; ಎಲ್ಲ ತಪಸ್ಸುಗಳ, ಕರ್ಮಗಳ ಮತ್ತು ಯಜ್ಞಗಳ ಭೋಕ್ತೃವು ಸರ್ವಭೂತಮಹೇಶ್ವರನಾದ ಈಶ್ವರನೆ. ಸರ್ವವ್ಯಾಪಿಯೂ, ಯಜ್ಞದಲ್ಲಿ ಪ್ರತಿಷ್ಠಿತನೂ ಆದ ಇವನನ್ನು ಅರಿಯುವುದೆ ವೇದದ ನಿಜವಾದ ಜ್ಞಾನ.

ಆದರೆ ಇವನನ್ನು ಸ್ವಲ್ಪ ಕೆಳಗಿನ ಮಟ್ಟದಲ್ಲಿಯೂ ತಿಳಿಯಬಹುದು ; ದೇವತೆಗಳ ಮೂಲಕ ಮತ್ತು ಪ್ರಕೃತಿಯ ಮೂಲಕ ವ್ಯಕ್ತನಾಗುವ ಇವನ ಶಕ್ತಿಗಳಿಂದಲೂ, ಈ ಶಕ್ತಿಗಳು ಮನುಷ್ಯನ ಮೇಲೆ ಮತ್ತು, ಮನುಷ್ಯನು ಈ ಶಕ್ತಿಗಳ ಮೇಲೆ ಬೀರುವ ಪ್ರಭಾವದಿಂದಲೂ ತಿಳಿಯಬಹುದು – ಎಂದರೆ, ದೇವತೆಗಳೂ ಮನುಷ್ಯರೂ ಪರಸ್ಪರ ಕೊಡುವುದು, ತೆಗೆದುಕೊಳ್ಳುವುದು, ಪರಸ್ಪರ ಸಹಕರಿಸಿ ಒಬ್ಬರೊಬ್ಬರ ಯೋಗಕ್ಷೇಮವನ್ನು ಹೆಚ್ಚಿಸುವುದು; ಈ ವಿನಿಮಯದಿಂದ ಮನುಷ್ಯನು ಪರಮಶ್ರೇಯಸ್ಸನ್ನು ಹೊಂದಲು ಯೋಗ್ಯನಾಗುತ್ತಾನೆ. ತನ್ನ ಜೀವನವು ಪ್ರಕೃತಿಯಲ್ಲಿ ಈಶ್ವರನ ವ್ಯಾಪಾರದ ಒಂದು ಅಂಶವೆಂದೂ, ಅದನ್ನೆ ಪ್ರತ್ಯೇಕವೆಂದು ತಿಳಿದು ನಡೆಯಬಾರದೆಂದೂ ತಿಳಿದುಕೊಳ್ಳುತ್ತಾನೆ. ತಾನು ಅನುಭವಿಸುವ ಭೋಗಗಳು ತಾನು ಮಾಡಿದ ಯಜ್ಞಗಳ ಫಲವೆಂದೂ, ಇವುಗಳನ್ನು ಈಶ್ವರನಿಯಮಕ್ಕನುಸಾರವಾಗಿ ಕೆಲಸಮಾಡುವ ದೇವತೆಗಳು ಅನುಗ್ರಹಿಸಿರುವರೆಂದೂ ತಿಳಿಯುತ್ತಾನೆ. ಜೀವನದಲ್ಲಿ ಭೋಗಗಳನ್ನು ತನ್ನ ಸ್ವಂತಕ್ಕಾಗಿ, ಸ್ವಶಕ್ತಿಯಿಂದ, ಯಾವ ಪ್ರತಿಫಲವನ್ನು ಕೊಡದೆ, ಕೃತಜ್ಞತಾ ಬುದ್ಧಿಯಿಲ್ಲದೆ, ಸ್ವಾರ್ಥಪೂರಿತವಾದ ಪಾಪಬುದ್ಧಿಯಿಂದ ಆಶಿಸಿ ಪಡೆಯಲು ಪ್ರಯತ್ನಿಸುವುದನ್ನು ಬಿಡುತ್ತಾನೆ. ಈ ಭಾವನೆಯು ಅವನಲ್ಲಿ ಬೆಳೆದ ಹಾಗೆ, ಅವನು ಆಸೆಗಳನ್ನು ಹಿಡಿತದಲ್ಲಿಟ್ಟುಕೊಳ್ಳುತ್ತಾನೆ. ಯಜ್ಞವು ಜೀವನದ ಮತ್ತು ಕರ್ಮಗಳ ನಿಯಮವೆಂದು ದೃಢವಾಗಿ ಕಂಡುಕೊಳ್ಳುತ್ತಾನೆ.

ಯಜ್ಞದ ಶೇಷದಿಂದಲೆ ತೃಪ್ತನಾಗಿ ಉಳಿದುದೆಲ್ಲವೂ ತನ್ನ ಜೀವನಯಾತ್ರೆಗೂ ಪ್ರಪಂಚದ ಜೀವನಯಾತ್ರೆಗೂ ನಡುವೆ ಆಗುವ ವಿನಿಮಯವೆಂದು ತಿಳಿದು ಅದನ್ನು ಸಂತೋಷದಿಂದ ತ್ಯಾಗಮಾಡುತ್ತಾನೆ. ಈ ನಿಯಮಕ್ಕೆ ವಿರುದ್ಧವಾಗಿ ವರ್ತಿಸುತ್ತಾ, ಕರ್ಮಗಳನ್ನು, ಭೋಗಗಳನ್ನು ತನ್ನ ಸ್ವಂತಸುಖಕ್ಕಾಗಿ ಮಾತ್ರ ಬಯಸುವವನ ಜೀವನವು ವ್ಯರ್ಥ; ಜೀವನದ ನಿಜವಾದ ಅರ್ಥವೂ, ಉದ್ದೇಶವೂ ಮತ್ತು ಅಧ್ಯಾತ್ಮ ದಲ್ಲಿ ಮುಂದುವರಿಯುವ ಮಾರ್ಗವೂ ಅವನಿಗೆ ತಿಳಿದಿಲ್ಲ; ಪರಮಶ್ರೇಯಸ್ಸಿಗೆ ಒಯ್ಯುವ ಮಾರ್ಗವನ್ನು ಅವನು ಅನುಸರಿಸುತ್ತಿಲ್ಲ. ಈ ಪರಮಶ್ರೇಯಸ್ಸು ಕೇವಲ ದೇವತೆಗಳಿಗಾಗಿ ಯಜ್ಞ ಮಾಡುವುದರಿಂದ ಬರುವುದಿಲ್ಲ. ಆದರೆ ಆ ದೇವತೆಗಳು ಯಾವ ಯಜ್ಞಪ್ರಭುವಿನ ಅಂಶಗಳೊ ಆ ಸರ್ವವ್ಯಾಪಿಯಾದ ಭಗವಂತನಿಗೆ ಯಜ್ಞ ಮಾಡಬೇಕು. ಅಲ್ಲದೆ, ಮನುಷ್ಯನು ಆಸೆಗಳಿಗೆ ಒಳಗಾಗಿ ಭೋಗಗಳನ್ನು ಅಪೇಕ್ಷಿ ಸುವ ತನ್ನ ಮನೋವೃತ್ತಿಯನ್ನು ತ್ಯಜಿಸಬೇಕು; ಮತ್ತು ತಾನೆ ಕರ್ತೃವೆಂಬ ಭಾವನೆಯನ್ನು ಬಿಟ್ಟು ಎಲ್ಲ ವ್ಯಾಪಾರಗಳಿಗೂ ಆಶ್ರಯವಾದ ಪ್ರಕೃತಿಯೆ ಕರ್ತೃ ವೆಂಬುದನ್ನು ಮನಗಾಣಬೇಕು. ಭೋಗಿಸುವವನು ತಾನು ಎಂಬ ಭಾವನೆಯನ್ನು ಬಿಟ್ಟು ಪ್ರಕೃತಿಯ ಎಲ್ಲ ಕರ್ಮಗಳ ಫಲವನ್ನೂ ಭೋಗಿಸುವ ಸರ್ವವ್ಯಾಪಿಯಾದ ಭಗವಂತನೆ ನಿಜವಾದ ಭೋಕ್ತೃವೆಂಬುದನ್ನು ತಿಳಿದುಕೊಳ್ಳಬೇಕು. ಈ ಭಗವಂತ ನಲ್ಲಿ ಮಾತ್ರ ಅವನು ಸಂಪೂರ್ಣವಾದ ತೃಪ್ತಿ, ಸಂತೋಷ ಮತ್ತು ಆನಂದಗಳನ್ನು ಪಡೆಯುತ್ತಾನೆಯೆ ಹೊರತು ತಾನು ಸ್ವಂತವಾಗಿ ಅನುಭವಿಸುವ ಭೋಗಗಳಿಂದಲ್ಲ. ಕರ್ಮವನ್ನು ಮಾಡುವುದರಿಂದಾಗಲಿ, ಮಾಡದೆ ಇರುವುದರಿಂದಾಗಲಿ ಅವನಿಗೇನೂ ಲಾಭವಿಲ್ಲ; ದೇವತೆಗಳಿಂದಾಗಲಿ ಮನುಷ್ಯರಿಂದಾಗಲಿ ಏನನ್ನೂ ಕೋರುವುದಿಲ್ಲ; ಇವರಿಂದ ಯಾವುದನ್ನೂ ಅಪೇಕ್ಷಿಸುವುದಿಲ್ಲ; ಆತ್ಮನ ಆನಂದವೆ ಅವನಿಗೆ ಸಾಕು. ಭಗವಂತನಿಗಾಗಿ, ಯಜ್ಞಾರ್ಥವಾಗಿ ಯಾವ ಆಸೆಯೂ ಸಂಗವೂ ಇಲ್ಲದೆ, ಕರ್ಮ ಗಳನ್ನು ಮಾಡುತ್ತಾನೆ. ಹೀಗೆ ಅವನು ಸಮಸ್ಥಿತಿಯನ್ನು ಹೊಂದಿ ಪ್ರಕೃತಿಯ ತ್ರಿಗುಣಗಳಿಗೆ ಅತೀತನಾಗುತ್ತಾನೆ. ಪ್ರಕೃತಿಯಲ್ಲಿ ಕೆಲಸ ಮಾಡುತ್ತಿದ್ದರೂ, ಅವನ ಆತ್ಮವು ಕ್ಷರವಾದ ಪ್ರಕೃತಿಯಲ್ಲಿ ನೆಲೆಸದೆ ಅಕ್ಷರವಾದ ಬ್ರಹ್ಮನಲ್ಲಿ ಸದಾ ನೆಲೆಸಿರುತ್ತದೆ. ಹೀಗೆ ಅವನು ಪರಮಶ್ರೇಯಸ್ಸನ್ನು ಪಡೆಯಲು ಯಜ್ಞವು ಅವನಿಗೆ ಸಾಧನ ವಾಗಿರುತ್ತದೆ.

ಈ ಅರ್ಥವನ್ನು ಮುಂದೆ ಹೇಳುವ ಗೀತೆಯ ಮಾತುಗಳು ಸ್ಪಷ್ಟಪಡಿಸುತ್ತವೆ; ಕರ್ಮದ ಉದ್ದೇಶವು ಲೋಕಸಂಗ್ರಹ' (ಲೋಕವನ್ನೆಲ್ಲ ಒಂದಾಗಿ ಮಾಡುವುದು)

'ಕರ್ಮವನ್ನು ಮಾಡುವುದೆಲ್ಲ ಪ್ರಕೃತಿಯೆ' 'ಪ್ರಕೃತಿಯಷ್ಟೆ ಪುರುಷನೂ ಸಹ ಕರ್ಮಗಳಿಗೆ ಆಧಾರನು'; 'ಕರ್ಮಗಳನ್ನು ಮಾಡುತ್ತಿರುವಾಗಲೆ ಅವುಗಳನ್ನು ಇವನಿಗೆ ಅರ್ಪಿಸಬೇಕು'; 'ಹೀಗೆ ಅಂತರಂಗದಲ್ಲಿ ಕರ್ಮಗಳಿಗೆ ಅಂಟಿಕೊಳ್ಳದೆ ಹೊರಗಡೆ ಅವನ್ನು ಮಾಡುತ್ತಿರುವುದೆ ಯಜ್ಞದ ನಿಜವಾದ ತತ್ವ'; ಎಂದು ಹೇಳಿರುವುದಲ್ಲದೆ, 'ಹೀಗೆ ರಾಗದ್ವೇಷವಿಲ್ಲದ ಸಮತ್ವ ಬುದ್ಧಿಯಿಂದ ಯಜ್ಞವನ್ನು ಮಾಡುವುದರಿಂದ ಕರ್ಮ ಬಂಧನದಿಂದ ಬಿಡುಗಡೆಯಾಗುತ್ತದೆ' ಎಂಬುದಾಗಿ ಒತ್ತಿಹೇಳಿದೆ. "ತನಗೆ ದೊರಕಿರುವುದರಿಂದಲೆ ತೃಪ್ತನಾಗಿ, ತನ್ನ ಕೆಲಸಗಳು ಸಿದ್ಧಿಸಿದರೂ ಸಿದ್ಧಿಸದೆ ಇದ್ದರೂ ಒಂದೇರೀತಿ ಸಮತ್ವ ಬುದ್ಧಿಯುಳ್ಳವನು ಕರ್ಮಗಳನ್ನು ಮಾಡಿದರೂ ಅದರಿಂದ ಬದ್ಧನಾಗುವುದಿಲ್ಲ. ಹೀಗೆ ಸಂಗರಹಿತನಾದವನು, ಮುಕ್ತನಾದವನು ಯಜ್ಞಾರ್ಥವಾಗಿ ಕರ್ಮವನ್ನು ಮಾಡಿದರೂ, ಅವನ ಕರ್ಮಗಳು ಕರಗಿಹೋಗುತ್ತವೆ" ಎಂದರೆ, ಇದರ ಪರಿಣಾಮವಾಗಿ ಅವನು ಬಂಧಿಸಲ್ಪಡುವುದಿಲ್ಲ; ಅವನ ಸ್ವತಂತ್ರವಾದ ಶುದ್ಧವಾದ, ಪರಿಪೂರ್ಣವಾದ ಆತ್ಮದಮೇಲೆ ಇದು ಯಾವ ಪರಿಣಾಮವನ್ನೂ ಉಂಟುಮಾಡುವುದಿಲ್ಲ.

ಈ ವಾಕ್ಯಗಳನ್ನು ಪುನಃ ಮುಂದೆ ವಿಚಾರ ಮಾಡುತ್ತೇವೆ. ಇದಾದಮೇಲೆ ಬರುವ ಕೆಲವು ಶ್ಲೋಕಗಳಲ್ಲಿ "ಯಜ್ಞ" ವೆಂಬ ಪದವನ್ನು ಗೀತೆಯಲ್ಲಿ ಸಾಂಕೇತಿಕವಾದ, ಮಾನಸಿಕವಾದ ಮತ್ತು ವ್ಯಾಪಕವಾದ ಅರ್ಥದಲ್ಲಿ ಉಪಯೋಗಿಸಿದೆಯೆಂಬುದನ್ನು ಸ್ಪಷ್ಟವಾಗಿ ವಿವರಿಸಿದೆ. ಪುರಾತನವಾದ ವೈದಿಕ ಸಂಪ್ರದಾಯದಲ್ಲಿ 'ಯಜ್ಞ' ಎಂಬ ಪದವನ್ನು ಆದಿಭೌತಿಕ ಮತ್ತು ಆಧ್ಯಾತ್ಮಿಕ ಅರ್ಥಗಳಲ್ಲಿ—ಎಂದರೆ ಅಂತರ್ಯಜ್ಞ ಮತ್ತು ಬಹಿರ್ಯಾಗ ಇವೆರಡು ಅರ್ಥಗಳಲ್ಲಿಯೂ—ಉಪಯೋಗಿಸುತ್ತಿದ್ದರು. ಪುರಾತನಕಾಲದ ವೈದಿಕ ಋಷಿಗಳ ಮನಸ್ಸಿನಲ್ಲಿದ್ದ ಗೂಢಾರ್ಥವು— ಇದು ನಿಷ್ಕೃಷ್ಟವೂ ವಿಚಿತ್ರವೂ, ಕಾವ್ಯಮಯವೂ ಆಗಿತ್ತು—ಗೀತೆಯ ಕಾಲದಲ್ಲಾಗಲೆ ಜನರ ಮನಸ್ಸಿನಿಂದ ಅಳಿಸಿಹೋಗಿತ್ತು. ಇದರ ಸ್ಥಾನದಲ್ಲಿ ಆಗ ವೇದಾಂತ ಮತ್ತು ಯೋಗ, ಇವನ್ನು ಆಧಾರವಾಗಿ ಉಳ್ಳ, ವ್ಯಾಪಕವೂ ಮತ್ತು ಎಲ್ಲರಿಗೂ ಅನ್ವಯಿಸಬಹುದಾದ ಅರ್ಥವು ಬಳಕೆಗೆ ಬಂದಿತ್ತು. ಈ ಅರ್ಥದಲ್ಲಿ ಯಜ್ಞದ ಅಗ್ನಿಯೆಂದರೆ ಕಣ್ಣಿಗೆ ಕಾಣುವ ಅಗ್ನಿಯಲ್ಲ; ಬ್ರಹ್ಮಾಗ್ನಿ. ಎಂದರೆ ಬ್ರಹ್ಮಾಭಿಮುಖವಾಗಿರುವ ವೀರ್ಯ ಮತ್ತು ಹೋತೃ; ಆಂತರವಾದ ಅಗ್ನಿ; ಇದರಲ್ಲಿಯೆ ಹವಿಸ್ಸನ್ನು ಅರ್ಪಿಸುವುದು. ಈ ಬ್ರಹ್ಮಾಗ್ನಿಯು ಆತ್ಮಸಂಯಮ; ಪರಿಶುದ್ಧವಾದ ಇಂದ್ರಿಯ ವ್ಯಾಪಾರ; ರಾಜಯೋಗ ಮತ್ತು ಹಠಯೋಗಗಳಲ್ಲಿ ಹೇಳುವ ಪ್ರಾಣಾಯಾಮದಿಂದ (ನಿಯಮಬದ್ಧವಾದ ಉಸಿರಾಡುವಿಕೆ) ಉಂಟಾಗುವ ಪ್ರಾಣಶಕ್ತಿ; ಆತ್ಮಜ್ಞಾನದಿಂದ

ಜ್ವಲಿಸುವ ಅಗ್ನಿ ; ಶ್ರೇಷ್ಠವಾದ ಯಜ್ಞದ ಅಗ್ನಿ. ಯಜ್ಞದ ಶ್ರೇಷ್ಠವಾದ ಆಹಾರ ವನ್ನು ಅಮೃತವೆಂದು ಹೇಳಿದೆ. ಇಲ್ಲಿಯೂ ಪುರಾತನವಾದ ವೈದಿಕ ಸಂಪ್ರದಾಯದ ಕುರುಹು ಕಾಣಿಸಿಕೊಳ್ಳುತ್ತದೆ. ಸೋಮರಸವು ಅಮೃತದ ಪ್ರತೀಕವೆಂದು ಪರಿಗಣಿ ಸಲ್ಪಟ್ಟಿತ್ತು ; ಈ ಸೋಮರಸವನ್ನು ದೇವತೆಗಳಿಗೆ ಅರ್ಪಿಸಿ ಮನುಷ್ಯರು ಕುಡಿಯು ವುದರಿಂದ ಬ್ರಹ್ಮಾನಂದದ ಪ್ರತೀಕವಾದ ಶಾಶ್ವತ ಸುಖವನ್ನು ಪಡೆಯುತ್ತಿದ್ದರು. ಯಜ್ಞದಲ್ಲಿ ಅರ್ಪಿಸುವ ಹವಿಸ್ಸು ಮನುಷ್ಯನು ಬಾಹ್ಯವಾಗಿಯೂ ಮತ್ತು ಮಾನಸಿಕ ವಾಗಿಯೂ ಮಾಡುವ ಕರ್ಮಗಳು ; ಈ ಕರ್ಮಗಳನ್ನು ಅವನು ಬಾಹ್ಯವಾಗಿ ಅಥವಾ ಮಾನಸಿಕವಾಗಿ, ದೇವತೆಗಳಿಗಾಗಲಿ, ಈಶ್ವರನಿಗಾಗಲಿ—ಆತ್ಮನಿಗಾಗಲಿ, ವಿಶ್ವಶಕ್ತಿ ಗಳಿಗಾಗಲಿ—ತನ್ನಲ್ಲಿರುವ ಪರಮಾತ್ಮನಿಗಾಗಲಿ ಅಥವಾ ಮನುಷ್ಯಕೋಟಿಯಲ್ಲಿ ಮತ್ತು ಸರ್ವಭೂತಗಳಲ್ಲಿ ಇರುವ ಆತ್ಮನಿಗಾಗಲಿ ಅರ್ಪಿಸುತ್ತಾನೆ.

ಯಜ್ಞವೆಂಬ ಪದಕ್ಕೆ ಕೊಟ್ಟಿರುವ ಈ ವಿವರಣೆಯು ಅದರ ಅರ್ಥವು ಎಷ್ಟು ವ್ಯಾಪಕವೆಂಬುದನ್ನು ಸ್ಪಷ್ಟಪಡಿಸುತ್ತದೆ. ಯಜ್ಞವನ್ನು ಮಾಡುವುದು, ಅದರ ದ್ರವ್ಯ ಗಳು, ಅದನ್ನು ಮಾಡುವವನು, ಸ್ವೀಕರಿಸುವವನು, ಯಜ್ಞದ ಗುರಿ ಇವೆಲ್ಲವೂ ಕೂಡ ಬ್ರಹ್ಮನೆ ಎಂದು ಭಗವಂತನು ಹೇಳಿದ್ದಾನೆ. "ಹೋಮಮಾಡುವವನೂ ಬ್ರಹ್ಮ; ಅಗ್ನಿಯೂ ಬ್ರಹ್ಮ; ಹವಿಸ್ಸೂ ಬ್ರಹ್ಮ; ಅರ್ಪಿಸುವುದೂ ಬ್ರಹ್ಮನಿಗೆ; ಈ ರೀತಿಯಾಗಿ ಬ್ರಹ್ಮಕರ್ಮವನ್ನೆ ಸಮಾಧಿಯನ್ನಾಗಿ ಉಳ್ಳವನಾಗಿ ಬ್ರಹ್ಮನನ್ನೇ ಸೇರುತ್ತಾನೆ." (ಗೀತೆ : IV, 24)

ಮುಕ್ತನಾದವನು ಯಜ್ಞಕರ್ಮಗಳನ್ನು ಮಾಡುವುದು ಈ ಜ್ಞಾನದಿಂದಲೆ. ಈ ಜ್ಞಾನವನ್ನೆ ಪುರಾತನವಾದ ವೇದಾಂತದ ವಾಕ್ಯಗಳು ಈ ರೀತಿಯಾಗಿ ಹೇಳಿವೆ: "ಅವನೆ ನಾನು. **ಸೋಽಹಂ.** ಎಲ್ಲವೂ ನಿಜವಾಗಿ ಬ್ರಹ್ಮನೆ; ಆತ್ಮನೂ ಬ್ರಹ್ಮನೆ." **ಸರ್ವಂ ಖಲ್ವಿದಂ ಬ್ರಹ್ಮ ; ಅಯಮಾತ್ಮಾ ಬ್ರಹ್ಮ.** ಇದು ಎಲ್ಲದರ ಏಕತ್ವದ ಜ್ಞಾನ; ಈ ಏಕವಾದ ವಸ್ತುವೆ ಕರ್ಮವಾಗಿಯೂ, ಕರ್ಮವನ್ನು ಮಾಡುವವ ನಾಗಿಯೂ, ಕರ್ಮದ ವಿಷಯವಾಗಿಯೂ ವ್ಯಕ್ತವಾಗುತ್ತದೆ; ಹಾಗೆಯೆ ಜ್ಞಾನ ವಾಗಿಯೂ, ಅದನ್ನು ತಿಳಿಯುವ ಜ್ಞಾತೃವಾಗಿಯೂ ಮತ್ತು ಜ್ಞಾನದ ವಿಷಯ ವಾಗಿಯೂ ವ್ಯಕ್ತವಾಗುತ್ತದೆ. ಹೋಮಮಾಡುವ ಹವಿಸ್ಸೆಂಬುದು ನಾವು ಮಾಡುವ ಕರ್ಮಗಳು ; ಅಗ್ನಿಯೆಂಬ ವಿಶ್ವಶಕ್ತಿಯು ಬ್ರಹ್ಮವೆ; ಕರ್ಮಗಳನ್ನು ಅರ್ಪಿಸುವ ವ್ಯಾಪಾರವೂ ಬ್ರಹ್ಮವೆ; ಹವಿಸ್ಸಿನ ರೂಪದಲ್ಲಿ ಅರ್ಪಿಸಲ್ಪಡುವುದೆಲ್ಲವೂ ಬ್ರಹ್ಮ ಸ್ವರೂಪವೇಯೆ ; ಹೋಮಮಾಡುವವನೂ ಕೂಡ ಮನುಷ್ಯನಲ್ಲಿರುವ ಈಶ್ವರನೆ.

ಯಜ್ಞವೂ ಕೂಡ ಕ್ರಿಯೆಯಲ್ಲಿ ನಿರತನಾದ ಈಶ್ವರನ ಸ್ವರೂಪವೆ, ಮತ್ತು ಈ ಯಜ್ಞದಿಂದ ಸಾಧಿಸಬೇಕಾಗಿರುವ ಗುರಿಯೂ ಬ್ರಹ್ಮವೆ. ಈ ಜ್ಞಾನವನ್ನು ಹೊಂದಿ, ಅದರ ಪ್ರಕಾರ ವರ್ತಿಸಿ ಜೀವಿಸುವವನಿಗೆ ಕರ್ಮಗಳು ಬಂಧನವಲ್ಲ—ವೈಯಕ್ತಿಕವಾದ ಮತ್ತು ಸ್ವಾರ್ಥಕ್ಕಾಗಿ ಮಾಡುವ ಕರ್ಮಗಳೇ ಇಲ್ಲ. ತನ್ನಲ್ಲಿಯೆ ಇರುವ ದೈವೀಪ್ರಕೃತಿಯ ಮೂಲಕ ವ್ಯಾಪಾರಗಳನ್ನು ಮಾಡುತ್ತಿರುವವನು ಪುರುಷೋತ್ತಮನೆ; ಸ್ವಸ್ವರೂಪ ಜ್ಞಾನವುಳ್ಳ ಶಕ್ತಿಯೆಂಬ ಅಗ್ನಿಗೆ ಎಲ್ಲವನ್ನೂ ಅರ್ಪಿಸುತ್ತಾನೆ, ಮನುಷ್ಯನು ತನ್ನ ಸ್ವಸ್ವರೂಪ ಜ್ಞಾನವನ್ನು ಪಡೆದು, ಈಶ್ವರನಲ್ಲಿ ಆತ್ಮನನ್ನು ಐಕ್ಯಮಾಡುವುದೆ ಈಶ್ವರ ಪ್ರಚೋದಿತವಾದ ಈ ಎಲ್ಲ ವ್ಯಾಪಾರದ ಗುರಿ. ಈ ಜ್ಞಾನವನ್ನು ಪಡೆದು ಐಕ್ಯಸ್ಥಿತಿಯಲ್ಲಿದ್ದುಕೊಂಡು ಕರ್ಮಮಾಡುವುದೆ ಮುಕ್ತಿ.

ಆದರೆ ಎಲ್ಲರಿಗೂ, ಎಲ್ಲ ಯೋಗಿಗಳಿಗೂ ಕೂಡ, ಈ ಜ್ಞಾನವು ಇನ್ನೂ ಲಭಿಸಿಲ್ಲ. "ಕೆಲವು ಯೋಗಿಗಳು ದೇವತೆಗಳನ್ನು ಉದ್ದೇಶಿಸಿ ಯಜ್ಞಗಳನ್ನು ಮಾಡುತ್ತಾರೆ. ಬೇರೆ ಕೆಲವು ಯೋಗಿಗಳು ಬ್ರಹ್ಮನೆಂಬ ಅಗ್ನಿಯಲ್ಲಿ ಯಜ್ಞದಿಂದಲೆ ಯಜ್ಞವನ್ನು ಹೋಮಮಾಡುತ್ತಾರೆ." (೪-೨೫) ಎಂದರೆ ಕೆಲವರು ಭಗವಂತನನ್ನು ನಾನಾ ಶಕ್ತಿಗಳನ್ನಾಗಿ ಭಾವಿಸುತ್ತಾರೆ; ನಾನಾ ವಿಧವಾಗಿ, ಧರ್ಮಗಳನ್ನೂ ನಿಯಮಗಳನ್ನೂ ಅನುಸರಿಸಿ, ಪೂಜೆಗಳಿಂದಲೂ, ವ್ರತಗಳಿಂದಲೂ, ತಪಸ್ಸಿನಿಂದಲೂ, ಯಜ್ಞಗಳಿಂದಲೂ ತಿಳಿಯಲು ಪ್ರಯತ್ನ ಪಡುತ್ತಾರೆ. ಜ್ಞಾನಿಗಳಾದ ಇತರರಿಗಾದರೊ ಗುರಿಯನ್ನು ಮುಟ್ಟಲು ಇರುವ ದಾರಿ ಒಂದೆ; ಆಚರಿಸಲು ಇರುವ ಧರ್ಮ ಒಂದೆ. ಅದು ಯಾವುವೆಂದರೆ ತಮ್ಮ ಶಕ್ತಿಸಂಕಲ್ಪಗಳನ್ನು ಭಗವಂತನ ಶಕ್ತಿಸಂಕಲ್ಪಗಳೊಡನೆ ಒಂದುಮಾಡಿ ತಮ್ಮ ಎಲ್ಲ ಕರ್ಮಗಳನ್ನೂ ಭಗವಂತನಿಗೆ ಅರ್ಪಿಸುವುದು. ಯಜ್ಞಮಾಡುವ ವಿಧಾನಗಳೂ, ಹೋಮದ್ರವ್ಯಗಳೂ ಅನೇಕ. ಆತ್ಮಸಂಯಮ ಮತ್ತು ಯೋಗವೆಂಬ ಮಾನಸಿಕ ಯಜ್ಞವೂ ಉಂಟು; ಇದರಿಂದ ಆತ್ಮಲಾಭವೂ ಆತ್ಮಜ್ಞಾನವೂ ಉಂಟಾಗುವುವು. "ಕೆಲವರು ಶ್ರೋತ್ರ ಮೊದಲಾದ ಇಂದ್ರಿಯಗಳನ್ನು ವಶಮಾಡಿಕೊಳ್ಳುವುದಕ್ಕೋಸ್ಕರ ಅಗ್ನಿಗಳಲ್ಲಿ ಹೋಮ ಮಾಡುತ್ತಾರೆ; ಇನ್ನು ಕೆಲವರು ಶಬ್ದ ಮೊದಲಾದ ವಿಷಯಗಳನ್ನು ಶ್ರೋತ್ರ ಮೊದಲಾದ ಇಂದ್ರಿಯಗಳೆಂಬ ಅಗ್ನಿಗಳಲ್ಲಿ ಹೋಮಮಾಡುತ್ತಾರೆ. ಬೇರೆ ಕೆಲವರು ಇಂದ್ರಿಯ ಕರ್ಮಗಳನ್ನೂ, ಪ್ರಾಣಕರ್ಮಗಳನ್ನೂ ಜ್ಞಾನದಿಂದಪ್ರಜ್ವಲಿಸಲ್ಪಟ್ಟ ಆತ್ಮನಿಗ್ರಹ ಯೋಗವೆಂಬ ಅಗ್ನಿಯಲ್ಲಿ ಹೋಮಮಾಡುತ್ತಾರೆ." ಎಂದರೆ ಇಂದ್ರಿಯ ವ್ಯಾಪಾರಗಳಿಂದ ಮನಸ್ಸಿನ ಮೇಲೆ ಯಾವ ರೀತಿಯ ಪರಿಣಾಮವೂ

ಆಗದಂತೆ ಇಂದ್ರಿಯ ವಿಷಯಗಳನ್ನು ಗ್ರಹಿಸುವ ಯಜ್ಞ ಅಥವಾ ಯೋಗವೊಂದಿದೆ; ಇದರಲ್ಲಿ ಇಂದ್ರಿಯಗಳೆ ಯಜ್ಞದ ಅಗ್ನಿಗಳಾಗುತ್ತವೆ. ಇಂದ್ರಿಯಗಳನ್ನು ಶಮನಮಾಡುವ ಯೋಗವೊಂದುಂಟು; ಇದರಿಂದ, ಮನಸ್ಸಿನ ವ್ಯಾಪಾರಗಳ ಹಿಂದೆ ಇರುವ, ಶಾಂತವೂ ನಿಶ್ಚಲವೂ ಆದ ಆತ್ಮವು ಪ್ರಕಾಶಕ್ಕೆ ಬರುತ್ತದೆ. ಇನ್ನೊಂದು ಬಗೆಯ ಯಜ್ಞದಲ್ಲಿ ಅಥವಾ ಯೋಗದಲ್ಲಿ ಆತ್ಮನು ಗ್ರಹಿಸಲ್ಪಟ್ಟಾಗ, ಎಲ್ಲ ಇಂದ್ರಿಯ ವ್ಯಾಪಾರಗಳೂ ಮತ್ತು ಪ್ರಾಣ ಕರ್ಮಗಳೂ, ನಿಶ್ಚಲವಾದ ಏಕವಾದ, ಮತ್ತು ಶಾಂತವಾದ ಆತ್ಮನಿಗೆ ಅರ್ಪಿಸಲ್ಪಡುತ್ತವೆ. ಮುಮುಕ್ಷುವು ಮಾಡುವ ಯಜ್ಞವು ದ್ರವ್ಯ ಯಜ್ಞವಾಗಿರಬಹುದು; ಎಂದರೆ ಭಕ್ತನು ಇಷ್ಟದೇವತೆಗೆ ಪದಾರ್ಥವನ್ನು ಅರ್ಪಿಸಬಹುದು. ಅಥವಾ ತಪೋಯಜ್ಞವಾಗಿರಬಹುದು; ಎಂದರೆ ಉದಾತ್ತವಾದ ಧ್ಯೇಯವನ್ನು ಲಕ್ಷ್ಯದಲ್ಲಿಟ್ಟುಕೊಂಡು ಮಾಡುವ ಆತ್ಮಸಂಯಮ ಮತ್ತು ತಪಸ್ಸು; ಇಲ್ಲವೆ ಯೋಗಯಜ್ಞವಾಗಿರಬಹುದು; ಎಂದರೆ ರಾಜಯೋಗ, ಹಠಯೋಗಗಳ ಪ್ರಾಣಾಯಾಮವೂ ಅಥವಾ ಬೇರೆ ಯೋಗವೂ ಆಗಿರಬಹುದು. ಇವೆಲ್ಲವೂ ಆತ್ಮಶುದ್ಧಿಯನ್ನು ಮಾಡುತ್ತವೆ. ಎಲ್ಲ ವಿಧವಾದ ಯಜ್ಞಗಳೂ ಪರವಸ್ತುವನ್ನು ಪಡೆಯಲು ಸಾಧನಗಳು.

ಈ ಎಲ್ಲ ವಿಧವಾದ ಯಜ್ಞಗಳಲ್ಲೂ ಅಂತರ್ಗತವಾಗಿರುವ ಮುಖ್ಯತತ್ತ್ವವು ಒಂದೆ: ಐಹಿಕ ವ್ಯಾಪಾರಗಳಿಗೆ ಮುಖ್ಯ ಸ್ಥಾನವನ್ನು ಕೊಡದೆ ಅವಕ್ಕಿಂತ ಉದಾತ್ತವಾದ ವಿಷಯಗಳಿಗೆ ಹೆಚ್ಚು ಗಮನಕೊಡುವುದು; ಆಸೆಗಳ ಹಿಡಿತದಿಂದ ಬಿಡಿಸಿಕೊಂಡು, ಸ್ವಂತ ಸುಖಕ್ಕಿಂತ ಯಜ್ಞದಿಂದಲೂ, ಆತ್ಮಾರ್ಪಣೆಯಿಂದಲೂ, ಆತ್ಮಸಂಯಮದಿಂದಲೂ ಉಂಟಾಗುವ ಮತ್ತು ತಾಮಸ, ರಾಜಸಭಾವನೆಗಳನ್ನು ಬಿಟ್ಟು ಸಾತ್ವಿಕವಾದ ಧ್ಯೇಯಗಳನ್ನು ಅನುಸರಿಸುವುದರಿಂದ ಉಂಟಾಗುವ ಆನಂದಕ್ಕೆ ಪ್ರಾಧಾನ್ಯ ಕೊಡುವುದು. "ಯಜ್ಞಶೇಷವಾದ ಅಮೃತವನ್ನು ಭುಜಿಸುವವರು ಶಾಶ್ವತವಾದ ಬ್ರಹ್ಮವನ್ನು ಪಡೆಯುವರು" ಯಜ್ಞವೇ ಪ್ರಪಂಚದ ಧರ್ಮ; ಅದಿಲ್ಲದೆ ಈ ಲೋಕದಲ್ಲಾಗಲಿ, ಬೇರೆ ಲೋಕಗಳಲ್ಲಾಗಲಿ ಯಾವುದೂ ದೊರೆಯುವುದಿಲ್ಲ; ಬ್ರಹ್ಮಸಾಕ್ಷಾತ್ಕಾರವೂ ಆಗುವುದಿಲ್ಲ. "ಯಜ್ಞಮಾಡದವನಿಗೆ ಈ ಲೋಕವೆ ಇಲ್ಲ. ಬೇರೆ ಲೋಕವೆಲ್ಲಿಯದು?" (೪-೩೧) "ಆದ್ದರಿಂದ ಅನೇಕ ವಿಧವಾದ ಯಜ್ಞಗಳು ಬ್ರಹ್ಮನ ಮುಖದಲ್ಲಿ ವಿಸ್ತರಿಸಲ್ಪಟ್ಟಿವೆ." (೪-೩೨) ಈ ಬ್ರಹ್ಮನ ಮುಖವೆ ಎಲ್ಲವನ್ನೂ ಸ್ವೀಕರಿಸುವ ಯಜ್ಞಾಗ್ನಿ. ಈ ಯಜ್ಞಗಳೆಲ್ಲವೂ ಕಾರ್ಯಮುಖನಾದ ಆ ಒಂದು ಪರವಸ್ತುವಿನ ಸಾಧನಗಳು ಮತ್ತು ರೂಪಗಳು;

ಮನುಷ್ಯನ ವ್ಯಾಪಾರಗಳೆಲ್ಲವನ್ನೂ ಈ ಪರವಸ್ತುವಿಗೆ ಅರ್ಪಿಸಲು ಯಜ್ಞಗಳು ಸಾಧನ. ಅವನ ಜೀವನ ವ್ಯಾಪಾರವು ಈ ಪರವಸ್ತುವಿನ ವ್ಯಾಪಾರದ ಒಂದು ಅಂಶ ; ಈ ಯಜ್ಞಗಳೆಲ್ಲವು ಕರ್ಮದಿಂದ ಹುಟ್ಟಿವೆ. ಬ್ರಹ್ಮನ ಅನಂತ ಶಕ್ತಿಯಿಂದಲೆ ಎಲ್ಲವೂ ಉದ್ಭವವಾಗಿ, ಆ ಶಕ್ತಿಯ ನಿಯಮಕ್ಕೆ ಒಳಪಟ್ಟಿವೆ. ಈ ಶಕ್ತಿಯು ವಿಶ್ವದ ಎಲ್ಲ ವ್ಯಾಪಾರಗಳಲ್ಲೂ ವ್ಯಕ್ತವಾಗುತ್ತದೆ. ಈ ವ್ಯಾಪಾರಗಳೆಲ್ಲವೂ ಏಕವಾದ ಪರವಸ್ತುವಿಗೆ ಅರ್ಪಿತವಾಗುತ್ತವೆ. ಇವುಗಳ ಕೊನೆಯ ಪರಿಣಾಮವಾಗಿ ಮನುಷ್ಯನು ಆತ್ಮಜ್ಞಾನವನ್ನೂ, ಬ್ರಾಹ್ಮೀಸ್ಥಿತಿಯನ್ನೂ ಪಡೆಯುತ್ತಾನೆ. "ಇದನ್ನು ತಿಳಿದು ಕೊಂಡು ನೀನು ಮುಕ್ತನಾಗುತ್ತೀಯೆ."

ಯಜ್ಞಗಳಲ್ಲಿ ತಾರತಮ್ಯವುಂಟು. ದ್ರವ್ಯಯಜ್ಞವು ಕನಿಷ್ಠವಾದುದು ; ಜ್ಞಾನ ಯಜ್ಞವು ಶ್ರೇಷ್ಠವಾದುದು. ಎಲ್ಲ ಕರ್ಮಗಳೂ ಜ್ಞಾನದಲ್ಲಿ ಕೊನೆಗಾಣುತ್ತವೆ ; ಈ ಜ್ಞಾನವು ಸಾಮಾನ್ಯವಾದ ಪ್ರಾಪಂಚಿಕ ಜ್ಞಾನವಲ್ಲ ; ಅತಿ ಶ್ರೇಷ್ಠವಾದ ಆತ್ಮ ಜ್ಞಾನ, ಬ್ರಹ್ಮಜ್ಞಾನ. ಜೀವನದ ಮೂಲತತ್ತ್ವಗಳನ್ನು ತಿಳಿದಿರುವ ಜ್ಞಾನಿ ಗಳಿಂದಲೆ ಇದನ್ನು ಪಡೆಯಲು ಸಾಧ್ಯ. ಈ ಜ್ಞಾನವನ್ನು ಪಡೆದರೆ ನಾವು ಮೋಹಕ್ಕೆ ಒಳಗಾಗುವುದಿಲ್ಲ ; ವಿಷಯೇಂದ್ರಿಯ ಜ್ಞಾನ ಮತ್ತು ಕಾಮಕ್ರೋಧಗಳ ಬಂಧನಕ್ಕೆ ಒಳಗಾಗುವುದಿಲ್ಲ. "ಈ ಜ್ಞಾನವನ್ನು ಪಡೆದ ಮೇಲೆ ಎಲ್ಲ ಭೂತ ಗಳನ್ನೂ ನಿನ್ನ ಆತ್ಮನಲ್ಲಿಯೂ ಮತ್ತು ನನ್ನಲ್ಲಿಯೂ ನೋಡುತ್ತೀಯೆ" ಏತಕ್ಕೆಂದರೆ ಆತ್ಮನು ಏಕನೂ, ಅಕ್ಷರನೂ, ಸರ್ವವ್ಯಾಪಿಯೂ, ಎಲ್ಲವನ್ನೂ ಒಳಗೊಂಡಿರುವವನೂ ಮತ್ತು ಸ್ವಯಂಭುವೂ ಆದ ಬ್ರಹ್ಮವು ; ಇದನ್ನು ನಮ್ಮ ಮನಸ್ಸು ಮರೆಮಾಡಿರು ವುದು ; ಅಹಂಕಾರವು ಹೋದಮೇಲೆ, ನಮ್ಮ ಪ್ರಜ್ಞೆಯು ವಿಕಾಸವಾಗಿ ಬ್ರಹ್ಮನಲ್ಲಿ ಸೇರುವುದು. ಆಗ ಎಲ್ಲ ಜೀವಿಗಳೂ ಈ ಏಕವಾದ ಸದ್ವಸ್ತುವಿನಲ್ಲಿ ಕಾಣುತ್ತವೆ.

ಈ ಆತ್ಮ ಅಥವಾ ಬ್ರಹ್ಮವು ನಮ್ಮ ಮನಸ್ಸಿಗೆ ಮತ್ತು ಬುದ್ಧಿಗೆ ಗೋಚರ ವಾಗುವ ಪರವಸ್ತುವೆ ಹೌದು. ಇವನೆ ಈ ವಿಶ್ವಕ್ಕೆ ಉತ್ಪತ್ತಿಸ್ಥಾನ ; ಕ್ಷರ ಮತ್ತು ಅಕ್ಷರವಾದ ಎಲ್ಲ ವಸ್ತುಗಳೂ ಇವನ ವ್ಯಕ್ತರೂಪಗಳು. ಇವನೆ ಈಶ್ವರನು, ಪರ ಮಾತ್ಮನು, ಪುರುಷೋತ್ತಮನು. ಇವನಿಗೆ ಎಲ್ಲವನ್ನೂ ನಾವು ಯಜ್ಞರೂಪದಲ್ಲಿ ಅರ್ಪಿಸುವುದು. ನಾವು ಮಾಡುವ ಎಲ್ಲ ಕರ್ಮಗಳನ್ನೂ ಅವನಿಗೆ ಅರ್ಪಿಸುತ್ತೇವೆ. ಅವನಲ್ಲಿಯೆ ನಾವು ಇದ್ದೇವೆ, ಜೀವಿಸುತ್ತೇವೆ. "ಯಾರು ಸಮಸ್ತ ಭೂತಗಳಲ್ಲಿಯೂ ಇರುವ ನನ್ನಲ್ಲಿ ಏಕತ್ವವನ್ನು ಹೊಂದುತ್ತಾನೆಯೊ, ಅವನು ನನ್ನಲ್ಲಿಯೂ ಮತ್ತು ಎಲ್ಲ ಜೀವಿಗಳೊಡನೆಯೂ ಒಂದಾಗುತ್ತಾನೆ." ಪರಮಸತ್ಯವಾದ ಅವನಲ್ಲಿ ನಾವು

ಐಕ್ಯವನ್ನು ಹೊಂದುತ್ತೇವೆ. ಯಜ್ಞಕ್ಕಾಗಿ ಮಾಡಿದ ಕರ್ಮಗಳಿಂದ ಆಸೆಯನ್ನು ನಿರ್ಮೂಲವಾಡಿ ನಾವು ಜ್ಞಾನವನ್ನು ಹೊಂದಿ ಆತ್ಮವಂತರಾಗಿ ಆಗುತ್ತೇವೆ. ಆತ್ಮ ಜ್ಞಾನ ಮತ್ತು ಬ್ರಹ್ಮಜ್ಞಾನದಿಂದ ಯುಕ್ತರಾಗಿ ಮಾಡುವ ಕರ್ಮಗಳಿಂದ ನಾವು ಮುಕ್ತಿಯನ್ನು ಹೊಂದಿ ಬ್ರಾಹ್ಮೀಸ್ಥಿತಿಯ ಏಕತ್ವ, ಶಾಂತಿ ಮತ್ತು ಆನಂದಗಳನ್ನು ಪಡೆಯುತ್ತೇವೆ.



# ಹದಿಮೂರನೆಯ ಪ್ರಕರಣ



## ಯಜ್ಞದ ಪ್ರಭು

ಇಲ್ಲಿಯವರೆಗೆ ಹೇಳಿರುವ ಮುಖ್ಯಾಂಶಗಳು ಯಾವುವೆಂಬುದನ್ನು ನೆನಪಿಗೆ ತಂದುಕೊಳ್ಳೋಣ. ಕರ್ಮದ ವಿಷಯದಲ್ಲಿ ಗೀತೆಯು ಮಾಡುವ ಉಪದೇಶಕ್ಕೆ ಗೀತೆಯಲ್ಲಿ ಹೇಳಿರುವ ಯಜ್ಞದ ತತ್ತ್ವವೆ ಆಧಾರವಾಗಿದೆ; ಮತ್ತು ವಾಸ್ತವವಾಗಿ ಈಶ್ವರ, ಪ್ರಪಂಚ ಮತ್ತು ಕರ್ಮ ಇವುಗಳಿಗಿರುವ ಪರಸ್ಪರ ಸಂಬಂಧವನ್ನು ಸೂಚಿಸುವ ಶಾಶ್ವತವಾದ ತತ್ತ್ವವನ್ನು ಒಳಗೊಂಡಿದೆ. ಸಾಮಾನ್ಯವಾಗಿ ಮನುಷ್ಯನ ಮನಸ್ಸು ಬಹುಮುಖವಾದ ಜೀವನದ ಮತ್ತು ಶಾಶ್ವತ ಸತ್ಯದ ಕೆಲವು ಮುಖಗಳನ್ನು ಮಾತ್ರ ಗ್ರಹಿಸಬಲ್ಲದು. ಈ ಸಂಪೂರ್ಣವಲ್ಲದ ತಿಳಿವಳಿಕೆಯ ಆಧಾರದ ಮೇಲೆ ಜೀವನ, ಆಚಾರ ಮತ್ತು ಮತಕ್ಕೆ ಸಂಬಂಧಿಸಿದ ಕೆಲವು ಸಿದ್ಧಾಂತಗಳನ್ನು ರಚಿಸುತ್ತದೆ. ತನ್ನ ತಿಳಿವಳಿಕೆಯು ಸಂಪೂರ್ಣವಾಗಿಲ್ಲದುದರಿಂದ ಯಾವುದೋ ಒಂದು ಮುಖವನ್ನು, ಒಂದು ಅಂಶವನ್ನು ಮುಖ್ಯವನ್ನಾಗಿ ಮಾಡುತ್ತದೆ. ಇಂತಹ ಮನಸ್ಸಿಗೆ ವಿಸ್ತಾರವಾದ ಜ್ಞಾನವುಂಟಾಗಿ, ಅದರಿಂದ ಪ್ರಾಪಂಚಿಕ ಜ್ಞಾನವು ಆತ್ಮ ಜ್ಞಾನ ಮತ್ತು ಬ್ರಹ್ಮಜ್ಞಾನದೊಡನೆ ಸಂಪೂರ್ಣವಾಗಿ ಸಮನ್ವಯವಾದಾಗ, ಅದಕ್ಕೆ ಒಂದು ವಿಧವಾದ ಅಖಂಡ ಜ್ಞಾನ ಉದಯವಾಗಬೇಕು. ಗೀತೆಯ ಉಪದೇಶಕ್ಕೆ ಈ ವೇದಾಂತತತ್ತ್ವವೆ, ಸಂಪೂರ್ಣ ಜ್ಞಾನವೆ, ಆಧಾರವಾಗಿದೆ–ಎಲ್ಲವೂ ಅದ್ವಿತೀಯವಾದ ಬ್ರಹ್ಮವೆ; ಈ ಪ್ರಪಂಚವೆಲ್ಲವೂ ಆ ಬ್ರಹ್ಮನಿಂದ ಹೊರಟು ಪುನಃ ಅವನನ್ನೆ

ಸೇರುವ ಒಂದು ಚಕ್ರದಂತೆ. ಎಲ್ಲ ವ್ಯಾಪಾರಗಳೂ ಪ್ರಕೃತಿಯ ವ್ಯಕ್ತವಾಗುವಿಕೆ; ಪ್ರಕೃತಿಯು ಈಶ್ವರನ ಶಕ್ತಿ; ತನ್ನ ಕ್ರಿಯೆಗಳಿಗೆ ಅಧಿಪತಿಯೂ ಮತ್ತು ತನ್ನ ರೂಪಗಳಲ್ಲಿ ಅಂತರ್ಗತವೂ ಆಗಿರುವ ಈಶ್ವರನ ಇಚ್ಛೆ ಮತ್ತು ಸಂಕಲ್ಪಗಳನ್ನು ನೆರವೇರಿಸುತ್ತದೆ. ಪ್ರಕೃತಿಯು ರೂಪಗಳಲ್ಲಿಯೂ ಕರ್ಮಗಳಲ್ಲಿಯೂ ಮತ್ತು ಮನಸ್ಸಿನ ವ್ಯಾಪಾರಗಳಲ್ಲಿಯೂ ಮಗ್ನವಾಗಿರುವುದು; ಅನಂತರ ಮನಸ್ಸು ಮತ್ತು ಆತ್ಮಜ್ಞಾನಗಳ ಮೂಲಕ ಈಶ್ವರನನ್ನು ತಿಳಿದುಕೊಂಡು ಅವನನ್ನು ಹೊಂದುವುದು; ಇದೆಲ್ಲವೂ ಈಶ್ವರತೃಪ್ತಿಗಾಗಿಯೆ. ಮೊದಲು ಆತ್ಮನು ಪ್ರಪಂಚದ ಸಂಸರಣ ಕ್ರಿಯೆಯಲ್ಲಿ ಎಲ್ಲ ವಿಧದಲ್ಲಿಯೂ ಇಳಿಯುತ್ತಾನೆ. ಇದರಿಂದ ಆತ್ಮನ ಬೆಳವಣಿಗೆಯಾಗುತ್ತದೆ, ಎಂದರೆ ಸೃಷ್ಟಿಯಲ್ಲಿ ಗೂಢವಾಗಿರುವ ಅವನ ಎಲ್ಲ ಶಕ್ತಿಗಳೂ ಪ್ರಕಟವಾಗುತ್ತವೆ. ಪುರುಷನು ಏಕಕಾಲದಲ್ಲಿ ಶಾಶ್ವತವಾದ ಮೂರು ರೂಪಗಳನ್ನು ಧರಿಸದೆ ಇದ್ದಿದ್ದರೆ, ಸಂಸಾರ ಚಕ್ರವು ಈ ರೀತಿಯಾಗಿ ಇರುತ್ತಿರಲಿಲ್ಲ. ಈ ಮೂರರಲ್ಲಿ ಪ್ರತಿಯೊಂದೂ ಸಂಸಾರ ಚಕ್ರಕ್ಕೆ ಅವಶ್ಯಕವಾದುದು. ಪುರುಷನು ಕ್ಷರವಾಗಿರುವುದರಲ್ಲಿ ವ್ಯಕ್ತನಾಗಬೇಕು: ಈ ರೂಪದಲ್ಲಿ ಅವನು ಆದಿ-ಅಂತಗಳುಳ್ಳವನಾಗಿಯೂ, ಅನೇಕನಾಗಿಯೂ, ಸರ್ವಭೂತಗಳಾಗಿಯೂ ಕಾಣಿಸಿಕೊಳ್ಳುತ್ತಾನೆ. ಎಂದರೆ ಅಸಂಖ್ಯಾತವಾದ ಸಂಬಂಧಗಳುಳ್ಳ ಅನೇಕಕೋಟಿ ಜೀವಿಗಳಲ್ಲಿ ಪರಿಮಿತಿಗೊಳಪಟ್ಟ ರೂಪಗಳಲ್ಲಿ ಕಾಣಿಸಿಕೊಳ್ಳುತ್ತಾನೆ; ಇವುಗಳ ಹಿನ್ನೆಲೆಯಲ್ಲಿರುವ ದೇವತೆಗಳ ವ್ಯಾಪಾರಗಳನ್ನು ಪ್ರೇರಿಸುವ ಶಕ್ತಿಯಾಗಿ ಕಾಣಿಸಿಕೊಳ್ಳುತ್ತಾನೆ; ಎಂದರೆ, ವಿಶ್ವವ್ಯಾಪಾರಗಳ ಪ್ರವರ್ತಕವಾಗಿರುವ ಭಗವಚ್ಛಕ್ತಿಗಳಾಗಿಯೂ, ಏಕವಾದ ಪರವಸ್ತುವಿನ ವಿವಿಧ ರೂಪಗಳಾಗಿಯೂ, ವಿವಿಧ ಆವಿಷ್ಕಾರಗಳಾಗಿಯೂ (ಕೆಳಗಿನ ಮಟ್ಟಗಳಿಗೆ ಇಳಿದು ಅಲ್ಲಿಕಾಣಿಸಿಕೊಳ್ಳುವ ರೂಪಗಳಾಗಿಯೂ) ಕಾಣಿಸಿಕೊಳ್ಳುತ್ತಾನೆ. ಇದು ಮೊದಲನೆಯ ರೂಪ.

ಇದಲ್ಲದೆ, ಈ ಎಲ್ಲ ರೂಪಗಳ ಮತ್ತು ಜೀವಿಗಳ ಒಳಗೆ, ಅಕ್ಷರವೂ, ಅನಂತವೂ, ಶಾಶ್ವತವೂ, ನಿರಾಕಾರವೂ, ನಿರ್ವಿಕಾರವೂ, ಅಖಂಡವೂ ಆದ ವಸ್ತು ಅಡಗಿದೆ; ವಾಸ್ತವವಾಗಿ ಈ ವಸ್ತುವಿನಲ್ಲಿ ಎಲ್ಲ ವಸ್ತುಗಳೂ ಒಂದಾಗಿವೆ ಎಂಬುದನ್ನು ತಿಳಿದುಕೊಳ್ಳಬೇಕು. ಆದುದರಿಂದ, ಈ ಪರವಸ್ತುವಿಗೆ ಹಿಂತಿರುಗಿ, ಪರಿಚ್ಛಿನ್ನನೂ, ಸಂಸಾರದಲ್ಲಿ ನಿರತನೂ ಆದ ಜೀವನು, ವಿಶ್ವವ್ಯಾಪಕವಾದ ಅನಂತತೆಯ ಶಾಂತಿಯನ್ನು ಪಡೆಯಬಹುದೆಂದೂ, ಮತ್ತು ಆಮೂಲಕ ಅಖಂಡವಾದ ಪುರುಷನಿಂದ ಹೊರಟು ಅವನನ್ನು ಆಧಾರವನ್ನಾಗಿ ಮಾಡಿಕೊಂಡಿರುವ ಎಲ್ಲದರೊಡನೆಯೂ ನಾಶವಿಲ್ಲದ ಮತ್ತು ಸಂಗವಿಲ್ಲದ ಏಕತ್ವವನ್ನು ಪಡೆಯಬಹು

ದೆಂದೂ, ಅನುಭವದಿಂದ ತಿಳಿದುಕೊಳ್ಳುತ್ತಾನೆ. ಪ್ರತ್ಯೇಕತೆಯಿಂದ ಬಿಡುಗಡೆ ಹೊಂದಿ ಈ ಅನಂತವಲ್ಲಿ ಸೇರಲೂಬಹುದು.

ಆದರೆ ಇವೆರಡಕ್ಕಿಂತ ಉತ್ತಮವಾಗಿರುವವನು ಪುರುಷೋತ್ತಮನು. ಇವನೆ ಪರಾತ್ಪರನಾದ ಬ್ರಹ್ಮ, ಈಶ್ವರ ಇವನಲ್ಲಿ ಪರಿಚ್ಛಿನ್ನವಾದುದೂ ಅನಂತವಾದುದೂ, ರೂಪವಿರುವುದೂ ರೂಪವಿಲ್ಲದುದೂ, ಏಕವೂ ಅನೇಕಗಳೂ ಇರುವಿಕೆಯೂ ಆಗುವಿಕೆಯೂ, ಸಂಸಾರವ್ಯಾಪಾರಗಳೂ ಅಲೌಕಿಕವಾದ ಶಾಂತಿಯೂ ಮತ್ತು ಪ್ರವೃತ್ತಿಯೂ ನಿವೃತ್ತಿಯೂ ಇವೆ; ಅವನಲ್ಲಿ ಇವೆಲ್ಲವೂ ಸಂಧಿಸಿವೆ, ಸೇರಿಕೊಂಡಿವೆ, ಒಂದೆ ಆಗಿವೆ. ಈಶ್ವರನಲ್ಲಿ ಎಲ್ಲವೂ ತಮ್ಮಲ್ಲಿ ಅಡಗಿರುವ ನಿಜವಾದ ತತ್ವಗಳನ್ನು ಕಂಡುಕೊಳ್ಳುತ್ತವೆ ಮತ್ತು ಸಂಪೂರ್ಣವಾದ ಸಮನ್ವಯವನ್ನು ಹೊಂದುತ್ತವೆ.

ಕರ್ಮಕ್ಕೆ ಸಂಬಂಧಿಸಿದ ತತ್ವವೆಲ್ಲವೂ ಸತ್‌ಗೆ (ಇರುವಿಕೆಗೆ) ಸಂಬಂಧಿಸಿದ ತತ್ವವನ್ನು ಆಧಾರವನ್ನಾಗಿ ಹೊಂದಿದೆ. ವಾಸ್ತವವಾಗಿ ಜೀವನದ ಎಲ್ಲ ವ್ಯಾಪಾರಗಳೂ ಪ್ರಕೃತಿಯು ಪುರುಷನಿಗೆ ಅರ್ಪಿಸುವ ಯಜ್ಞಕರ್ಮಗಳು; ಪ್ರಕೃತಿಯು ತನ್ನಲ್ಲಿರುವ ಪರಿಚ್ಛಿನ್ನವಾದ ಅನೇಕ ಜೀವರ ಸಂಕಲ್ಪಗಳನ್ನು ಅಪರಿಚ್ಛಿನ್ನನೂ, ಅನಂತನೂ, ಪರಾತ್ಪರನೂ ಆದ ಪುರುಷೋತ್ತಮನಿಗೆ ಅರ್ಪಿಸುತ್ತದೆ. ಜೀವನ ಯಾತ್ರೆಯೆಂಬ ಯಜ್ಞವೇದಿಗೆ ಪ್ರಕೃತಿಯು ತನ್ನ ಕರ್ಮಗಳನ್ನೂ ಕರ್ಮಫಲಗಳನ್ನೂ ತಂದು ಅರ್ಪಿಸುತ್ತದೆ; ತನ್ನಲ್ಲಿರುವ ಚೈತನ್ಯವು ಈಶ್ವರನನ್ನು ಯಾವ ರೂಪದಲ್ಲಿ ಎಷ್ಟರ ಮಟ್ಟಿಗೆ ತಿಳಿದುಕೊಂಡಿದೆಯೊ ಅದಕ್ಕೆ ಅರ್ಪಿಸುತ್ತದೆ; ಹೀಗೆ ಅರ್ಪಿಸುವುದರ ಉದ್ದೇಶವು ಜೀವನ ತಾತ್ಕಾಲಿಕ ಶ್ರೇಯಸ್ಸನ್ನೊ ಅಥವಾ ಶಾಶ್ವತವಾದ ಪರಮ ಶ್ರೇಯಸ್ಸನ್ನೊ ಪಡೆಯುವುದೆ ಆಗಿದೆ. ಜೀವನು ಈಶ್ವರನ ಯಾವರೂಪವನ್ನು ಪೂಜಿಸುತ್ತಾನೆ, ಎಂತಹ ಆನಂದವನ್ನು ಬಯಸುತ್ತಾನೆ ಮತ್ತು ಯಾವುದಕ್ಕಾಗಿ ಯಜ್ಞಮಾಡುತ್ತಾನೆ ಎಂಬುದು ಅವನು ಸಂಸಾರಯಾತ್ರೆಯಲ್ಲಿ ಮುಟ್ಟಿರುವ ಮಟ್ಟವನ್ನು ಅವಲಂಬಿಸಿದೆ. ಪ್ರಕೃತಿಯಲ್ಲಿ ಕ್ಷರಪುರುಷನ ವ್ಯಾಪಾರಗಳೆಲ್ಲವೂ ಪರಸ್ಪರ ವಿನಿಮಯ ರೂಪವಾಗಿವೆ; ಹಾಗೆ ಇದ್ದೆ ಇರಬೇಕು. ಏತಕ್ಕೆಂದರೆ ಸೃಷ್ಟಿಯೆಲ್ಲವೂ ಒಂದೆ, ಅದರ ಎಲ್ಲ ಅಂಶಗಳಿಗೂ ಪರಸ್ಪರ ಅವಲಂಬನೆ ಇರಲೆ ಬೇಕು; ಪ್ರತಿಯೊಂದು ಅಂಶವೂ ಉಳಿದ ಎಲ್ಲ ಅಂಶಗಳ ಸಹಾಯದಿಂದ ಬೆಳೆಯಬೇಕು, ಜೀವಿಸಬೇಕು. ಯಜ್ಞರೂಪವಾದ ಕರ್ಮಗಳನ್ನು ಸ್ವಂತ ಇಚ್ಛೆಯಿಂದ ಮಾಡದಿದ್ದರೆ ಪ್ರಕೃತಿಯು ಬಲಾತ್ಕಾರದಿಂದ ಮಾಡಿಸುತ್ತದೆ; ಪ್ರಕೃತಿನಿಯಮಕ್ಕೆ ಭಂಗಬರುವುದಿಲ್ಲ.

ಪರಸ್ಪರ ಕೊಡುವುದು ಮತ್ತು ಸ್ವೀಕರಿಸುವುದೆ ಜೀವನದ ಧರ್ಮ ; ಇವಿಲ್ಲದಿದ್ದರೆ ಒಂದು ಕ್ಷಣವೂ ಕೂಡ ಜೀವನವು ನಡೆಯುವುದಿಲ್ಲ ; ಭಗವಂತನು ತಾನು ಸೃಷ್ಟಿಸಿರುವ ಪ್ರಪಂಚದಲ್ಲಿ ವಿಧಿಸಿರುವ ನಿಯಮವೆ ಇದು ; ಪ್ರಜಾಪತಿಯು ಎಲ್ಲ ಜೀವಿಗಳನ್ನೂ ಯಜ್ಞದೊಡನೆಯೆ ಸೃಷ್ಟಿಸಿದ್ದಾನೆಂಬುದಕ್ಕೆ ಸಾಕ್ಷಿ. ಈ ವಿಶ್ವವು ಈಶ್ವರನದೆಂದೂ, ಅವನಿಗೆ ಸೇರಿದುದೆಂದೂ,ಜೀವನವು ಅವನ ಆಧಿಪತ್ಯಕ್ಕೆ ಒಳಪಟ್ಟಿದೆಯೆಂದೂ, ಪ್ರಪಂಚವು ಅವನ ಪೂಜೆಯ ಸ್ಥಾನವೆವಿನಾ ಸ್ವತಂತ್ರವಾದ ಜೀವಿಯ ಭೋಗಸ್ಥಾನವಲ್ಲವೆಂಬುದೂ ಈ ಯಜ್ಞದನಿಯಮದಿಂದ ಸ್ಪಷ್ಟವಾಗುತ್ತದೆ. ಜೀವನದ ಅನುಭವಗಳ ಉದ್ದೇಶವು ಪ್ರತ್ಯೇಕವಾದ ಜೀವಿಯ ಸ್ವಂತ ತೃಪ್ತಿಯಲ್ಲ; ಗುರಿಯ ಸಾಧನೆಯಲ್ಲಿ ಇದು ಅಸಂಸ್ಕೃತವಾದ, ಒಡ್ಡಾದ, ಪ್ರಾರಂಭದ ಹೆಜ್ಜೆ ಮಾತ್ರ. ಈ ಗುರಿಯು ಈಶ್ವರನ ಸಾಕ್ಷಾತ್ಕಾರ ; ಕ್ರಮಕ್ರಮವಾಗಿ ವ್ಯಾಪಕವಾಗುವ ನಿರಂತರವಾದ ಯಜ್ಞಕರ್ಮಗಳಿಂದ ಅನಂತನಾದ ಭಗವಂತನನ್ನು ಪೂಜಿಸಿ ಆತನೊಡನೆ ಒಂದಾಗುವ ದಾರಿಯನ್ನು ಹುಡುಕುವುದು ; ಕೊನೆಯಲ್ಲಿ ಸಂಪೂರ್ಣವಾದ ಸ್ವಾತ್ಮಾರ್ಪಣೆಯಿಂದ ಆತ್ಮಜ್ಞಾನವನ್ನು ಪಡೆದು ಸಾಕ್ಷಾತ್ಕಾರ ಮಾಡಿಕೊಳ್ಳುವುದು.

ಆದರೆ ತಾನೆ ಬೇರೆಯೆಂದು ತಿಳಿದಿರುವ ಜೀವಿಯು ಪ್ರಾರಂಭದಲ್ಲಿ ಬಹುಕಾಲ ಅಜ್ಞಾನದಲ್ಲಿ ಮುಳುಗಿರುತ್ತಾನೆ. ತನ್ನ ವಿಷಯದಲ್ಲಿ ಮಾತ್ರ ತೀವ್ರವಾದ ಆಸಕ್ತಿಯುಳ್ಳವನಾಗಿ, ಒಟ್ಟು ಸಂಸಾರ ಯಾತ್ರೆಗೆ ಕಾರಣನೂ, ಮುಖ್ಯ ಪಾತ್ರವೂ ತಾನೆ ಎಂದೂ, ಪರಮಾತ್ಮನಲ್ಲವೆಂದೂ ತಿಳಿದಿರುತ್ತಾನೆ. ಇವನು ಎಲ್ಲ ಕೆಲಸಗಳೂ ತನ್ನಿಂದಲೆ ಮಾಡಲ್ಪಡುತ್ತಿವೆಯೆಂದು ತಿಳಿಯುತ್ತಾನೆ ; ಸೃಷ್ಟಿಯ ಎಲ್ಲ ಕರ್ಮಗಳೂ ತನ್ನ ಬಾಹ್ಯ ಮತ್ತು ಆಂತರ ವ್ಯಾಪಾರಗಳೂ ಕೂಡ, ವಿಶ್ವವ್ಯಾಪಕವಾದ ಪ್ರಕೃತಿಯ ವ್ಯಾಪಾರಗಳೆ ಎಂಬ ಅರಿವು ಅವನಿಗಿಲ್ಲ. ಕರ್ಮಫಲಗಳನ್ನು ಅನುಭವಿಸುವವನು ತಾನೆ ಎಂದು ಭಾವಿಸುತ್ತಾನೆ ; ಎಲ್ಲವೂ ತನಗಾಗಿಯೆ ಇದೆಯೆಂದೂ, ಪ್ರಕೃತಿಯು ತನ್ನ ಇಷ್ಟಾನುಸಾರ ವರ್ತಿಸಬೇಕೆಂದೂ ನಿರೀಕ್ಷಿಸುತ್ತಾನೆ. ಇವನ ಸಂಕಲ್ಪಕ್ಕೆ ಪ್ರಕೃತಿಯು ಗಮನಕೊಡುವುದಿಲ್ಲವೆಂದೂ, ಇವನ ಸುಖದುಃಖಗಳಿಗೆ ಅದು ಎಳ್ಳಷ್ಟೂ ಲಕ್ಷ್ಯಕೊಡುವುದಿಲ್ಲವೆಂದೂ, ಪ್ರಕೃತಿಗೂ, ಅದರ ಕರ್ಮಗಳಿಗೂ, ಸೃಷ್ಟಿಗೂ ಒಡೆಯನಾದ ಈಶ್ವರನ ಸಂಕಲ್ಪಕ್ಕೆ ಅನುಸಾರವಾಗಿ ಪ್ರಕೃತಿ ವ್ಯಾಪಾರಗಳು ನಡೆಯುವುವೆಂದೂ ಅವನು ಇನ್ನೂ ತಿಳಿದುಕೊಂಡಿಲ್ಲ. ತನ್ನ ಪ್ರತ್ಯೇಕವಾದ ಅಸ್ತಿತ್ವವೂ ತೃಪ್ತಿಯೂ ಸಂಕಲ್ಪವೂ ಪ್ರಕೃತಿಯೇ ಹೊರತು ಅವನದಲ್ಲ; ಇವುಗಳನ್ನು ಪ್ರತಿಕ್ಷಣದಲ್ಲಿಯೂ ಪ್ರಕೃತಿಯು ಈಶ್ವರನಿಗೆ ಯಜ್ಞರೂಪದಲ್ಲಿ ಅರ್ಪಿಸುತ್ತದೆ ; ತನ್ನಲ್ಲಿರುವ ಭಗವತ್ಸಂಕಲ್ಪದ ಸಾಧನೆಗೆ ಇವುಗಳನ್ನು ಗುಪ್ತವಾದ ಸಾಧನಗಳನ್ನಾಗಿ

ಪ್ರಕೃತಿಯು ಮಾಡಿಕೊಳ್ಳುತ್ತದೆ. ಅಹಂಕಾರವೆ ಕುರುಹಾಗಿರುವ ಅಜ್ಞಾನದ ದೆಸೆಯಿಂದ ಈ ಜೀವಿಯು ಯಜ್ಞದ ತತ್ತ್ವಕ್ಕೆ ಗಮನಕೊಡದೆ ಎಲ್ಲವನ್ನೂ ತನಗಾಗಿಯೆ ಪಡೆಯಲು ಯತ್ನಿಸುತ್ತಾನೆ; ಪ್ರಕೃತಿಯ ಬಲಾತ್ಕಾರದಿಂದ ಏನನ್ನು ಕೊಡಬೇಕಾಗುತ್ತದೆಯೊ ಅಷ್ಟನ್ನು ಮಾತ್ರ ತ್ಯಾಗಮಾಡುತ್ತಾನೆ. ವಾಸ್ತವವಾಗಿ ಪ್ರಕೃತಿಯು ಇವನಿಗೆ ಎಷ್ಟು ಕೊಡುತ್ತದೆಯೋ—ಎಂದರೆ ಪ್ರಕೃತಿಯ ಮೂಲಕ ದೈವೀಶಕ್ತಿಗಳು ಎಷ್ಟನ್ನು ಇವನ ಪಾಲಿಗೆ ಮೀಸಲಾಗಿಟ್ಟಿವೆಯೊ, ಅಷ್ಟು ಭಾಗವು ಮಾತ್ರ ಇವನಿಗೆ ದೊರಕುವುದೇ ಹೊರತು ಹೆಚ್ಚಾಗಿಲ್ಲ. ಯಜ್ಞಮಯವಾದ ಪ್ರಪಂಚದಲ್ಲಿ ವಾಸಮಾಡುವ ಸ್ವಾರ್ಥಿಯಾದ ಜೀವಿಯು ಒಬ್ಬ ಕಳ್ಳನಂತೆ; ಎಂದರೆ ಈ ಶಕ್ತಿಗಳು ಕೊಡುವುದೆಲ್ಲವನ್ನೂ ಸ್ವೀಕರಿಸಿ, ತಾನು ಪ್ರತಿಯಾಗಿ ಏನನ್ನೂ ಕೊಡಲು ಇಚ್ಛಿಸುವುದಿಲ್ಲ. ಅವನು ಜೀವನದ ನಿಜವಾದ ಗುರಿಯನ್ನು ಗ್ರಹಿಸಿಲ್ಲ; ಜೀವನವನ್ನೂ, ಕರ್ಮಗಳನ್ನೂ, ಯಜ್ಞದ ಮೂಲಕವಾಗಿ ತನ್ನ ಬೆಳವಳಿಕೆಗೂ ವಿಕಾಸಕ್ಕೂ ಉಪಯೋಗಿಸುವುದಿಲ್ಲ. ಆದುದರಿಂದ ಇಂತಹವನ ಜೀವನವು ವ್ಯರ್ಥವೇಯೆ. ಪ್ರತ್ಯೇಕವಾದ ಜೀವಿಯು ತನ್ನಲ್ಲಿಯೂ ಇತರ ಜೀವಿಗಳಲ್ಲಿಯೂ ಪರಮಾತ್ಮನು ಇದ್ದಾನೆಂದೂ, ಎಲ್ಲ ವ್ಯಾಪಾರಗಳನ್ನೂ ಪ್ರೇರಿಸುತ್ತಾನೆಂದೂ ತಿಳಿದು ಈ ತಿಳಿವಳಿಕೆಗನುಸಾರವಾಗಿ ಕರ್ಮಗಳನ್ನು ಮಾಡುವಾಗಲೆ, ತನ್ನ ಹಿನ್ನೆಲೆಯಲ್ಲಿ ವಿಶ್ವವ್ಯಾಪಕವಾದ ಪ್ರಕೃತಿಯು ಇವುಗಳನ್ನು ಪ್ರೇರಿಸುತ್ತದೆಯೆಂದು ತಿಳಿದಾಗಲೆ, ದೇವತೆಗಳ ಸಹಾಯದಿಂದ ಅದ್ವಿತೀಯನೂ ಅನಂತನೂ ಆದ ಈಶ್ವರನ ಸ್ವರೂಪ ವನ್ನು ತಿಳಿದ ಮೇಲೆಯೆ, ಅವನು ಅಹಂಕಾರದ ಆವರಣವನ್ನು ದಾಟಿ ಪ್ರತ್ಯೇಕತೆ ಯಿಲ್ಲದ ತನ್ನ ಸ್ವರೂಪವನ್ನು ತಿಳಿಯುತ್ತಾನೆ. ತನ್ನ ಆಸಗಳೆ ಕಾರ್ಯಗಳಿಗೆ ನಿಯಾಮಕ (ಪ್ರಚೋದಕ) ಗಳಲ್ಲವೆಂದೂ, ಇವುಗಳಿಗೆ ಸಂಬಂಧಪಡದ ಒಂದು ಧರ್ಮವಿರುವುದೆಂದೂ, ಆ ಧರ್ಮಕ್ಕೆ ತನ್ನ ಆಸೆಗಳನ್ನು ಅಧೀನಮಾಡಿಕೊಳ್ಳ ಬೇಕೆಂದೂ ಅವನು ಅರಿತುಕೊಳ್ಳುತ್ತಾನೆ. ಕೇವಲ ಸ್ವಾರ್ಥಮಯವಾದ ತನ್ನ ಜೀವನವನ್ನು ಇತರರ ಕಷ್ಟಸುಖಗಳನ್ನು ಅರಿತುಕೊಳ್ಳುವ ಧರ್ಮಬದ್ಧವಾದ ಜೀವನ ವನ್ನಾಗಿ ಮಾರ್ಪಡಿಸಿಕೊಳ್ಳುತ್ತಾನೆ. ಇತರ ಜೀವರ ಕಷ್ಟಸುಖಗಳಿಗೆ ಹೆಚ್ಚು ಗಮನ ಕೊಡುತ್ತಾ, ತನ್ನ ಸ್ವಂತ ಕಷ್ಟಸುಖಗಳ ಕಡೆಗೆ ಗಮನವನ್ನು ಕಡಿಮೆಮಾಡುತ್ತಾನೆ. ಸ್ವಾರ್ಥಕ್ಕೂ ಪರಾರ್ಥಕ್ಕೂ ವಿರೋಧವಿದೆಯೆಂದು ಅರಿತು, ತನ್ನಲ್ಲಿ ಪರಾರ್ಥ ಬುದ್ಧಿಯನ್ನು ಹೆಚ್ಚಿಸಿಕೊಳ್ಳುವುದರಿಂದ ತನ್ನ ಆತ್ಮವಿಕಾಸಕ್ಕೆ ಅವಕಾಶವನ್ನು ಕಲ್ಪಿಸಿಕೊಳ್ಳುತ್ತಾನೆ.

ಪ್ರಕೃತಿಯನ್ನೂ, ಅದರಲ್ಲಿರುವ ದಿವ್ಯಶಕ್ತಿಗಳನ್ನೂ ವಿಮರ್ಶಿಸಿ, ಅವುಗಳಿಗೆ ತಾನು ಯಜ್ಞ ಮತ್ತು ಪೂಜೆಗಳನ್ನು ಸಲ್ಲಿಸಬೇಕೆಂದೂ, ವಿಧೇಯನಾಗಿರಬೇಕೆಂದೂ ಅರಿತುಕೊಳ್ಳುತ್ತಾನೆ. ಈ ಶಕ್ತಿಗಳು ಮತ್ತು ಅವುಗಳ ನಿಯಮಗಳಿಗೆ ಅನುಸಾರ ವಾಗಿಯೆ ಸ್ಥೂಲಪ್ರಪಂಚದ ಮತ್ತು ಮನಸ್ಸಿನ ವ್ಯಾಪಾರಗಳು ನಡೆಯುತ್ತವೆ. ಈ ಶಕ್ತಿಗಳೂ ಮತ್ತು ಅವುಗಳ ಪ್ರಭಾವವೂ ಅವನ ಮನಸ್ಸಿನಲ್ಲಿ ಹೆಚ್ಚು ಹೆಚ್ಚಾಗಿ ನೆಲೆಸಿದಷ್ಟೂ, ಅವನ ಶಕ್ತಿ, ಜ್ಞಾನ, ಮತ್ತು ಸತ್ಕರ್ಮ, ಇವು ಹೆಚ್ಚುವುವಲ್ಲದೆ ಇವುಗಳಿಂದ ಉಂಟಾಗುವ ತೃಪ್ತಿಯೂ ಹೆಚ್ಚುವುದು. ಈ ರೀತಿಯಾಗಿ ಅವನು ಅಹಂಭಾವಯುಕ್ತವಾದ ಮತ್ತು ಕೇವಲ ಐಹಿಕದೃಷ್ಟಿಯನ್ನುಳ್ಳ ಜೀವನದೊಂದಿಗೆ, ಧರ್ಮದೃಷ್ಟಿಯನ್ನೂ, ಸೂಕ್ಷ್ಮಲೋಕಗಳಿಗೆ ಸಂಬಂಧಿಸಿದ ಜ್ಞಾನವನ್ನೂ ಸೇರಿಸು ತ್ತಾನೆ; ಪರಿಚ್ಛಿನ್ನವಾದ ಜೀವನದಿಂದ ಅಪರಿಚ್ಛಿನ್ನವಾದ, ಅನಂತವಾದ ಜೀವನ ವನ್ನು ಮುಟ್ಟಲು ಅರ್ಹತೆಯನ್ನು ಪಡೆದುಕೊಳ್ಳುತ್ತಾನೆ.

ಆದರೆ ಇದು ಬಹುಕಾಲ ಹಿಡಿಯುವ ಮಧ್ಯದ ಹಂತ ಮಾತ್ರ. ಇಂತಹ ಜೀವನವೂ ಕೂಡ ಆಸೆಯ ಆಕರ್ಷಣೆಗೆ ಇನ್ನೂ ಒಳಪಟ್ಟೇ ಇದೆ. ಆದರೆ ಈ ಆಸೆಯು ಧರ್ಮಕ್ಕೆ ಅಧೀನವಾಗಿದೆ. ಪರಿಶುದ್ಧವಾಗಿದ್ದರೂ ಅಹಂಭಾವದಿಂದ ಕೂಡಿದೆ— ಎಂದರೆ ಮಾಡುವವನು ನಾನು ಎಂಬ ಭಾವನೆಯಿಂದ ಕೂಡಿದೆ. ಅವನ ವ್ಯಕ್ತಿ ಜೀವದ ಆಕಾಂಕ್ಷೆಗಳ ಮತ್ತು ಅಭಿಪ್ರಾಯಗಳ ಸುತ್ತಲೂ ಅವನ ಪ್ರಪಂಚವೆಲ್ಲ ಹೆಣೆದುಕೊಂಡಿದೆ. ಈ ಮಧ್ಯದ ಹಂತದಲ್ಲಿರುವವನ ಜೀವನವು ಪ್ರಕೃತಿವ್ಯಾಪಾರ ಗಳಿಗೆ ಒಳಪಟ್ಟಿದೆ; ಆದರೆ ಈ ಪ್ರಕೃತಿಯು ಹೆಚ್ಚು ಹೆಚ್ಚಾಗಿ ಸೂಕ್ಷ್ಮವೂ ಸಾತ್ವಿಕವೂ ಆಗಿರುವ ಪ್ರಕೃತಿ. ಈ ಹಂತವೆಲ್ಲವೂ ಪರಿಚ್ಛಿನ್ನನೂ ಪೃಥಕ್-ಭಾವವುಳ್ಳವನೂ ಆದ ಕ್ಷರಪುರುಷನ ಕ್ಷೇತ್ರಕ್ಕೆ ಒಳಪಟ್ಟಿದೆ; ಆದರೆ ಈ ಕ್ಷೇತ್ರವು ವಿಸ್ತರಿಸಲ್ಪಟ್ಟಿರುವ ಕ್ಷೇತ್ರ. ನಿಜವಾದ ಆತ್ಮಜ್ಞಾನವೂ, ಕರ್ಮಗಳನ್ನು ಮಾಡುವ ಸರಿಯಾದ ವಿಧಾನವೂ ಇದರ ಮುಂದಿನ ಹಂತ. ಜ್ಞಾನದಿಂದ ಮಾಡಿದ ಯಜ್ಞವೆ ಶ್ರೇಷ್ಠತಮವಾದ ಯಜ್ಞ; ಅದೆ ಪರಿಪೂರ್ಣವಾದ ಕರ್ಮ. ಈ ಜ್ಞಾನವು ಅವನಿಗೆ ಉಂಟಾಗ ಬೇಕಾದರೆ ತನ್ನಲ್ಲಿರುವ ಆತ್ಮನೂ, ಇತರರಲ್ಲಿರುವ ಆತ್ಮನೂ ಒಂದೆ ಎಂದು ಅವನು ಅರಿಯಬೇಕು; ಇದು ಅವನ ಅಹಂಭಾವಯುಕ್ತವಾದ, ಪ್ರತ್ಯೇಕವಾದ ಸ್ವರೂಪ ಕ್ಕಿಂತಲೂ ಮೇಲ್ಪಟ್ಟದ್ದು; ಅನಂತವಾದ ನಿರಾಕಾರವಾದ ಈ ವಿಶ್ವಾತ್ಮನಲ್ಲೆ ಎಲ್ಲವೂ ಇವೆ, ಜೀವಿಸುತ್ತವೆ. ತಾನು ಯಜ್ಞಗಳನ್ನು ಅರ್ಪಿಸುವ ದೇವತೆಗಳೆಲ್ಲರೂ ಈ

ವಿಶ್ವಾತ್ಮನ ಅಂಶಗಳೆಂದು ಅರಿಯಬೇಕು. ಈಶ್ವರನ ವಿಷಯವಾಗಿ ತಾನು ಹೊಂದಿರುವ ಸಂಕುಚಿತವಾದ ಮತ್ತ ಪರಿಚ್ಛಿನ್ನವಾದ ಅಭಿಪ್ರಾಯಗಳೆಲ್ಲವನ್ನೂ ಬಿಟ್ಟು, ಈ ಪುರುಷನೆ ಪರಾತ್ಪರನೆಂದೂ; ಅವಾಙ್ಮನಸ ಗೋಚರನೆಂದೂ; ಪರಿಚ್ಛಿನ್ನನೂ ಮತ್ತು ಅಪರಿಚ್ಛಿನ್ನನೂ ಎರಡೂ ಆಗಿದ್ದಾನೆಂದೂ; ಏಕನೂ ಮತ್ತು ಅನೇಕನೂ ಆಗಿದ್ದಾನೆಂದೂ; ಪ್ರಕೃತಿಯಲ್ಲಿ ವ್ಯಕ್ತವಾದರೂ ಪ್ರಕೃತಿಗೆ ಅತೀತನಾಗಿದ್ದಾನೆಂದೂ; ಅನಂತಗುಣಗಳ ಮೂಲಕ ತನ್ನ ಶಕ್ತಿಯನ್ನು ವ್ಯಕ್ತಪಡಿಸಿದರೂ ಗುಣಾತೀತನಾಗಿದ್ದಾನೆಂದೂ ಅರಿತಾಗ, ಈ ಹಂತವನ್ನು ದಾಟಿ ಮುಂದಕ್ಕೆ ಹೋಗುತ್ತಾನೆ. ಈ ವಿಶ್ವಾತ್ಮನೆ ಪುರುಷೋತ್ತಮನು; ಎಲ್ಲ ಯಜ್ಞಗಳನ್ನು ಅರ್ಪಿಸುವುದು ಇವನಿಗೇಯೆ. ಆದರೆ ಆ ಯಜ್ಞದಿಂದ ಬರುವ ನಶ್ವರವಾದ ಫಲಗಳಿಗಾಗಿ ಅಲ್ಲ—ಜೀವನು ಪರಮಾತ್ಮನನ್ನು ಪಡೆಯುವುದಕ್ಕಾಗಿ; ಈಶ್ವರನೊಡನೆ ಐಕ್ಯವನ್ನು ಹೊಂದಿ ಸಾಮರಸ್ಯದಿಂದ ಇರುವುದಕ್ಕಾಗಿ.

ಇದನ್ನೆ ಇನ್ನೊಂದು ಬಗೆಯಲ್ಲಿ ಹೀಗೆ ಹೇಳಬಹುದು. ಮುಕ್ತಿಯನ್ನು ಪಡೆಯಲು ಮನುಷ್ಯನು ಹೆಚ್ಚುಹೆಚ್ಚಾಗಿ ಅಹಂಕಾರ ಮಮಕಾರಗಳನ್ನು ಬಿಡಬೇಕು. ಪರಿಶುದ್ಧವೂ, ಶ್ರೇಷ್ಠವೂ, ಏಕವೂ, ಎಲ್ಲ ಭೂತಗಳಲ್ಲಿ ಅಂತರ್ಯಾಮಿಯೂ ಆದ ಅಪರಿಚ್ಛಿನ್ನವಾದ ಮತ್ತು ನಿರಾಕಾರವಾದ ಚೈತನ್ಯಕ್ಕೆ ತನ್ನ ಹೃದಯದಲ್ಲಿ ಮನುಷ್ಯನು ಎಷ್ಟುಹೆಚ್ಚಾಗಿ ಎಡೆಕೊಡುವನೊ, ಎಂದರೆ, ಪ್ರಕೃತಿಯಲ್ಲಿಯೂ, ಜೀವನದಲ್ಲಿಯೂ ಮತ್ತು ತನ್ನ ಅಂತರಂಗದಲ್ಲಿಯೂ ಅಪರಿಚ್ಛಿನ್ನವಾದ ಮತ್ತು ನಿರಾಕಾರವಾದ, ಅಹಂಭಾವರಹಿತವಾದ ಭಾವನೆಗಳಿಗೆ ಎಷ್ಟು ಹೆಚ್ಚು ಅವಕಾಶ ಕೊಡುವನೊ ಮತ್ತು ಪರಿಚ್ಛಿನ್ನವಾದ ಸ್ವಾರ್ಥಯುಕ್ತವಾದ ಸಂಕುಚಿತ ಭಾವನೆಗಳಿಂದ ಸ್ವತಂತ್ರನಾಗುವನೊ ಅಷ್ಟು ಹೆಚ್ಚಾಗಿ ಅವನಿಗೆ ಹೃದಯವೈಶಾಲ್ಯವೂ, ಶಾಂತಿಯೂ ಮತ್ತು ಶ್ರೇಷ್ಠವಾದ ಆನಂದವೂ ಲಭಿಸುತ್ತವೆ. ಇದು ಪುರಾತನಕಾಲದಿಂದಲೂ ಯಾವಾಗಲೂ ಅನುಭವಕ್ಕೆ ಬಂದಿರುವ ವಿಷಯ. ಪರಿಚ್ಛಿನ್ನವಾದ ವಸ್ತುಗಳಿಂದ ಹೊಂದಬಹುದಾದ, ಪ್ರತ್ಯೇಕವಾದ ಜೀವಿಯು ತನಗಾಗಿ ಪಡೆಯಬಲ್ಲ, ತೃಪ್ತಿಯೂ, ಸಂತೋಷವೂ, ಸುಖವೂ ಪರಿಚ್ಛಿನ್ನವೂ, ಅಲ್ಪವೂ, ನಶ್ವರವೂ ಆಗಿರುತ್ತವೆ. ಅಹಂಭಾವಯುಕ್ತವಾದ ಪ್ರತ್ಯೇಕವಾದ ಸ್ಥಿತಿಯಲ್ಲೆ ಇರುವವನಿಗೆ, ಪರಿಮಿತವಾದ ಸುಖಗಳಿಂದ ಮತ್ತು ಸಂಕುಚಿತವಾದ ಅಭಿಪ್ರಾಯಗಳಿಂದ ಕೂಡಿರುವ ಮನುಷ್ಯನಿಗೆ ಈ ಪ್ರಪಂಚವು ಅನಿತ್ಯವೆಂದೂ, ದುಃಖದಿಂದ ತುಂಬಿದೆಯೆಂದೂ ಅನುಭವವಾಗುತ್ತದೆ. ಪರಿಚ್ಛಿನ್ನವಾದ ಜೀವನಿಗೆ ತೃಪ್ತಿಯಿರುವುದಿಲ್ಲ; ಯಾವಾಗಲೂ ಒಂದು

ವಿಧವಾದ ಅತೃಪ್ತಿ ಇರುತ್ತದೆ; ಏತಕ್ಕೆಂದರೆ, ಪರಿಚ್ಛಿನ್ನತೆಯು ಜೀವನದ ಶ್ರೇಷ್ಠವಾದ ಸತ್ಯವಾಗಲಿ ಅಥವಾ ಪೂರ್ಣತ್ವವಾಗಲಿ ಅಲ್ಲ; ಅಪರಿಚ್ಛಿನ್ನತೆ (ಅನಂತತೆ)ಯನ್ನು ಹೊಂದುವವರೆಗೂ ಜೀವನವು ಪೂರ್ಣವಾಗುವುದಿಲ್ಲ. ಈ ಕಾರಣದಿಂದಲೆ ಗೀತೆಯಲ್ಲಿ ಕರ್ಮಯೋಗದ ಉಪದೇಶದ ಪ್ರಾರಂಭದಲ್ಲಿ ಬ್ರಾಹ್ಮೀಸ್ಥಿತಿಯನ್ನೂ, ಅಹಂಭಾವವನ್ನು ಮೀರಿದ ಜೀವನವನ್ನೂ ಒತ್ತಿ ಹೇಳಿದೆ. ಪುರಾತನ ಕಾಲದಿಂದಲೂ ಮಹರ್ಷಿಗಳ ಉಪಾಸನೆಯು ಪರಮಧ್ಯೇಯವು ಇದೇ ಆಗಿದೆ. ಕ್ಷರವೂ ಮತ್ತು ಅಶಾಶ್ವತವೂ ಆದ ಈ ಲೋಕದ ನಾನಾ ಮುಖವಾದ ವ್ಯಾಪಾರಗಳು ಇವುಗಳಿಗೆ ಅತೀತವಾದ ನಿರಾಕಾರವೂ ಅನಂತವೂ ಮತ್ತು ಏಕವೂ ಆದ ವಸ್ತುವಿನಲ್ಲಿ ಶಾಶ್ವತವಾದ ಶಾಂತಿಯನ್ನೂ ಅಭಯವನ್ನೂ ಪ್ರತಿಷ್ಠೆಯನ್ನೂ ಹೊಂದುತ್ತವೆ. ಈ ವಸ್ತುವೇ ಕೂಟಸ್ಥನೂ (ಅಚಲನೂ) ಅಕ್ಷರನೂ ಆದ ಪುರುಷ. ಇದನ್ನು ನಾವು ತಿಳಿದುಕೊಂಡಾಗ ನಮ್ಮ ಪ್ರಜ್ಞೆಯನ್ನು ಪರಿಚ್ಛಿನ್ನವಾದ ಮತ್ತು ಪ್ರತ್ಯೇಕವಾದ ವ್ಯಕ್ತಿತ್ವದಿಂದ ಅನಂತವಾದ ಮತ್ತು ನಿರಾಕಾರವಾದ ಬ್ರಹ್ಮನ ಮಟ್ಟಕ್ಕೆ ಏರಿಸುವುದು ಆಧ್ಯಾತ್ಮಿಕ ಜೀವನದ ಮೊದಲನೆಯ ಹಂತವೆಂಬುದು ಸ್ಪಷ್ಟವಾಗುತ್ತದೆ. ಹೀಗೆ ಪ್ರತ್ಯೇಕವಾದ ವ್ಯಕ್ತಿತ್ವ ಮತ್ತು ಅದರ ಕರ್ಮಗಳು, ಅವುಗಳ ಫಲಗಳು ಎಂಬ ಅಜ್ಞಾನವನ್ನು ಹೋಗಲಾಡಿಸುವ ಜ್ಞಾನವು ಯಾವುದೆಂದರೆ ಎಲ್ಲ ಭೂತಗಳನ್ನೂ ಈ ಏಕವಾದ ಬ್ರಹ್ಮನಲ್ಲಿ ನೋಡುವುದು. ಭದ್ರವಾದ ಆಧ್ಯಾತ್ಮಿಕ ತಳಹದಿ ಮತ್ತು ನಿಜವಾದ ಶಾಂತಿಯನ್ನು ಪಡೆಯಲು ಬ್ರಹ್ಮನಲ್ಲೇ ವಾಸಮಾಡಬೇಕು.

ಈ ದೊಡ್ಡ ಪರಿವರ್ತನೆಯು ಉಂಟಾಗುವುದಕ್ಕೆ ಎರಡು ಮಾರ್ಗಗಳಿವೆ—ಜ್ಞಾನದ ಮಾರ್ಗ ಮತ್ತು ಕರ್ಮಗಳ ಮಾರ್ಗ. ಇವೆರಡನ್ನೂ ಗೀತೆಯು ಚೆನ್ನಾಗಿ ಸಮನ್ವಯಮಾಡಿ ಒಂದನ್ನಾಗಿ ಮಾಡುತ್ತದೆ. ಜ್ಞಾನಮಾರ್ಗವೇನೆಂದರೆ: ಹೊರಕ್ಕೆ ಮುಖಮಾಡಿಕೊಂಡಿರುವ ಇಂದ್ರಿಯಗಳ ಮತ್ತು ಮನಸ್ಸಿನ ವ್ಯಾಪಾರಗಳಲ್ಲಿ ಆಸಕ್ತವಾಗಿರುವ ಬುದ್ಧಿಯನ್ನು ಹಿಂತಿರುಗಿಸಿ ಪುರುಷ ಅಥವಾ ಬ್ರಹ್ಮನ ಕಡೆಗೆ ತಿರುಗುವಂತೆ ಮಾಡುವುದು; ಬಹುಮುಖವಾದ ಮನಸ್ಸಿನ ವ್ಯಾಪಾರಗಳಿಂದಲೂ, ಆಸೆಯ ನಾನಾ ಶಾಖೆಗಳಿಂದಲೂ ಬುದ್ಧಿಯನ್ನು ಹಿಂತಿರುಗಿಸಿ ಅದ್ವಿತೀಯವಾದ ಬ್ರಹ್ಮನಲ್ಲಿ ನೆಲೆಸುವಂತೆ ಮಾಡುವುದು. ಇಷ್ಟನ್ನು ಮಾತ್ರ ಅನುಸರಿಸಿದರೆ, ಈ ಮಾರ್ಗವು ಸಂಪೂರ್ಣ ಕರ್ಮಸನ್ಯಾಸದ ಕಡೆಗೂ ಕರ್ಮರಹಿತವಾದ ತಾಟಸ್ಥ್ಯದ ಕಡೆಗೂ ನಮ್ಮನ್ನು ಒಯ್ದು ಪ್ರಕೃತಿಗೂ ಪುರುಷನಿಗೂ ಯಾವ ವಿಧವಾದ ಸಂಬಂಧವೂ ಇಲ್ಲ

ದಂತೆ ಮಾಡುವುವೆಂದು ತೋರಬಹುದು. ಆದರೆ ವಾಸ್ತವವಾಗಿ ಈ ವಿಧವಾದ ಸಂಪೂರ್ಣವಾದ ಕರ್ಮಸನ್ಯಾಸ, ತಾಟಸ್ಥ್ಯ ಮತ್ತು ಪ್ರಕೃತಿ-ಪುರುಷರಿಗೆ ಸಂಬಂಧವಿಲ್ಲದಂತೆ ಮಾಡುವುದು, ಇವು ಸಾಧ್ಯವಲ್ಲ. ಪ್ರಕೃತಿ-ಪುರುಷರು ಸೃಷ್ಟಿಯಲ್ಲಿ ಅವಳಿ ತತ್ವಗಳು; ಅವುಗಳನ್ನು ಬೇರೆ ಮಾಡುವುದಕ್ಕಾಗುವುದಿಲ್ಲ; ನಾವು ಸೃಷ್ಟಿಯಲ್ಲಿರುವವರೆಗೂ ಪ್ರಕೃತಿ ವ್ಯಾಪಾರಗಳನ್ನು ಮಾಡಲೇಬೇಕು; ಇನ್ನೂ ಬೆಳೆಯದೆ ಇರುವ ಜೀವನು ಮಾಡುವ ಕರ್ಮಗಳಿಗಿಂತ ನಮ್ಮ ಕರ್ಮಗಳು ಬೇರೆಯಾಗಿದ್ದು, ಬೇರೆ ರೂಪಗಳಲ್ಲಿರಬಹುದೆ ವಿನಾ ಕರ್ಮಗಳನ್ನು ಸಂಪೂರ್ಣವಾಗಿ ಬಿಡುವುದಕ್ಕಾಗುವುದಿಲ್ಲ. ಸನ್ಯಾಸವೇನೊ ಇರಲೇ ಬೇಕು; ಆದರೆ ನಿಜವಾದ ಸನ್ಯಾಸವು ಕರ್ಮಗಳಿಂದ ಓಡಿ ಹೋಗುವುದಲ್ಲ; ಅಹಂಕಾರವನ್ನೂ ಆಸೆಗಳನ್ನೂ ಗೆಲ್ಲುವುದು. ಕರ್ಮಗಳನ್ನು ಮಾಡುತ್ತಾ ಇದ್ದರೂ ಅವುಗಳ ಫಲಗಳಲ್ಲಿ ಆಸಕ್ತಿಯಿಲ್ಲದೆ ಇರುವುದು ಸರಿಯಾದ ಮಾರ್ಗ. ಪ್ರಕೃತಿಯು ಕರ್ತೃವೆಂದು ತಿಳಿದು, ಕರ್ಮಗಳ ಮಾಡುವಿಕೆಯನ್ನು ಪ್ರಕೃತಿಗೆ ಬಿಟ್ಟು, ಕೇವಲ ಸಾಕ್ಷಿಯಾಗಿಯೂ, ಒಡೆಯನಾಗಿಯೂ ಆತ್ಮನಲ್ಲಿದ್ದುಕೊಂಡು ಪ್ರಕೃತಿಯ ಕಾರ್ಯಗಳನ್ನು ನೋಡುತ್ತಾ, ಕರ್ಮಗಳಲ್ಲಾಗಲಿ ಕರ್ಮಫಲಗಳಲ್ಲಾಗಲಿ ಸಂಗವಿಲ್ಲದೆ ಇರುವುದೆ ಸರಿಯಾದ ಮಾರ್ಗ. ಅಹಂಭಾವವನ್ನು ಗೆದ್ದ ಜೀವಾತ್ಮನು ಶಾಂತಿಯನ್ನು ಹೊಂದಿ ನಿರಾಕಾರವಾದ ಪರಮಾತ್ಮನಲ್ಲಿ ಒಂದಾಗುತ್ತಾನೆ; ಆಗ ಅವನ ದೃಷ್ಟಿಗೆ ಜಗತ್ತಿನ ವ್ಯಾಪಾರಗಳೆಲ್ಲವೂ, ಎಲ್ಲ ಜೀವಿಸುವುದೂ, ಚಲಿಸುವುದೂ, ಬೆಳೆಯುವುದೂ, ಎಲ್ಲವೂ ಪ್ರಕೃತಿಯ ಪ್ರೇರಣೆಯಿಂದ ನಡೆಯುವುದೆಂದೂ, ಈ ಅನಂತನಾದ ಪರಮಾತ್ಮನೊಳಗೆ ನಡೆಯುವುವೆಂದೂ ಗೋಚರವಾಗುತ್ತದೆ. ಪರಿಚ್ಛಿನ್ನವಾದ ನಮ್ಮ ಜೀವನವು ಈ ಪ್ರಕೃತಿ ವ್ಯಾಪಾರಗಳಲ್ಲಿ ಒಂದು ಅಂಶವೆಂದೂ, ನಮ್ಮದೆಂದು ಈಗ ತಿಳಿದಿರುವ ಕರ್ಮಗಳು ಪ್ರಕೃತಿಯಿಂದಲೆ ಮಾಡಲ್ಪಡುತ್ತವೆಯೆ ಹೊರತು ನಮ್ಮಿಂದಲ್ಲವೆಂದೂ, ನಿಜವಾಗಿಯೂ ನಾವು ನಿರ್ವಿಕಾರವಾದ ಬ್ರಹ್ಮಸ್ವರೂಪವೆ ಎಂದೂ ಅನುಭವವಾಗುತ್ತದೆ. ಅಹಂಭಾವದಿಂದ ಜೀವಾತ್ಮನು ತಾನು ಕರ್ಮಗಳನ್ನು ಮಾಡುತ್ತೇನೆ ಎಂದು ತಿಳಿದಿದ್ದನು; ಆದರೆ ಈಗ ಆ ಜೀವಾತ್ಮನು ಲಯವಾಗಿದ್ದಾನೆ—ಈ ಕರ್ಮಗಳು ಪ್ರಕೃತಿಯ ವ್ಯಾಪಾರಗಳೇ ಹೊರತು ನಮ್ಮದಲ್ಲ. ನಾನೆ ಬೇರೆ ಎಂಬ ಪ್ರತ್ಯೇಕತೆಸಹಿತವಾದ ಜೀವಾತ್ಮನನ್ನು ಲಯಮಾಡಿ, ನಾವು ನಮ್ಮ ಜೀವನದಲ್ಲಿಯೂ ಪ್ರಜ್ಞೆಯಲ್ಲಿಯೂ ಅಹಂಕಾರಾಹಿತ್ಯವನ್ನೂ ಪ್ರತ್ಯೇಕಭಾವದ ನಾಶವನ್ನೂ ಪಡೆದಿದ್ದೇವೆ; ಆಸೆಗಳ ತ್ಯಾಗದಿಂದ, ನಮ್ಮ ಪ್ರಕೃತಿಯ ವ್ಯಾಪಾರಗಳಲ್ಲಿ ಅಹಂಭಾವದ ರಾಹಿತ್ಯವನ್ನು

ಪಡೆದಿದ್ದೇವೆ. ಆದುದರಿಂದ ಕರ್ಮವನ್ನು ಮಾಡದೆ ಇರುವುದರಲ್ಲಲ್ಲದೆ, ಮಾಡುವುದರಲ್ಲೂ ಕೂಡ ನಾವು ಸ್ವತಂತ್ರರಾಗಿದ್ದೇವೆ. ಸ್ವಾತಂತ್ರ್ಯವೆಂದರೆ ನಮ್ಮ ಸ್ಥೂಲದೇಹ ಅಥವಾ ಮನಸ್ಸಿನ ಜಡತೆಯಾಗಲಿ ಕರ್ಮಗಳನ್ನು ಮಾಡದೆ ಇರುವ ಸ್ಥಿತಿಯಾಗಲಿ ಅಲ್ಲ; ಅಥವಾ ಕರ್ಮವನ್ನು ಮಾಡಿದೊಡನೆಯೆ ನಾವು ಸ್ವಾತಂತ್ರ್ಯವನ್ನು ಕಳೆದುಕೊಳ್ಳುವುದೂ ಇಲ್ಲ. ಪ್ರಕೃತಿ ವ್ಯಾಪಾರದ ಭರದಲ್ಲಿಯೂ ಕೂಡ, ನಮ್ಮಲ್ಲಿರುವ ಅಹಂಭಾವ ರಹಿತನಾದ ಅಂತರಾತ್ಮನು ಶಾಂತನಾಗಿಯೂ, ತಟಸ್ಥನಾಗಿಯೂ, ಬಂಧರಹಿತನಾಗಿಯೂ ಇರುತ್ತಾನೆ.

ಈ ರೀತಿಯಾದ, ಅಹಂಭಾವಕ್ಕೆ ಅತೀತವಾದ ಸ್ಥಿತಿಯಲ್ಲಿ ಬರುವ ಸ್ವಾಂತತ್ರ್ಯವು ನಿಜವಾದುದು, ಪೂರ್ಣವಾದುದು ಮತ್ತು ಆವಶ್ಯಕವಾದುದು; ಆದರೆ ಇದೇ ಅಂತಿಮವಾದುದೇ? ಇದಕ್ಕಾಚೆ ಏನೂ ಇಲ್ಲವೇ? ಜೀವನವೆಲ್ಲವೂ, ಸೃಷ್ಟಿಯೆಲ್ಲವೂ ಪ್ರಕೃತಿಯು ಪುರುಷನಿಗೆ ಸಮರ್ಪಿಸುವ ಯಜ್ಞ; ಈ ವ್ಯಾಪಾರಗಳು ಪುರುಷನಲ್ಲಿ ನಡೆಯುವವು. ಆದರೆ ಇದರ ನಿಜವಾದ ಸ್ವರೂಪವು ನಮ್ಮ ಅಹಂಭಾವದಿಂದಲೂ, ಆಸೆಗಳಿಂದಲೂ, ಪರಿಮಿತವಾದ ಬಹುರೂಪಗಳುಳ್ಳ ಪ್ರತ್ಯೇಕವಾದ ವ್ಯಕ್ತಿತ್ವಗಳಿಂದಲೂ ಮರೆಮಾಡಲ್ಪಟ್ಟಿದೆ. ಅಹಂಭಾವದಿಂದ ಕೂಡಿದ ಪ್ರತ್ಯೇಕವಾದ ವ್ಯಕ್ತಿತ್ವವನ್ನೂ ಆಸೆಗಳನ್ನೂ ಅಹಂಕಾರ ರಾಹಿತ್ಯದಿಂದ ದೂರಮಾಡಿ, ನಿರ್ವಿಕಾರನಾದ ಈಶ್ವರನನ್ನು ಪಡೆಯಬಹುದೆಂಬ ವಿಚಾರವನ್ನು ಹಿಂದೆಯೇ ಹೇಳಿದೆ; ಎಂದರೆ, ಎಲ್ಲವೂ ಯಾವುದರಲ್ಲಿದೆಯೊ ಆ ಏಕವಾದ ಪರವಸ್ತುವಿನಲ್ಲಿ ಒಂದಾಗಿದ್ದೇವೆ. ಯಜ್ಞಕರ್ಮಗಳು ನಡೆಯುತ್ತಲೆ ಇರುತ್ತವೆ; ಆದರೆ ಅದಕ್ಕೆ ಕರ್ತೃಗಳು ನಾವಲ್ಲ, ಪ್ರಕೃತಿಯಿಂದಲೆ ಮಾಡಲ್ಪಡುತ್ತವೆ; ಈ ಪ್ರಕೃತಿಯು ನಮ್ಮ ಶರೀರ, ಇಂದ್ರಿಯ ಮತ್ತು ಮನಸ್ಸುಗಳ ಮೂಲಕ ಕರ್ಮಗಳನ್ನು ಮಾಡುತ್ತದೆ; ಈ ಕರ್ಮಗಳು ಅಹಂಭಾವಕ್ಕೆ ಅತೀತವಾದ ನಮ್ಮ ಅನಂತವಾದ ಆತ್ಮನಲ್ಲಿ ನಡೆಯುತ್ತವೆ. ಹಾಗಾದರೆ ಈ ಕರ್ಮಗಳು ಮಾಡಲ್ಪಡುವುದು ಯಾರಿಗಾಗಿ? ಈ ಯಜ್ಞದ ಉದ್ದೇಶವೇನು? ಅಹಂಭಾವಕ್ಕೆ ಅತೀತನಾದ ಈ ಆತ್ಮನಿಗೆ ಯಾವ ವಿಧವಾದ ವ್ಯಾಪಾರಗಳಾಗಲಿ ಆಸೆಗಳಾಗಲಿ ಇಲ್ಲ; ಅದು ಸಾಧಿಸಬೇಕಾದ ಗುರಿ ಏನೂ ಇಲ್ಲ; ಈ ಪ್ರಪಂಚದಲ್ಲಿ ಯಾವುದರಿಂದಲೂ ಅದಕ್ಕೆ ಆಗಬೇಕಾದುದು ಏನೂ ಇಲ್ಲ; ಅದು ತನಗಾಗಿಯೆ ತನ್ನ ಆನಂದದಲ್ಲಿಯೆ ಇದೆ; ತನ್ನ ಅಕ್ಷರವಾದ ಶಾಶ್ವತವಾದ ಸ್ಥಿತಿಯಲ್ಲಿದೆ. ಈ ಶಾಶ್ವತವಾದ ಸ್ಥಿತಿಯನ್ನೂ, ಆನಂದವನ್ನೂ ಪಡೆಯುವುದಕ್ಕಾಗಿ ನಾವು ನಿಷ್ಕಾಮ ಕರ್ಮಗಳನ್ನು ಮಾಡಬಹುದು; ಆದರೆ ಈ

ಸ್ಥಿತಿಯನ್ನು ಹೊಂದಿದ ಮೇಲೆ ಕರ್ಮಗಳನ್ನು ಮಾಡಿದ ಉದ್ದೇಶವು ಸಿದ್ಧಿಸಿದಂತಾಯಿತು ; ಇನ್ನುಮೇಲೆ ಯಜ್ಞಕರ್ಮವನ್ನು ಮಾಡಬೇಕಾದ ಅವಶ್ಯಕತೆಯಿಲ್ಲ. ಆದರೆ ಪ್ರಕೃತಿಯು ತನ್ನ ವ್ಯಾಪಾರಗಳನ್ನು ಮುಂದುವರಿಸುವುದರಿಂದ ಕರ್ಮಗಳು ಮಾಡಲ್ಪಡುತ್ತವೆ. ಆದರೆ ಈ ಕರ್ಮಗಳಿಂದ ಯಾವ ಉದ್ದೇಶವನ್ನೂ ಸಾಧಿಸಬೇಕಾಗಿಲ್ಲ. ಮುಕ್ತಿಯನ್ನು ಪಡೆದನಂತರವೂ ನಾವು ಕರ್ಮಗಳನ್ನು ಮಾಡುತ್ತಾ ಇರುವುದಕ್ಕೆ ಕಾರಣವಿದೇಯೆ—ಪ್ರಕೃತಿಯು ನಮ್ಮ ಪರಿಚ್ಛಿನ್ನವಾದ ದೇಹ ಮತ್ತು ಮನಸ್ಸಿನಿಂದ ಕರ್ಮಗಳನ್ನು ಮಾಡಿಸುತ್ತದೆ.

ಇಷ್ಟೆ ಆದರೆ, ನಾವು ಮಾಡಬೇಕಾದ ಕರ್ಮಗಳನ್ನು ಆದಷ್ಟು ಕಡಿಮೆಮಾಡಬಹುದಲ್ಲವೆ ? ನಮ್ಮದೇಹದ ಮೇಲೆ ಪ್ರಕೃತಿಯ ಪ್ರಭುತ್ವವೆಷ್ಟಿದೆಯೊ ಅಷ್ಟುಮಾತ್ರ ಕರ್ಮಗಳನ್ನು ಮಾಡಿದರೆ ಸಾಕು. ಅಥವಾ, ಕರ್ಮಗಳನ್ನು ಮಾಡುವುದೂ ಮಾಡದೆ ಇರುವುದೂ ಎರಡೂ ಒಂದೇ ಆದಮೇಲೆ, ಕರ್ಮಗಳನ್ನು ಕಡಿಮೆ ಮಾಡದಿದ್ದರೂ, ನಾವು ಮಾಡುವ ಕರ್ಮಗಳು ಎಂತಹವುಗಳಾಗಿದ್ದರೇನು ? ಆದುದರಿಂದ ಜ್ಞಾನವನ್ನು ಪಡೆದ ಮೇಲೆ ಅರ್ಜುನನು ಕುರುಕ್ಷೇತ್ರದ ಯುದ್ಧವನ್ನು ತನ್ನ ಹಳೆಯ ಕ್ಷತ್ರಿಯಧರ್ಮಕ್ಕನುಸಾರವಾಗಿ ಮಾಡಬಹುದು ; ಅಥವಾ ಯುದ್ಧವನ್ನು ತೊರೆದು, ತನ್ನಲ್ಲಿ ಹೊಸದಾಗಿ ಉತ್ಪನ್ನವಾದ ಶಾಂತಿಯ ಮನೋಭಾವವನ್ನೆ ಅನುಸರಿಸಿ, ಸನ್ಯಾಸಿಯ ಜೀವನವನ್ನೂ ಅನುಸರಿಸಬಹುದಲ್ಲವೆ ? ಇವೆರಡರಲ್ಲಿ ಯಾವ ಮಾರ್ಗವನ್ನು ಅನುಸರಿಸುತ್ತಾನೆಂಬುದು ಮುಖ್ಯವಲ್ಲ ; ಅಪ್ರಕೃತವಾದ ವಿಚಾರ. ಅಥವಾ ಎರಡನೆಯ ಮಾರ್ಗವೆ ಮೇಲೆಂದು ಹೇಳಬಹುದು ; ಹಿಂದಿನ ವಾಸನೆಯಿಂದ ಇವನ ಮನಸ್ಸಿನ ಮೇಲೆ ಪ್ರಕೃತಿಯು ಹೊಂದಿರುವ ಪ್ರಭಾವವು ಎರಡನೆಯ ಮಾರ್ಗವನ್ನು ಅನುಸರಿಸಿದರೆ ಕುಗ್ಗುತ್ತದೆ ; ಅವನ ದೇಹವು ಬಿದ್ದುಹೋದ ಮೇಲೆ ಅವನು ನಿರ್ವಿಕಾರವೂ ಅನಂತವೂ ಆದ ಪುರುಷನನ್ನು ತಪ್ಪದೆ ಸೇರುತ್ತಾನೆ ; ಅನಿತ್ಯವಾದ ಮತ್ತು ದುಃಖಮಯವಾದ ಈ ಲೋಕದ ಕಷ್ಟಕ್ಕೆ ಅವನು ಪುನಃ ಸಿಕ್ಕುವುದಿಲ್ಲ.

ಮೇಲಿನ ವಾದಸರಣಿಯು ನಿಜವಾದರೆ, ಗೀತೆಯ ಉಪದೇಶವು ವ್ಯರ್ಥ ; ಅದರ ಮುಖ್ಯವಾದ ಉದ್ದೇಶಕ್ಕೆ ಭಂಗಬರುತ್ತದೆ. ನಾವು ಯಾವ ವಿಧವಾದ ಕರ್ಮವನ್ನು ಮಾಡುತ್ತೇವೆಂಬುದೂ ಮುಖ್ಯವೆಂದು ಗೀತೆಯು ಒತ್ತಿಹೇಳುತ್ತದೆ. ಪ್ರಕೃತಿಯ ಬಲಾತ್ಕಾರವಲ್ಲದೆ, ಕರ್ಮಗಳನ್ನು ಮುಂದುವರಿಸುವುದಕ್ಕೆ ಬೇರೆ ಬಲವತ್ತರವಾದ ಇನ್ನೊಂದು ಕಾರಣವಿದೆ ; ಅಹಂಭಾವದಿಂದ ಕೂಡಿದ ಜೀವಾತ್ಮಕ್ಕೆ ಅತೀತ

ವಾದ ಮೇಲೂ, ಯಜ್ಞಕ್ಕೆ ಒಂದು ಉದ್ದೇಶವಿದೆ. ಯಜ್ಞವನ್ನು ಸ್ವೀಕರಿಸುವ ಈಶ್ವರನೂ ಇದ್ದಾನೆ. ನಿರಾಕಾರನಾದ ಪುರುಷನೆ ಕೊನೆಯ ಮಾತಲ್ಲ; ನಮ್ಮ ಅಂತರಾತ್ಮನ ಗೂಢತಮವಾದ ರಹಸ್ಯವೂ ಅಲ್ಲ. ಕ್ಷರ–ಅಕ್ಷರ, ಸಾಕಾರ–ನಿರಾಕಾರ, ಇವೆರಡೂ ಪರಸ್ಪರ ವಿರುದ್ಧವಾದರೂ ಇವು ಇವೆರಡನ್ನೂ ಒಳಗೊಂಡಿರುವ ಪುರುಷನ ಬೇರೆಬೇರೆ ಮುಖಗಳು; ಇವನಿಗೆ ಈ ಭೇದಗಳಿಲ್ಲ. ಈಶ್ವರನು ಎಲ್ಲ ಕಾಲದಲ್ಲಿಯೂ ಅವ್ಯಕ್ತನು ಮತ್ತು ಅಪರಿಚ್ಛಿನ್ನನು; ಪರಿಚ್ಛಿನ್ನವಾದ ಸ್ವರೂಪದಲ್ಲಿ ವ್ಯಕ್ತವಾಗಲು ಇಚ್ಛಿಪಟ್ಟು ಹಾಗೆ ವ್ಯಕ್ತವಾದಾಗಲೂ ತನ್ನ ಅವ್ಯಕ್ತಸ್ವಭಾವವನ್ನು ಕಳೆದುಕೊಳ್ಳುವುದಿಲ್ಲ. ಈ ಅಹಂಭಾವರಹಿತವಾದ ನಿರಾಕಾರನಾದ ಪುರುಷನಲ್ಲಿ ಅಹಂಭಾವದಿಂದ ಕೂಡಿದ ಜೀವಿಗಳೆಲ್ಲರೂ ಅಂಶಗಳಾಗಿ ಕಾಣಿಸುವರು. ಇವನೆ ಜೀವನಲ್ಲಿ ವ್ಯಕ್ತನಾಗುವ ದೇವ; ಮನುಷ್ಯನ ಹೃದಯದಲ್ಲಿ ವಾಸಮಾಡುವ ಈಶ್ವರ. ಜ್ಞಾನದಿಂದ ಈ ನಿರಾಕಾರನಾದ ಆತ್ಮನಲ್ಲಿ ಎಲ್ಲ ಜೀವರನ್ನೂ ನೋಡ ಬಹುದು; ಮೊದಲು ನಾವು ಅಹಂಕಾರದಿಂದ ಕೂಡಿದ ಪ್ರತ್ಯೇಕತೆಯಿಂದ ಬಿಡುಗಡೆ ಹೊಂದುತ್ತೇವೆ; ಅನಂತರ ಎಲ್ಲರನ್ನೂ ಈ ನಿರಾಕಾರನಾದ ಆತ್ಮನಲ್ಲಿ ನೋಡು ತ್ತೇವೆ. ಎಲ್ಲರಲ್ಲಿಯೂ ವಾಸಿಸುವ ಮತ್ತು ಎಲ್ಲರೂ ವಾಸಿಸುವ ಈ ಈಶ್ವರನನ್ನು ತಿಳಿಯಲು ನಮ್ಮ ಅಹಂಭಾವವೆ ಅಡ್ಡಿಯಾಗಿದೆ. ಈ ಅಹಂಭಾವಕ್ಕೆ ಒಳಗಾಗಿ ನಾವು ಪರಿಚ್ಛಿನ್ನವಾದ ವಸ್ತುಗಳಮೂಲಕ ಈಶ್ವರನ ಎಷ್ಟು ಅಂಶಗಳನ್ನು ತಿಳಿಯಬಹುದೊ ಆ ಕೆಲವು ಅಂಶಗಳನ್ನು ಮಾತ್ರ ತಿಳಿಯುತ್ತೇವೆ. ಪರಿಪೂರ್ಣವಾದ ಜ್ಞಾನವನ್ನು ಪಡೆಯಬೇಕಾದರೆ ಅಹಂಭಾವದಿಂದ ಕೂಡಿದ ನಮ್ಮ ಜೀವಾತ್ಮನ ಮೂಲಕ ಅದು ಸಾಧ್ಯವಲ್ಲ; ಶ್ರೇಷ್ಠವಾದ, ಅಹಂಭಾವಕ್ಕೆ ಅತೀತವಾದ ಮತ್ತು ಅನಂತವಾದ ನಮ್ಮ ಆತ್ಮನಿಂದಲೆ ಪಡೆಯಬೇಕು. ಯಾವನಲ್ಲಿ ವಿಶ್ವವೆಲ್ಲವೂ ಅಂತರ್ಗತವಾಗಿ ದೆಯೊ ಆ ಈಶ್ವರನಲ್ಲಿ ಒಂದಾದಾಗ ನಮಗೆ ಈ ಜ್ಞಾನವು ತಿಳಿಯುತ್ತದೆ.

ಈ ಅನಂತನಾದ ಈಶ್ವರನಲ್ಲಿ ಎಲ್ಲ ಪರಿಚ್ಛಿನ ವಸ್ತುಗಳೂ ಅಂತರ್ಗತ ವಾಗಿವೆಯೆ ಹೊರತು ಯಾವುದೂ ಅವನ ಹೊರಗೆ ಇಲ್ಲ; ಈ ನಿರ್ವಿಕಾರನಾದ ಈಶ್ವರನಲ್ಲಿ ಅಹಂಭಾವವನ್ನು ಹೊಂದಿರುವ ಎಲ್ಲ ಜೀವಿಗಳೂ ಇವೆ—ಇವನ ಹೊರಗೆ ಯಾವುದೂ ಇಲ್ಲ. ನಿಷ್ಕ್ರಿಯನೂ ಅಚಲನೂ ಆದ ಈ ಈಶ್ವರನು ಪ್ರಕೃತಿಯ ಸಮಸ್ತ ವ್ಯಾಪಾರಗಳಿಗೂ ಆಧಾರನೂ, ಆಶ್ರಯನೂ, ಪ್ರೇರಕನೂ ಆಗಿದ್ದಾನೆ— ಇವನು ಪ್ರಕೃತಿ ವ್ಯಾಪಾರಗಳನ್ನು ಹೊರಗೆ ಮಾಡಿಲ್ಲ. ಈ ಈಶ್ವರನೆ ಪರಬ್ರಹ್ಮನು ಪ್ರತಿಬಿಂಬಿತನಾಗುವ ನಿರ್ಮಲವಾದ ಕನ್ನಡಿಯು. ಆದುದರಿಂದ ಅಹಂಭಾವಕ್ಕೆ ಅತೀತನಾದ ಈಶ್ವರನೊಡನೆ ನಾವು ಒಂದಾಗಬೇಕು; ವಿಶ್ವದ ದೇವತೆಗಳ ಮತ್ತು

ಈಶ್ವರನ ಬೇರೆ ಬೇರೆ ರೂಪಗಳ ಮೂಲಕವೆ ನಾವು ಈಶ್ವರನ ವಿಷಯವಾಗಿ ಸಂಪೂರ್ಣವಾದ ಜ್ಞಾನವನ್ನು ಪಡೆಯಬಹುದು. ಆದರೆ ಪರಿಚ್ಛಿನ್ನನೂ, ಅಹಂ ಭಾವಸಹಿತನೂ ಆದ ಜೀವಾತ್ಮನಾಗಲಿ, ಅಪರಿಚ್ಛಿನ್ನನೂ, ಅಹಂಭಾವರಹಿತನೂ ಆದ ಈಶ್ವರನಾಗಲಿ, ಕೂಟಸ್ಥನೂ ನಿರ್ವಿಕಾರನೂ ಆದ ಪರಬ್ರಹ್ಮನಲ್ಲ. ಈ ಪರಬ್ರಹ್ಮನಾದರೊ ಸ್ವಯಂಪರಿಪೂರ್ಣನು ; ತಾನು ಎಲ್ಲಕ್ಕೂ ಆಶ್ರಯನೂ, ಆಧಾರನೂ ಆದರೂ, ಇವಕ್ಕೆಲ್ಲ ಹೊರಗಾಗಿದ್ದಾನೆ. ಇವನೆ ಪರಿಪೂರ್ಣ ವಾದ ಸರ್ವಪ್ರಕಾಶವಾದ ಸತ್ಯಸ್ವರೂಪನು. ಈ ಸತ್ಯದ ಸ್ವರೂಪವನ್ನು ತಿಳಿಯ ಬೇಕಾದರೆ ನಾವು ಕ್ಷರ ಮತ್ತು ಅಕ್ಷರ ಇವೆರಡನ್ನೂ ಒಳಗೊಂಡಿರುವ ಪುರುಷೋ ತ್ತಮನನ್ನು ತಿಳಿಯಬೇಕು. ಅವನು ನಿಷ್ಕ್ರಿಯನೂ, ಅಚಲನೂ ಆದರೂ, ವಿಶ್ವದಲ್ಲಿ ಪ್ರಕೃತಿಯ ವ್ಯಾಪಾರಗಳಲ್ಲಿ ವ್ಯಕ್ತವಾಗುತ್ತಾನೆ. ನಾವು ಮುಕ್ತಿಯನ್ನು ಪಡೆದ ನಂತರವೂ ಪ್ರಕೃತಿ ವ್ಯಾಪಾರಗಳು ಇವನಿಗೆ ಯಜ್ಞರೂಪವಾಗಿ ಅರ್ಪಿಸಲ್ಪಡುತ್ತವೆ.

ಆದುದರಿಂದ ಯೋಗಮಾರ್ಗದ ನಿಜವಾದ ಗುರಿಯೇನೆಂದರೆ ಪುರುಷೋ ತ್ತಮನಲ್ಲಿ ಒಂದಾಗಿ ಜೀವಿಸುವುದರಿಂದ ನಮ್ಮ ಜೀವನವನ್ನು ಪರಿಪೂರ್ಣಮಾಡಿ ಕೊಳ್ಳುವುದು. ನಿರಾಕಾರನಾದ ಈಶ್ವರನಲ್ಲಿ ಐಕ್ಯವಾಗಿ ಅಹಂಭಾವವನ್ನು ಕಳೆದು ಕೊಳ್ಳುವುದು ಮಾತ್ರವಲ್ಲ. ನಮ್ಮ ಜೀವನವನ್ನು ಈ ಪುರುಷೋತ್ತಮನ ಮಟ್ಟಕ್ಕೆ ಏರಿಸುವುದು ; ಅವನಲ್ಲೇ ವಾಸಿಸುವುದು ; ಅವನಲ್ಲಿ ಒಂದಾಗಿರುವುದು ; ನಮ್ಮ ಬುದ್ಧಿಯನ್ನು ಅವನಲ್ಲಿ ಸೇರಿಸುವುದು ; ಅಪೂರ್ಣವಾದ ನಮ್ಮ ಚೈತನ್ಯವು ಪರಿಪೂರ್ಣ ವಾದ ಅವನ ಚೈತನ್ಯವನ್ನು ಪ್ರತಿಬಿಂಬಿಸುವಂತೆ ಮಾಡುವುದು ; ನಮ್ಮ ಮನಸ್ಸೂ ಇಂದ್ರಿಯಗಳೂ ಯಾವಾಗಲೂ ಪುರುಷೋತ್ತಮನ ವಿಷಯವಾದ ಜ್ಞಾನದಿಂದಲೆ ತುಂಬಿರುವಂತೆ ಮಾಡುವುದು ; ಯಾವಾಗಲೂ ಸಂಪೂರ್ಣವಾಗಿ ಅವನ ಇಚ್ಛೆ ಮತ್ತು ಸಂಕಲ್ಪಗಳಿಗನುಸಾರವಾಗಿಯೆ ನಮ್ಮ ಇಚ್ಛೆಯೂ, ಕರ್ಮಗಳೂ ಇರುವಂತೆ ಮಾಡುವುದು ; ಅವನ ವಿಷಯವಾದ ಪ್ರೇಮ ಮತ್ತು ಆನಂದಗಳಲ್ಲಿ ಕಾಮಗಳನ್ನು ಕಳೆದುಕೊಳ್ಳುವುದು. ಇದೇ ಮನುಷ್ಯನು ಸಾಧಿಸಬೇಕಾದ ಪರಿಪೂರ್ಣತೆ. ಪರಮರಹಸ್ಯವೆಂದು ಗೀತೆಯು ಹೇಳುವುದು ಇದನ್ನೆ. ಇದೇ ಮನುಷ್ಯ ಜೀವನದ ನಿಜವಾದ ಗುರಿ ಮತ್ತು ಜೀವನದ ಪರಾಕಾಷ್ಠೆ ; ಮುಂದುವರಿಯುತ್ತಿರುವ ನಮ್ಮ ಯಜ್ಞಕರ್ಮಗಳ ಕೊನೆಯ ಹೆಜ್ಜೆ. ಏತಕ್ಕೆಂದರೆ ಕೊನೆಯವರೆಗೂ ಅವನು ಕರ್ಮಗಳ ಪ್ರಭುವಾಗಿಯೂ ಯಜ್ಞಗಳ ಜೀವತತ್ತ್ವವೂ ಆಗಿರುತ್ತಾನೆ.

# ಹದಿನಾಲ್ಕನೆಯ ಪ್ರಕರಣ

## ದಿವ್ಯಕರ್ಮಗಳ ತತ್ತ್ವ

ಯಜ್ಞದ ವಿಷಯದಲ್ಲಿ ಗೀತೆಯ ಸಿದ್ಧಾಂತವನ್ನು ಇಲ್ಲಿಯವರೆಗೆ ವಿವರಿಸಿದ್ದೇವೆ. ಇದು ಪೂರ್ಣವಾಗಬೇಕಾದರೆ ಪುರುಷೋತ್ತಮತತ್ತ್ವವನ್ನು ತಿಳಿಯಬೇಕು. ಇದನ್ನು ಗೀತೆಯ ಕೊನೆಯ ಭಾಗದಲ್ಲಿ ೧೫ ನೆಯ ಅಧ್ಯಾಯದಲ್ಲಿ ವಿಶದವಾಗಿ ವಿವರಿಸಿದೆ. ಆದುದರಿಂದ ಗೀತೆಯ ಉಪದೇಶ ಕ್ರಮಕ್ಕೆ ಭಂಗವಾದಾಗ್ಯೂ ನಾವು ಈ ಮುಖ್ಯವಾದ ಉಪದೇಶದ ಪ್ರಸ್ತಾಪವನ್ನು ಈಗಲೇ ಮಾಡಬೇಕಾಗಿದೆ.

ನಿರ್ವಿಕಾರನೂ, ಅಚಲನೂ ಆದ ಪುರುಷನಲ್ಲಿ ಒಂದಾಗಿ, ಬ್ರಾಹ್ಮೀ ಸ್ಥಿತಿಯಲ್ಲಿದ್ದುಕೊಂಡು, ಸಮಾಧಾನವನ್ನೂ, ಸಮತ್ವವನ್ನೂ, ಸಂಪೂರ್ಣವಾದ ಶಾಂತಿಯನ್ನೂ ಪಡೆಯುವುದು ನಾವು ಸಾಧಿಸಬೇಕಾದ ಮೊದಲನೆಯ ಕಾರ್ಯವಷ್ಟೆ. ಈ ಪುರುಷನಿಗೂ ಪುರುಷೋತ್ತಮನಿಗೂ ಇರುವ ಸಂಬಂಧವನ್ನು ಕುರಿತು ಒಂದು ಸೂಚನೆಯನ್ನು ಮಾತ್ರ ಭಗವಂತನು ಗೀತೆಯ ಉಪದೇಶದ ಪ್ರಾರಂಭದಲ್ಲಿ ಕೊಟ್ಟಿದ್ದಾನೆ. ಮೊದಲುಮಾಡುವಾಗ ಪುರುಷೋತ್ತಮನ ವಿಷಯವನ್ನು ಸ್ಪಷ್ಟವಾದ ಮಾತುಗಳಲ್ಲಿ ಹೇಳುವುದಿಲ್ಲ. "ಕೃಷ್ಣ, ನಾರಾಯಣ, ಕುರುಕ್ಷೇತ್ರದಲ್ಲಿ ದಿವ್ಯಸಾರಥಿಯಾಗಿ ಅವತಾರವನ್ನು ತಳೆದಿರುವ ವಿಶ್ವದ ಪ್ರಭು" ಎಂದು ಮೊದಲಾಗಿ ತನ್ನ ವಿಷಯವನ್ನು ಹೇಳುತ್ತಾನೆ. "ಮೊದಲು ಆತ್ಮನಲ್ಲಿ, ಅನಂತರ ನನ್ನಲ್ಲಿ" ಎಂಬುದು ಶ್ರೀಕೃಷ್ಣನ ಉಪದೇಶ. ಪ್ರತ್ಯೇಕವಾದ ಜೀವನು ನಿರಾಕಾರನಾದ ಸ್ವಯಂಭೂ–ತನ್ನಲ್ಲಿ ತಾನೇ ಇರುವ–ಪುರುಷನ ಸ್ಥಿತಿಯನ್ನು ಹೊಂದುವುದರ ಮೂಲಕ ತನ್ನ ಅಹಂಭಾವಕ್ಕೆ ಅತೀತನಾಗುತ್ತಾನೆ. ಪರಾತ್ಪರನೂ ಗೂಢನೂ ನಿರ್ವಿಕಾರನೂ ಆದ ಪುರುಷೋತ್ತಮನನ್ನು ಹೊಂದಲು ಇದು ಸಾಧನಮಾತ್ರವೆಂದು ಮೇಲಿನ ಉಪದೇಶವು ಸೂಚಿಸುತ್ತದೆ. ಈ ಪುರುಷೋತ್ತಮನಾದರೊ ಪ್ರಶಾಂತವೂ ಪ್ರಕೃತಿಗೆ ಅತೀತವೂ ಆದ ಪರಬ್ರಹ್ಮನಲ್ಲಿರುವುದಲ್ಲದೆ, ಪ್ರಕೃತಿಯಲ್ಲಿಯೂ ಅನೇಕಕೋಟಿ ಜೀವಿಗಳಲ್ಲಿಯೂ ಇದ್ದಾನೆ. ನಮ್ಮ ಪ್ರತ್ಯೇಕವಾದ ವ್ಯಕ್ತಿತ್ವವನ್ನು (ಅಹಂಭಾವ) ನಿರಾಕಾರನಾದ ಪುರುಷನಲ್ಲಿ ಕಳೆದುಕೊಂಡಮೇಲೆ, ಕೊನೆಯಲ್ಲಿ ಪರಾತ್ಪರವಾದ ವಸ್ತುವಿನಲ್ಲಿ ಒಂದಾಗುತ್ತೇವೆ. ಈ ವಸ್ತುವಿಗೆ ವ್ಯಕ್ತಿತ್ವವಿಲ್ಲ; ಆದರೂ ಇದು ಎಲ್ಲ ವ್ಯಕ್ತಿಗಳನ್ನೂ ಒಳಗೊಂಡಿದೆ. ತ್ರಿಗುಣಾತ್ಮಕವಾದ ಕೆಳಗಿನ ಪ್ರಕೃತಿಗೆ ಅತೀತರಾದಮೇಲೆ,

ತ್ರಿಗುಣಾತೀತನೂ ನಿಷ್ಕ್ರಿಯನೂ ಆದ ಪುರುಷನಲ್ಲಿ ಒಂದಾಗಿ, ಕೊನೆಯಲ್ಲಿ ಅನಂತವಾದ ಪರವಸ್ತುವಿನಲ್ಲಿ ಐಕ್ಯಹೊಂದುತ್ತೇವೆ. ಈ ಪರವಸ್ತುವಾದರೊ ಪ್ರಕೃತಿಯಲ್ಲಿ ವರ್ತಿಸಿದರೂ ತ್ರಿಗುಣಗಳಿಂದ ಬದ್ಧವಲ್ಲ. ತಟಸ್ಥನಾದ ಪುರುಷನ ನೈಷ್ಕರ್ಮ್ಯಸ್ಥಿತಿಯನ್ನು ಪಡೆದು ಕರ್ಮಗಳನ್ನು ಮಾಡುವುದನ್ನು ಪ್ರಕೃತಿಗೆ ಬಿಟ್ಟಮೇಲೆ ನಾವು ಈ ಸ್ಥಿತಿಗೆ ಅತೀತವಾದ ಶ್ರೇಷ್ಠವಾದ ದಿವ್ಯಸ್ಥಿತಿಯನ್ನು ಹೊಂದಬಹುದು. ಈ ಸ್ಥಿತಿಯಲ್ಲಿ ನಾವು ಕರ್ಮಗಳನ್ನು ಮಾಡಿದರೂ, ಅವುಗಳಿಂದ ಬದ್ಧರಲ್ಲ. ನಾರಾಯಣನ ಅಥವಾ ಕೃಷ್ಣನ ರೂಪವನ್ನು ಧರಿಸಿರುವ ಪುರುಷೋತ್ತಮನ ತತ್ತ್ವವೇ ಇಲ್ಲಿಯ ಉಪದೇಶದ ಮೂಲವಾದ ರಹಸ್ಯ. ಈ ತತ್ತ್ವವಿಲ್ಲದಿದ್ದರೆ ಕೆಳಗಿನ ಪ್ರಕೃತಿಯನ್ನು ದಾಟಿ ಬ್ರಾಹ್ಮೀಸ್ಥಿತಿಯನ್ನು ಪಡೆದಿರುವ ಮುಕ್ತನಾದ ಮನುಷ್ಯನು ಕರ್ಮಗಳನ್ನು ಅವಶ್ಯವಾಗಿ ಬಿಡಬೇಕೆಂದೂ, ಐಹಿಕ ವ್ಯಾಪಾರಗಳನ್ನು ಎಣಿಸಕೂಡದೆಂದೂ ಸಿದ್ಧವಾಗುತ್ತದೆ. ಈ ತತ್ತ್ವವನ್ನು ಹೇಳಿದಮೇಲೆ ಕೆಳಗಿನ ಪ್ರಕೃತಿಯನ್ನು ದಾಟಿ ಬ್ರಾಹ್ಮೀಸ್ಥಿತಿಯನ್ನು ಪಡೆಯುವುದು ಮೊದಲನೆಯ ಹೆಜ್ಜೆಯಾಗುತ್ತದೆ; ಅನಂತರ ಪುರುಷೋತ್ತಮನಲ್ಲಿ ಒಂದಾಗಿ, ಬಂಧನಕ್ಕೊಳಗಾಗದೆ, ಅವನ ಸ್ವಭಾವದಿಂದ ಈ ಲೋಕದ ಕರ್ಮಗಳನ್ನು ಮಾಡಬೇಕೆಂಬುದು ಸಿದ್ಧವಾಗುತ್ತದೆ. ತಟಸ್ಥನಾದ ಪುರುಷನನ್ನು ಗುರಿಯನ್ನಾಗಿಟ್ಟುಕೊಂಡರೆ, ಈ ಪ್ರಪಂಚವನ್ನೂ ಅದರ ಕರ್ಮಗಳನ್ನೂ ತ್ಯಜಿಸಬೇಕಾಗುತ್ತದೆ. ಕರ್ಮಗಳಿಗೆ ಅತೀತನಾದರೂ, ಅವುಗಳ ಮೂಲಕಾರಣನೂ, ಪರಮಲಕ್ಷ್ಯವೂ, ಅವುಗಳನ್ನು ತೋರಿಸುವ ಮೂಲಸಂಕಲ್ಪವೂ ಆದ ಪುರುಷೋತ್ತಮನನ್ನು ಗುರಿಯನ್ನಾಗಿಟ್ಟುಕೊಂಡರೆ, ನಾವು ಈ ಪ್ರಪಂಚವನ್ನೂ ಅದರ ಕರ್ಮಗಳನ್ನೂ ಜಯಿಸಿದಂತಾಗುತ್ತದೆ. ಈ ಲೋಕಕ್ಕೆ ಅತೀತವಾದ ದಿವ್ಯಸ್ಥಿತಿಯಲ್ಲಿರುತ್ತೇವೆ. ಕರ್ಮಗಳು ಆಗ ನಮ್ಮ ಸ್ವಾಧೀನದಲ್ಲಿರುತ್ತವೆ. ಕರ್ಮಗಳಿಂದ ಕೂಡಿದ ಈ ಪ್ರಪಂಚವು ಕಾರಾಗೃಹವಾಗದೆ ಸಮೃದ್ಧವಾದ ರಾಜ್ಯವಾಗುತ್ತದೆ. ಅಹಂಭಾವವೆಂಬ ದುಷ್ಟರಾಜನನ್ನು ನಿಗ್ರಹಿಸಿ, ಆಸೆಗಳೆಂಬ ಬಂಧನವನ್ನು ಕಡಿದುಹಾಕಿ, ಪ್ರತ್ಯೇಕವಾದ ಆಸ್ತಿ ಮತ್ತು ಭೋಗಗಳೆಂಬ ಸೆರೆಮನೆಯನ್ನು ನೆಲಸಮಮಾಡಿ ನಾವು ಆಧ್ಯಾತ್ಮಿಕ ಜೀವನಕ್ಕಾಗಿ ಈ ರಾಜ್ಯವನ್ನು ಗೆದ್ದಂತಾಗುತ್ತದೆ. ಹೀಗೆ ಮುಕ್ತನಾದವನು ವಿಶ್ವಾತ್ಮನೂ, ತನ್ನನ್ನೂ ಮತ್ತು ಪ್ರಪಂಚವನ್ನೂ ಆಳುವವನೂ ಆಗುತ್ತಾನೆ.

ಮುಕ್ತಿಯನ್ನು ಹೊಂದಲು, ಸಮಾಧಿಸ್ಥಿತಿಯನ್ನು ಪಡೆಯಲು ಯಜ್ಞಕರ್ಮಗಳು ಆವಶ್ಯಕವೆಂಬುದು ಮೇಲೆ ಹೇಳಿದಂತೆ ಸಮರ್ಥಿಸಲ್ಪಟ್ಟಿದೆ. ಸ್ವಾರ್ಥ ಅಥವಾ ಅಹಂಭಾವದ ಸೊಂಕೇ ಇಲ್ಲದೆ ಯಜ್ಞರೂಪವಾಗಿ ಮಾಡಿದ ಕರ್ಮ

ಗಳಿಂದಲೆ ಜನಕ ಮುಂತಾದ ಕರ್ಮಯೋಗಿಗಳು ಸಿದ್ಧಿಯನ್ನು ಪಡೆದರು. ಈ ರೀತಿಯಾಗಿಯೆ ಮುಕ್ತಿಯನ್ನು ಪಡೆದನಂತರವೂ ಸ್ವಾರ್ಥರಹಿತವಾದ ಕರ್ಮಗಳನ್ನು ಈಶ್ವರನಂತೆ ಈಶ್ವರಭಾವದಿಂದ ಮುಂದುವರಿಸಬೇಕು. "ಲೋಕಸಂಗ್ರಹವನ್ನು ದೃಷ್ಟಿಯಲ್ಲಿಟ್ಟುಕೊಂಡು ನೀನು ಕರ್ಮಗಳನ್ನು ಮಾಡಬೇಕು. ಉತ್ತಮನಾದ ಮನುಷ್ಯನು ಯಾವು ಯಾವುದನ್ನು ಮಾಡುತ್ತಾನೆಯೊ, ಜನರು ಅದನ್ನೆ ಮಾಡುತ್ತಾರೆ. ಅವನು ತನ್ನ ನಡತೆಗೆ ಯಾವುದನ್ನು ನಿಬಂಧನೆಯನ್ನಾಗಿ ಮಾಡಿಕೊಳ್ಳುತ್ತಾನೆಯೋ ಲೋಕವು ಅದನ್ನೇ ಅನುಸರಿಸುತ್ತದೆ. ಎಲೈ, ಪಾರ್ಥನೆ! ಮೂರು ಲೋಕಗಳಲ್ಲಿಯೂ ಮಾಡಬೇಕಾದ ಕೆಲಸವು ನನಗೆ ಯಾವುದೂ ಇಲ್ಲ. ಹೊಂದಲ್ಪಡಬೇಕಾದುದು ಯಾವುದೂ ದೊರೆಯದೆ ಇಲ್ಲ. ಆದರೂ ನಾನು ಕೆಲಸವನ್ನು ಮಾಡುತ್ತಲೆ ಇದ್ದೇನೆ (ಎಂದರೆ ಕರ್ಮಗಳನ್ನು ತ್ಯಜಿಸಿಲ್ಲ). ನಾನು ಯಾವಾಗಲೂ ಬೇಸರವಿಲ್ಲದೆ ಕೆಲಸ ಮಾಡದಿದ್ದರೆ, ಎಲ್ಲ ಕಡೆಗಳಲ್ಲಿಯೂ ಮನುಷ್ಯರು ನನ್ನ ಮಾರ್ಗವನ್ನೆ ಅನುಸರಿಸುವರು. ನಾನು ಕೆಲಸವನ್ನು ಮಾಡದಿದ್ದರೆ, ಈ ಲೋಕಗಳು ನಾಶವಾಗುವುವು. ನಾನು ಸಂಕರಕ್ಕೆ ಕಾರಣನಾಗಿ ಈ ಪ್ರಜೆಗಳನ್ನು ಕೊಲ್ಲುವವನಾಗುವೆನು. ತಿಳಿಯದ ಮನುಷ್ಯನು ಕರ್ಮದಲ್ಲಿ ಆಸಕ್ತಿಯುಳ್ಳವನಾಗಿ ಹೇಗೆ ಅವನ್ನು ಮಾಡುತ್ತಾನೆಯೊ ವಿದ್ವಾಂಸನೂ ಕೂಡ ಲೋಕದ ಕ್ಷೇಮವನ್ನು ಬಯಸಿ ಸಂಗವಿಲ್ಲದೆ ಹಾಗೆಯೆ ಕೆಲಸ ಮಾಡಬೇಕು. ವಿದ್ವಾಂಸನು ಕರ್ಮದಲ್ಲಿ ಆಸಕ್ತರಾದ ಅಜ್ಞಾನಿಗಳ ಬುದ್ಧಿಯನ್ನು ಒಡೆಯಕೂಡದು. ಸಮಸ್ತ ಕರ್ಮಗಳನ್ನೂ ಆಚರಿಸುತ್ತ ಅವುಗಳನ್ನು ಹಿತಕರಗಳನ್ನಾಗಿ ಮಾಡಬೇಕು. ಆದರೆ ಯೋಗದಲ್ಲಿದ್ದುಕೊಂಡು ಕರ್ಮಗಳನ್ನು ತಿಳಿವಳಿಕೆಯಿಂದ ಮಾಡಬೇಕು." (ಗೀತೆ: ೩–೨೦ ರಿಂದ ೨೬) ಈ ಏಳು ಶ್ಲೋಕಗಳಿಗಿಂತ ಸಾರಭೂತವಾದ ಉಪದೇಶವು ಗೀತೆಯಲ್ಲಿ ವಿರಳ.

ಆದರೆ ಈ ಉಪದೇಶವನ್ನು ನಾವು ತಪ್ಪಾಗಿ ಅರ್ಥಮಾಡಬಾರದು; ಆಧ್ಯಾತ್ಮಿಕವಿಷಯಗಳನ್ನು ಅಲಕ್ಷ್ಯಮಾಡಿ, ಕೇವಲ ಐಹಿಕದೃಷ್ಟಿಯಿಂದ ಮತ್ತು ಪ್ರಯೋಜನದೃಷ್ಟಿಯಿಂದಲೆ ನೋಡುವ ಆಧುನಿಕ ವಿಚಾರಸರಣಿಯಪ್ರಕಾರ ಈ ಉಪದೇಶವು ಸಮಾಜಸೇವೆಯನ್ನು ತಾತ್ವಿಕವಾಗಿಯೂ, ಮತದೃಷ್ಟಿಯಿಂದಲೂ ಸಮರ್ಥಿಸುತ್ತದೆ; ದೇಶಸೇವೆ, ಲೋಕಸೇವೆ ಮತ್ತು ಸಮಾಜಸೇವೆಗಳನ್ನೆ ಉದ್ದೇಶಗಳನ್ನಾಗಿ ಉಳ್ಳ ಮತ್ತು ಈಗಿನ ಕಾಲದ ಜನರ ಮನಸ್ಸನ್ನು ಆಕರ್ಷಿಸುವ ನೂರಾರು ಯೋಜನೆಗಳನ್ನೂ ಮತ್ತು ಕಾರ್ಯಕ್ರಮಗಳನ್ನೂ ಸಮರ್ಥಿಸುತ್ತದೆ ಎಂದು ಮಾತ್ರ ಈಗಿನವರು ಅರ್ಥಮಾಡುತ್ತಾರೆ. ಹೀಗೆ ಅರ್ಥಮಾಡುವುದು ತಪ್ಪು. ಕೇವಲ

ವಿವೇಕ ಬುದ್ಧಿಯಿಂದಾಗಲಿ, ಧಾರ್ಮಿಕ ವಿಧಿಯಿಂದಾಗಲಿ ಪ್ರಚೋದಿತವಾಗಿ ಮಾಡುವ ಲೋಕಸೇವೆಯು ಈ ಶ್ಲೋಕಗಳ ಉಪದೇಶವಲ್ಲ. ಈಶ್ವರನಲ್ಲಿ ಒಂದಾಗುವುದು ; ಅವನಲ್ಲಿ ವಾಸಿಸುವ ಸಮಸ್ತ ಜೀವರಾಶಿಯಲ್ಲಿಯೂ ಒಂದಾಗುವುದು ; ಮತ್ತು ಅವನು ವಾಸಿಸುವ ಜೀವಕೋಟಿಯಲ್ಲಿ ಒಂದಾಗುವುದು, ಇದೆ ಈ ಉಪದೇಶದ ತಿರುಳು. ವ್ಯಕ್ತಿಯನ್ನು ಸಮಾಜಕ್ಕೆ ಅಥವಾ ಮಾನವವರ್ಗಕ್ಕೆ ಅಧೀನ ಮಾಡಬೇಕೆಂದಾಗಲಿ, ಪ್ರತ್ಯೇಕತೆಯನ್ನು ಮಾನವಕೋಟಿಯ ಹಿತಕ್ಕಾಗಿ ತ್ಯಾಗ ಮಾಡಬೇಕೆಂದಾಗಲಿ ಇಲ್ಲಿ ಹೇಳಿಲ್ಲ. ಜೀವನು ಈಶ್ವರನಲ್ಲಿ ಒಂದಾಗಿ ಪರಿಪೂರ್ಣನಾಗಬೇಕೆಂಬುದೂ, ಎಲ್ಲವನ್ನೂ ಆವರಿಸುವ ಈಶ್ವರನಿಗೆ ಅಹಂಭಾವವೆಂಬ ಪಶುವನ್ನು ಯಜ್ಞಮಾಡಬೇಕೆಂಬುದೂ ಈ ಉಪದೇಶದ ಸಾರ. ಗೀತೆಯ ತತ್ತ್ವಗಳೂ, ಅದರಲ್ಲಿ ಹೇಳಿರುವ ಅನುಭವಗಳೂ, ಆಧುನಿಕ ಮನೋಭಾವಕ್ಕಿಂತ ಮೇಲ್ಪಟ್ಟದ ಭೂಮಿಕೆಯಲ್ಲಿವೆ. ಗೀತೆಯ ಉಪದೇಶವು ಆಧ್ಯಾತ್ಮಿಕಮಟ್ಟದಲ್ಲಿದೆ. ಆಧುನಿಕ ಮನೋಭಾವವಾದರೊ ಅಹಂಭಾವವನ್ನು ದೂರಮಾಡಲು ಯತ್ನಿಸುತ್ತಿದ್ದರೂ, ಇನ್ನೂ ಐಹಿಕವಾದ ಗುರಿಗಳನ್ನೆ ಹೊಂದಿದೆ. ಇದು ಇನ್ನೂ ನೀತಿಯ ಮತ್ತು ಮನಸ್ಸಿನ ಮಟ್ಟದಲ್ಲಿದೆಯೆ ಹೊರತು ಇವುಗಳಿಗೆ ಅತೀತವಾದ ಆಧ್ಯಾತ್ಮಿಕ ಮಟ್ಟವನ್ನು ಮುಟ್ಟಿಲ್ಲ. ದೇಶಭಕ್ತಿ, ಪ್ರಪಂಚವೇ ನಮ್ಮ ದೇಶವೆಂಬ ಭಾವನೆ, ಸಮಾಜಸೇವೆ, ಎಲ್ಲರೂ ಒಂದುಗೂಡಿ ಕೆಲಸಮಾಡುವುದು, ಲೋಕಸೇವೆ, ಜನಸೇವೆಯೆ ಜನಾರ್ದನಸೇವೆಯೆಂಬ ಭಾವನೆ, ಇವೆಲ್ಲವೂ ಒಳ್ಳೆಯವೇಯೆ ; ನನ್ನ ಯೋಗಕ್ಷೇಮ, ನನ್ನ ಕುಟುಂಬದ ಯೋಗಕ್ಷೇಮ, ನನ್ನ ಸಮಾಜದ ಯೋಗಕ್ಷೇಮ, ನನ್ನ ದೇಶದ ಯೋಗಕ್ಷೇಮ ಎಂಬ ಸಂಕುಚಿತ ಭಾವನೆಗಳನ್ನು ಮೀರಿ, ನಾನೂ ಮತ್ತು ಎಲ್ಲ ಜೀವಿಗಳೂ ಒಂದೆ ಎಂಬುದನ್ನು ಮಾನಸಿಕವಾಗಿಯೂ ಮತ್ತು ನಮ್ಮ ಭಾವನೆಗಳಿಂದಲೂ ತಿಳಿದುಕೊಳ್ಳಲು ಇವು ತಕ್ಕಮಟ್ಟಿಗೆ ಸಹಾಯ ಮಾಡುತ್ತವೆ. ಆದರೆ ಈ ಮನಸ್ಸಿನ ಮಟ್ಟದಲ್ಲಿ, ಇವುಗಳ ಸಹಾಯದಿಂದ ಈ ಸತ್ಯವನ್ನು ಸರಿಯಾಗಿಯೂ ಸಂಪೂರ್ಣವಾಗಿಯೂ ಸಾಕ್ಷಾತ್ಕಾರಮಾಡಿಕೊಳ್ಳುವುದು ಸಾಧ್ಯವಲ್ಲ. ಗೀತೆಯು ಹೇಳುವುದೇನೆಂದರೆ : ವಿಕಾಸವಾಗುತ್ತಿರುವ ನಮ್ಮ ಚೈತನ್ಯವು ಈ ಮನಸ್ಸಿನ ಮಟ್ಟವನ್ನು ಮೀರಿ ಮೂರನೆಯ ಮಟ್ಟಕ್ಕೆ ಏರಬೇಕು; ಹೀಗೆ ಏರಲು ಮನಸ್ಸು ಒಂದು ಸಾಧನ ಮಾತ್ರ.

ವ್ಯಕ್ತಿಯ ಹಿತಕ್ಕಿಂತಲೂ ಸಮಾಜದ ಹಿತವು ಮುಖ್ಯವೆಂದು ಆರ್ಯಧರ್ಮವು ಬೋಧಿಸುತ್ತದೆ; ಆದರೆ ಆಧ್ಯಾತ್ಮಿಕ ವಿಚಾರದಲ್ಲಾದರೊ ಪ್ರತಿಯೊಬ್ಬ ವ್ಯಕ್ತಿಯೂ ತನ್ನದೆ ಆದ ಮಾರ್ಗವನ್ನು ಹಿಡಿಯಬೇಕೆಂದು ವ್ಯಕ್ತಿಯ ವೈಶಿಷ್ಟ್ಯಕ್ಕೆ

ಪ್ರಾಶಸ್ತ್ಯವಿದೆ. ಆದುದರಿಂದ, ಭರತಖಂಡದಲ್ಲಿ ಜನಿಸಿದ ಗೀತೆಯ ಉಪದೇಶವು ವ್ಯಕ್ತಿಯ ಬೆಳವಣಿಗೆಯನ್ನೂ, ಅವನ ಪರಮ ಹಿತವನ್ನೂ, ನಿರುಪಾಧಿಕ ಆಧ್ಯಾತ್ಮಿಕ ಸ್ವಾತಂತ್ರ್ಯ, ಮಹತ್ವ, ಶ್ರೇಷ್ಠತೆ ಮತ್ತು ಸಾಮ್ರಾಜ್ಯ ಇವನ್ನು ಸಾಧಿಸಿ ಅನುಭವಿಸಲು ವ್ಯಕ್ತಿಗೆ ಇರುವ ಹಕ್ಕನ್ನೂ, ಆಧ್ಯಾತ್ಮಿಕ ಅರ್ಥದಲ್ಲಿ ಸಮ್ರಾಟನೂ ಋಷಿಯೂ ಆಗಲು ವ್ಯಕ್ತಿಗೆ ಇರುವ ಇಷ್ಟವನ್ನೂ ಕುರಿತು ಒತ್ತಿ ಹೇಳುವುದು ಸಹಜವಾಗಿಯೆ ಇದೆ. ಪ್ರಾಚೀನಕಾಲದ ವೈದಿಕ ಋಷಿಗಳು ವರ್ಣಿಸಿರುವಂತೆ ಇದು ವ್ಯಕ್ತಿಯ ಜನ್ಮಸಿದ್ಧವಾದ ಹಕ್ಕು. ಇವರ ಪ್ರಕಾರ ತನ್ನ ಪರಿಚ್ಛಿನ್ನಸ್ಥಿತಿಗೆ ಅತೀತನಾಗುವುದೆ ವ್ಯಕ್ತಿಯ ಗುರಿ. ಆದರೆ ಸಮಾಜದ ಹಿತಕ್ಕಾಗಿ ತನ್ನ ಧ್ಯೇಯಗಳನ್ನು ತ್ಯಾಗಮಾಡುವುದರಿಂದ ಇದನ್ನು ಸಾಧಿಸಬೇಕಾಗಿಲ್ಲ ; ತನ್ನ ಚೈತನ್ಯವನ್ನು ವಿಸ್ತರಿಸಿ, ಅಭಿವೃದ್ಧಿಗೊಳಿಸಿ, ಈಶ್ವರ ಚೈತನ್ಯದೊಡನೆ ಸೇರಿಸುವುದರಿಂದ. ಗೀತೆಯ ಸೂತ್ರವು ಶ್ರೇಷ್ಠನಾದ, ಅತಿಮಾನುಷನಾದ, ಈಶ್ವರಭಾವವನ್ನು ಹೊಂದಿರುವ ಮನುಷ್ಯನಿಗೆ ಅನ್ವಯಿಸುತ್ತದೆ; ಕಂಸ ಜರಾಸಂಧರಂತೆ, ಇತರರ ದುಃಖವನ್ನು ಲೆಕ್ಕಿಸದೆ ತಮ್ಮ ಹಿರಿಮೆಗೆ ಮಾತ್ರ ಲಕ್ಷ್ಯಕೊಡುವ ಅತಿಮಾನವರಿಗಲ್ಲ; ಯಾವುದೊ ಒಂದು ಒಳ್ಳೆಯ ಗುಣವನ್ನು ವಿಶೇಷವಾಗಿ ಬೆಳೆಸಿ, ಇತರ ವಿಷಯಗಳಿಗೆ ಗಮನಕೊಡದೆ ಆ ಅಂಶವನ್ನೆ ಪ್ರಧಾನವಾಗಿ ಬೆಳೆಸಿಕೊಂಡ ಕರ್ಣ, ಭೀಷ್ಮರಂತಹ ಮಾನವಶ್ರೇಷ್ಠರಿಗೂ ಇದು ಅನ್ವಯಿಸುವುದಿಲ್ಲ. ತನ್ನ ಸರ್ವಸ್ವವನ್ನೂ ಈಶ್ವರನಿಗೆ ಅರ್ಪಿಸಿ, ಅವನಲ್ಲೆ ನಿವಸಿಸುವ ಮಾನವಶ್ರೇಷ್ಠರಿಗೆ ಮಾತ್ರ ಅನ್ವಯಿಸುತ್ತದೆ.

ತ್ರಿಗುಣಾತ್ಮಕವಾದ ಪ್ರಕೃತಿಗೆ ಅತೀತವಾಗಿ, ಪರಮಾತ್ಮನ ಭಾವವನ್ನು ಹೊಂದಿ, ಅವನಲ್ಲಿ ಐಕ್ಯವಾಗುವುದೆ ಯೋಗದ ಉದ್ದೇಶ. ಈ ಗುರಿಯನ್ನು ಸಾಧಿಸಿ, ಮನುಷ್ಯನು ಬ್ರಾಹ್ಮೀಸ್ಥಿತಿಯನ್ನು ಹೊಂದುತ್ತಾನೆ. ತನ್ನನ್ನೂ ಲೋಕವನ್ನೂ ಅಹಂಭಾವ ಯುಕ್ತವಾದ ದೃಷ್ಟಿಯಿಂದ ನೋಡದೆ, ಆತ್ಮನಲ್ಲಿ, ಈಶ್ವರನಲ್ಲಿ ಎಲ್ಲ ಜೀವಿಗಳನ್ನೂ, ಎಲ್ಲದರಲ್ಲೂ ಈಶ್ವರನನ್ನೂ ನೋಡುತ್ತಾನೆ. ಆಗಲೂ ಅವನು ಕರ್ಮವನ್ನು ಮಾಡಲೇಬೇಕಾಗಿರುವುದರಿಂದ ಇಂತಹ ಕರ್ಮದ ಸ್ವರೂಪವೇನು, ಅದರ ಉದ್ದೇಶವೇನಾಗಿರಬಹುದು? ಅರ್ಜುನನು ಕೇಳಿದ ಪ್ರಶ್ನೆ ಇದು ; ಇದನ್ನು ಅರ್ಜುನನು ಯಾವ ದೃಷ್ಟಿಯಿಂದ ಕೇಳಿದನೊ, ಅದಕ್ಕಿಂತ ಬೇರೆಯಾದ ದೃಷ್ಟಿಯಿಂದ ಶ್ರೀಕೃಷ್ಣನು ಇದಕ್ಕೆ ಉತ್ತರ ಕೊಡುತ್ತಾನೆ. ಈ ಉದ್ದೇಶವು ವ್ಯಕ್ತಿಯ ಆಸೆಯಾಗಿರಲಾರದು ; ಧರ್ಮಬುದ್ಧಿಯೂ ಆಗಿರಲಾರದು. ಅವನು ಆಸೆಗಳನ್ನು ತ್ಯಜಿಸಿದ್ದಾನೆ; ಪುಣ್ಯಪಾಪಗಳೆಂಬ ಭೇದಗಳಿಗೆ ಅತೀತನಾಗಿ ಒಳ್ಳೆಯದು ಮತ್ತು ಕೆಟ್ಟದ್ದು ಇವೆರಡೂ ಇಲ್ಲದ

ನಿತ್ಯಶುದ್ಧಸ್ಥಿತಿಯಲ್ಲಿದ್ದಾನೆ. ನಿಷ್ಕಾಮಕರ್ಮಗಳಿಂದ ತನ್ನ ಬೆಳವಳಿಕೆಯನ್ನು ಮಾಡಿಕೊಳ್ಳಬೇಕೆಂಬ ಆಧ್ಯಾತ್ಮಿಕ ಉದ್ದೇಶವೂ ಇರಲಾರದು; ಏತಕ್ಕೆಂದರೆ ಈ ಉದ್ದೇಶವು ಸಫಲವಾಗಿದೆ; ಬೆಳವಳಿಕೆಯು ಸಂಪೂರ್ಣವಾಗಿದೆ. ಆದುದರಿಂದ ಲೋಕಸಂಗ್ರಹವೊಂದೆ ಅವನ ಉದ್ದೇಶವಾಗಿರಬಹುದು. ಬಹಳ ಮುಂದಿನ ಕಾಲ ದಲ್ಲಿ ಲಭಿಸುವ ಈ ದಿವ್ಯವಾದ ಲಕ್ಷ್ಯದ ಕಡೆಗೆ ಜೀವರ ಯಾತ್ರೆಯು ಮುಂದೆ ಸಾಗುವಂತೆ ಮಾಡಬೇಕು; ತಪ್ಪು ತಿಳಿವಳಿಕೆ, ಭ್ರಾಂತಿ ಮತ್ತು ಅವ್ಯವಸ್ಥೆಗಳಿಂದ ಈ ಉದ್ದೇಶವು ವಿಫಲವಾಗಿ ಯಾತ್ರೆಗೆ ಭಂಗ ಬರದಂತೆ ನೋಡಿಕೊಳ್ಳಬೇಕು; ಶ್ರೇಷ್ಠರಾದ ಜೀವರು ತಮ್ಮ ಶಕ್ತಿ ಮತ್ತು ಜ್ಞಾನಜ್ಯೋತಿಯಿಂದಲೂ, ನಿಯಮ ಗಳು ಮತ್ತು ಅವುಗಳ ಅನುಷ್ಠಾನದಿಂದಲೂ, ಎಲ್ಲರಿಗೂ ಗೋಚರವಾಗುವಂತೆ ತಮ್ಮ ಆದರ್ಶಜೀವನದಿಂದಲೂ ಮತ್ತು ಇತರರ ಮೇಲೆ ಬೀರುವ ಪ್ರಭಾವದಿಂದಲೂ ಲೋಕಸಂಗ್ರಹವನ್ನು ಮಾಡಿ, ಈ ಯಾತ್ರೆಯನ್ನು ವ್ಯವಸ್ಥೆಯಿಂದ ಮುಂದೆ ನಡೆಸುತ್ತಾರೆ. ಇವರು ಹೀಗೆ ಮಾಡದಿದ್ದರೆ ಅಜ್ಞಾನದ ಅಂಧಕಾರದಲ್ಲಿ ನಡೆಯು ತ್ತಿರುವ ಈ ಲೋಕಯಾತ್ರೆಗೆ ಭಂಗ ಬಂದು ಈ ಲೋಕವು ಅಪಘಾತಕ್ಕೆ ಗುರಿ ಯಾದೀತು! ಸಾಮಾನ್ಯಜನರಿಗಿಂತಲೂ ಬಹಳ ಮುಂದುವರಿದು ಮೇಲ್ಮಟ್ಟದಲ್ಲಿರುವ ಈ ಶ್ರೇಷ್ಠಜನರು ಸ್ವಾಭಾವಿಕವಾಗಿಯೆ ಜನಸಾಮಾನ್ಯರಿಗೆ ಮಾರ್ಗದರ್ಶಿಗಳು. ಜನರು ಯಾವ ಮಾರ್ಗವನ್ನು ಅನುಸರಿಸಬೇಕೆಂದೂ, ಅವರು ಸಾಧಿಸಬೇಕಾದ ಗುರಿ ಯಾವುದೆಂದೂ ಈ ಶ್ರೇಷ್ಠ ಜೀವರೆ ಅವರಿಗೆ ತಿಳಿವಳಿಕೆ ಕೊಡುತ್ತಾರೆ. ಈಶ್ವರ ನಲ್ಲಿ ವಾಸಿಸುವ ಈ ಜೀವರು ಶ್ರೇಷ್ಠರೆಂದರೆ ಸಾಮಾನ್ಯ ಜನರ ದೃಷ್ಟಿಯಿಂದಲ್ಲ; ಇವರು ಅಸಾಧಾರಣರಾದ ಶ್ರೇಷ್ಠಪುರುಷರು; ಸಾಧಾರಣರಾದ ಶ್ರೇಷ್ಠಪುರುಷರು ತಮ್ಮ ನಡತೆಯಿಂದ ಬೀರುವ ಪ್ರಭಾವಕ್ಕಿಂತಲೂ ಇವರು ಬೀರುವ ಪ್ರಭಾವವು ಬಹಳ ಶಕ್ತಿಯುತವಾದುದು ಮತ್ತು ಮೇಲ್ಮಟ್ಟದ್ದು. ಆದುದರಿಂದ ಇವರು ಯಾವ ವಿಧವಾದ ಮೇಲ್ಪಂಕ್ತಿಯನ್ನು ಹಾಕಬೇಕು? ಇವರ ಆಚರಣೆ ಹೇಗಿರಬೇಕು? ಇವರು ಯಾವುದನ್ನು ಪ್ರಮಾಣವನ್ನಾಗಿ ಎತ್ತಿ ಹಿಡಿಯಬೇಕು?

ತನ್ನ ಮಾತಿನ ಅರ್ಥವನ್ನು ಸ್ಪಷ್ಟಪಡಿಸುವುದಕ್ಕಾಗಿ ಭಗವಂತನು ತನ್ನ ಆಚಾರವನ್ನೆ, ತನ್ನ ಆದರ್ಶವನ್ನೆ ಉದಾಹರಿಸಿ ಅರ್ಜುನನಿಗೆ ಹೀಗೆ ಹೇಳುತ್ತಾನೆ: 'ಇತರರೆಲ್ಲರೂ ಮಾಡುವಂತೆ ನಾನೂ ಕರ್ಮಗಳನ್ನು ಮಾಡುತ್ತೇನೆ. ನೀನೂ ಕರ್ಮಗಳನ್ನು ಮಾಡಬೇಕು. ನಾನು ಹೇಗೆ ವರ್ತಿಸುತ್ತೇನೆಯೊ ನೀನೂ ಹಾಗೆಯೆ ವರ್ತಿಸಬೇಕು. ಕರ್ಮಗಳನ್ನು ಮಾಡುವ ಆವಶ್ಯಕತೆ ನನಗೆ ಏನೂ ಇಲ್ಲ;

ಅವುಗಳಿಂದ ಪಡೆಯತಕ್ಕದ್ದೂ ಏನೂ ಇಲ್ಲ. ನಾನು ಈಶ್ವರ; ಎಲ್ಲ ವಸ್ತುಗಳೂ, ಜೀವಿಗಳೂ ನನ್ನಲ್ಲಿಯೆ ಇವೆ. ನಾನು ಪ್ರಪಂಚದಲ್ಲಿದ್ದರೂ ಅದಕ್ಕೆ ಅತೀತನಾಗಿಯೂ ಇದ್ದೇನೆ. ಮೂರು ಲೋಕಗಳಲ್ಲಿಯೂ ನನಗೆ ಯಾರಿಂದಲೂ ಏನೂ ಆಗಬೇಕಾದುದಿಲ್ಲ; ಆದರೂ ನಾನು ಕರ್ಮದಲ್ಲಿ ವರ್ತಿಸುತ್ತೇನೆ. ನೀನೂ ಹೀಗೆಯೇ ಇದೇ ಭಾವನೆಯಿಂದಲೆ ವರ್ತಿಸಬೇಕು. ಈಶ್ವರನಾದ ನಾನೆ ನಿನಗೆ ಆದರ್ಶ ಮತ್ತು ಪ್ರಮಾಣ. ಮನುಷ್ಯರು ಅನುಸರಿಸುವ ಮಾರ್ಗವನ್ನು ನಿರ್ಮಿಸಿರುವವನು ನಾನೆ; ಮಾರ್ಗವೂ ನಾನೆ; ಗುರಿಯೂ ನಾನೆ. ನಾನು ಈ ಕರ್ಮಗಳೆಲ್ಲವನ್ನೂ ವಿಶೇಷವಾಗಿಯೂ ವ್ಯಾಪಕವಾಗಿಯೂ ಮಾಡುತ್ತೇನೆ; ಅದರಲ್ಲಿ ಸ್ವಲ್ಪಭಾಗ ಮಾತ್ರ ಜನರಿಗೆ ಗೋಚರವಾಗುತ್ತದೆ—ಉಳಿದ ಭಾಗ ಕಾಣುವುದಿಲ್ಲ. ನಾನು ಯಾವ ರೀತಿ ಕೆಲಸ ಮಾಡುತ್ತೇನೆಂಬುದು ಲೋಕಕ್ಕೆ ಗೊತ್ತಿಲ್ಲ. ಜ್ಞಾನವನ್ನು ಹೊಂದಿ, ಅತಿಮಾನವನಾಗಿ ಈಶ್ವರ ಭಾವವನ್ನು ಪಡೆದ ಮೇಲೆ ನೀನೂ ಅವತಾರ ಪುರುಷನಾದ ನನ್ನಂತೆ, ಮನುಷ್ಯ ಶರೀರವನ್ನು ಧರಿಸಿದ್ದರೂ ಈಶ್ವರಶಕ್ತಿಯಿಂದ ಕೆಲಸಗಳನ್ನು ಮಾಡಬೇಕು. ಬಹು ಜನರು ಅಜ್ಞಾನದಲ್ಲಿ ಮುಳುಗಿದ್ದಾರೆ; ಈಶ್ವರ-ಸಾಕ್ಷಾತ್ಕಾರವಾಗಿರುವವನಾದರೋ ಜ್ಞಾನದಲ್ಲೆ ನೆಲೆಸಿದ್ದಾನೆ. ಆದರೂ ಸಹ ಅವನು ಇಹಲೋಕದ ಕರ್ಮಗಳನ್ನು ತ್ಯಾಗಮಾಡಿ, ಸಾಮಾನ್ಯ ಜನರ ಮನಸ್ಸಿನಲ್ಲಿ ಭ್ರಾಂತಿಯನ್ನುಂಟುಮಾಡಬಾರದು. ಆರಂಭವಾಗಿರುವ ಕರ್ಮವು ಕೊನೆಮುಟ್ಟುವ ಮುಂಚೆಯೇ ಅದಕ್ಕೆ ಭಂಗ ತರಬಾರದು; ನಾನು ನಿರ್ಮಿಸಿರುವ ದಾರಿಯ ಮತ್ತು ಅದರ ಹಂತಗಳ ವಿಷಯದಲ್ಲಿ ಜನರ ಮನಸ್ಸಿನಲ್ಲಿ ಭ್ರಾಂತಿಯನ್ನೂ ಮೋಹವನ್ನೂ ಉಂಟುಮಾಡಬಾರದು. ನೀಚ-ಸ್ವಭಾವದಿಂದ ಉತ್ತಮ ಸ್ವಭಾವವನ್ನು ಬೆಳೆಸಿಕೊಳ್ಳುವ ಮತ್ತು ನಿರೀಶ್ವರಭಾವವೆಂದು ಕಾಣಿಸಿಕೊಳ್ಳುವ ಸ್ಥಿತಿಯಿಂದ ಮನುಷ್ಯನು ಈಶ್ವರಭಾವವನ್ನು ಸ್ಪಷ್ಟವಾಗಿ ಬೆಳೆಸಿಕೊಳ್ಳುವ ಉದ್ದೇಶ ಸಾಧನೆಯ ದೃಷ್ಟಿಯಿಂದ ಅವನು ಮಾಡಬೇಕಾದ ಕರ್ಮಗಳ ಕ್ಷೇತ್ರದ ಪರಿಮಿತಿಯನ್ನು ನಾನು ನಿಯಾಮಕ ಮಾಡಿದ್ದೇನೆ. ಈ ಕ್ಷೇತ್ರವು ಹೇಗಿರಬೇಕೆಂದರೆ: ಬ್ರಹ್ಮಜ್ಞಾನಿಯು ಇಲ್ಲಿ ಕರ್ಮಗಳನ್ನು ಮಾಡುವಂತಿರಬೇಕು. ಈ ಬ್ರಹ್ಮಜ್ಞಾನಿಯು ತಾನಾಗಿಯೆ ಆಗಲಿ, ಇತರರೊಡನೆಯಾಗಲಿ, ತನ್ನ ದೇಹ ಇಂದ್ರಿಯ ಮನಸ್ಸು, ಇವುಗಳಿಂದ ಮಾಡುವ ಎಲ್ಲ ಕರ್ಮಗಳೂ ಅವನದೆ ಆದರೂ ಸ್ವಪ್ರಯೋಜನಕ್ಕಾಗಿ ಅಲ್ಲ; ವಿಶ್ವದಲ್ಲಿಯೂ ಮತ್ತು ಎಲ್ಲ ಭೂತಗಳಲ್ಲಿಯೂ ಅಂತರ್ಯಾಮಿಯಾಗಿರುವ ಈಶ್ವರನಿಗಾಗಿ; ಮತ್ತು ತನ್ನಂತೆ ಇತರರೂ ಕರ್ಮಮಾರ್ಗದಲ್ಲಿ ಮುಂದುವರಿದು ಆತ್ಮಸಾಕ್ಷಾತ್ಕಾರ

ಮಾಡಿಕೊಳ್ಳುವುದಕ್ಕಾಗಿ. ಹೊರಗಿನಿಂದ ನೋಡುವುದಕ್ಕೆ ಇವನ ಕರ್ಮಗಳು ಇತರರು ಮಾಡುವ ಕರ್ಮಗಳಿಗಿಂತ ಬೇರೆಯಾಗಿರುವುದಿಲ್ಲ. ಯುದ್ಧಮಾಡುವುದು, ರಾಜ್ಯವನ್ನಾಳುವುದು, ಬೋಧನೆ ಮಾಡುವುದು ಮತ್ತು ಇತರರೊಡನೆ ಎಲ್ಲ ವಿಧವಾದ ಪ್ರಾಪಂಚಿಕ ವ್ಯವಹಾರಗಳು, ಇವೆಲ್ಲವನ್ನೂ ಇವನೂ ಮಾಡಬಹುದು ; ಆದರೆ ಇವುಗಳನ್ನು ಇವನು ಮಾಡುವ ಭಾವನೆಯೂ ಉದ್ದೇಶವೂ ಬೇರೆ ವಿಧವಾದುದು ; ಈ ಭಾವನೆಯೆ ಇತರ ಜೀವಿಗಳನ್ನು ಇವನೆಡೆಗೆ ಇವನ ಮಟ್ಟಕ್ಕೆ ಆಕರ್ಷಿಸಿ ಅವರನ್ನು ಮೇಲಿನ ಮಟ್ಟಕ್ಕೇರಿಸುವ ಉಪಕರಣವಾಗುತ್ತದೆ."

ಮುಕ್ತನಾದವನು ಯಾವ ರೀತಿಯಲ್ಲಿ ವರ್ತಿಸಬೇಕೆಂಬುದಕ್ಕೆ ತನ್ನ ಉದಾಹರಣೆಯನ್ನೆ ಭಗವಂತನು ಕೊಟ್ಟಿರುವುದು ಬಹಳ ಗಮನಾರ್ಹವಾದ ವಿಷಯ. ಗೀತೆಯಲ್ಲಿ ಹೇಳಿರುವ ಭಗವಂತನ ಕರ್ಮಗಳೆಂಬ ತತ್ತ್ವಕ್ಕೆ ಇದು ಆಧಾರವಾಗಿದೆ. ಈಶ್ವರ ಭಾವದ ಮಟ್ಟಕ್ಕೆ ಏರಿರುವನೆ ಮುಕ್ತ ; ಇವನ ಕರ್ಮಗಳು ಈ ಈಶ್ವರ ಭಾವಕ್ಕನುಸಾರವಾಗಿರಬೇಕು. ಈ ಈಶ್ವರ ಭಾವವೆಂದರೇನು ? ಇದು ಕೇವಲ ಅಚಲನೂ ತಟಸ್ಥನೂ ಮತ್ತು ನಿರ್ವಿಕಾರನೂ ಆದ ಅಕ್ಷರಪುರುಷನ ಸ್ವಭಾವ ಮಾತ್ರವಲ್ಲ ; ಅಷ್ಟೆ ಆದರೆ ಮುಕ್ತನಾದವನು ಕರ್ಮವನ್ನು ಮಾಡದೆ ತಟಸ್ಥನಾಗಿರಬೇಕು. ಹಾಗೆಯೆ ಇದು ಕೇವಲ ಬಹುರೂಪಗಳನ್ನೊಳಗೊಂಡ, ಅಹಂಭಾವವುಳ್ಳ, ತಾನಾಗಿಯೆ ಪ್ರಕೃತಿಗೆ ಅಧೀನನಾಗಿರುವ ಕ್ಷರಪುರುಷನ ಸ್ವಭಾವ ಮಾತ್ರವೂ ಅಲ್ಲ, ಅಷ್ಟೆ ಆಗಿದ್ದರೆ, ಅದು ಮನುಷ್ಯನನ್ನು ಮತ್ತೆ ಅಹಂಭಾವಕ್ಕೂ, ಅಪರಾಪ್ರಕೃತಿ ಮತ್ತು ಅದರ ಗುಣಗಳಿಗೂ ಅಧೀನನನ್ನಾಗಿ ಮಾಡಬೇಕು. ಈಶ್ವರಸ್ವಭಾವವೆಂದರೆ ಪುರುಷೋತ್ತಮನ ಸ್ವಭಾವ. ಪುರುಷೋತ್ತಮನಲ್ಲಿ ಕ್ಷರ ಮತ್ತು ಅಕ್ಷರ ಪುರುಷರಿಬ್ಬರ ಸ್ವಭಾವವೂ ಇದ್ದು ಅವು ದಿವ್ಯವಾದ ರೀತಿಯಲ್ಲಿ ಸಮನ್ವಯಹೊಂದಿವೆ. ಇದೇ ಈಶ್ವರಸ್ವಭಾವದ ಉತ್ತಮ ರಹಸ್ಯ. ಪ್ರಕೃತಿಗೆ ಅಧೀನರಾಗಿ ನಾವು ಕರ್ಮಗಳನ್ನು ಮಾಡುವಂತೆ ಪುರುಷೋತ್ತಮನು ವೈಯಕ್ತಿಕವಾಗಿ ಕರ್ಮಗಳನ್ನು ಮಾಡುವುದಿಲ್ಲ ; ಅವನು ತನ್ನ ಶಕ್ತಿ, ಮಾಯೆ ಮತ್ತು ಪ್ರಕೃತಿಗಳಿಂದ ಕರ್ಮಗಳನ್ನು ಮಾಡಿದರೂ, ಅವುಗಳಿಗೆ ಅತೀತನಾಗಿದ್ದಾನೆ ; ವಶನಾಗಿಲ್ಲ ; ಅಧೀನವಾಗುವುದಿಲ್ಲ. ನಾವಾದರೊ ಪ್ರಕೃತಿಯ ನಿಯಮಗಳಿಗೂ, ಸ್ವಭಾವಕ್ಕೂ ಒಳಗಾಗಿ, ಅವುಗಳಿಂದ ಬದ್ಧರಾಗಿ, ಶರೀರ, ಇಂದ್ರಿಯಗಳು ಮತ್ತು ಬುದ್ಧಿಯೆ ನಾವೆಂಬ ಭ್ರಾಂತಿಗೆ ಒಳಗಾಗುತ್ತೇವೆ, ಪುರುಷೋತ್ತಮನು ಹೀಗೆ ಬದ್ಧನಾಗುವುದಿಲ್ಲ ; ಅವನು ಕರ್ಮಗಳನ್ನು ಮಾಡಿದರೂ ಕರ್ತೃವಲ್ಲ.

" ಗುಣಕರ್ಮಗಳಿಗನುಸಾರವಾಗಿ ನಾಲ್ಕು ವರ್ಣಗಳು ನನ್ನಿಂದ ಸೃಷ್ಟಿ ಸಲ್ಪಟ್ಟವು. ಇದನ್ನು ನಾನು ಮಾಡಿದವನಾದರೂ, ನನ್ನನ್ನು ನಾಶರಹಿತನಾದ ಕರ್ತೃತ್ವವಿಲ್ಲದವನೆಂದು ತಿಳಿ. ಕರ್ಮಗಳು ನನಗೆ ಅಂಟುವುದಿಲ್ಲ ಮತ್ತು ಕರ್ಮ ಫಲದಲ್ಲಿ ನನಗೆ ಆಶೆಯಿಲ್ಲ." (೪-೧೩,೧೪) ಹಾಗೆಂದ ಮಾತ್ರಕ್ಕೆ ಅವನು ತಟಸ್ಥನೂ ನಿಷ್ಕ್ರಿಯನೂ ಆದ ಸಾಕ್ಷಿಮಾತ್ರವೂ ಅಲ್ಲ. ಕೆಲಸ ಮಾಡುವಾಗ ದಿವ್ಯಶಕ್ತಿಯ ಕ್ರಮವನ್ನೂ ಪ್ರಮಾಣವನ್ನೂ ನಿರ್ಧರಿಸುವವನು ಅವನೇಯೆ. ಅದರ ಎಲ್ಲ ವ್ಯಾಪಾರಗಳಲ್ಲಿಯೂ, ಅದರಿಂದ ಸೃಷ್ಟಿಸಲ್ಪಟ್ಟ ವಿಶ್ವದ ಪ್ರತಿ ಅಣುವಿನಲ್ಲಿಯೂ ಅವನಿದ್ದಾನೆ; ಎಲ್ಲವೂ ಅವನ ಚೈತನ್ಯವನ್ನೊಳಗೊಂಡಿವೆ; ಎಲ್ಲವನ್ನೂ ಅವನ ಇಚ್ಛೆಯು ಪ್ರೇರಿಸುತ್ತದೆ; ಅವನ ಜ್ಞಾನವು ರೂಪಿಸುತ್ತದೆ.

ಇದಲ್ಲದೆ, ಈ ಪರಾತ್ಪರನು ಎಲ್ಲ ಗುಣಗಳನ್ನೂ ಹೊಂದಿದ್ದರೂ ನಿರ್ಗು ಣನು ; ಪ್ರಕೃತಿಯ ಯಾವ ಗುಣದಿಂದಲೂ, ವ್ಯಾಪಾರದಿಂದಲೂ ಅವನು ಬದ್ಧನಲ್ಲ. ಮನುಷ್ಯನೆಂದರೆ ಕೆಲವು ಗುಣವಿಶೇಷಗಳು, ತಾಮಸ, ರಾಜಸ ಅಥವಾ ಸಾತ್ವಿಕ ಸ್ವಭಾವಗಳು, ಸ್ಥೂಲಶರೀರ, ಪ್ರಾಣ, ಭಾವನೆಗಳು ಮತ್ತು ಮನಸ್ಸು ಇವುಗಳೆಲ್ಲದರ ಸಂಘಾತ (ಸಮೂಹ) ವಾಗಿರುತ್ತಾನೆ. ಪುರುಷೋತ್ತಮನು ಹಾಗಿಲ್ಲ ; ಎಲ್ಲ ಗುಣ ಗಳಿಗೂ, ಸ್ವಭಾವಗಳಿಗೂ ಅವನು ಮೂಲನಾಗಿದ್ದಾನೆ; ಇವುಗಳಲ್ಲಿ ತನಗೆ ಇಷ್ಟಬಂದ ಯಾವುದನ್ನಾದರೂ, ತನಗೆ ಬೇಕಾದ ವಿಧಾನದಲ್ಲಿ, ಯಾವ ಮಟ್ಟಕ್ಕೆ ಬೇಕಾದರೂ ಅಭಿವೃದ್ಧಿಗೊಳಿಸಲು ಶಕ್ತನಾಗಿದ್ದಾನೆ. ಪುರುಷೋತ್ತಮನು ಅನಂತ ; ಮನುಷ್ಯರು ಈ ಅನಂತತೆಯಿಂದ ಹುಟ್ಟಿರುವ ಪರಿಚ್ಛಿನ್ನರೂಪರು. ಅಪರಿಮೇಯನಾದ ಇವನಲ್ಲಿ ರುವ ಪರಿಮಿತರೂಪರು ; ಅವರ್ಣನೀಯನಾದ ಇವನಲ್ಲಿರುವ ಸಾಕಾರರೂಪರು. ಈ ಆಕಾರಗಳು ಮತ್ತು ರೂಪಗಳು ಮನುಷ್ಯರಲ್ಲಿ ನಿಯಮಬದ್ಧವಾಗಿ ಈ ವಿಶ್ವದಲ್ಲಿ ಕಲ್ಪಿಸಲ್ಪಡುತ್ತವೆ. ಹಾಗೆಂದರೆ ಪುರುಷೋತ್ತಮನು ನಿರಾಕಾರನೂ ಅಜ್ಞೇಯನೂ ಮಾತ್ರವಲ್ಲ ; ತಮ್ಮ ಉಪಯೋಗಕ್ಕಾಗಿ ಬಳಸಬಹುದಾದಂತಹ ಕೇವಲ ಚೈತನ್ಯದ ರಾಶಿಯೂ ಅಲ್ಲ ; ಇವನು ಪರಮಶ್ರೇಷ್ಠನಾದ ಪುರುಷನು ; ಎಲ್ಲಕ್ಕೂ ಮೂಲಭೂತ ನಾದ, ಅದ್ವಿತೀಯನಾದ, ಸತ್-ಚಿತ್ ವಸ್ತುವು ; ಮನುಷ್ಯರೊಡನೆಯೂ, ಸ್ಥೂಲ ವಸ್ತುಗಳೊಂದಿಗೂ ನಿಕಟವಾದ ಸಂಬಂಧವನ್ನು ಹೊಂದಿರಬಲ್ಲ ಪರಿಪೂರ್ಣನಾದ ಪುರುಷನು ; ಅವನು ಮಿತ್ರನು (ಸುಹೃತ್) ಸಖನು ಪ್ರಿಯನು, ಒಡನಾಡಿ, ಮಾರ್ಗದರ್ಶಿ, ಉಪಾಧ್ಯಾಯ, ಗುರು, ಜ್ಞಾನವನ್ನೂ ಆನಂದವನ್ನೂ ಕೊಡುವವನು

ಆದರೂ, ಈ ಎಲ್ಲ ಸಂಬಂಧಗಳಲ್ಲಿಯೂ ಸ್ವತಂತ್ರನು, ಬಂಧರಹಿತನು ಮತ್ತು ನಿರಪೇಕ್ಷನು. ದೇವತೆಗಳ ಮಟ್ಟಕ್ಕೆ ಏರಿರುವ ಮನುಷ್ಯನೂ ಕೂಡ ಈ ಸ್ಥಿತಿಯನ್ನು ಪಡೆಯುತ್ತಾನೆ; ವ್ಯಕ್ತಿತ್ವವಿದ್ದರೂ ಅದಕ್ಕೆ ಅತೀತನಾಗುತ್ತಾನೆ; ಇತರ ಮನುಷ್ಯರೊಂದಿಗೆ ಒತ್ತಾಗಿ ಸೇರಿ ವ್ಯವಹರಿಸುತ್ತಿದ್ದರೂ ಗುಣಗಳಿಂದಲೂ ಕರ್ಮಗಳಿಂದಲೂ ಬದ್ಧನಾಗುವುದಿಲ್ಲ; ಇಂತಹ ಅಥವಾ ಅಂತಹ ಧರ್ಮವನ್ನನುಸರಿಸುವಂತೆ ತೋರುತ್ತಿದ್ದರೂ ಯಾವ ಧರ್ಮಕ್ಕೂ ಕಟ್ಟುಬಿದ್ದಿಲ್ಲ. ಕರ್ಮಗಳನ್ನು ಮಾಡುವ ಮನುಷ್ಯನ ಕ್ರಿಯಾಶೀಲತ್ವವಾಗಲಿ, ರಭಸಪೂರ್ಣವಾದ ವ್ಯಕ್ತಿತ್ವವಾಗಲಿ; ಅಥವಾ ಮೌನಿಯಾದ ಯತಿಯ ಕರ್ಮರಹಿತವಾದ ಜ್ಞಾನವಾಗಲಿ, ಅಹಂಭಾವರಹಿತವಾದ ಔದಾಸೀನ್ಯವಾಗಲಿ, ಇವು ಯಾವುವೂ ದೇವತ್ವದ ಮಟ್ಟಕ್ಕೆ ಏರಿರುವ ಮನುಷ್ಯನ ಸಂಪೂರ್ಣವಾದ ಸ್ಥಿತಿಯನ್ನು ಸೂಚಿಸುವುದಿಲ್ಲ. ಸಾಮಾನ್ಯ ಮನುಷ್ಯನ ಕರ್ಮನಿರತೆ ಮತ್ತು ಶಾಂತಿಪ್ರಿಯನಾದ ತತ್ವಜ್ಞಾನಿಯ ಸನ್ಯಾಸ, ಈ ಗುರಿಗಳು ಪರಸ್ಪರ ವಿರೋಧವಾಗಿವೆ. ಒಬ್ಬನು ಕ್ಷರಪುರುಷನ ಕ್ರಿಯೆಯಲ್ಲಿ ಮಗ್ನನಾಗಲು ಯತ್ನಿಸುತ್ತಾನೆ; ಇನ್ನೊಬ್ಬನು ಅಕ್ಷರನ ಶಾಂತಿಯಲ್ಲಿ ನೆಲೆಸಲು ಯತ್ನಿಸುತ್ತಾನೆ. ಸಂಪೂರ್ಣವಾದ ದೇವತ್ವದ ಸ್ಥಿತಿಯು ಇವೆರಡನ್ನೂ ಹೋಲುವುದಿಲ್ಲ; ಅದು ಪುರುಷೋತ್ತಮನ ಸ್ವಭಾವಕ್ಕೆ ಸಮಾನವಾಗಿದೆ. ಕರ್ಮಜ್ಞಾನಗಳಿಗೆ ಇರುವ ವಿರೋಧವನ್ನು ಪರಿಹರಿಸಿ, ಅವುಗಳಿಗೆ ಅತೀತವಾಗಿದ್ದು, ದೇವತ್ವಕ್ಕೆ ಒಯ್ಯುವ ಸಾಧನಗಳೆಲ್ಲವನ್ನೂ ಸಮನ್ವಯಮಾಡುತ್ತದೆ. ಕರ್ಮನಿರತನಾದ ಮನುಷ್ಯನು ದೇಹದ, ಇಂದ್ರಿಯಗಳ ಮತ್ತು ಮನಸ್ಸಿನ ವ್ಯಾಪಾರಗಳು, ಪ್ರಕೃತಿಯ ಮೂರು ಗುಣಗಳ ವ್ಯಾಪಾರಗಳು, ಪ್ರಕೃತಿಶಕ್ತಿಯ ದಿವ್ಯ ಸಂಕಲ್ಪದ ಈಡೇರುವಿಕೆ, ಇವನ್ನು ಮೂಳೆಗೊತ್ತುವ ಯಾವ ಮಾರ್ಗವನ್ನಾಗಲಿ ಧ್ಯೇಯವನ್ನಾಗಲಿ ಒಪ್ಪುವುದಿಲ್ಲ. ಮನುಷ್ಯನು ಪರಿಪೂರ್ಣನಾಗಿ, ದೇವತ್ವಸ್ಥಿತಿಯ ಅತ್ಯುತ್ತಮ ಮಟ್ಟವನ್ನು ಮುಟ್ಟುವುದೆಂದರೆ, ಈ ಪ್ರಕೃತಿ ಶಕ್ತಿಯ ವ್ಯಾಪಾರಗಳ ಪರಾಕಾಷ್ಠೆಯೇ ಎಂಬುದು ಅವನ ಅಭಿಪ್ರಾಯ. ನಮ್ಮ ಹೃದಯ, ಬುದ್ಧಿ ಅಥವಾ ಮನಸ್ಸು—ಇವುಗಳಿಗೆ ತೃಪ್ತಿಯಾಗುವಂತೆ ಕರ್ಮಮಾಡುವ ಆದರ್ಶವನ್ನೆ ಇವನ ಮನ ಒಪ್ಪುವುದು. ತನ್ನ ಶರೀರದ ಮತ್ತು ಮನಸ್ಸಿನ ಕರ್ಮ ಮತ್ತು ಜೀವನಗಳಿಂದ ಸಾಧಿಸಬಹುದಾದ ಗುರಿಯೆ ಅವನಿಗೆ ತೃಪ್ತಿಯನ್ನು ಕೊಡಬಲ್ಲದು. ಇದೇ ಅವನ ಸ್ವಭಾವ ಧರ್ಮ. ತನ್ನ ಧರ್ಮದಿಂದ ಬೇರೆಯಾಗಿರುವ ದಾರಿಯನ್ನು ಹಿಡಿಯುವುದರಿಂದ ಅವನಿಗೆ ಪರಿಪೂರ್ಣತೆಯು ಹೇಗೆ ಬಂದೀತು? ಪ್ರತಿಜೀವನಿಗೂ ಅವನದೆ ಆದ ಸ್ವಭಾವ ವಿಶೇಷವಿದೆ. ಅದರಿಂದಲೆ ಅವನು ಪರಿಪೂರ್ಣತೆಯನ್ನು ಪಡೆಯಲು ಯತ್ನಿಸಬೇಕು. ಒಬ್ಬನ ಸ್ವಭಾವಕ್ಕನುಸಾರವಾಗಿ ಅವನ ಪೂರ್ಣತೆಯೂ ಇದೆ.

ಪ್ರತಿಯೊಬ್ಬ ಮನುಷ್ಯನೂ ಸ್ವಧರ್ಮಕ್ಕನುಸಾರವಾಗಿ ಅದನ್ನು ಸಾಧಿಸಲು ಯತ್ನಿಸ ಬೇಕು—ಆದರೆ ಜೀವನದಲ್ಲಿ ಕ್ರಿಯೆಯಿಂದ ಸಾಧಿಸಬೇಕೇ ಹೊರತು ಅದನ್ನು ಬಿಟ್ಟು ಅಲ್ಲ. ಈ ಅಭಿಪ್ರಾಯಗಳೆಲ್ಲವೂ ಸರಿಯೆಂದು ಗೀತೆಯು ಒಪ್ಪಿಕೊಳ್ಳುತ್ತದೆ. ಮನುಷ್ಯನಲ್ಲಿ ಈಶ್ವರನ ಸಂಕಲ್ಪದ ಈಡೇರುವುವಿಕೆ, ಜೀವನದಲ್ಲಿ ಭಗವಂತನ ವ್ಯಾಪಾರ, ಇವೂ ಪರಿಪೂರ್ಣತೆಯ ಅಂಗಗಳೇ ಸರಿ. ಆದರೆ ಬಾಹ್ಯ ಪ್ರಪಂಚದಲ್ಲಿ, ಬಾಹ್ಯ ಜೀವನದಲ್ಲಿ, ಕರ್ಮಮಾರ್ಗದಿಂದ ಇದನ್ನು ಪಡೆಯಲು ಪ್ರಯತ್ನಿಸಿದರೆ ಪ್ರಯತ್ನವು ಸಫಲವಾಗುವುದಿಲ್ಲ. ಹಾಗೆ ಮಾಡುವಾಗ ನಾವು ನಮ್ಮ ಸ್ವಭಾವ ಕ್ಕನುಸಾರವಾಗಿ ವರ್ತಿಸುತ್ತೇವೆಂಬುದು ನಿಜ; ಇದು ಸರಿಯಾದ ಮಾರ್ಗವೆಂಬುದು ನಿಜ; ಆದರೆ ಇದರಲ್ಲಿ ಕೆಲವು ದೋಷಗಳಿವೆ. ನಮ್ಮ ಸ್ವಭಾವದ ಸತ್ವರಜಸ್ತಮೋ ಗುಣಗಳಿಗೆ ವಶವಾಗುತ್ತೇವೆ; ರಾಗ-ದ್ವೇಷ, ಸುಖ-ದುಃಖಗಳಿಗೆ ಒಳಗಾಗುತ್ತೇವೆ; ರಾಜಸಗುಣಕ್ಕೆ ಸಂಬಂಧಿಸಿದ ಕಾಮಕ್ಕೆ ಒಳಗಾಗಿ ಅದರಿಂದ ಕ್ರೋಧ, ಶೋಕ ಮತ್ತು ತೃಷ್ಣೆಯ ಬಲೆಯಲ್ಲಿ ಸಿಕ್ಕಿಕೊಳ್ಳುತ್ತೇವೆ; ಈ ಕಾಮವೆಂಬುದು ಚಂಚಲ ವಾದುದು; ಎಲ್ಲವನ್ನೂ ನುಂಗುವಂತಹದು, ನಮ್ಮ ಕರ್ಮಗಳನ್ನೆಲ್ಲ ಆವರಿಸುವ ಆರಿಸಲಾಗದ ಅಗ್ನಿ; ಜ್ಞಾನಕ್ಕೆ ಇದು ನಿತ್ಯವೈರಿ; ಬೆಂಕಿಯನ್ನು ಹೊಗೆಯೂ, ಕನ್ನಡಿಯನ್ನು ಕೊಳೆಯೂ ಯಾವಾಗಲೂ ಆವರಿಸಿರುವಂತೆ ಜ್ಞಾನವನ್ನು ಕಾಮವು ಆವರಿಸುತ್ತದೆ; ಜ್ಞಾನದ ಮೇಲೆ ಒಂದು ತೆರೆಯನ್ನು ಎಳೆಯುತ್ತದೆ. ಶಾಂತವೂ, ಪ್ರಕಾಶಮಾನವೂ ಆದ ಆತ್ಮನ ಜ್ಯೋತಿಯಲ್ಲಿ ನೆಲೆಸಬೇಕಾದರೆ ಈ ಕಾಮವನ್ನು ಕೊಲ್ಲಬೇಕು. ಪೂರ್ಣತೆಯನ್ನು ಪಡೆಯಲು ಅಡ್ಡಿಯಾದ ಈ ಕಾಮಕ್ಕೆ ಇಂದ್ರಿಯ ಗಳೂ, ಮನಸ್ಸೂ ಮತ್ತು ಬುದ್ಧಿಯೂ ಆಶ್ರಯಸ್ಥಾನಗಳಾಗಿವೆ. ನಾವಾದರೋ ಪರಿಪೂರ್ಣತೆಯನ್ನು ಪಡೆಯಲು ಅದೆ ಇಂದ್ರಿಯಗಳ ಮನಸ್ಸಿನ ಮತ್ತು ಬುದ್ಧಿಯ ಮೂಲಕವೆ ಪ್ರಯತ್ನಪಡುತ್ತಿದ್ದೇವೆ. ಈ ಪ್ರಯತ್ನವು ವ್ಯರ್ಥ. ಕರ್ಮವನ್ನು ಮಾಡಬೇಕೆನ್ನುವ ಸ್ವಭಾವದ ಜೊತೆಗೆ ನಾವು ಶಾಂತರಾಗಿ, ಕರ್ಮಮಾಡದೆ ಸುಮ್ಮ ನಿರುವುದನ್ನೂ ಅಭ್ಯಸಿಸಬೇಕು. ತ್ರಿಗುಣಗಳಿಗೆ ಆಶ್ರಯವಾದ ಈ ಸ್ವಭಾವವನ್ನು ಬಿಟ್ಟು ನಾವು ತ್ರಿಗುಣಗಳಿಗೆ ಅತೀತವಾದ ಪರವಸ್ತುವಿನಲ್ಲಿ–ಎಂದರೆ ಆತ್ಮನಲ್ಲಿ–ನೆಲೆಸ ಬೇಕು. ಆತ್ಮನ ಶಾಂತಿಯನ್ನು ನಾವು ಪಡೆದ ಮೇಲೆಯೆ ಈಶ್ವರನಂತೆ ನಾವೂ ಬಂಧರಹಿತವಾದ ಕರ್ಮಗಳನ್ನು ಮಾಡಬಹುದು.

ಪೂರ್ಣತೆಯನ್ನು ಪಡೆಯುವ ಪ್ರಯತ್ನಕ್ಕೆ ಕರ್ಮಗಳು ಸಾಧಕಗಳಾಗ ಬಹುದೆಂಬ ಅಂಶವು ಕರ್ಮವನ್ನು ತ್ಯಜಿಸಿರುವ ಸನ್ಯಾಸಿಗೆ ಗೋಚರವಾಗುವುದಿಲ್ಲ.

ಅವು ಬಂಧನದ ಮತ್ತು ಅಪೂರ್ಣತೆಯ ನೆಲೆಯಲ್ಲವೆ? ಬೆಂಕಿಯು ಯಾವಾಗಲೂ ಹೇಗೆ ಹೊಗೆಯಿಂದ ಕೂಡಿರುವುದೊ ಹಾಗೆ ಎಲ್ಲ ಕರ್ಮಗಳೂ ದೋಷದಿಂದ ಕೂಡಿಲ್ಲವೆ? ಕರ್ಮಗಳ ಮೂಲವು ಕಾಮಕ್ಕೆ ಆಶ್ರಯವಾದ ರಜೋಗುಣವಲ್ಲವೆ? ಈ ರಜೋಗುಣದಿಂದ ಜ್ಞಾನವು ಮರೆಯಾಗುವುದಿಲ್ಲವೆ? ಇಚ್ಛೆ, ಕಾರ್ಯದ ಸಿದ್ಧಿ ಮತ್ತು ಪಾಪ-ಪುಣ್ಯಗಳು, ಇವುಗಳ ಚಕ್ರಕ್ಕೆ ನಾವು ಸಿಕ್ಕಿಕೊಳ್ಳಲು ಈ ರಜೋಗುಣವೆ ಕಾರಣವಲ್ಲವೆ? ಈಶ್ವರನು ವಿಶ್ವದಲ್ಲಿದ್ದರೂ, ಅದಕ್ಕೆ ಸೇರಿದವನಲ್ಲ. ಅವನು ತ್ಯಾಗಪುರುಷ; ನಮ್ಮ ಕರ್ಮಗಳಿಗೆ ಕಾರಣನೂ ಅಲ್ಲ, ಅಧಿಪತಿಯೂ ಅಲ್ಲ. ಕರ್ಮಗಳಿಗೆ ಮೂಲವು ಕಾಮ; ಕಾರಣವು ಅಜ್ಞಾನ. ಕ್ಷರವಾದ ಈ ವಿಶ್ವವೇನೊ ಭಗವಂತನ ಲೀಲೆಯಾದರೂ, ಅದು ಅಪೂರ್ಣವಾದ ಲೀಲೆ; ಪ್ರಕೃತಿಯ ಅವಿದ್ಯೆಯೆಂಬ ಆವರಣವು ಸತ್ಯವನ್ನು ಮರೆಮಾಡುವುದೆ ಹೊರತು ಪ್ರಕಾಶಮಾಡುವುದಿಲ್ಲ. ವಿಶ್ವದ ಸ್ವರೂಪವನ್ನು ನೋಡಿದೊಡನೆಯೆ ಈ ವಿಷಯವು ಸ್ಪಷ್ಟವಾಗುತ್ತದೆ. ಲೋಕದಲ್ಲಿ ಇಲ್ಲಿಯವರೆಗೆ ನಾವು ಪಡೆದಿರುವ ಅನುಭವವು ಈ ಸತ್ಯವನ್ನೆ ಬೋಧಿಸುವುದಿಲ್ಲವೆ? ಈ ಸಂಸಾರವು ಅವಿದ್ಯೆಯಿಂದ ಪ್ರವರ್ತಿಸಲ್ಪಡುವ ಚಕ್ರದಂತೆ; ಎಲ್ಲಿಯವರೆಗೆ ನಾವು ಕಾಮ ಮತ್ತು ಕರ್ಮಗಳನ್ನು ತ್ಯಜಿಸುವುದಿಲ್ಲವೊ ಅಲ್ಲಿಯವರೆಗೆ ಅವು ನಮ್ಮನ್ನು ಈ ಸಂಸಾರಚಕ್ರಕ್ಕೆ ಸಿಕ್ಕಿಸುತ್ತವೆ. ಕಾಮವನ್ನು ಮಾತ್ರವಲ್ಲ; ಕರ್ಮವನ್ನೂ ಕೂಡ ಮನುಷ್ಯನು ತ್ಯಜಿಸಬೇಕು. ಹಾಗೆ ಮಾಡಿದ ಮೇಲೆ ಮೌನವಾದ ಆತ್ಮದಲ್ಲಿ ನೆಲೆಸಿ, ಜೀವನು ನಿಶ್ಚಲವೂ, ನಿಷ್ಕ್ರಿಯವೂ, ಶಾಂತವೂ ಆದ ಪರಬ್ರಹ್ಮದಲ್ಲಿ ಐಕ್ಯವಾಗುತ್ತಾನೆ. ಇದೆ ಕರ್ಮವನ್ನು ಬಿಟ್ಟಿರುವ ಸನ್ಯಾಸಿಯ ವಾದ.

ಕರ್ಮ ಮಾಡಬೇಕೆಂಬುವವನು ಮಾಡುವ ಆಕ್ಷೇಪಣೆಗಳಿಗೆ ಕೊಟ್ಟಿರುವ ಉತ್ತರಕ್ಕಿಂತಲೂ ನಿರ್ಗುಣೋಪಾಸಕನಾದ ಸನ್ಯಾಸಿಯು ಮಾಡುವ (ಮೇಲೆ ಹೇಳಿದ) ಆಕ್ಷೇಪಣೆಗಳಿಗೆ ಹೆಚ್ಚು ವಿಸ್ತಾರವಾದ ಸಮಾಧಾನವನ್ನು ಗೀತೆಯು ಕೊಡುತ್ತದೆ. ಇದಕ್ಕೆ ಕಾರಣವಿಷ್ಟೆ: ಕರ್ಮವಾದಿಗಳ ಸಿದ್ಧಾಂತಕ್ಕಿಂತಲೂ ಕರ್ಮವನ್ನು ತ್ಯಜಿಸಬೇಕೆಂಬ ಸನ್ಯಾಸಿಗಳ ಸಿದ್ಧಾಂತವು ಹೆಚ್ಚು ಪ್ರಬಲವಾಗಿಯೂ, ಮೇಲ್ಮಟ್ಟದ್ದಾಗಿಯೂ ಇದೆ; ಆದರೆ ಇದು ಸಂಪೂರ್ಣವಾದ ಪರಮಸತ್ಯವಲ್ಲ. ಕರ್ಮಗಳನ್ನು ಬಿಡುವುದೆ ಎಲ್ಲ ಮನುಷ್ಯರೂ ಸಾಧಿಸಬೇಕಾದ ಅತ್ಯಂತ ಶ್ರೇಷ್ಠವಾದ ಗುರಿಯೆಂದು ಇದು ಸಾರುತ್ತದೆ. ಕರ್ಮವನ್ನು ಮಾಡುವುದೆ ಶ್ರೇಷ್ಠವಾದ ಲಕ್ಷ್ಯವೆಂದು ಕರ್ಮಮಾಡಬೇಕೆನ್ನುವವರು ಸಾರುತ್ತಾರೆ. ಕರ್ಮಮಾಡಬೇಕೆನ್ನುವ ದಾರಿಯನ್ನು ಬಿಟ್ಟು ಅದನ್ನು ಬಿಡಬೇಕೆಂಬುವ ದಾರಿಯನ್ನು ಅನುಸರಿಸಿದರೆ ಮಾನವ

ಕೋಟಿಯ ಪ್ರಗತಿಗೆ ಹೆಚ್ಚು ಹಾನಿಯುಂಟಾಗುತ್ತದೆ. ಈ ದಾರಿಯಲ್ಲಿ ಸತ್ಯದ ಒಂದು ಭಾಗವನ್ನು ಮಾತ್ರ ಸಂಪೂರ್ಣವಾದ ಸತ್ಯವೆಂದು ಒತ್ತಿ ಹೇಳುವುದರಿಂದ ಸತ್ಯದ ವಿಷಯದಲ್ಲಿ ಹೆಚ್ಚು ತಿಳಿವಳಿಕೆಯುಂಟಾಗುವುದಾದರೂ, ಅದರ ಜೊತೆಗೆ ಹೆಚ್ಚು ಗೊಂದಲವೂ, ತಪ್ಪು ತಿಳಿವಳಿಕೆಯೂ ಸಹ ಉಂಟಾಗುತ್ತವೆ. ಕರ್ಮವನ್ನು ಬಿಡಬೇಕೆಂಬ ಸಿದ್ಧಾಂತ ಸುಳ್ಳಲ್ಲ; ಆದರೆ ಪರಿಪೂರ್ಣವಾದ ಸತ್ಯವೂ ಅಲ್ಲ; ಅದರಲ್ಲಿ ಸತ್ಯದ ಅಂಶ ಮಾತ್ರ ಇದೆ. ಆ ಅಂಶ ಇರುವುದರಿಂದ ಅದು ಸತ್ಯದ ವಿಷಯದಲ್ಲಿ ಅಪೂರ್ಣವಾದ—ಆದುದರಿಂದ ತಪ್ಪಾದ—ತಿಳಿವಳಿಕೆಯನ್ನು ಪುಷ್ಟೀಕರಿಸುತ್ತದೆ. ಕರ್ಮವಾದಿಗಳ ಸಿದ್ಧಾಂತವು ಪೂರ್ಣತೆಯು ದೊರೆಯದೆ ಇರುವ ದಾರಿಯನ್ನೆ ಸರಿಯೆಂದು ಉಪದೇಶಿಸಿ, ಈ ಮೂಲಕ ಮನುಷ್ಯರ ಸಿದ್ಧಿಯಕಾಲವನ್ನು ಸಾವಕಾಶ ಮಾಡುತ್ತದೆ. ಆದರೆ ಸನ್ಯಾಸಿಯ ಕರ್ಮತ್ಯಾಗದ ಸಿದ್ಧಾಂತವು ಪ್ರಪಂಚಕ್ಕೆ ನಾಶವನ್ನುಂಟು ಮಾಡುವ ತತ್ವವನ್ನು ಒಳಗೊಂಡಿದೆ. "ನಾನು ಕರ್ಮವನ್ನು ಮಾಡದೆ ಇದ್ದರೆ, ಮಾನವಕೋಟಿಯು ನಾಶವಾಗಿ, ವಿಶ್ವದಲ್ಲೆ ದೊಡ್ಡ ಗೊಂದಲವಾಗುತ್ತದೆ" ಎಂದು ಶ್ರೀಕೃಷ್ಣನು ಹೇಳಿದ್ದಾನೆ. ಅವತಾರ ಪುರುಷನಾದಾಗ್ಯೂ, ಒಂದೇ ಒಂದು ವ್ಯಕ್ತಿಯು ಕರ್ಮವನ್ನು ಮಾಡದಿದ್ದರೆ ಇಡೀ ಮಾನವಕೋಟಿಯೆ ನಾಶವಾಗದಿರಬಹುದು. ಆದರೆ ಅದರಿಂದ ಸಾರ್ವತ್ರಿಕವಾದ ಗೊಂದಲವುಂಟಾಗಿ ಜೀವನದ ಮೂಲತತ್ವಕ್ಕೆ ಧಕ್ಕೆಯುಂಟಾಗಿ ವಿಶ್ವದ ಪ್ರಗತಿಗೆ ಪ್ರಬಲವಾದ ಅಡ್ಡಿಯುಂಟಾಗುತ್ತದೆ.

ಆದುದರಿಂದ ಕರ್ಮತ್ಯಾಗ ಮಾಡಬೇಕೆಂಬ ಸಿದ್ಧಾಂತದಲ್ಲಿರುವ ನ್ಯೂನತೆಯನ್ನು ನಾವು ತಿಳಿದುಕೊಳ್ಳಬೇಕು. ಕರ್ಮವನ್ನು ಆಚರಿಸಬೇಕೆಂಬ ಸಿದ್ಧಾಂತದಲ್ಲಿಯೂ ಮೋಕ್ಷಕ್ಕೆ ಸಾಧನವಾದ ಅಂಶವು ಅಡಗಿದೆಯೆಂಬುದನ್ನು ತಿಳಿದುಕೊಳ್ಳಬೇಕು. ಇವೆರಡಕ್ಕೂ ಸಮಾನವಾದ ಗೌರವವನ್ನು ಕೊಡಬೇಕು. ಮಾನವಕೋಟಿಯ ಸಮಸ್ತ ಕರ್ಮಗಳಲ್ಲಿಯೂ ಈಶ್ವರವ್ಯಾಪಾರವಿದೆಯೆಂದೂ, ಮನುಷ್ಯನಲ್ಲಿ ಈಶ್ವರ ಸಂಕಲ್ಪವು ಪೂರ್ಣಗೊಳ್ಳುತ್ತದೆಯೆಂದೂ ಸಾಧಕನು ತಿಳಿದುಕೊಳ್ಳಬೇಕು. ನಿಷ್ಕ್ರಿಯವಾದ ಮೌನದಲ್ಲಿ ಮಾತ್ರವಲ್ಲ; ಕರ್ಮದಲ್ಲಿಯೂ ಈಶ್ವರನಿದ್ದಾನೆ. ಪ್ರಕೃತಿಯ ಗುಣಗಳಿಂದ ವಿಕಾರ ಹೊಂದದ ಸನ್ಯಾಸಿಯ ಕರ್ಮವನ್ನು ಮಾಡದ ಸ್ಥಿತಿ ಮತ್ತು ವಿಶ್ವವ್ಯಾಪಾರವೆಂಬ ಮಹಾಯಜ್ಞವು ನಡೆಯುವುದಕ್ಕಾಗಿ ಪ್ರಕೃತಿಯ ಗುಣಗಳಿಗೆ ತನ್ನನ್ನು ಆಶ್ರಯವನ್ನಾಗಿ ಮಾಡಿಕೊಂಡಿರುವ ಜೀವನು ಕರ್ಮ ಮಾಡುವುದು, ಇವೆರಡೂ ಪರಸ್ಪರ ವಿರುದ್ಧವಾದ ಸತ್ಯ–ಅಸತ್ಯಗಳಲ್ಲ; ಒಂದು ಉತ್ಕೃಷ್ಟವೂ, ಒಂದು ನಿಕೃಷ್ಟವೂ ಆಗಿದ್ದು, ಒಂದನ್ನೊಂದು ಹೊಡೆದುಹಾಕುವ

ಎರಡು ಸತ್ಯಗಳೂ ಅಲ್ಲ. ಇವೆರಡೂ ವ್ಯಕ್ತಗೊಂಡಿರುವ ಈಶ್ವರನ ಎರಡುಮುಖಗಳು; ಮತ್ತೇನೂ ಅಲ್ಲ. ಇವೆರಡರ ಸಾಫಲ್ಯವು ಅಕ್ಷರಪುರುಷನೊಬ್ಬನಲ್ಲಿಯೆ ಆಗುವುದಿಲ್ಲ; ಏಕೆಂದರೆ, ಈ ಅಕ್ಷರನೆ ಪರಾತ್ಪರನಲ್ಲ. ಇವುಗಳ ಸಾಫಲ್ಯವು ಪುರುಷೋತ್ತಮನಲ್ಲಿ ಆಗುತ್ತದೆ. ಪ್ರಕೃತದಲ್ಲಿ ಅವತಾರ ಪುರುಷನಾದ ಶ್ರೀಕೃಷ್ಣನೆ ಈಶ್ವರನೂ, ಎಲ್ಲ ಲೋಕಗಳ ಅಧಿಪತಿಯೂ, ಪುರುಷೋತ್ತಮನೂ ಆಗಿದ್ದಾನೆ. ದೇವತ್ವದ ಮಟ್ಟವನ್ನು ಮುಟ್ಟಿರುವ ಮನುಷ್ಯನು ಪುರುಷೋತ್ತಮನಂತೆಯೆ ಕರ್ಮವನ್ನು ಮಾಡುತ್ತಾನೆ. ಕರ್ಮವನ್ನು ಮಾಡದೆ ತಟಸ್ಥನಾಗಿ ಇರುವುದಿಲ್ಲ. ಮನುಷ್ಯನು ಅವಿದ್ಯೆಯ ಅವಸ್ಥೆಯಲ್ಲಿರುವಾಗಲೂ, ಜ್ಞಾನಿಯಾಗಿರುವಾಗಲೂ ಸಹ ಈಶ್ವರನು ಅವನ ಮೂಲಕ ಕರ್ಮವನ್ನು ಮಾಡುತ್ತಲೆ ಇರುತ್ತಾನೆ. ಅವನನ್ನು ತಿಳಿಯುವುದೆ ಜೀವನದ ಪರಮಪುರುಷಾರ್ಥ. ಇಂದ್ರಿಯ ಮನಸ್ಸುಗಳಿಗೆ ನಿಲುಕದ ಶಾಂತಿಯೆಂದಾಗಲಿ ಅಥವಾ ಮೌನವೆಂದಾಗಲಿ ಅವನನ್ನು ತಿಳಿದರೆ ಮಾತ್ರ ಸಾಲದು. ಜೀವನು ಅರಿಯಬೇಕಾದ ತತ್ತ್ವವು ಶಾಶ್ವತನೂ ಅಜನೂ ಆದ ಪುರುಷೋತ್ತಮನನ್ನು ಮಾತ್ರವಲ್ಲ; ಜೊತೆಗೆ ಅವನ ಅವತಾರವನ್ನೂ, ಕರ್ಮವನ್ನೂ ತಿಳಿಯಬೇಕು. ಈ ತತ್ತ್ವವನ್ನು ತಿಳಿದುಮಾಡುವ ಕರ್ಮಗಳು ಬಂಧರಹಿತವಾದುವು. "ಈ ರೀತಿ ನನ್ನನ್ನು ತಿಳಿದವನಿಗೆ ಜನ್ಮಕರ್ಮಬಂಧಗಳಿರುವುದಿಲ್ಲ" ಎಂದು ಶ್ರೀಕೃಷ್ಣನು ಹೇಳಿದ್ದಾನೆ. ಸಂಸಾರಚಕ್ರದಿಂದ ಪಾರಾಗಬೇಕೆಂಬುದೆ ನಮ್ಮ ಧ್ಯೇಯವಾದರೆ ಈ ತತ್ತ್ವದ ಅರಿಯುವಿಕೆಯೆ ಅದಕ್ಕೆ ಸರಿಯಾದ, ಸುಲಭವಾದ ಮತ್ತು ನೇರವಾದ ಮಾರ್ಗವೆಂದು ತಿಳಿಯಬೇಕು. "ಎಲೈ ಅರ್ಜುನನೆ, ನನ್ನ ದಿವ್ಯವಾದ ಜನ್ಮ ಕರ್ಮಗಳನ್ನು ಸರಿಯಾಗಿ ಯಾವನು ತಿಳಿಯುತ್ತಾನೆಯೊ ಅವನು ದೇಹವನ್ನು ಬಿಟ್ಟನಂತರ ಪುನರ್ಜನ್ಮವನ್ನು ಹೊಂದದೆ ನನ್ನನ್ನೆ ಸೇರುತ್ತಾನೆ." (ಗೀತೆ ೪-೯) ಎಂದು ಶ್ರೀಕೃಷ್ಣನು ಹೇಳಿದ್ದಾನೆ. ನಮ್ಮಲ್ಲಿರುವ ಪರಮಾತ್ಮನನ್ನು ತಿಳಿದುಕೊಳ್ಳುವುದರಿಂದ ಎಲ್ಲ ಜೀವಗಳ ಆತ್ಮನೂ, ಅಜನೂ, ಅವ್ಯಯನೂ ಆದ ಪುರುಷೋತ್ತಮನನ್ನು ಸೇರುತ್ತೇವೆ. ದಿವ್ಯವಾದ ಕರ್ಮಗಳನ್ನು ಅರಿತು ಅದೇ ರೀತಿ ನಾವೂ ಕರ್ಮಗಳನ್ನು ಮಾಡುವುದರಿಂದ ಕರ್ಮಗಳ ಪ್ರಭುವೂ ಮತ್ತು ಸರ್ವಭೂತಗಳ ಒಡೆಯನೂ ಆದ ಪುರುಷೋತ್ತಮನನ್ನು ಸೇರುತ್ತೇವೆ. ಆಮೇಲೆ ನಾವು ಆ ಅಜನಲ್ಲೇ ವಾಸಮಾಡುತ್ತೇವೆ; ನಾವು ಮಾಡುವ ಕರ್ಮಗಳೆಲ್ಲ ಕರ್ಮಗಳ ಪ್ರಭುವಾದ ಅವನ ಕರ್ಮಗಳಾಗುತ್ತವೆ.

# ಹದಿನೈದನೆಯ ಪ್ರಕರಣ

## ಅವತಾರದ ಸಂಭವ ಮತ್ತು ಉದ್ದೇಶ

ಇಲ್ಲಿಯವರೆಗೆ ನಿರೂಪಿಸಿರುವ ಯೋಗದಲ್ಲಿ ಜ್ಞಾನವನ್ನೂ ಕರ್ಮವನ್ನೂ ಸಮನ್ವಯಮಾಡಿದೆ; ಮೋಕ್ಷಕ್ಕೆ ಕರ್ಮಸಹಿತವಾದ ಜ್ಞಾನವು ಸಾಧನವೆಂದು ವಿವರಿಸಿದೆ. ಈ ಯೋಗದ ಪ್ರಕಾರ ಎಲ್ಲ ಕರ್ಮಗಳೂ ಜ್ಞಾನದಲ್ಲಿ ಪರಿಸಮಾಪ್ತಿ ಹೊಂದುತ್ತವೆ; ಜ್ಞಾನವು ಕರ್ಮಕ್ಕೆ ಆಧಾರವಾಗಿದ್ದು ಕರ್ಮವನ್ನು ನಿಯೋಜಿಸಿ, ಕರ್ಮಾಚರಣೆಯ ವಿಷಯದಲ್ಲಿ ಬೆಳಕನ್ನು ಚೆಲ್ಲುತ್ತದೆ. ಜ್ಞಾನ ಕರ್ಮಗಳೆರಡೂ ಪರಮದೈವವಾದ ಪುರುಷೋತ್ತಮನಿಗೆ ಅರ್ಪಿತವಾಗುತ್ತವೆ. ಈ ಪುರುಷೋತ್ತಮನೆ ನಮ್ಮಲ್ಲಿ ನಾರಾಯಣನಾಗಿ ವ್ಯಕ್ತವಾಗಿ ನಮ್ಮ ಮತ್ತು ನಮ್ಮ ಕರ್ಮಗಳ ಒಡೆಯ ನಾಗಿರುತ್ತಾನೆ; ನಮ್ಮ ಹೃದಯದಲ್ಲಿ ಗೂಢವಾಗಿ ಸರ್ವದಾ ಇರುತ್ತಾನೆ. ಮನುಷ್ಯ ರೂಪದಲ್ಲಿಯೂ ಕೂಡ ಅವತರಿಸಿ ವ್ಯಕ್ತನಾಗುತ್ತಾನೆ; ಮತ್ತು ಮನುಷ್ಯವರ್ಗದ ಯೋಗಕ್ಷೇಮವನ್ನು ವಹಿಸುತ್ತಾನೆ.

“ಪುರಾತನವಾದ ಈ ಯೋಗವು ಮೊದಲು ನನ್ನಿಂದ ಸೂರ್ಯನಿಗೆ ಉಪದೇಶಿ ಸಲ್ಪಟ್ಟಿತು; ಮನುಷ್ಯವರ್ಗದ ಮೂಲಪುರುಷನಾದ ಮನುವಿಗೆ ಸೂರ್ಯದೇವನು ಇದನ್ನು ಹೇಳಿದನು. ಸೂರ್ಯವಂಶದ ಮೂಲಪುರುಷನಾದ ಇಕ್ಷ್ವಾಕುವಿಗೆ ಮನುವು ಉಪದೇಶಿಸಿದನು. ಹೀಗೆ ಇದು ರಾಜರ್ಷಿಯಿಂದ ರಾಜರ್ಷಿಗೆ ಉಪದೇಶಿಸಲ್ಪಡು ತ್ತಿದ್ದು, ಕಾಲಕ್ರಮದಲ್ಲಿ ನಷ್ಟವಾಯಿತು. ಅವತಾರಪುರುಷನಾದ ನನಗೆ ನೀನು ಪ್ರೀತಿಪಾತ್ರನೂ, ಭಕ್ತನೂ, ಸಖನೂ ಆಪ್ತನೂ ಆಗಿರುವುದರಿಂದ ಈಗ ಇದನ್ನು ನಿನಗೆ ಉಪದೇಶಿಸುತ್ತಿದ್ದೇನೆ” ಎಂದು ಶ್ರೀಕೃಷ್ಣನು ಅರ್ಜುನನಿಗೆ ಹೇಳಿದ್ದಾನೆ ಇದೇ ಉತ್ತಮವಾದ ರಹಸ್ಯವೆಂದು ಹೇಳಿದ್ದಾನೆ. ಇದರಿಂದ ಈ ಯೋಗವನ್ನು ಉಳಿದ ಎಲ್ಲ ಯೋಗಗಳಿಗಿಂತ ಉತ್ಕೃಷ್ಟವೆಂದು ಹೇಳಿದಂತಾಯಿತು. ಇತರ ಯೋಗಗಳಾದರೂ ನಿರಾಕಾರನಾದ ಬ್ರಹ್ಮನಿಗಾಗಲಿ, ಮೂರ್ತಿಮತ್ತಾದ ದೇವತೆ ಗಾಗಲಿ ಸಾಧಕರನ್ನು ಒಯ್ಯುತ್ತವೆ; ಕರ್ಮರಹಿತವಾದ ಜ್ಞಾನವನ್ನು ಸಾಧನ ವನ್ನಾಗಿ ಹೊಂದಿರುವವರನ್ನು ಮುಕ್ತಿಗೆ ಒಯ್ಯುತ್ತದೆ; ಕರ್ಮವನ್ನು ಸಾಧನ ವನ್ನಾಗಿ ಹೊಂದಿರುವವರನ್ನು ಸಾಮೀಪ್ಯಕ್ಕೆ (ಮುಕ್ತಿ) ಒಯ್ಯುತ್ತದೆ; ಆದರೆ ಈ ಯೋಗವಾದರೊ ಸಾಧಕನನ್ನು ಎಲ್ಲಕ್ಕಿಂತ ಶ್ರೇಷ್ಠವಾದ ಮುಕ್ತಿ ಮತ್ತು ಪರಿಪೂರ್ಣ ವಾದ ಸತ್ಯದ ಕಡೆಗೆ ಒಯ್ಯುತ್ತದೆ. ದಿವ್ಯವಾದ ಶಾಂತಿ, ಕರ್ಮ, ಜ್ಞಾನ, ಆನಂದ

ಇವೆಲ್ಲವೂ ಕಲೆತಿರುವ ಮೋಕ್ಷವನ್ನು ಕೊಡುತ್ತದೆ. ಪರವಸ್ತುವು ವ್ಯಕ್ತಪುರುಷನ ವಿವಿಧವಾದ ಮತ್ತು ಪರಸ್ಪರ ವಿರುದ್ಧವಾದ ಸ್ವಭಾವಗಳನ್ನೂ, ಶಕ್ತಿಗಳನ್ನೂ ತನ್ನಲ್ಲಿ ಒಂದುಗೂಡಿಸುತ್ತದೆ. ಆದುದರಿಂದ ಕೆಲವರು ಹೇಳುವಂತೆ ಈ ಯೋಗವು ಗೀತೆಯಲ್ಲಿ ಪ್ರೋಕ್ತವಾದ ಮೂರು ಯೋಗಗಳಲ್ಲಿ ಒಂದಾದ ಮತ್ತು ಅವುಗಳಲ್ಲಿ ಅಧಮವೆಂದು ಪರಿಗಣಿಸಲ್ಪಟ್ಟಿರುವ ಕರ್ಮಯೋಗವಲ್ಲ ಆದರೆ ಇದು ಎಲ್ಲವನ್ನೂ ಒಳಗೊಂಡಿರುವ, ಒಂದೇ ಆದ, ಪರಮಶ್ರೇಷ್ಠವಾದ ಯೋಗ. ನಮ್ಮ ಎಲ್ಲ ಶಕ್ತಿಗಳನ್ನೂ ಈಶ್ವರನ ಕಡೆಗೆ ತಿರುಗಿಸುತ್ತದೆ.

ಈ ಯೋಗವು ತನ್ನಿಂದ ಸೂರ್ಯನಿಗೆ ಉಪದೇಶಿಸಲ್ಪಟ್ಟಿತೆಂಬ ಶ್ರೀಕೃಷ್ಣನ ಮಾತುಗಳನ್ನು ಅರ್ಜುನನು ಅಕ್ಷರಶಃ ಅರ್ಥಮಾಡಿಕೊಂಡನು (ಇದಕ್ಕೆ ಬೇರೆ ವಿಧವಾಗಿಯೂ ಅರ್ಥಮಾಡಬಹುದು) "ಸೂರ್ಯವಂಶದ ರಾಜರ ಮೂಲಪುರುಷನೂ ಬಹು ಹಿಂದೆ ಹುಟ್ಟಿದವನೂ ಆದ ಸೂರ್ಯನಿಗೆ ಇತ್ತೀಚೆಗೆ ಹುಟ್ಟಿರುವ ನೀನು ಉಪದೇಶ ಮಾಡಿರುವುದು ಹೇಗೆ ಸಾಧ್ಯ" ಎಂದು ಕೃಷ್ಣನನ್ನು ಕೇಳುತ್ತಾನೆ. ಹೊರಗಿನ ಮತ್ತು ಅಂತರವಾದ ಬೆಳಕನ್ನು ಕೊಡುವ ಜ್ಞಾನರೂಪನಾದ ಸೂರ್ಯನಿಗೆ ಸಮಸ್ತ ಜ್ಞಾನಕ್ಕೂ ಮೂಲನಾದ ಈಶ್ವರನಾದ ತಾನು ಈ ಉಪದೇಶವನ್ನು ಕೊಟ್ಟೆನೆಂದು ಶ್ರೀಕೃಷ್ಣನು ಉತ್ತರಕೊಡಬಹುದಾಗಿತ್ತು ; ಆದರೆ ಹಾಗೆ ಹೇಳಲಿಲ್ಲ. ಅರ್ಜುನನ ಪ್ರಶ್ನೆಯು ಕಲ್ಪಿಸಿಕೊಟ್ಟ ಅವಕಾಶವನ್ನು ಉಪಯೋಗಿಸಿಕೊಂಡು ಗೂಢವಾಗಿದ್ದ ತನ್ನ ದೇವತ್ವವನ್ನು—ಎಂದರೆ ತಾನು ಅವತಾರಪುರುಷನೆಂಬ ಸಂಗತಿಯನ್ನು ಪ್ರಕಾಶಪಡಿಸುತ್ತಾನೆ. ಇಲ್ಲಿಯವರೆಗೆ ಶ್ರೀಕೃಷ್ಣನು ಈ ವಿಷಯನ್ನು ಸ್ಪಷ್ಟವಾಗಿ ಹೇಳಿಲ್ಲ ; ಆದರೂ ತಾನು ಮಾಡುವ ಕರ್ಮಗಳಿಂದ ತಾನು ಬದ್ಧನಲ್ಲವೆಂದು ತನ್ನನ್ನೆ ಉದಹರಿಸಿದಾಗ ಈ ವಿಷಯವನ್ನು ಸೂಚಿಸಿದ್ದನು. ಈಗ ಸ್ಪಷ್ಟವಾಗಿ ತಾನೆ ಅವತಾರ ಪುರುಷನೆಂದು ಸಾರುತ್ತಾನೆ.

ಹಿಂದೆ "ಭಗವಂತನಾದ ಗುರು" ಎಂಬ ಎರಡನೆಯ ಪ್ರಕರಣದಲ್ಲಿ ವೇದಾಂತದ ದೃಷ್ಟಿಯಿಂದ ಅವತಾರತತ್ವವು ಏನೆಂಬುದನ್ನು ಕುರಿತು ಪ್ರಸ್ತಾಪ ಮಾಡಿದ್ದೇವೆ. ಗೀತೆಯು ಉಪದೇಶವೂ ಈ ರೀತಿಯಾಗಿಯೆ ಇದೆ. ಅವತಾರವೆಂದರೆ ಭಗವಂತನು ಸ್ಥೂಲದೇಹವನ್ನು ಧರಿಸಿ ವ್ಯಕ್ತನಾಗುವುದು. ಈ ವಿಷಯವನ್ನು ಇನ್ನೂ ಸೂಕ್ಷ್ಮವಾಗಿ ವಿಚಾರ ಮಾಡೋಣ. ಏತಕ್ಕೆಂದರೆ ಗೀತೆಯ ಉಪದೇಶದಲ್ಲಿ ಇದು ಒಂದು ಮುಖ್ಯವಾದ ಭಾಗ. ಆದ್ದರಿಂದ ಅವತಾರದ ಸ್ವರೂಪ ಮತ್ತು ಉದ್ದೇಶಗಳನ್ನು ಕುರಿತು ಶ್ರೀಕೃಷ್ಣನೆ ಹೇಳಿರುವ ಶ್ಲೋಕಗಳನ್ನೂ, ಇವಕ್ಕೆ ಸಂಬಂಧಿಸಿದ ಇತರ ವಾಕ್ಯಗಳನ್ನೂ ಮೊದಲು ವಿಚಾರ ಮಾಡೋಣ.

"ನನಗೂ ನಿನಗೂ ಅನೇಕ ಜನ್ಮಗಳು ಕಳೆದುಹೋಗಿವೆ. ಅವೆಲ್ಲವನ್ನೂ ನಾನು ತಿಳಿದಿದ್ದೇನೆ, ನೀನು ತಿಳಿದಿಲ್ಲ. ಪ್ರಾಣಿಗಳಿಗೆಲ್ಲ ಸ್ವಾಮಿಯಾಗಿಯೂ, ನಾಶ ರಹಿತನಾಗಿಯೂ, ಹುಟ್ಟದವನಾಗಿಯೂ ಇದ್ದಾಗ್ಯೂ, ನನ್ನ ಮಾಯೆಯಿಂದ ನನ್ನ ಪ್ರಕೃತಿಯನ್ನು ಆಧಾರ ಮಾಡಿಕೊಂಡು ಹುಟ್ಟುತ್ತೇನೆ. ಯಾವಾಗ ಧರ್ಮವು ಕುಂದಿ ಅಧರ್ಮವು ತಲೆಯೆತ್ತುತ್ತದೆಯೊ ಆವಾಗ ನಾನು ನನ್ನನ್ನು ಸೃಷ್ಟಿಮಾಡಿ ಕೊಳ್ಳುತ್ತೇನೆ. ಸಜ್ಜನರ ಸಂರಕ್ಷಣೆಗೋಸ್ಕರವೂ, ದುರ್ಜನರ ವಿನಾಶಕ್ಕಾಗಿಯೂ, ಧರ್ಮವನ್ನು ಸ್ಥಾಪಿಸುವುದಕ್ಕೋಸ್ಕರವೂ ಪ್ರತಿಯುಗದಲ್ಲಿಯೂ, ನಾನು ಹುಟ್ಟು ತ್ತೇನೆ, ನನ್ನ ದಿವ್ಯವಾದ ಜನ್ಮಕರ್ಮಗಳನ್ನು ಸರಿಯಾಗಿ ಯಾವನು ತಿಳಿಯುತ್ತಾ ನೆಯೊ ಅವನಿಗೆ ದೇಹವನ್ನು ಬಿಟ್ಟನಂತರ ಪುನರ್ಜನ್ಮವಿಲ್ಲ; ಅವನು ನನ್ನನ್ನೆ ಸೇರುತ್ತಾನೆ. ಆಸೆ, ಭಯ, ಕೋಪಗಳನ್ನು ಕಳೆದುಕೊಂಡು, ನನ್ನ ಗುಣಗಳಿಂದ ತುಂಬಲ್ಪಟ್ಟು, ನನ್ನನ್ನು ಆಶ್ರಯಿಸಿಕೊಂಡಿರುವ ಅನೇಕರು ಜ್ಞಾನವೆಂಬ ತಪಸ್ಸಿನಿಂದ ಶುದ್ಧರಾಗಿ ನನ್ನನ್ನು ಸೇರುತ್ತಾರೆ. ಯಾರು ನನ್ನನ್ನು ಯಾವ ರೀತಿಯಿಂದ ಶರಣು ಹೊಂದುತ್ತಾರೆಯೊ ಅವರಿಗೆ ನಾನು ಅದೇ ರೀತಿಯಲ್ಲಿ ಒಲಿಯುತ್ತೇನೆ. ಜನರು ಎಲ್ಲ ಕಡೆಯಿಂದಲೂ ಹೊರಟು ನಡೆಯುವ ಮಾರ್ಗಗಳು ನನ್ನಲ್ಲಿಗೆ ಸೇರತಕ್ಕವು" (ಗೀತೆ ೪ ನೇ ಅಧ್ಯಾಯ ೫ ರಿಂದ ೧೧)

ಮುಂದುವರಿಯುತ್ತಾ, ಶ್ರೀಕೃಷ್ಣನು ಹೇಳುತ್ತಾನೆ. ತಮ್ಮ ಕರ್ಮಗಳ ಫಲವನ್ನು ಅಪೇಕ್ಷಿಸುವ ಅನೇಕ ಜನರು, ದೇವತೆಗಳನ್ನು ಎಂದರೆ, ಒಬ್ಬನೆ ಆದ ಭಗವಂತನ ವಿವಿಧವಾದ ಶಕ್ತಿಗಳನ್ನು ಮತ್ತು ಅಂಶಗಳನ್ನು, ಯಜ್ಞಕರ್ಮಗಳಿಂದ ಅರ್ಚಿಸುತ್ತಾರೆ. ಇದಕ್ಕೆ ಕಾರಣವೇನೆಂದರೆ, ಈ ಲೋಕದಲ್ಲಿ ಜ್ಞಾನರಹಿತವಾಗಿ ಮಾಡುವ ಕರ್ಮಗಳು ಕ್ಷಿಪ್ರವಾಗಿ ಫಲವನ್ನು ಕೊಡುತ್ತವೆ; ಏತಕ್ಕೆಂದರೆ ಅವು ಈ ಲೋಕಕ್ಕೆ ಸೇರಿದುವು. ಜ್ಞಾನಸಹಿತವಾಗಿ ಭಗವಂತನನ್ನು ಕುರಿತು ಮಾಡುವ ಕರ್ಮ ಗಳಿಂದ ಉಂಟಾಗುವ ದಿವ್ಯವಾದ ಆತ್ಮಸಿದ್ಧಿಯು ಅಷ್ಟು ಕ್ಷಿಪ್ರವಾಗಿಯೂ ಸುಲಭ ವಾಗಿಯೂ ದೊರೆಯುವುದಿಲ್ಲ. ಇದರ ಫಲವು ಮೇಲಿನ ಲೋಕಗಳಿಗೆ ಸೇರಿದ್ದು. ಈ ವಿಷಯವು ಸುಲಭವಾಗಿ ಗೋಚರವಾಗುವುದಿಲ್ಲ; ಆದುದರಿಂದ ಮನುಷ್ಯರು ತಮಗೆ ಸಹಜವಾದ, ಗುಣ–ಕರ್ಮಗಳಿಗೆ (ನಾಲ್ಕು ವಿಧವಾದ) ಅನುಗುಣವಾದ ಕಾರ್ಯಗಳನ್ನು ಈ ಲೋಕದಲ್ಲಿ ಮಾಡುತ್ತಾ, ಅವುಗಳ ಮೂಲಕ ಈಶ್ವರನ ವಿವಿಧ ರೂಪಗಳನ್ನು ಭಜಿಸುತ್ತಾರೆ. ಮುಂದುವರೆಯುತ್ತಾ ಶ್ರೀಕೃಷ್ಣನು ಹೀಗೆ ಹೇಳು ತ್ತಾನೆ: "ಗುಣಕರ್ಮಗಳಿಗನುಸಾರವಾಗಿ ನಾಲ್ಕು ವರ್ಣಗಳು ನನ್ನಿಂದ ಸೃಷ್ಟಿಸಲ್ಪ

ಟ್ಟಿವು ; ನಾಲ್ಕುವಿಧವಾದ ಕರ್ಮಗಳೂ ನನ್ನಿಂದ ಮಾಡಲ್ಪಡುತ್ತವೆ. ಇವುಗಳನ್ನು ನಾನು ಮಾಡಿದರೂ ನನ್ನನ್ನು ನಾಶರಹಿತನಾದ, ಅವ್ಯಯನಾದ ಕರ್ತೃತ್ವವಿಲ್ಲದವ ನೆಂದು ತಿಳಿ. ಕರ್ಮಗಳು ನನಗೆ ಅಂಟಿಕೊಳ್ಳುವುದಿಲ್ಲ. ಕರ್ಮ ಫಲದಲ್ಲಿ ನನಗೆ ಆಶೆಯಿಲ್ಲ." (ಗೀತೆ: ಅ. ೪–೧೩, ೧೪).

ಭಗವಂತನು ನಿರಾಕಾರನು; ಪ್ರಕೃತಿ ವ್ಯಾಪಾರಗಳ ಗೊಂದಲಕ್ಕೂ, ಅಹಂಕಾರಕ್ಕೂ ಅತೀತನು. ಆದಾಗ್ಯೂ ಪುರುಷೋತ್ತಮನಾದ ಅವನು ಅಹಂಭಾವ ರಹಿತನಾದ ಪುರುಷನು ; ಕರ್ಮಗಳನ್ನು ಬಿಡುವುದರಲ್ಲಿಯೂ, ಮಾಡುವುದರಲ್ಲಿಯೂ ಸಹ ಅವನಿಗೆ ಸಂಪೂರ್ಣ ಸ್ವಾತಂತ್ರ್ಯವಿದೆ. ಭಗವಂತನಂತೆ ಕರ್ಮಗಳನ್ನು ಮಾಡ ಬೇಕೆಂಬುವವನು ಚತುರ್ವರ್ಣದ ಕರ್ಮಗಳನ್ನು ಮಾಡುತ್ತಿರುವಾಗಲೂ ಕೂಡ ಎಲ್ಲ ಕರ್ಮಗಳಿಗೂ ಅತೀತನಾದ ಅಹಂಭಾವಾತೀತನಾದ ಪುರುಷನನ್ನು ತಿಳಿಯಬೇಕು ; ಪುರುಷೋತ್ತಮನಲ್ಲಿ ವಾಸಮಾಡಬೇಕು. "ಹೀಗೆಂದು ಯಾವ ಮನುಷ್ಯನು ನನ್ನನ್ನು ತಿಳಿಯುತ್ತಾನೆಯೊ ಅವನನ್ನು ಕರ್ಮಗಳು ಬಂಧಿಸುವುದಿಲ್ಲ. ಹಿಂದೆ ಮುಮುಕ್ಷುಗಳೂ ಕೂಡ ಈ ಪ್ರಕಾರ ತಿಳಿದು ಕರ್ಮವನ್ನು ಮಾಡುತ್ತಿದ್ದರು. ಆದುದರಿಂದ ಈಗ ನೀನೂ ಕೂಡ ಹಿಂದೆ ನಿನ್ನ ಹಿರಿಯರು ಮಾಡುತ್ತಿದ್ದಂತೆ ಕರ್ಮವನ್ನು ಮಾಡು." (ಅ. ೪–೧೪, ೧೫)

ಮೇಲೆ ಹೇಳಿರುವ ಶ್ಲೋಕಗಳಲ್ಲಿ ಕೊನೆಯ ಭಾಗವು ಭಗವಂತನಂತೆ ಮಾಡಬೇಕಾದ ಕರ್ಮದ (ದಿವ್ಯಕರ್ಮ) ಸ್ವರೂಪವನ್ನು ವಿವರಿಸುತ್ತದೆ. ಇದನ್ನು ನಾವು ಹಿಂದಿನ ಪ್ರಕರಣದಲ್ಲಿಯೆ ವಿವರಿಸಿದ್ದೇವೆ. ಮೊದಲನೆಯ ಭಾಗದಲ್ಲಿ ಅವತಾ ರದ (ದಿವ್ಯಜನ್ಮ) ತತ್ವವನ್ನು ವಿವರಿಸಿದೆ. ಭಗವಂತನು ಮನುಷ್ಯರ ಮಧ್ಯೆ ವ್ಯಕ್ತ ವಾಗುವ, ಎಂದರೆ ಅವತಾರಮಾಡುವ, ಉದ್ದೇಶವು ಕೇವಲ ಧರ್ಮದ ಉದ್ಧಾರ ವೊಂದೆ ಅಲ್ಲವೆಂಬುದನ್ನು ನಾವು ಗಮನಿಸಬೇಕು. ಏತಕ್ಕೆಂದರೆ ಧರ್ಮದ ಉದ್ಧಾರವು ಭಗವಂತನ ಅವತಾರಕ್ಕೆ ಸಾಕಾದ ಮತ್ತು ಸಂಪೂರ್ಣವಾದ ಕಾರಣ ವಾಗಲಾರದು.—ಬುದ್ಧ, ಕ್ರಿಸ್ತ, ಕೃಷ್ಣನಂತಹವರ ಅವತಾರದ ಪರಮಲಕ್ಷ್ಯವು ಧರ್ಮಸಂಸ್ಥಾಪನೆ ಮಾತ್ರವಲ್ಲ. ಇನ್ನೂ ಉತ್ತಮವಾದ ಉದ್ದೇಶಕ್ಕೆ, ಇನ್ನೂ ಮೇಲ್ಮಟ್ಟದ ಮತ್ತು ಶ್ರೇಷ್ಠವಾದ ದಿವ್ಯವಾದ ಉದ್ದೇಶಕ್ಕೆ ಧರ್ಮಸಂಸ್ಥಾಪ ನೆಯು ಪೂರ್ವಭಾವಿಯಾದ ಸಾಧನಮಾತ್ರವಾಗಿದೆ. ಅವತಾರವು ದ್ವಿಮುಖ ವಾಗಿದೆ; ಇದರಲ್ಲಿ ಎರಡು ಕಾರ್ಯಗಳು ಕಂಡುಬರುತ್ತವೆ. ಒಂದು ಇಳಿಯುವಿಕೆ, ಅವ–ತಾರ; ಮನುಷ್ಯರ ನಡುವೆ ಭಗವಂತನು ಜನ್ಮತಾಳುವುದು ; ಮನುಷ್ಯರೂಪ ದಲ್ಲಿ, ಮಾನುಷಧರ್ಮಕ್ಕೊಳಪಟ್ಟು ಭಗವಂತನು ವ್ಯಕ್ತವಾಗುವುದು. ಈ ಕಾರ್ಯವು

ಸತತವಾಗಿ ನಡೆಯುತ್ತಿದೆ. ಇನ್ನೊಂದು ಕಾರ್ಯವಾದರೊ ಮೇಲಕ್ಕೇಳುವುದು. ಉದ್ಧಾರ, ಆರೋಹಣ; ಮನುಷ್ಯನು ದೇವರ ಮಟ್ಟಕ್ಕೇರುವುದು; ದೇವತ್ವದ ಮಟ್ಟಕ್ಕೆ ದೇವತೆಗಳಿಗೆ ಸಹಜವಾದ ಜ್ಞಾನದ ಮಟ್ಟಕ್ಕೆ ಏರುವುದು; ಜೀವನು ಎರಡನೆಯ ಬಾರಿ ಜನ್ಮವನ್ನು ತಾಳುವುದು. ಅವತಾರ ಮತ್ತು ಧರ್ಮಸಂಸ್ಥಾಪನೆಯು ಈ ಎರಡನೆಯ ಕಾರ್ಯದ ಸಲುವಾಗಿಯೆ. ಗೀತೆಯಲ್ಲಿ ಹೇಳಿರುವ ಅವತಾರತತ್ವದ ದ್ವಿಮುಖತ್ವವು ಸಾಮಾನ್ಯ ಓದುಗರ ದೃಷ್ಟಿಗೆ ಗೋಚರವಾಗುವುದಿಲ್ಲ. ಆಳವಾಗಿರುವ ಗೀತೆಯ ಉಪದೇಶದ ಮೇಲ್ಭಾಗವನ್ನು ಮಾತ್ರ ಇವರು ತಿಳಿದುಕೊಂಡು ಅಷ್ಟಕ್ಕೆ ತೃಪ್ತರಾಗುತ್ತಾರೆ. ವ್ಯಾಪಕವಾದ ಈ ಅರ್ಥವು ಸಿದ್ಧಾಂತಗಳ ಮತ್ತು ಸಂಪ್ರದಾಯಗಳ ಕಟ್ಟಿಗೆ ಸಿಕ್ಕಿರುವ ಭಾಷ್ಯಕಾರರ ದೃಷ್ಟಿಗೂ ಬೀಳುವುದಿಲ್ಲ. ಆದರೆ ಗೀತೆಯ ಈ ಉಪದೇಶವನ್ನು ಪೂರ್ಣವಾಗಿ ಗ್ರಹಿಸಲು ಇದರ ತಿಳಿವಳಿಕೆಯು ಅತ್ಯವಶ್ಯಕವೆಂಬುದರಲ್ಲಿ ಸಂಶಯವಿಲ್ಲ. ಅವತಾರದ ತತ್ವವನ್ನು ನಾವು ಈ ರೀತಿಯಾಗಿಯೆ ಗ್ರಹಿಸಬೇಕು. ಇಲ್ಲದಿದ್ದರೆ ಅದು ಕೇವಲ ಹೇಳಿಕೆ, ಅಥವಾ ಕುರುಡುನಂಬಿಕೆ, ಅಥವಾ ಚರಿತ್ರೆಯಲ್ಲಿ, ಪುರಾಣದಲ್ಲಿ ಪ್ರಸಿದ್ಧರಾದ ಪುರುಷಶ್ರೇಷ್ಠರೆ ದೇವರೆಂದು ಕಲ್ಪಿಸುವುದು, ಅಥವಾ ಅಂತರಾರ್ಥಬರುವಂತೆ ದೇವತ್ವವನ್ನು ಆರೋಪಣೆಮಾಡುವುದು— ಇಷ್ಟುಮಾತ್ರ ಆಗುತ್ತದೆ. ಗೀತೆಯ ಪ್ರಕಾರವಾಗಿ ಆದರೆ, ಅವತಾರದ ನಿರೂಪಣೆಯು ಬಹಳ ಅರ್ಥವತ್ತಾದ ಆಧ್ಯಾತ್ಮಿಕತತ್ವ; ಮತ್ತು ಉತ್ತಮ ರಹಸ್ಯಜ್ಞಾನದ ಒಂದು ಮುಖ್ಯವಾದ ಭಾಗ ಅಥವಾ ಅದಕ್ಕೆ ಒಂದು ಸಾಧನ.

ಭಗವಂತನು ಮನುಷ್ಯರೂಪದಲ್ಲಿ ಅವತರಿಸುವುದರಿಂದ ಮನುಷ್ಯರು ದೇವತ್ವದ ಮಟ್ಟಕ್ಕೆ ಏರಲು ಸಹಾಯವಾಗದಿದ್ದರೆ, ಕೇವಲ ಧರ್ಮಸ್ಥಾಪನೆಗಾಗಿ ಅವತಾರವು ಅನವಶ್ಯಕ. ಏತಕ್ಕೆಂದರೆ ನ್ಯಾಯ, ಧರ್ಮ ಮತ್ತು ಸದಾಚಾರಗಳ ಪಾಲನೆಯನ್ನು ಸರ್ವಶಕ್ತನಾದ ಭಗವಂತನು ಸಾಮಾನ್ಯವಿಧಾನಗಳಿಂದಲೆ ಮಾಡಬಹುದು; ಎಂದರೆ ಮಹಾತ್ಮರಿಂದ ಮತ್ತು ಆಧ್ಯಾತ್ಮಿಕಸಂಘಗಳ ಮೂಲಕವಾಗಲಿ ರಾಜರ, ಋಷಿಗಳ ಮತ್ತು ಮತಸ್ಥಾಪಕರ ಜೀವನ ಮತ್ತು ಉಪದೇಶಗಳಿಂದಾಗಲಿ ಈ ಕೆಲಸವು ನೆರವೇರುತ್ತಿತ್ತು; ಇಷ್ಟಕ್ಕೆ ಮಾತ್ರ ಅವತಾರದ ಅವಶ್ಯಕತೆಯು ಕಂಡುಬರುವುದಿಲ್ಲ. ಮನುಷ್ಯನಲ್ಲಿ ಅಡಗಿರುವ ದೇವತ್ವವನ್ನು ಹೊರಕ್ಕೆ ತರಲು— ಎಂದರೆ ಅವನಲ್ಲಿರುವ ಕ್ರಿಸ್ತತತ್ವ, ಕೃಷ್ಣತತ್ವ, ಬುದ್ಧತತ್ವ ಇವುಗಳ ಆವಿರ್ಭಾವಕ್ಕಾಗಿ, ಪ್ರಕಾಶಕ್ಕಾಗಿ ಅವತಾರವು ಸಂಭವಿಸುತ್ತದೆ. ಕೃಷ್ಣ, ಕ್ರಿಸ್ತ, ಬುದ್ಧ ಇವರನ್ನು ಮಾದರಿಯನ್ನಾಗಿಟ್ಟುಕೊಂಡು ಮನುಷ್ಯನು ತನ್ನ ಯೋಚನೆ, ಭಾವನೆ, ಕೆಲಸಗಳು

ಮತ್ತು ಸ್ವಭಾವ ಇವನ್ನೆಲ್ಲ ರೂಪಿಸಿಕೊಂಡು ಮನುಷ್ಯತ್ವವನ್ನು ದೇವತ್ವವನ್ನಾಗಿ ಮಾರ್ಪಾಡು ಮಾಡಿಕೊಳ್ಳಬೇಕು. ಇದಕ್ಕೋಸ್ಕರ ಅವತಾರವು ಸಂಭವಿಸುತ್ತದೆ. ಅವತಾರಪುರುಷನು ಧರ್ಮವನ್ನು ಸ್ಥಾಪಿಸುವುದು ಕೂಡ ಮುಖ್ಯವಾಗಿ ಈ ಉದ್ದೇಶದಿಂದಲೆ. ಈ ಧರ್ಮಮಾರ್ಗದ ಬಾಗಿಲಿನಲ್ಲಿ ಕ್ರಿಸ್ತ, ಕೃಷ್ಣ, ಬುದ್ಧರು ನಿಂತು ತಾವೆ ಮನುಷ್ಯರು ಅನುಸರಿಸಬೇಕಾದ ಮಾರ್ಗವಾಗುತ್ತಾರೆ. ಆದುದರಿಂದಲೆ ಪ್ರತಿಯೊಬ್ಬ ಅವತಾರಪುರುಷನೂ ಮನುಷ್ಯರಿಗೆ ತನ್ನನ್ನೆ ಮೇಲ್ಪಂಕ್ತಿಯನ್ನಾಗಿಟ್ಟು ಕೊಳ್ಳಬೇಕೆಂದೂ, ತಾನೆ ಮಾರ್ಗವೆಂದೂ, ದ್ವಾರವೆಂದೂ ಸಾರುತ್ತಾನೆ. ಇದಲ್ಲದೆ ಮಾನವಕೋಟಿಯೂ ಈಶ್ವರನೂ ಒಂದೆ ಎಂದು ಸಾರುತ್ತಾನೆ; ಊರ್ಧ್ವಲೋಕ ದಲ್ಲಿರುವ ದೇವರೂ, ಅವನಿಂದ ಸಂಭೂತನಾದ ಮನುಷ್ಯನೂ ಒಂದೆ ಎಂದು ಹೇಳುತ್ತಾನೆ. ಮನುಷ್ಯರೂಪವನ್ನು ಆಶ್ರಯಿಸಿರುವ ಕೃಷ್ಣನೂ, ಎಲ್ಲ ಭೂತಗಳಿಗೂ ಒಡೆಯನೂ ಸಖನೂ ಆದ ಈಶ್ವರನೂ, ಒಬ್ಬನೆ ಪುರುಷೋತ್ತಮನ ಎರಡು ಸ್ವರೂಪ ಗಳೆಂದು ಸ್ಪಷ್ಟಪಡಿಸುತ್ತಾನೆ: ಮೇಲಿನ ಲೋಕದಲ್ಲಿ ಸ್ವಸ್ವರೂಪದಲ್ಲಿಯೂ ಇಲ್ಲಿ ಮನುಷ್ಯಸ್ವರೂಪದಲ್ಲಿಯೂ ವ್ಯಕ್ತನಾಗುತ್ತಾನೆ.

ಮೇಲೆ ಹೇಳಿರುವುದನ್ನು ಚೆನ್ನಾಗಿ ವಿಮರ್ಶಿಸಿದರೆ "ಅವತಾರತತ್ವವು ದ್ವಿಮುಖವಾಗಿದೆ; ಮನುಷ್ಯನನ್ನು ಭಗವಂತನ ಮಟ್ಟಕ್ಕೆತ್ತುವುದೆ ಅದರ ಮುಖ್ಯ ವಾದ ಉದ್ದೇಶ" ಎಂಬುದೇ ಗೀತೋಪದೇಶದ ಸಾರವೆಂಬುದು ವ್ಯಕ್ತವಾಗುತ್ತದೆ. ಮೇಲೆ ಹೇಳಿದ ಉಪದೇಶವಾಕ್ಯವನ್ನು ಪ್ರತ್ಯೇಕವಾಗಿ ವಿಮರ್ಶಿಸದೆ, ಗೀತೆಯಂತಹ ಗ್ರಂಥದ ವಾಕ್ಯದ ವಿಷಯದಲ್ಲಿ ಹೀಗೆ ಪ್ರತ್ಯೇಕವಾಗಿ ವಿಮರ್ಶಿಸುವುದು ತಪ್ಪುದಾರಿ. ಇದರೊಡನೆ ಇದಕ್ಕೆ ಸಂಬಂಧಿಸಿದ ಇತರ ವಾಕ್ಯಗಳನ್ನೂ, ಗೀತೋಪದೇಶದ ಸರಣಿಯನ್ನೂ ವಿಮರ್ಶಿಸಿದರೆ ಈ ವಿಷಯವು ಇನ್ನೂ ಸ್ಪಷ್ಟವಾಗುತ್ತದೆ. ಗೀತೆಯು ಹೇಳುವ ಈ ಕೆಳಗಿನ ವಿಷಯಗಳನ್ನು ಈಗ ನಾವು ನೆನಪಿಗೆ ತಂದುಕೊಳ್ಳಬೇಕು: 'ಸರ್ವಭೂತಗಳಲ್ಲಿಯೂ ಇರುವ ಆತ್ಮನು ಒಂದೆ'; 'ಸರ್ವಭೂತಗಳ ಹೃದಯ ದಲ್ಲಿಯೂ ಈಶ್ವರನು ನೆಲೆಸಿದ್ದಾನೆ'; ಸೃಷ್ಟಿಕರ್ತನಿಗೂ ಸೃಷ್ಟಿಗೂ ಇರುವ ಸಂಬಂಧವನ್ನು ಕುರಿತ ಉಪದೇಶ, ವಿಭೂತಿಯ ವಿಷಯದಲ್ಲಿ ಗೀತೆಯು ಒತ್ತಿ ಹೇಳಿರುವ ಉಪದೇಶ, ಮನುಷ್ಯರೂಪದಲ್ಲಿರುವ ಕೃಷ್ಣನಿಗೂ ಮತ್ತು ಎಲ್ಲ ಲೋಕ ಗಳ ಒಡೆಯನಾದ ಈಶ್ವರನಿಗೂ ಅನ್ವಯಿಸುವಂತೆ 'ಎಲೈ ಅರ್ಜುನನೆ, ನಾನು ಮಾಡಬೇಕಾದ ಕೆಲಸವು ಮೂರು ಲೋಕಗಳಲ್ಲಿಯೂ ಇಲ್ಲ; ನಾನು ಹೊಂದದೆ ಇರುವುದಾಗಲಿ, ಪಡೆಯಬೇಕಾದುದಾಗಲಿ ಯಾವುದೂ ಇಲ್ಲ. ಆದಾಗ್ಯೂ ನಾನು ಕರ್ಮದಲ್ಲಿ ನಿರತನಾಗಿಯೆ ಇದ್ದೇನೆ' ಎಂದು ನಿಷ್ಕಾಮಕರ್ಮಕ್ಕೆ ತನ್ನನ್ನೆ ಉದಾ

ಹರಣೆಯಾಗಿ ಶ್ರೀಕೃಷ್ಣನು ಹೇಳಿರುವ ವಾಕ್ಯ; 'ಸಮಸ್ತ ಭೂತಗಳಿಗೂ ಒಡೆಯನಾಗಿರುವ ನನ್ನ ಅತ್ಯಂತ ಶ್ರೇಷ್ಠವಾದ ಭಾವವನ್ನು ತಿಳಿಯದೆ ಇರುವ ಮೂಢರು, ಮನುಷ್ಯದೇಹವನ್ನಾಶ್ರಯಿಸಿರುವ ನನ್ನನ್ನು ತಿರಸ್ಕರಿಸುತ್ತಾರೆ' ಎಂದು ಒಂಬತ್ತನೆಯ ಅಧ್ಯಾಯದಲ್ಲಿ ಹೇಳಿರುವ ಉಪದೇಶ ಮತ್ತು ಇದರಂತಿರುವ ಇತರ ವಾಕ್ಯಗಳು, ಇವೆಲ್ಲವನ್ನೂ ನಾವು ನೆನಪಿನಲ್ಲಿಟ್ಟುಕೊಳ್ಳಬೇಕು. ಅವತಾರದ ತತ್ತ್ವವನ್ನು ಚೆನ್ನಾಗಿ ತಿಳಿದುಕೊಳ್ಳಬೇಕಾದರೆ ಇದು ಅತ್ಯವಶ್ಯಕ.

"ಎಲೈ ಅರ್ಜುನನೆ, ನನ್ನ ದಿವ್ಯವಾದ ಜನ್ಮಕರ್ಮಗಳನ್ನು ಸರಿಯಾಗಿ ಯಾವನು ತಿಳಿಯುತ್ತಾನೆಯೊ ಅವನು ದೇಹವನ್ನು ಬಿಟ್ಟನಂತರ ಪುನರ್ಜನ್ಮವನ್ನು ಹೊಂದದೆ ನನ್ನನ್ನೆ ಸೇರುತ್ತಾನೆ. ಆಸೆ, ಭಯ, ಕೋಪಗಳನ್ನು ಕಳದುಕೊಂಡು, ನನ್ನ ಗುಣಗಳಿಂದ ತುಂಬಲ್ಪಟ್ಟು, ನನ್ನನ್ನು ಆಶ್ರಯಿಸಿಕೊಂಡಿರುವ ಅನೇಕರು ಜ್ಞಾನವೆಂಬ ತಪಸ್ಸಿನಿಂದ ಶುದ್ಧರಾಗಿ ನನ್ನನ್ನು ಸೇರುತ್ತಾರೆ, ನನ್ನ ಭಾವವನ್ನೆ ಹೊಂದುತ್ತಾರೆ." (೪-೯, ೧೦) ಎಂದು ಭಗವಂತನೆ ಈ ಸಂದರ್ಭದಲ್ಲಿ ಹೇಳಿದ್ದಾನೆ. ಭಗವಂತನ ಜನ್ಮ ಮತ್ತು ಕರ್ಮಗಳು ನಮಗೆ ಆಕಸ್ಮಿಕವಾದ ಪವಾಡಗಳಾಗದೆ, ವಿಶ್ವದ ಪ್ರಗತಿಯಲ್ಲಿ ಅವುಗಳ ಸ್ಥಾನ ಮತ್ತು ಉದ್ದೇಶವು ನಮಗೆ ಸ್ಪಷ್ಟವಾಗಿ ತಿಳಿಯುತ್ತದೆ. ಈ ದೃಷ್ಟಿಯಿಲ್ಲದಿದ್ದರೆ, ಅವುಗಳ ರಹಸ್ಯವು ಜನರಿಗೆ ತಿಳಿಯುವುದಿಲ್ಲ, ಕೆಲವರು ಅವತಾರವನ್ನು ತಿರಸ್ಕರಿಸಬಹುದು. ಬೇರೆ ಕೆಲವರು ಮೌಢ್ಯದಿಂದ, ಕುರುಡುನಂಬಿಕೆಯಿಂದ ಅದನ್ನು ಒಪ್ಪಿಕೊಂಡಾಗ್ಯೂ ಕೂಡ, ಈಗಿನಕಾಲದವರಂತೆ ಅವತಾರದ ವಿಷಯದಲ್ಲಿ ಅವರ ಜ್ಞಾನವು ಅಲ್ಪವಾಗಿಯೂ ಆಳವಿಲ್ಲದೆಯೊ ಇರುತ್ತದೆ; ಆದ್ದರಿಂದ ಅದರ ಗೂಢವಾದ ಅರ್ಥವೂ, ಉಪಯುಕ್ತ ಅಂಶಗಳೂ ಅವರ ಪಾಲಿಗೆ ಇಲ್ಲದಂತಾಗುತ್ತವೆ.

ಪಶ್ಚಿಮ ದೇಶಗಳಲ್ಲಿರುವ 'ವೈಜ್ಞಾನಿಕ ಮನೋಭಾವವುಳ್ಳ ಜನರಿಗೆ, ಪೂರ್ವದೇಶಗಳಿಂದ ಹರಡಿರುವ ತತ್ತ್ವಗಳಲ್ಲೆಲ್ಲ ಅವತಾರದ ತತ್ತ್ವವು ಗ್ರಹಿಸುವುದಕ್ಕೂ, ಒಪ್ಪಿಕೊಳ್ಳುವುದಕ್ಕೂ ಬಹಳ ಕಷ್ಟ. ಇದರ ವಿಷಯದಲ್ಲಿ ಒಳ್ಳೆಯ ಅಭಿಪ್ರಾಯವಿರುವವರಿಗೆ ಅವತಾರವು ಮನುಷ್ಯನ ಸಾಮರ್ಥ್ಯ, ನಡತೆ, ಪ್ರತಿಭೆ ಮತ್ತು ಪ್ರಪಂಚದಲ್ಲಿ ಪ್ರಪಂಚಕ್ಕಾಗಿ ಮಾಡಿರುವ ಮಹತ್ಕಾರ್ಯಗಳು-ಇವುಗಳು ವಿಶೇಷವಾಗಿ ಹೊರಹೊಮ್ಮಿರುವುದನ್ನು ಸೂಚಿಸುವ ಅತಿಶಯೋಕ್ತಿ; ಇತರರಿಗೆ ಇದು ಪ್ರಗತಿಗೆ ಅಡ್ಡಿಯಾದ ಕುರುಡು ನಂಬಿಕೆ. ದೇವರಲ್ಲಿ ನಂಬಿಕೆ ಇಲ್ಲದ ನಾಸ್ತಿಕನಂತೂ ಇದರ ಕಡೆ ತಿರುಗಿ ಕೂಡ ನೋಡುವುದಿಲ್ಲ. ದೇವರಲ್ಲಿ ನಂಬಿಕೆಯಿದ್ದಾಗ್ಯೂ ಎಲ್ಲವನ್ನು

ವೈಜ್ಞಾನಿಕ ದೃಷ್ಟಿಯಿಂದ ಮಾತ್ರ ನೋಡುವವನಿಗೆ ಇದು ನಂಬಲನರ್ಹವಾಗಿಯೂ ಹಾಸ್ಯಾಸ್ಪದವಾಗಿಯೂ ಕಾಣುತ್ತದೆ. ದ್ವೈತಸಿದ್ಧಾಂತದಲ್ಲಿ ಅತ್ಯಂತ ಶ್ರದ್ಧೆಯುಳ್ಳವರಿಗೆ ಮನುಷ್ಯನ ಸ್ವಭಾವಕ್ಕೂ ಭಗವಂತನ ಸ್ವಭಾವಕ್ಕೂ ಮೂಲತಃ ಭೇದವಿದೆಯೆಂದು ಅವರು ನಂಬಿರುವುದರಿಂದ, ಅವರ ದೃಷ್ಟಿಯಲ್ಲಿ ನಾವು ಮೇಲೆ ಹೇಳಿರುವ ಅವತಾರತತ್ವವು ದೈವದ್ರೋಹವಾಗಿ ಕಾಣುತ್ತದೆ. ವೈಜ್ಞಾನಿಕ ದೃಷ್ಟಿಯುಳ್ಳವರ ಆಕ್ಷೇಪಣೆಯು ಹೀಗಿದೆ:—

"ಈಶ್ವರನೆಂಬುವನು ಇದ್ದರೆ ಅವನು ವಿಶ್ವಕ್ಕೆ ಅತೀತನು ಅಥವಾ ವಿಶ್ವವ್ಯಾಪಾರಗಳಲ್ಲಿ ಕೈಹಾಕುವುದಿಲ್ಲ. ತಾನೆ ಏರ್ಪಡಿಸಿರುವ ನಿಯಮಗಳಿಗನುಸಾರವಾಗಿ ಈ ವಿಶ್ವದ ವ್ಯಾಪಾರಗಳೆಲ್ಲ ನಡೆಯುವಂತೆ ಏರ್ಪಡಿಸಿ, ಅವನು ತನ್ನ ಪಾಡಿಗೆ ತಾನಿರುತ್ತಾನೆ. ಅವನು ನೆಪಮಾತ್ರಕ್ಕಿರುವ, ದೂರದಲ್ಲಿರುವ ಚಕ್ರವರ್ತಿಯಂತೆ (ಕೆಲವು ರಾಜ್ಯಗಳಲ್ಲಿರುವ ಶಾಸನ ಬದ್ಧರಾದ ರಾಜರಂತೆ). ಎಷ್ಟು ಹೆಚ್ಚೆಂದರೂ ಪ್ರಕೃತಿ ವ್ಯಾಪಾರದ ಹಿಂದಿರುವ ಕ್ರಿಯಾರಹಿತನಾದ, ಉದಾಸೀನನಾದ, ಸಾಂಖ್ಯ ಸಿದ್ಧಾಂತದಲ್ಲಿ ಹೇಳಿರುವ ಪುರುಷನಂತೆ ಇರುತ್ತಾನೆ. ಅವನು ಶುದ್ಧ ಚೈತನ್ಯಸ್ವರೂಪನು-ಜಡದೇಹದೊಡನೆ ಸಂಬಂಧವನ್ನು ಹೊಂದುವುದು ಸಾಧ್ಯವಿಲ್ಲ. ಅವನು ಅನಂತನು, ಅಪರಿಚ್ಛಿನ್ನನು—ಮನುಷ್ಯರಂತೆ ಪರಿಚ್ಛಿನ್ನನಾಗಿರಲಾರನು. ಯಾವಾಗಲೂ ಹುಟ್ಟಿಲ್ಲದ (ಜನ್ಮತಾಳದಿರುವ) ಸೃಷ್ಟಿಕರ್ತನು—ಪ್ರಪಂಚದಲ್ಲಿ ಜನ್ಮವನ್ನೆತ್ತುವ ಮನುಷ್ಯನಾಗಲಾರನು. ಇವುಗಳು ಅನಂತ ಶಕ್ತಿಯುಳ್ಳ ಅವನಿಗೂ ಸಾಧ್ಯವಿಲ್ಲ."

ಶುದ್ಧದ್ವೈತಿಯು ಇವುಗಳ ಜೊತೆಗೆ ಮುಂದಿನ ಆಕ್ಷೇಪಣೆಗಳನ್ನೂ ಸೇರಿಸುತ್ತಾನೆ—"ಈಶ್ವರನು ತನ್ನ ಸ್ವರೂಪದಲ್ಲಿಯೂ ಮತ್ತು ಕಾರ್ಯದಲ್ಲಿಯೂ ಮನುಷ್ಯನಿಗಿಂತ ತೀರ ಭಿನ್ನನು. ಪೂರ್ಣನಾದ ಅವನು ಮನುಷ್ಯತ್ವದ ಅಪರಿಪೂರ್ಣತೆಯನ್ನು ಧರಿಸಲಾರನು. ಅಜನಾದ ಈಶ್ವರನು ಜನನ ಮರಣಗಳಿಗೊಳಪಟ್ಟ ಮನುಷ್ಯನಾಗಲಾರನು. ವಿಶ್ವಗಳಿಗೆಲ್ಲ ಒಡೆಯನಾದ ಈಶ್ವರನು ಪ್ರಕೃತಿಗೆ ಅಧೀನವಾಗಿರುವ ಮತ್ತು ನಾಶಕ್ಕೊಳಪಡುವ ಮನುಷ್ಯರೂಪದಲ್ಲಿ ಬಂಧಿಸಲ್ಪಡಲಾರನು."

ಮೇಲಿನ ಆಕ್ಷೇಪಣೆಗಳನ್ನು ನಾವು ಮೊದಲು ಬಾರಿ ಕೇಳಿದಾಗ ಅವಕ್ಕೆ ತೃಪ್ತಿಕರವಾದ ಸಮಾಧಾನವನ್ನು ಕೊಡುವುದಕ್ಕಾಗುವುದಿಲ್ಲವೆಂದು ತೋರಬಹುದು. ಇದು ಶ್ರೀಕೃಷ್ಣನ ಮನಸ್ಸಿನಲ್ಲಿಯೂ ಇದ್ದಂತೆ ಕಾಣುತ್ತದೆ. ಏತಕ್ಕೆಂದರೆ ಗೀತೆಯಲ್ಲಿ ಅವನು ಹೀಗೆ ಹೇಳುತ್ತಾನೆ; "ಭೂತಗಳಿಗೆಲ್ಲ ಸ್ವಾಮಿಯಾಗಿಯೂ, ನಾಶರಹಿತನಾಗಿಯೂ, ಹುಟ್ಟದವನಾಗಿಯೂ ಇದ್ದಾಗ್ಯೂ ನನ್ನ ಮಾಯೆಯಿಂದ

ನನ್ನ ಪ್ರಕೃತಿಯನ್ನು ಆಧಾರ ಮಾಡಿಕೊಂಡು ಹುಟ್ಟುತ್ತೇನೆ. ಭ್ರಮೆಗೆ ಒಳಗಾಗಿ ಮೂಢರು ಮನುಷ್ಯ ದೇಹವನ್ನು ಧರಿಸಿರುವ ನನ್ನನ್ನು ತಿರಸ್ಕರಿಸುತ್ತಾರೆ. ಲೋಕ ಮಹೇಶ್ವರನಾದ ನನ್ನ ಶ್ರೇಷ್ಠತೆಯನ್ನು ಅವರು ತಿಳಿದಿಲ್ಲ." ಈಶ್ವರ ಭಾವದಲ್ಲಿ ಕಾರ್ಯೋನ್ಮುಖನಾಗಿರುವಾಗ ಅವನು ಚತುರ್ವರ್ಣಗಳನ್ನು ಸೃಷ್ಟಿಸಿ ವಿಶ್ವವ್ಯಾಪಾರ ಗಳನ್ನೂ ನಡೆಸುತ್ತಾನೆ; ಹಾಗಿಲ್ಲದೆ ನಿಷ್ಕ್ರಿಯನಾಗಿರುವಾಗ ತನ್ನ ಪ್ರಕೃತಿಯು ಮಾಡುವ ವ್ಯಾಪಾರಗಳಲ್ಲಿ ಆಸಕ್ತಿಯಿಲ್ಲದೆ ಸುಮ್ಮನೆ ಸಾಕ್ಷಿಯಾಗಿರುತ್ತಾನೆ ಅವನು ಯಾವಾಗಲೂ ಕಾರ್ಯೋನ್ಮುಖವಾದ ಸ್ಥಿತಿ ಮತ್ತು ನಿಷ್ಕ್ರಿಯವಾದ ಸ್ಥಿತಿ ಇವೆರ ಡಕ್ಕೂ ಅತೀತನಾದ ಪುರುಷೋತ್ತಮನು.

ಈಶ್ವರ, ವಿಶ್ವ ಇವುಗಳನ್ನು ವೇದಾಂತದೃಷ್ಟಿಯಿಂದ ನೋಡುವುದರಿಂದ ಮೇಲಿನ ವಿರೋಧಗಳನ್ನು ಸಮನ್ವಯಮಾಡಲು ಗೀತೆಗೆ ಸಾಧ್ಯವಾಗಿದೆ. ಏತ ಕ್ಕೆಂದರೆ ವೇದಾಂತದೃಷ್ಟಿಯಿಂದ ಹಿಂದೆ ಹೇಳಿದ ಆಕ್ಷೇಪಣೆಗಳೆಲ್ಲ ಅರ್ಥವಿಲ್ಲದವು. ವೇದಾಂತದ ಪ್ರಕಾರ ಅವತಾರಗಳು ಆಗಲೇಬೇಕೆಂದು ಏನಿಲ್ಲ, ಆದರೆ, ಅವತಾರ ತತ್ತ್ವವು ಅತಿಸಮಂಜಸವಾಗಿಯೂ, ಯುಕ್ತಿಸಮ್ಮತವಾಗಿಯೂ ಇದೆ. ಎಲ್ಲವೂ ಈಶ್ವರನೆ, ಏಕವೂ ಅದ್ವಿತೀಯವೂ ಆದ ಬ್ರಹ್ಮವು; ಅದುಹೊರತು ಬೇರೆ ಯಾವುದೂ ಇಲ್ಲ, ಇರಲು ಸಾಧ್ಯವೂ ಇಲ್ಲ. ಪ್ರಕೃತಿಯು ಬ್ರಹ್ಮನ ಶಕ್ತಿಯೆ ಹೊರತು ಇನ್ನೇನೂ ಆಗಲಾರದು. ಜೀವಿಗಳೆಲ್ಲರೂ— ಹೊರಕ್ಕೆ ಕಾಣುವ ಹಾಗೆ ದೇಹವನ್ನು ಧರಿಸಿರುವ ಮತ್ತು ಆಂತರವಾದ ಚಿದಂಶಗಳಾದ, ಬ್ರಹ್ಮನ ಅಂಶಗಳು; ಅವನಲ್ಲಿ ಇರುವವರು, ಅವನಿಂದಲೆ ಉಂಟಾಗಿರುವವರು. ಅಪರಿಚ್ಛಿನ್ನನಾದ ಅವನು ಪರಿಚ್ಛಿನ್ನವಾದ ಸ್ವರೂಪವನ್ನು ತೆಗೆದುಕೊಳ್ಳಲು ಸಾಧ್ಯವಿಲ್ಲವೆಂಬ ಮಾತಿರಲಿ; ಇಡೀ ವಿಶ್ವವೆ ಅಪರಿಚ್ಛಿನ್ನವಾದ ಬ್ರಹ್ಮನ ಸ್ವರೂಪವೆ ಹೊರತು ಮತ್ತೇನೂ ಅಲ್ಲ. ನಾವು ವಾಸಿಸುವ ವಿಶಾಲವಾದ ಇಡೀ ವಿಶ್ವದಲ್ಲೆಲ್ಲ ಯಾವುದನ್ನು ಹೀಗೆ ಎಲ್ಲಿ ನೋಡಿದರೂ ಇದನ್ನಲ್ಲದೆ ಬೇರೆ ಯಾವುದನ್ನು ನೋಡಲಾರೆವು. ಚೈತನ್ಯವು ರೂಪವನ್ನು ತಾಳಲಾರದು, ಸ್ಥೂಲವಾದ ಅಥವಾ ಮನೋಮಯವಾದ ರೂಪದೊಡನೆ ಸಂಪರ್ಕಹೊಂದಿ ಪರಿಚ್ಛಿನ್ನವಾದ ಸ್ವಭಾವವುಳ್ಳ ದೇಹವನ್ನು ತಾಳಲಾರದು ಎಂಬ ಮಾತಂತೂ ಸತ್ಯಕ್ಕೆ ಬಹುದೂರವಾದುದು; ವಾಸ್ತವವಾಗಿ ಈ ವಿಧವಾದ ರೂಪವನ್ನು ಚೈತನ್ಯವು ತಾಳಿರುವುದರಿಂದಲೆ ವಿಶ್ವವು ಇರುವುದು. ಪ್ರಪಂಚದಲ್ಲಿ ವ್ಯಕ್ತವಾಗುವ ವಿವಿಧ ಪ್ರಭಾವಗಳು, ದೈಹಿಕ ಮತ್ತು ಮಾನಸಿಕ ವ್ಯಾಪಾರಗಳು ಆತ್ಮನ ಅಥವಾ ಚೈತನ್ಯದ ಕೈವಾಡವೆ ಇಲ್ಲದೆ ಯಾಂತ್ರಿಕವಾಗಿ ಜರುಗುವುದೆಂಬುದು ನಿಜವಲ್ಲ. ಸೃಷ್ಟಿಕಾರ್ಯ

ವನ್ನು ಮಾಡಿದ ಚೈತನ್ಯವು ಆಮೇಲೆ ಈ ವಿಶ್ವದ ಹೊರಗೆ ತಟಸ್ಥವಾಗಿ ತನ್ನ ಪಾಡಿಗೆ ತಾನು ಉದಾಸೀನವಾಗಿದೆಯೆಂಬುದೂ ತಪ್ಪು. ಇಡೀ ವಿಶ್ವವೆ, ಅದರಲ್ಲಿರುವ ಪ್ರತಿಯೊಂದು ಅಣುವೂ ಕೂಡ, ರೂಪವನ್ನು ತಾಳಿರುವ ದಿವ್ಯಶಕ್ತಿ. ಆ ದಿವ್ಯಶಕ್ತಿ ಈ ಅಣುಗಳ ಪ್ರತಿಯೊಂದು ಚಲನೆಯನ್ನೂ ನಿಯಂತ್ರಿಸುತ್ತದೆ; ಪ್ರತಿಯೊಂದು ರೂಪದಲ್ಲಿಯೂ ವಾಸಮಾಡುತ್ತದೆ. ಈ ವಿಶ್ವದಲ್ಲಿರುವ ಪ್ರತಿಯೊಂದು ಮನಸ್ಸೂ ಆತ್ಮನೂ ಅದಕ್ಕೆ ವಶವಾಗಿದೆ; ಎಲ್ಲವೂ ಬ್ರಹ್ಮನಲ್ಲೇ ಇವೆ; ಅವನಲ್ಲಿ ಇದ್ದುಕೊಂಡು ಚಲಿಸುತ್ತವೆ. ಎಲ್ಲದರಲ್ಲಿಯೂ ಅವನಿದ್ದುಕೊಂಡು ಕೆಲಸಗಳನ್ನು ಮಾಡುತ್ತಾ ತನ್ನ ಇರುವಿಕೆಯನ್ನು ಪ್ರಕಾಶಪಡಿಸುತ್ತಾನೆ. ಸೃಷ್ಟಿಯಲ್ಲಿರುವ ಪ್ರತಿಯೊಂದು ಜೀವಿಯೂ (ವಸ್ತುವೂ) ನಾರಾಯಣನ ಒಂದು ರೂಪ.

ಅಜನಾದ ಈಶ್ವರನು ಮನುಷ್ಯಜನ್ಮವನ್ನು ತಾಳಲು ಸಮರ್ಥನಲ್ಲವೆಂಬ ವಾದದಲ್ಲಿ ಸತ್ಯಾಂಶವಿಲ್ಲ; ಎಲ್ಲ ಜಂತುಗಳೂ, ಬೇರೆ ಬೇರೆ ರೂಪಗಳನ್ನು ಧರಿಸಿದ್ದರೂ ಕೂಡ, ಅಜವಾದ ಚೈತನ್ಯದ ಸ್ವರೂಪರು, ಆದ್ಯಂತರಹಿತರು ಮತ್ತು ನಿತ್ಯರು. ಮೂಲತಃ ಮತ್ತು ಸಮಷ್ಟಿಯಲ್ಲಿ, ಒಟ್ಟಿನಲ್ಲಿ, ಎಲ್ಲರೂ ಏಕವಾದ ಅಜನಾದ ಈಶ್ವರನೆ; ಅವರ ಜನನ ಮರಣಗಳು ಕೇವಲ ರೂಪವನ್ನು ಧರಿಸುವುದೂ ಮತ್ತು ರೂಪಾಂತರವನ್ನು ಹೊಂದುವುದೂ ಆಗಿವೆ. ಪರಿಪೂರ್ಣನಾದ ಬ್ರಹ್ಮನು ಅಪೂರ್ಣತೆಯ ಸೋಗನ್ನು ಹಾಕುವುದೆ ಸೃಷ್ಟಿಯ ಮುಖ್ಯತತ್ವ. ಎಲ್ಲವನ್ನೂ ಬೆಳಗುವ ಸೂರ್ಯನಲ್ಲಿಯೂ, ಅವನ ಬೆಳಕಿನಲ್ಲಿಯೂ ಯಾವ ದೋಷವೂ ಇಲ್ಲದೆ, ಆ ಬೆಳಕನ್ನು ನೋಡುವವರ ದೃಷ್ಟಿಯಲ್ಲಿ ಮಾತ್ರ ದೋಷವಿರುವಂತೆ, ಈ ಅಪೂರ್ಣತೆಯು ಧರಿಸಿರುವ ದೇಹ ಮತ್ತು ಮನಸ್ಸುಗಳಲ್ಲಿ ಮತ್ತು ಅವುಗಳ ವ್ಯಾಪಾರಗಳಲ್ಲಿ ಮಾತ್ರ ಇದ್ದು, ಅಲ್ಲಿಮಾತ್ರ ನೆಲೆಸಿದೆಯೇ ವಿನಾ, ಇವುಗಳನ್ನು ಧರಿಸಿರುವ ಈಶ್ವರನಲ್ಲಿ ಯಾವ ಅಪೂರ್ಣತೆಯೂ ಇಲ್ಲ.

ಈಶ್ವರನೂ ಕೂಡ ಈ ವಿಶ್ವದ ಪಾಲನೆಯನ್ನು ಎಲ್ಲೋ ದೂರದಲ್ಲಿದ್ದು ಕೊಂಡು ಮಾಡುತ್ತಿಲ್ಲ; ಈ ವಿಶ್ವದ ಒಳಗೆ ಎಲ್ಲ ಕಡೆಯೂ ಇದ್ದುಕೊಂಡು, ಪಾಲಿಸುತ್ತಿದ್ದಾನೆ. ಪ್ರಪಂಚದ ನಾನಾವಸ್ತುಗಳ ವ್ಯಾಪಾರಗಳು ಆಯಾ ವಸ್ತುಗಳ ಪ್ರತ್ಯೇಕವಾದ ಮತ್ತು ಪರಿಚ್ಛಿನ್ನವಾದ ಶಕ್ತಿಯ ಕಾರ್ಯಗಳಲ್ಲ, ಪರಂತು ಅಪರಿಚ್ಛಿನ್ನವಾದ ಈಶ್ವರಶಕ್ತಿಯ ವ್ಯಾಪಾರಗಳೇ. ಈ ಲೋಕದಲ್ಲಿ ಜೀವಿಗಳ ಸಂಕಲ್ಪ ಮತ್ತು ಜ್ಞಾನಗಳಿಂದ ನೆರವೇರುವ ವ್ಯಾಪಾರಗಳಿಗೆಲ್ಲ ಸರ್ವಶಕ್ತನಾದ ಈಶ್ವರನ ಅನಂತವಾದ ಸಂಕಲ್ಪ ಮತ್ತು ಜ್ಞಾನಗಳ ಆಧಾರವಾಗಿವೆ.

ಈಶ್ವರನು ಈ ಲೋಕದಲ್ಲಲ್ಲದೆ ಬೇರೆಲ್ಲೋ ಇದ್ದುಕೊಂಡು ಈ ಲೋಕವನ್ನು ಪಾಲಿಸುತ್ತಿಲ್ಲ; ಅವನು ಎಲ್ಲಕ್ಕೂ ಅತೀತನಾಗಿದ್ದರೂ, ಸಮಸ್ತ ವ್ಯಾಪಾರಗಳಲ್ಲಿಯೂ ಅಂತರ್ಗತನಾಗಿ ಅವುಗಳಿಗೆ ಜೀವವೂ ಆಧಾರವೂ ಆಗಿದ್ದು, ಎಲ್ಲವನ್ನೂ ನಿಯಂತ್ರಿಸುತ್ತಾನೆ.

ಆದುದರಿಂದ ಅವತಾರತತ್ತ್ವಕ್ಕೆ ವಿರೋಧವಾಗಿ ಮಾಡಿರುವ ಯಾವ ಆಕ್ಷೇಪಣೆಗಳೂ ನಿಲ್ಲಲಾರವು. ಇಂತಹ ಆಕ್ಷೇಪಣೆಗಳಿಗೆ ಸಾರಭೂತವಾದ ತತ್ತ್ವವು ಎಂದರೆ, ಅಪರಿಚ್ಛಿನ್ನನಾದ ಈಶ್ವರನಿಗೂ ಪರಿಚ್ಛಿನ್ನವಾದ ವಿಶ್ವಕ್ಕೂ ಕಲ್ಪಿಸಲ್ಪಟ್ಟ ಭೇದ ನಿರಾಧಾರವಾದುದು; ಈ ಭೇದವು ಮನಸ್ಸಿನಕಲ್ಪನೆಮಾತ್ರ; ವಿಶ್ವದ ಎಲ್ಲವ್ಯಾಪಾರಗಳೂ ಮತ್ತು ವಿಶ್ವಸ್ಥಿತಿಯೂ ಪ್ರತಿಕ್ಷಣದಲ್ಲಿಯೂ ಈ ಕಲ್ಪನೆಯು ನಿಜವಲ್ಲವೆಂಬುದನ್ನು ಸಾರುತ್ತವೆ.

ಅವತಾರದ ಸಾಧ್ಯತೆಯನ್ನೇನೊ ಒಪ್ಪಿಕೊಂಡಾಯಿತು; ವಾಸ್ತವವಾಗಿ ಈ ಪ್ರಪಂಚದಲ್ಲಿ ಅವತಾರವು ವ್ಯಕ್ತವಾಗುತ್ತದೆಯೆ ಎಂಬುದನ್ನು ವಿಮರ್ಶಿಸಬೇಕು. ಎಂದರೆ, ತಾತ್ಕಾಲಿಕವೂ ಪರಿಚ್ಛಿನ್ನವೂ ಪರಿಮಿತವೂ ಮತ್ತು ಅಪೂರ್ಣವೂ ಆದ ಮಾನಸಿಕ ಮತ್ತು ಸ್ಥೂಲ ಪ್ರಪಂಚದಲ್ಲಿ ಈಶ್ವರನ ದಿವ್ಯಚೈತನ್ಯವು ಮೇಲಿನ ಲೋಕದಿಂದ ಇಳಿದು ಬಂದು ಇಲ್ಲಿ ಸಾಕ್ಷಾತ್ತಾಗಿ ಕೆಲಸಮಾಡುತ್ತದೆಯೆ ಎಂಬುದನ್ನು ವಿಚಾರಮಾಡಬೇಕು. ಪರಿಚ್ಛಿನ್ನವಾದ ಮತ್ತು ಪರಿಮಿತವಾದ ಚೈತನ್ಯವೆಂಬುದು ಅಪರಿಚ್ಛಿನ್ನವೂ ಮತ್ತು ಅನಂತವೂ ಆದ ಚೈತನ್ಯವು ತನ್ನ ಸ್ವೇಚ್ಛೆಯಿಂದ ತೋರ್ಪಡಿಸಿಕೊಳ್ಳುವ ನಾನಾ ವಿಧವಾದ ಮುಖಗಳು ಮತ್ತು ವಿವಿಧ ರೂಪಗಳೆ ಹೊರತು ಬೇರೇನೂ ಅಲ್ಲ. ತಾತ್ಕಾಲಿಕವಾದ ಪ್ರತಿಯೊಂದು ವ್ಯಾಪಾರವೂ ಕೂಡ—ಅದರ ದೃಶ್ಯರೂಪವೂ, ಅದು ವ್ಯಕ್ತವಾಗುವ ರೀತಿಯೂ ಹೇಗೆ ಇರಲಿ—ವಸ್ತುತಃ ಅಪರಿಚ್ಛಿನ್ನವಾದುದೇಯೆ. ನಾವು ಸೂಕ್ಷ್ಮದೃಷ್ಟಿಯಿಂದ ನೋಡಿದರೆ ಮನುಷ್ಯನು ತಾನಾಗಿಯೆ ಜೀವಿಸುವ ಪ್ರತ್ಯೇಕವಾದ ವ್ಯಕ್ತಿಮಾತ್ರವಲ್ಲ; ಆ ಶರೀರವನ್ನೂ, ಮನಸ್ಸನ್ನೂ ಹೊಂದಿರುವ ಮಾನವಕೋಟಿಯೆ ಆಗಿದ್ದಾನೆ. ಹಾಗೆಯೆ ಮಾನವವರ್ಗವೂ ಕೂಡ ತಾನಾಗಿಯೆ ಪ್ರತ್ಯೇಕವಾಗಿ ಜೀವಿಸುವ ಒಂದು ಜಾತಿ ಅಥವಾ ವರ್ಗವಲ್ಲ; ಇಡೀ ವಿಶ್ವವೆ, ಸರ್ವವ್ಯಾಪಿಯಾದ ಈಶ್ವರ ಚೈತನ್ಯವೆ, ಮಾನವಕೋಟಿಯ ರೂಪದಲ್ಲಿದೆ. ಈ ರೂಪದಲ್ಲಿ ಚೈತನ್ಯವು ವಿಕಾಸ ಹೊಂದಲು ಹಲವು ಪ್ರಯೋಗಗಳನ್ನು ನಡೆಸಿ ವಿಕಾಸ ಹೊಂದುತ್ತದೆ; ಹಲವು ಶಕ್ತಿಗಳನ್ನು ವೃದ್ಧಿಪಡಿಸಿ ವ್ಯಕ್ತಪಡಿಸುತ್ತದೆ. ವಿಕಾಸ ಹೊಂದುವುದು ಈ ಚೈತನ್ಯವೆ; ಇದನ್ನೇ ಆತ್ಮವೆಂದು ಹೇಳಬಹುದು.

ಆತ್ಮನೆಂದರೆ ಸಚ್ಚಿದಾನಂದರೂಪನು ; ಎಂದರೆ ಅಳತೆಗೆ ಮೀರಿರುವ ಜ್ಞಾನವುಳ್ಳ, ತನ್ನಲ್ಲಿಯೆ ಯಾವ ವಿಧವಾದ ಭಂಗಕ್ಕೂ ಒಳಪಡದ ಆನಂದವುಳ್ಳ ವಸ್ತು. ಆತ್ಮನು ಈ ವಸ್ತುವಲ್ಲದಿದ್ದರೆ ಅದನ್ನು ಅಸತ್ತೆಂದು ಹೇಳಬೇಕಾಗುತ್ತದೆ; ಎಂದರೆ ವಿಶ್ವದೊಡನೆಯಾಗಲಿ, ಮಾನವಕೋಟಿಯೊಡನೆಯಾಗಲಿ ಸ್ವಲ್ಪವೂ ಸಂಪರ್ಕವಿಲ್ಲದ ವಸ್ತುವಾಗಬೇಕಾಗುತ್ತದೆ.

ದೇಹಗಳು ಮತ್ತು ಜಡವಸ್ತುವೆಂದರೆ ಸಚ್ಚಿದಾನಂದಸ್ವರೂಪನಾದ ಈಶ್ವರನ ಚೈತನ್ಯದ ಘನೀಭೂತವಾದ ಶಕ್ತಿ; ಈ ಚೈತನ್ಯದಿಂದ ಪ್ರಚೋದಿಸಲ್ಪಟ್ಟ ಚಲನೆಗಳಲ್ಲದೆ ದೇಹ ಮತ್ತು ಜಡವಸ್ತುಗಳು ಬೇರೆ ಯಾವುವೂ ಅಲ್ಲ. ದೇಹದ ಉದ್ದೇಶವೇನೆಂದರೆ : ಇದರ ಮೂಲಕ ಚೈತನ್ಯವು ತನ್ನ ಇತರ ರೂಪಗಳೊಡನೆ ಇರುವ ಸಂಬಂಧವನ್ನು ಅರಿತುಕೊಳ್ಳುವಿಕೆ. ಚೈತನ್ಯರಹಿತವಾದ ಜಡವಸ್ತುವೆಂಬುದು ಇಲ್ಲವೆ ಇಲ್ಲ. ಆಧುನಿಕವಿಜ್ಞಾನವು ತೋರಿಸಿರುವಂತೆ ಪರಮಾಣುಗಳಲ್ಲಿಯೂ ಮತ್ತು ಜೀವಾಣುಗಳಲ್ಲಿಯೂ ಅವುಗಳ ವ್ಯಾಪಾರಗಳನ್ನು ಪ್ರೇರಿಸುವ ಇಚ್ಛೆ ಅಥವಾ ಸಂಕಲ್ಪ ಮತ್ತು ಜ್ಞಾನಗಳಿವೆ. ಈ ಇಚ್ಛೆ ಅಥವಾ ಜ್ಞಾನವು ಆ ಜೀವಾಣು ಅಥವಾ ಪರಮಾಣುವಿನಲ್ಲಿರುವ ಪ್ರತ್ಯೇಕವಾದ ಇಚ್ಛೆ ಅಥವಾ ಜ್ಞಾನವಲ್ಲ; ಅವು ಪ್ರತಿ ಪರಮಾಣುವಿನಲ್ಲಿಯೂ ಅಂತರ್ಗತವಾಗಿರುವ ಈಶ್ವರಚೈತನ್ಯದ ಸಂಕಲ್ಪ ಮತ್ತು ಜ್ಞಾನಗಳು. ಹೀಗೆ ಜಡಪ್ರಕೃತಿಯಲ್ಲಿಯೂ ಶರೀರದಲ್ಲಿಯೂ ಅಂತರ್ಗತವಾಗಿರುವ ಈಶ್ವರನ ಇಚ್ಛಾಜ್ಞಾನಗಳು ವಿವಿಧಶರೀರಗಳಲ್ಲಿ ಅಡಗಿ ವಿಕಾಸಹೊಂದುತ್ತವೆ. ಈ ಭೂಮಿಯಲ್ಲಂತೂ ಇತರ ಶರೀರಗಳಲ್ಲಿರುವುದಕ್ಕಿಂತಲೂ ಮನುಷ್ಯಶರೀರದಲ್ಲಿರುವಾಗ ಈಶ್ವರನಿಗೆ ಸಮೀಪಕರವಾದ ಮಟ್ಟವನ್ನು ಆ ಚೈತನ್ಯವು ಮುಟ್ಟುತ್ತದೆ. ಈ ಶರೀರದಲ್ಲಿರುವಾಗಲೆ ಅದಕ್ಕೆ ಬಾಹ್ಯಪ್ರಜ್ಞೆಯಲ್ಲಿಯೆ ತನ್ನ ದಿವ್ಯತ್ವದ ಅರಿವು ಮೊಬ್ಬುಮೊಬ್ಬಾಗಿ ಉಂಟಾಗುತ್ತದೆ. ಆದರೆ ಇಲ್ಲಿಯೂ ಕೂಡ ಅದು ಒಂದು ಎಲ್ಲೆಯೊಳಗೆಯೆ ಇದೆ; ಅದನ್ನು ಮೀರಲು ಸಾಮರ್ಥ್ಯವನ್ನು ಹೊಂದಿಲ್ಲ. ಹೀಗೆ ಒಂದು ಶರೀರದಲ್ಲಿ ಸಿಕ್ಕಿಕೊಂಡಿರುವುದರಿಂದ ಅದಕ್ಕೆ ಅಪೂರ್ಣತೆಯಿದೆ; ಆದುದರಿಂದ ಈಶ್ವರನೂ ತಾನೂ ಒಂದೆ ಎಂಬ ಐಕ್ಯಜ್ಞಾನವಾಗುವುದಕ್ಕೆ ಪ್ರತಿಬಂಧಕವಿದೆ. ಈ ಲೋಕದಲ್ಲಿ ಪ್ರತಿಯೊಬ್ಬ ಜೀವನೂ ಮಾಡುವ ಕರ್ಮಗಳು ಪರಿಚ್ಛಿನ್ನವಾಗಿರುವುವಲ್ಲದೆ ಅವನ ಪ್ರಜ್ಞೆಯೂ ಕೂಡ ಪರಿಚ್ಛಿನ್ನವಾಗಿದೆ. ಎಂದರೆ ಪರಿಪೂರ್ಣವಾಗಿಲ್ಲ; ಲೋಪಗಳಿಂದ ಕೂಡಿದೆ. ಪ್ರತಿಯೊಂದು ವ್ಯಕ್ತಿಯ ಸ್ವರೂಪವನ್ನೂ ಪ್ರಜ್ಞೆಯನ್ನೂ ಈ ವ್ಯತ್ಯಾಸಗಳು ನಿರ್ಣಯಿಸುತ್ತವೆ. ವ್ಯಕ್ತಿವ್ಯಕ್ತಿಯ ನಡುವೆ

ಇರುವ ಆಂತರವಾದ ಭೇದಕ್ಕೆ ಇದೇ ಕಾರಣ. ವಾಸ್ತವವಾಗಿ ಈಶ್ವರನೆ ಹಿಂದೆ ಇದ್ದುಕೊಂಡು ಈ ವ್ಯಕ್ತಿಗಳ ಅಪೂರ್ಣವಾದ ಇಚ್ಛಾಜ್ಞಾನಗಳನ್ನು ನಿಯಂತ್ರಿಸುತ್ತಾನೆ. ವೇದದಲ್ಲಿ ಹೇಳುವಂತೆ ಅವನು ಈ ಶರೀರವೆಂಬ ಗುಹೆಯಲ್ಲಿದ್ದಾನೆ; ಈ ವಿಷಯವನ್ನೆ ಗೀತೆಯಲ್ಲಿ ಹೀಗೆ ಹೇಳಿದೆ: "ಈಶ್ವರನು ಸಮಸ್ತಪ್ರಾಣಿಗಳ ಹೃದಯಪ್ರದೇಶದಲ್ಲಿದ್ದುಕೊಂಡು, ತಿರುಗುತ್ತಿರುವ ಯಂತ್ರದಲ್ಲಿ ಇರುವ ವಸ್ತುಗಳಂತೆ ಎಲ್ಲ ಭೂತಗಳನ್ನೂ ತನ್ನ ಮಾಯೆಯಿಂದ ತಿರುಗಿಸುತ್ತಾನೆ." (೧೮-೬೧) ಈ ರೀತಿಯಲ್ಲಿ ಹೃದಯದಲ್ಲಿ ಗುಪ್ತವಾಗಿದ್ದು ಅಹಂಭಾವಯುಕ್ತವಾದ ಮತ್ತು ಪ್ರಕೃತಿಯೊಂದಿಗೆ ಸೇರಿರುವ ಪ್ರಜ್ಞೆಯ ಮೂಲಕ ಕೆಲಸ ಮಾಡುವುದೆ ಈಶ್ವರನು ಕೆಲಸಮಾಡುವ ವಿಧಾನ. ಹೀಗಿರುವಾಗ ಈಶ್ವರನು ಈ ಲೋಕದಲ್ಲಿ ಅವತಾರ ಮಾಡಿ, ಸಾಕ್ಷಾತ್ತಾಗಿ, ನೇರವಾಗಿ ತನ್ನ ಇಚ್ಛಾಜ್ಞಾನಗಳಿಂದಲೆ ಕರ್ಮಗಳನ್ನು ಮಾಡಬೇಕಾದ ಅವಶ್ಯಕತೆಯೇನಿದೆ? ಇದಕ್ಕೆ ಹೇಳಬಹುದಾದ ಉತ್ತರವೇನೆಂದರೆ--ಮಾನವಕೋಟಿಗೂ ತನಗೂ ನಡುವೆ ಇರುವ ತೆರೆಯನ್ನು ಎತ್ತಲು ಪರಿಚ್ಛಿನ್ನನಾದ ಮನುಷ್ಯನಿಗೆ ಸಾಧ್ಯವಿಲ್ಲದುದರಿಂದ, ಆ ತೆರೆಯನ್ನು ಎತ್ತಲು ಅವನು ತಾನೆ ಅವತಾರಮಾಡುತ್ತಾನೆ—ಎಂದಲ್ಲವೆ? ಗೀತೆಯ ಪ್ರಕಾರ ಮನುಷ್ಯನ ಸಾಮಾನ್ಯವಾದ ಕರ್ಮಗಳು ಪರಿಚ್ಛಿನ್ನವಾಗಿರಲು ಕಾರಣವೇನೆಂದರೆ ಮನುಷ್ಯನು ಪ್ರಕೃತಿ ವ್ಯಾಪಾರಗಳಿಗೆ ಅಧೀನನಾಗಿರುವುದು ಮತ್ತು ಮಾಯೆಯ ನಾನಾರೂಪಗಳಿಗೆ ಕಟ್ಟು ಬಿದ್ದಿರುವುದು. ಇಲ್ಲಿ ಹೇಳಿರುವ ಇವೆರಡು ಕಾರಣಗಳೂ ಒಂದೆ ಆದ ಈಶ್ವರ ಚೈತನ್ಯದ ಕಾರ್ಯದ ಎರಡು ಮುಖಗಳು. ಮಾಯೆಯೆಂದರೆ ಇಲ್ಲದೆ ಇರುವುದನ್ನು ಕಾಣುವುದು ಎಂದು ಮಾತ್ರವಲ್ಲ. ಹೀಗೆ ಇಲ್ಲದೆ ಇರುವುದು ಇರುವಂತೆ ಭಾಸವಾಗುವುದಕ್ಕೆ ತ್ರಿಗುಣಾತ್ಮಕವಾದ ಅಪರಾಪ್ರಕೃತಿಯ ಮಾಯೆಯೆ ಕಾರಣ. ವಾಸ್ತವವಾಗಿ ಮಾಯೆಯೆಂದರೆ ನಾನಾರೂಪಗಳಲ್ಲಿ ವ್ಯಕ್ತವಾಗಲು ಈಶ್ವರಚೈತನ್ಯಕ್ಕೆ ಇರುವ ಶಕ್ತಿ. ಹಾಗೆಯೆ ಪ್ರಕೃತಿಯೆಂದರೆ ಈಶ್ವರಚೈತನ್ಯವು ವ್ಯಕ್ತವಾಗುವ ನಾನಾ ರೂಪಗಳು ತಮ್ಮ ಸ್ವಭಾವ, ಸ್ವಧರ್ಮ ಮತ್ತು ಗುಣಗಳಿಗೆ ಅನುಸಾರವಾಗಿ ಕರ್ಮಗಳನ್ನು ಮಾಡುವಂತೆ ನಿಯೋಜಿಸುವ ಈಶ್ವರನ ಶಕ್ತಿ. "ನನ್ನ ಸ್ವಕೀಯವಾದ ಪ್ರಕೃತಿಯನ್ನು ಅವಲಂಬಿಸಿ ಪ್ರಕೃತಿಗೆ ವಶವಾಗಿರುವ, ಸ್ವಾತಂತ್ರ್ಯವಿಲ್ಲದ ಸಮಸ್ತವಾದ ಈ ಭೂತಗಣವನ್ನೂ ಪುನಃಪುನಃ ಸೃಷ್ಟಿಸುತ್ತೇನೆ" (೯-೮) ಮನುಷ್ಯ ದೇಹದಲ್ಲಿ ಅಂತರ್ಗತನಾದ ಈಶ್ವರನನ್ನು ಅರಿಯಲಾರದ ಮೂಢರು ಪ್ರಕೃತಿ ವ್ಯಾಪಾರಗಳಿಗೆ ಒಳಗಾಗುತ್ತಾರೆ; ಅವರ ಮನಸ್ಸು ಇದರ ಚೌಕಟ್ಟಿನಲ್ಲಿಯೆ ಸಿಕ್ಕಿ

ಕೊಂಡು ಅದನ್ನೆ ಅಪ್ಪಿಕೊಳ್ಳುತ್ತದೆ. ಆದುದರಿಂದ ಅವರು ಈಶ್ವರನನ್ನು ತಿಳಿಯಲಾರರು; ಆಸೆಗಳಿಂದಲೂ ಅಹಂಭಾವದಿಂದಲೂ ಬುದ್ಧಿಯನ್ನೂ ಮನಸ್ಸನ್ನೂ ಮೋಹಗೊಳಿಸುವ ಆಸುರೀಪ್ರಕೃತಿಯನ್ನು ಇವರು ಹೊಂದಿದ್ದಾರೆ. ಹೃದಯದಲ್ಲಿರುವ ಪುರುಷೋತ್ತಮನು ಸುಲಭವಾಗಿ ಎಲ್ಲರಿಗೂ ಗೋಚರವಾಗುವುದಿಲ್ಲ. ಅವನು ದಟ್ಟವಾದ ಕತ್ತಲೆಯ ಮೋಡದಲ್ಲಾದಲಿ, ಅತಿಪ್ರಕಾಶಮಾನವಾದ ಬೆಳಕಿನ ನಡುವೆಯಾಗಲಿ ಅಡಗಿರುವುದರಿಂದ ಗೋಚರವಾಗುವುದಿಲ್ಲ. ಅವನ ಯೋಗಮಾಯೆಯು ಅವನನ್ನು ಸಂಪೂರ್ಣವಾಗಿ ಸುತ್ತುಗಟ್ಟಿದೆ. ಗೀತೆಯಲ್ಲಿ ಹೇಳುವಂತೆ, "ಲೋಕವು ಗುಣತ್ರಯಸ್ವಭಾವದಿಂದ ಮೋಹಗೊಂಡಿರುವುದು; ಆದುದರಿಂದ ಅವುಗಳಿಗಿಂತಲೂ ಶ್ರೇಷ್ಠನಾದ ಮತ್ತು ಶಾಶ್ವತನಾದ ನನ್ನನ್ನು ಅದು ತಿಳಿಯದು. ಈ ಗುಣಗಳಿಂದ ಮಾಡಲ್ಪಟ್ಟ ನನ್ನ ದೈವೀಮಾಯೆಯನ್ನು ದಾಟುವುದು ಬಹಳ ಕಷ್ಟ; ಯಾರು ನನ್ನನ್ನೆ ಹೊಂದುವುದಕ್ಕೆ ಕಷ್ಟಪಡುತ್ತಾರೆಯೊ ಅವರು ಈ ಮಾಯೆಯನ್ನು ದಾಟುತ್ತಾರೆ. ರಾಕ್ಷಸಸ್ವಭಾವವುಳ್ಳವರ ಜ್ಞಾನವು ಮಾಯೆಯಿಂದ ಅಪಹರಿಸಲ್ಪಟ್ಟಿರುವುದರಿಂದ ಅಂತಹವರು ನನ್ನನ್ನು ತಿಳಿಯಲಾರರು." (೭-೧೩, ೧೪, ೧೫) ಪ್ರಕಾರಾಂತರವಾಗಿ ಹೀಗೆ ಹೇಳಬಹುದು: ಹೃದಯದಲ್ಲಿ ಈಶ್ವರನಿದ್ದಾನೆಂಬ ಜ್ಞಾನವು ಎಲ್ಲರಿಗೂ ಇದೆ; ಏತಕ್ಕೆಂದರೆ ಎಲ್ಲರಲ್ಲಿಯೂ ಈಶ್ವರನಿದ್ದಾನೆ. ಆದರೆ ಈಶ್ವರನು ತನ್ನ ಮಾಯೆಯಿಂದ ಆವರಿಸಲ್ಪಟ್ಟು ಇದ್ದಾನೆ. ಆದುದರಿಂದ ಈಶ್ವರನಿದ್ದಾನೆಂಬ ಜ್ಞಾನವು ಅವರಿಗೆ ಗೋಚರವಾಗಿಲ್ಲ. ಪ್ರಕೃತಿವ್ಯಾಪಾರದಿಂದ, ಮಾಯೆಯಿಂದ, ಈ ಜ್ಞಾನವು ಅಹಂಭಾವವಾಗಿ ಪರಿವರ್ತಿಸಲ್ಪಟ್ಟಿದೆ. ಹೀಗಿದ್ದಾಗ್ಯೂ ಪ್ರಕೃತಿವ್ಯಾಪಾರಗಳಿಂದ ವಿಮುಖನಾಗಿ, ಪ್ರಕೃತಿಯ ಅಧ್ಯಕ್ಷನಾದ ಪುರುಷೋತ್ತಮನ ಕಡೆಗೆ ತಿರುಗಿದರೆ ಮನುಷ್ಯನು ತನ್ನಲ್ಲಿ ಅಂತರ್ಗತವಾಗಿರುವ ಈಶ್ವರತ್ವವನ್ನು ಅರಿಯಬಹುದು.

ಇಲ್ಲಿ ಗಮನಿಸಬೇಕಾದ ಅಂಶವೊಂದುಂಟು; ಈಶ್ವರನು ಜೀವಿಗಳನ್ನು ಸೃಷ್ಟಿಸುವುದನ್ನು ವಿವರಿಸುವಾಗಲೂ, ತಾನೆ ಅವತಾರ ಮಾಡುವುದನ್ನು ವಿವರಿಸುವಾಗಲೂ, ಒಂದು ಅಂಶವನ್ನು ಬಿಟ್ಟು ಮಿಕ್ಕವುಗಳಲ್ಲಿ ಗೀತೆಯು ಒಂದೆ ವಿಧವಾದ ಭಾಷೆಯನ್ನು ಉಪಯೋಗಿಸಿದೆ. "ನನ್ನ ಸ್ವಕೀಯವಾದ ಪ್ರಕೃತಿಯನ್ನು ಅವಲಂಬಿಸಿಕೊಂಡು, ಪ್ರಕೃತಿಗೆ ವಶವಾಗಿರುವ ಅಸ್ವತಂತ್ರವಾದ ಸಮಸ್ತವಾದ ಈ ಭೂತಗಣವನ್ನು ಪುನಃ ಪುನಃ ಸೃಷ್ಟಿಸುತ್ತೇನೆ" (೯-೮) "ನನ್ನ ಸ್ವಕೀಯವಾದ ಪ್ರಕೃತಿಯನ್ನು ಆಧಾರಮಾಡಿಕೊಂಡು, ನನ್ನ ಮಾಯೆಯಿಂದ ಹುಟ್ಟುತ್ತೇನೆ"

(೪-೬) ಮೇಲಿನ ಶ್ಲೋಕಗಳಲ್ಲಿ ಮೊದಲನೆಯದರಲ್ಲಿ **ಅವಷ್ಟಭ್ಯ** ಎಂಬ ಪದವನ್ನು ಉಪಯೋಗಿಸಿದೆಯಷ್ಟೆ; ಅದರ ಅರ್ಥವು ಹೀಗಿದೆ: ವಶಪಡಿಸಿಕೊಳ್ಳಲ್ಪಟ್ಟ ವಸ್ತುವು ಬಲಯುತವಾದ ಮತ್ತು ಕೆಳಕ್ಕೆ ತಳ್ಳುವ ಶಕ್ತಿಯಿಂದ ಗೆಲ್ಲಲ್ಪಟ್ಟು, ಒತ್ತಲ್ಪಟ್ಟು, ಅದರ ಚಲನೆಯೂ, ವ್ಯಾಪಾರವೂ ಈ ಶಕ್ತಿಯಿಂದ ನಿಯಂತ್ರಿತವಾಗಿ, ಕುಂಠಿತವಾಗಿ, ಬೇರೆ ದಾರಿಯಿಲ್ಲದೆ ಆ ಶಕ್ತಿಗೆ ಅಧೀನವಾಗುವುದು. ಪ್ರಕೃತಿಯೂ, ಅದರ ವ್ಯಾಪಾರಗಳೂ ಯಾಂತ್ರಿಕವಾಗಿ ಜರುಗುತ್ತವೆ; ಇದರಲ್ಲಿಯ ಜೀವಕೋಟಿಯು ಸಹಾಯವಿಲ್ಲದೆ ಯಾಂತ್ರಿಕವಾದ ಪ್ರಕೃತಿಗೆ ಅಧೀನರಾಗಿರುತ್ತಾರೆ; ತಮ್ಮ ಇಷ್ಟಪ್ರಕಾರ ಕಾರ್ಯಗಳನ್ನು ಮಾಡಲು ಸ್ವತಂತ್ರರಲ್ಲ.

ಎರಡನೆಯ ಶ್ಲೋಕದಲ್ಲಿ ಉಪಯೋಗಿಸಿರುವ **ಅಧಿಷ್ಠಾಯ** ಎಂಬ ಪದದ ಅರ್ಥವಾದರೊ ಬೇರೆ ರೀತಿ ಇದೆ: ಪ್ರಕೃತಿಯಲ್ಲಿ ಅಂತರ್ಗತನಾಗಿದ್ದರೂ, ಈಶ್ವರನು, ಪ್ರಕೃತಿಯ ಮೇಲೆನಿಂತು, ಅದನ್ನು ನಿಯಂತ್ರಿಸಿ, ತನ್ನ ಇಷ್ಟ ಪ್ರಕಾರ ಅದರಿಂದ ಕೆಲಸ ಮಾಡಿಸುತ್ತಾನೆ; ಈಶ್ವರನು ಅಜ್ಞಾನಕ್ಕೆ ಒಳಗಾಗಿ, ಪ್ರಕೃತಿಯ ಪ್ರೇರಣೆಗೆ ಅಡಿಯಾಳಾಗುವುದಿಲ್ಲ; ಪ್ರಕೃತಿಯೆ ಈಶ್ವರನ ಇಚ್ಛಾಜ್ಞಾನಗಳಿಂದ ತುಂಬಲ್ಪಟ್ಟು, ಅವನ ಇಷ್ಟಪ್ರಕಾರ ವರ್ತಿಸುತ್ತದೆ.

ಆದುದರಿಂದ ಸೃಷ್ಟಿ ಸಾಮಾನ್ಯದಲ್ಲಿ ಸೃಷ್ಟಿಸಲ್ಪಡುವವರು ಸಮಸ್ತ ಭೂತಗಳು (ಭೂತವರ್ಗ ಮತ್ತು ಪ್ರಾಣಿಕೋಟಿ); ಅವತಾರದಲ್ಲಾದರೊ ಜನ್ಮವೆತ್ತುವವನು ತನ್ನನ್ನೆ ಅರಿತಿರುವ, ತನ್ನಲ್ಲೆ ಇರುವ ಆತ್ಮನು. ವೇದಾಂತದಲ್ಲಿ ಆತ್ಮಕ್ಕೂ ಭೂತಕ್ಕೂ ಇರುವ ಭೇದವನ್ನೆ ಪಾಶ್ಚಾತ್ಯ ತತ್ವಶಾಸ್ತ್ರದಲ್ಲಿ ಸದ್ವಸ್ತುವಿಗೂ (Being) ಮತ್ತು ಅದು ಹೊಂದುವ ಪರಿಣಾಮಗಳಿಗೂ (Becoming) ಇರುವ ಭೇದವನ್ನಾಗಿ ಹೇಳುತ್ತಾರೆ. ಮೇಲೆ ಹೇಳಿರುವ ಎರಡುವಿಧವಾದ ಜನ್ಮಕ್ಕೂ ಮಾಯೆಯೆ ಕಾರಣ; ಸಾಮಾನ್ಯಸೃಷ್ಟಿಯ ಜನ್ಮಕ್ಕಾದರೊ ಅವಿದ್ಯಾರೂಪವಾದ ಕೆಳಮಟ್ಟದ ಮಾಯೆಯು ಕಾರಣ; ಭಗವಂತನ ಅವತಾರಕ್ಕಾದರೊ ಆತ್ಮಮಾಯೆಯು ಕಾರಣ; ಇದನ್ನೆ ಗೀತೆಯಲ್ಲಿ ಇನ್ನೊಂದು ಕಡೆ ಯೋಗಮಾಯೆಯೆಂದು ಹೇಳಿದೆ; ಬುದ್ಧಿಪೂರ್ವಕವಾಗಿ ಈಶ್ವರನು ದೇಹವನ್ನು ಧರಿಸುವಾಗ ಈ ಮಾಯೆಯಿಂದ ಜನ್ಮವೆತ್ತುತ್ತಾನೆ; ಈ ಮಾಯೆಯ ವ್ಯಾಪಾರದ ಮತ್ತು ಉದ್ದೇಶದ ಅರಿವು ಅವನಿಗೆ ಸಂಪೂರ್ಣವಾಗಿ ಇರುತ್ತದೆ. ಜೀವರನ್ನು ಸೃಷ್ಟಿಸುವಾಗ ಭಗವಂತನು ಯೋಗಮಾಯೆಯಿಂದ ಆವೃತನಾಗಿ ಕೀಳ್ಮಟ್ಟದ ಪ್ರಜ್ಞೆಗೆ ಅಗೋಚರನಾಗುತ್ತಾನೆ; ಆದುದರಿಂದ ಅದು ನಮಗೆ ಅವಿದ್ಯಾರೂಪವಾದ ಮಾಯೆಯಾಗುತ್ತದೆ. ನಮ್ಮ ಪ್ರಜ್ಞೆಯು ಭಗವಂತನ

ಪ್ರಜ್ಞೆಯಲ್ಲಿ ಒಂದಾಗುವಾಗ ಈ ಯೋಗಮಾಯೆಯೆ ಆತ್ಮಸಾಕ್ಷಾತ್ಕಾರಕ್ಕೂ ಕಾರಣ ವಾಗುತ್ತದೆ; ಆಗ ಅದು ವಿದ್ಯಾರೂಪವಾದ ಮಾಯೆಯಾಗುತ್ತದೆ. ಈ ಮಾಯೆಯೆ ಈಶ್ವರನ ಅವತಾರಕ್ಕೆಕಾರಣ. ನಾವು ಅಜ್ಞಾನದಿಂದ ಕರ್ಮಗಳನ್ನು ಮಾಡುತ್ತೇವೆ; ಈಶ್ವರನಾದರೊ ಸಂಪೂರ್ಣವಾದ ಅರಿವಿನಿಂದ ಮಾಡುತ್ತಾನೆ.

ಹೀಗೆ ಗೀತೆಯಲ್ಲಿ ಉಪಯೋಗಿಸಿರುವ ಪದಗಳಿಂದ ವ್ಯಕ್ತವಾಗುವುದೇನೆಂದರೆ ಭಗವಂತನು ಅವತಾರ ಮಾಡುವಾಗ ಈಶ್ವರ ಪ್ರಜ್ಞೆಯೊಡನೆಯೆ ಮನುಷ್ಯರಲ್ಲಿ ಜನ್ಮ ತಾಳುತ್ತಾನೆ; ಮನುಷ್ಯ ಸಾಮಾನ್ಯರ ಜನ್ಮದಲ್ಲಿಯೂ ಮತ್ತು ಭಗವಂತನ ಅವತಾ ರದಲ್ಲಿಯೂ ಒಂದೆ ವಿಧಾನವು ಅನುಸರಿಸಲ್ಪಟ್ಟಿದ್ದರೂ, ಇವೆರಡೂ ತೀರಾ ವಿರುದ್ಧ ವಾಗಿವೆ. ಒಂದು ಅಜ್ಞಾನದಲ್ಲಿನ ಜನ್ಮ; ಇನ್ನೊಂದು ಅಪರಿಮೇಯ ಜ್ಞಾನದಿಂ ದೊಡಗೂಡಿದ ಜನ್ಮ. ಸ್ವಯಂಭೂ ಆದ ಈಶ್ವರನು ಜನ್ಮವೆತ್ತಿ ತನ್ನ ಆಗುವಿಕೆ ಯನ್ನು ತನ್ನ ಅಧೀನದಲ್ಲಿ ಇಟ್ಟುಕೊಂಡಿರುತ್ತಾನೆ; ಅಜ್ಞಾನದಿಂದ ಆವೃತನಾಗಿ ಆತ್ಮಜ್ಞಾನವನ್ನು ಕಳೆದುಕೊಂಡಿಲ್ಲ. ಪ್ರಕೃತಿಯ ಒಡೆಯನಾಗಿ ಭಗವಂತನು ದೇಹ ವನ್ನು ಧರಿಸುತ್ತಾನೆ; ಪ್ರಕೃತಿಯನ್ನು ವಶದಲ್ಲಿಟ್ಟುಕೊಂಡು ತನ್ನ ಇಷ್ಟಪ್ರಕಾರ ಪ್ರಕೃತಿಯಲ್ಲಿ ವ್ಯಾಪಾರಗಳನ್ನು ಮಾಡುತ್ತಾನೆ; ಪ್ರಕೃತಿ ವ್ಯಾಪಾರದಲ್ಲಿ ಸಿಕ್ಕಿಕೊಂಡು ಅದಕ್ಕೆ ಅಧೀನನಾಗಿ ತೊಳಲಿ ಸುತ್ತುವುದಿಲ್ಲ. ಅವನು ಸಂಪೂರ್ಣವಾದ ಜ್ಞಾನದಿಂದ ಕರ್ಮಗಳನ್ನು ಮಾಡುತ್ತಾನೆಯೆ ಹೊರತು ಮನುಷ್ಯ ಸಾಮಾನ್ಯರಂತೆ ಅಜ್ಞಾನ ದಿಂದಲ್ಲ. ಎಲ್ಲರೊಳಗೂ ಗೂಢವಾಗಿರುವ ಈ ಆತ್ಮನು ತೆರೆಯ ಹಿಂದಿನಿಂದ ಆಳುವು ದನ್ನು ಬಿಟ್ಟು, ಹೊರಕ್ಕೆ ಬಂದು, ಮನುಷ್ಯದೇಹವನ್ನು ಸಂಪೂರ್ಣವಾಗಿ ಆಕ್ರಮಿಸು ತ್ತಾನೆ; ಆದರೆ ತನ್ನ ಈಶ್ವರಭಾವದಿಂದ ಆಕ್ರಮಿಸುತ್ತಾನೆ. ಮನುಷ್ಯ ಸಾಮಾನ್ಯರ ಜನ್ಮದಲ್ಲಾದರೊ ಈಶ್ವರನು ತೆರೆಯ ಹಿಂದಿನಿಂದಲೆ ಸೂತ್ರವನ್ನು ಆಡಿಸುತ್ತಾನೆ; ಮುಂದುಗಡೆ ಇದ್ದುಕೊಂಡು ವ್ಯವಹರಿಸುವ ಜೀವನು ಪ್ರಕೃತಿಗೆ ಅಧೀನನಾಗಿದ್ದಾ ನೆಂದು ಹೇಳಬಹುದೆ ಹೊರತು ಒಡೆಯನಾಗಿದ್ದಾನೆಂದು ಹೇಳಲಾಗುವುದಿಲ್ಲ; ಇವನ ಪ್ರಜ್ಞೆಯು ಅಪರಿಮೇಯವಾಗಿರದೆ ಪರಿಚ್ಛಿನ್ನವಾಗಿದೆ; ಆತ್ಮಜ್ಞಾನವನ್ನು ಕಳೆದುಕೊಂಡು, ಪ್ರಕೃತಿ ವ್ಯಾಪಾರಗಳಲ್ಲಿ ಸಿಕ್ಕಿಕೊಂಡಿದ್ದಾನೆ. ಪ್ರಕೃತದಲ್ಲಿ ಕೃಷ್ಣನ ಅವತಾರದಲ್ಲಿ ಪರಮಾತ್ಮನು ಮನುಷ್ಯರಲ್ಲಿ ಸಾಕ್ಷಾತ್ತಾಗಿ ಜನ್ಮವನ್ನು ತಾಳಿದ್ದಾನೆ; ಮತ್ತು ಈಶ್ವರ ಸಹಜವಾದ ದಿವ್ಯಸ್ಥಿತಿಯನ್ನು ವ್ಯಕ್ತಪಡಿಸಿದ್ದಾನೆ; ಮನುಷ್ಯ ಜೀವನಾದ, ವಿಭೂತಿಯಾದ, ಅತ್ಯುತ್ತಮ ಮನುಷ್ಯನನ್ನು ಪ್ರತಿನಿಧಿಸುವ, ಅರ್ಜು ನನು ಈ ದಿವ್ಯಸ್ಥಿತಿಯನ್ನು ಮುಟ್ಟಬೇಕೆಂದು ಗುರುವು ಪ್ರಚೋದಿಸುತ್ತಾನೆ.

ಅರ್ಜುನನು ಈ ಮಟ್ಟಕ್ಕೆ ಏರಬೇಕಾದರೆ, ಮನುಷ್ಯ ಸಹಜವಾದ ಅಜ್ಞಾನ ಮತ್ತು ಬಂಧನಗಳನ್ನು ಕಳೆದುಕೊಂಡ ಮೇಲೆಯೆ. ನಾವು ಈಗಿರುವ ಕೆಳಗಿನ ಮಟ್ಟದಿಂದ ಯಾವ ದಿವ್ಯಸ್ಥಿತಿಗೆ ಏರಬೇಕಾಗಿದೆಯೊ, ಆ ದಿವ್ಯಸ್ಥಿತಿಯೆ ಮೇಲಿನಿಂದ ಕೆಳಗೆ ಒಂದು ಅವತಾರದಲ್ಲಿ ವ್ಯಕ್ತವಾಗಿದೆ. ಮನುಷ್ಯರಾದ ನಾವು ಮುಂದೆ ಎಂದೊ ಮನುಷ್ಯದೇಹದಲ್ಲಿ ಹೊಂದಬೇಕಾದ ದಿವ್ಯಜನ್ಮವನ್ನು ಭಗವಂತನು ಕೆಳಕ್ಕೆ ಇಳಿದು ಬಂದು ತಾಳಿದ್ದಾನೆ. ನಾವು ಮನುಷ್ಯ ಸ್ವರೂಪದಲ್ಲಿಯೆ ಸಾಧಿಸಬೇಕಾದ ದಿವ್ಯ ಜನ್ಮದ ಆದರ್ಶವನ್ನು ನಮ್ಮ ಮನಸ್ಸನ್ನು ಆಕರ್ಷಿಸುವಂತೆ ಭಗವಂತನು ಅವತಾರರೂಪದಲ್ಲಿ ನಮ್ಮ ಮುಂದೆ ಇಟ್ಟಿದ್ದಾನೆ.

# ಹದಿನಾರನೆಯ ಪ್ರಕರಣ

## ಅವತಾರದ ರೀತಿ

ಭಗವಂತನು ಮನುಷ್ಯನಂತೆ ಅವತಾರ ಮಾಡಿ ಮನುಷ್ಯನ ಸ್ವಭಾವವನ್ನೂ ಸ್ವರೂಪವನ್ನೂ ಧರಿಸುವುದು ಮತ್ತು ಸಾಮಾನ್ಯ ಮನುಷ್ಯಜನ್ಮ ಇವೆರಡೂ ಗೀತೆಯ ಪ್ರಕಾರ ಮನುಷ್ಯನಿಗೆ ಅಗೋಚರವಾದ ಒಂದೆ ರಹಸ್ಯದ ಎರಡು ಮುಖಗಳು; ಏತಕ್ಕೆಂದರೆ ಮನುಷ್ಯ ಜನ್ಮವೂ ನಿಜವಾಗಿ ಒಂದು ಅವತಾರವೆ; ಆದರೆ ಅದನ್ನು ಆ ದೃಷ್ಟಿಯಿಂದ ನೋಡಿಲ್ಲ. ಪ್ರತಿಯೊಬ್ಬ ಮನುಷ್ಯನಲ್ಲಿಯೂ ಶಾಶ್ವತನಾದ ಮತ್ತು ಸರ್ವವ್ಯಾಪಿಯಾದ ಈಶ್ವರನು ಇದ್ದಾನೆ; ಪ್ರತಿ ವ್ಯಕ್ತಿಯಲ್ಲಿರುವ ಜೀವಾತ್ಮನೂ ಪರಮಾತ್ಮನ ಒಂದು ಅಂಶವೆ, **ಮಮೈವಾಂಶಃ**. ಹೀಗೆ ಹೇಳಿದುದರಿಂದ ಈಶ್ವರನು ಅನೇಕ ಚೂರುಗಳಾಗಿ ಅಥವಾ ಮುರುಕುಗಳಾಗಿ ಒಡೆದು ಒಂದೊಂದು ಚೂರು ಒಬ್ಬೊಬ್ಬ ವ್ಯಕ್ತಿಯಲ್ಲಿದೆಯೆಂದು ತಿಳಿದುಕೊಳ್ಳಕೂಡದು. ಏತಕ್ಕೆಂದರೆ ಈಶ್ವರನು ಹಾಗೆ ಚೂರುಗಳಾಗುವುದಿಲ್ಲ. ಅವನ ಅಖಂಡವಾದ ಚೈತನ್ಯ ಮತ್ತು ಅಖಂಡವಾದ ಶಕ್ತಿಗಳೇ ಜೀವನಲ್ಲಿ ಅಂಶತಃ ವ್ಯಕ್ತವಾಗುತ್ತವೆ. ಜೀವನು ಪ್ರಪಂಚದಲ್ಲಿ ಅನುಭವಿಸುವ ಸುಖವು ಸಚ್ಚಿದಾನಂದಸ್ವರೂಪನಾದ ಈಶ್ವರನ ಅಖಂಡವಾದ

ಆನಂದದ ಅಂಶ. ಮೊದಲು ಮತ್ತು ಕೊನೆಗಳಿಲ್ಲದ ಆಳತೆಗೆ ಮೀರಿರುವ ಭಗವಂತನೆ ಆದಿ ಅಂತ್ಯಗಳನ್ನುಳ್ಳ ಮತ್ತು ಪರಿಮಿತಿಗೊಳಪಟ್ಟ ಜೀವನ ರೂಪದಲ್ಲಿ ವ್ಯಕ್ತನಾಗಿದ್ದಾನೆ. ಈ ಜೀವನು ಪ್ರಕೃತಿವ್ಯಾಪಾರಗಳಲ್ಲಿ ಸಿಕ್ಕಿಕೊಳ್ಳುತ್ತಾನೆ; ಆದುದರಿಂದ ಈಶ್ವರನ ಸಚ್ಚಿದಾನಂದಗಳು ಅವನಿಗೆ ಕುಂಠಿತವಾಗುತ್ತವೆ. ಅವನನ್ನು ಅವಿದ್ಯೆಯು ಆವರಿಸುತ್ತದೆ. ತಾನು ಈಶ್ವರನಿಂದ ಹುಟ್ಟಿರುವನೆಂಬುದನ್ನು ಅವನು ಮರೆಯುತ್ತಾನೆ. ತನ್ನ ಹೃದಯ ಪ್ರದೇಶದಲ್ಲಿಯೆ ಈಶ್ವರನಿದ್ದಾನೆಂಬುದನ್ನೂ, ಮನುಷ್ಯರ ಹೃದಯ ಗುಹೆಯೆಂಬ ಗರ್ಭಗುಡಿಯಲ್ಲಿ ಮುಸುಕಿನಿಂದ ಆವರಿಸಲ್ಪಟ್ಟ ಜ್ವಲಿಸುತ್ತಿರುವ ಜ್ಯೋತಿಯಂತೆ ಈಶ್ವರನಿದ್ದಾನೆಂಬುದನ್ನೂ ಮರೆತುಬಿಟ್ಟಿದ್ದಾನೆ.

ಆದಿ ಅಂತ್ಯಗಳಿಲ್ಲದ ಈಶ್ವರನಿಂದ ಜೀವಾತ್ಮನು ಹುಟ್ಟಲು ಪ್ರಕೃತಿ ಅಥವಾ ಮಾಯೆಯೆ ಕಾರಣ, ಜೀವಾತ್ಮನ ಜ್ಞಾನೇಂದ್ರಿಯಗಳಮೇಲೆ ಈ ಪ್ರಕೃತಿಯ ಪ್ರಭಾವವು ಬಿದ್ದಿರುವುದರಿಂದ ಅವನು ಅವಿದ್ಯೆಗೆ ಒಳಗಾಗಿದ್ದಾನೆ. ಶುದ್ಧವಾದ ಅಪರಂಜಿ ಚಿನ್ನಕ್ಕೆ ಬೇರೆ ಲೋಹಗಳನ್ನು ಬೆರೆಸಿ ಆ ಬೆರಕೆಲೋಹದಿಂದ ನಾಣ್ಯಗಳನ್ನು ಮಾಡುವಂತೆ ಪ್ರಕೃತಿಯು ಈಶ್ವರತತ್ವದಿಂದ ಜೀವನನ್ನು ಮಾಡಿದೆ; ಜೀವನೆಂಬ ಈ ನಾಣ್ಯಕ್ಕೆ ಪ್ರಕೃತಿಯು ನಶ್ವರವಾದ ಗುಣಗಳೆಂಬ ನಿಕೃಷ್ಟವಾದ ಲೇಪವನ್ನು ಬಳಿದಿದೆ; ಇನ್ನೂ ಮೃಗಗಳ ಸ್ವಭಾವದಿಂದ ಕೂಡಿರುವಾಗಲೆ ಮನುಷ್ಯತ್ವದ ಮುದ್ರೆಯನ್ನು ಆ ಜೀವನಮೇಲೆ ಪ್ರಕೃತಿಯು ಒತ್ತಿದೆ. ದೇವತ್ವದ ಚಿಹ್ನೆಯೂ ಅದರ ಮೇಲಿದ್ದರೂ ಕೂಡ,. ಅದು ಗೂಢವಾಗಿದ್ದು, ಸುಲಭವಾಗಿ ಕಾಣುವುದಿಲ್ಲ. ಪ್ರವೃತ್ತಿಮಾರ್ಗದಲ್ಲಿಯೆ ಇರುವ ಮತ್ತು ನಿವೃತ್ತಿಮಾರ್ಗದಲ್ಲಿ ಮುಂದುವರಿಯುತ್ತಿರುವ ಮನುಷ್ಯರಿಗೆ ಇರುವ ವ್ಯತ್ಯಾಸಕ್ಕೆ ಕಾರಣವು ಇದೇಯೆ; ನಿವೃತ್ತಿಮಾರ್ಗದಲ್ಲಿರುವವರು ಆತ್ಮತತ್ವವನ್ನು ಕಂಡುಕೊಂಡಿದ್ದಾರೆ; ಅವರಲ್ಲಿ ದೇವತ್ವದ ಚಿಹ್ನೆಯು ನಮಗೆ ಕಾಣಿಸುತ್ತದೆ. ಅವತಾರದಲ್ಲಿ ಎಂದರೆ ಭಗವಂತನು ವ್ಯಕ್ತನಾಗಿರುವ ಮನುಷ್ಯರೂಪದಲ್ಲಿ, ಒಳಗಡೆ ಇರುವ ನಿಜವಾದ ತತ್ವವು ಹೊರಗಡೆ ಇರುವ ಲೇಪವನ್ನು ಭೇದಿಸಿ ರಾರಾಜಿಸುತ್ತದೆ. ಪ್ರಕೃತಿಯ ಮುದ್ರೆ ಇರುವುದು ಹೊರಗಿನ ರೂಪದಮೇಲೆ ಮಾತ್ರ; ಚೈತನ್ಯವೂ, ಜ್ಞಾನವೂ, ಶಕ್ತಿಯೂ ಒಳಗೆ ಇರುವ ಈಶ್ವರನದೇಯೆ. ಹೊರಗಡೆ ಧರಿಸಿರುವ ಮನುಷ್ಯರೂಪವನ್ನು ಭೇದಿಸಿ ಅವು ತಮ್ಮ ಕೆಲಸವನ್ನು ಮಾಡುತ್ತವೆ. ಈಶ್ವರನ ಚಿಹ್ನೆಯು—ಇದು ಆಂತರವಾದುದೇ ವಿನಾ ಬಾಹ್ಯವಾದುದ್ದಲ್ಲ, ಸ್ಥೂಲದೇಹಕ್ಕೆ ಸಂಬಂಧಪಟ್ಟದ್ದಲ್ಲ—ನೋಡಬಲ್ಲವರ ಮತ್ತು ನೋಡಲು ಆಸಕ್ತಿಯುಳ್ಳ ಎಲ್ಲರ ದೃಷ್ಟಿಗೂ ಎದ್ದು ಕಾಣುತ್ತದೆ.

ಆದರೆ ಆಸುರೀ ಪ್ರಕೃತಿಯವರು ಇಂತಹ ವಿಷಯದಲ್ಲಿ ಯಾವಾಗಲೂ ಕುರುಡರು; ಅವರ ದೃಷ್ಟಿಗೆ ದೇಹವು ಕಾಣುತ್ತದೆಯೇ ಹೊರತು ಆತ್ಮವಲ್ಲ; ಬಾಹ್ಯವಸ್ತುವು ಕಾಣುತ್ತದೆಯ ಹೊರತು ಒಳಗಿರುವುದಲ್ಲ. ಹೊರಗಿರುವ ಆವರಣವು ಗೋಚರವಾಗುತ್ತದೆಯೇ ಹೊರತು ಆವರಣದ ಒಳಗಿರುವ ಜೀವಿಯಲ್ಲ. ಸಾಮಾನ್ಯ ಮನುಷ್ಯನಲ್ಲಾದರೊ ಎಲ್ಲೆಲ್ಲಿಯೂ ಇರುವ ಈಶ್ವರನು ಮನುಷ್ಯ ಕೋಟಿಯಲ್ಲಿ ಆವಿರ್ಭವಿಸುವ ಕಾರ್ಯದಲ್ಲಿ ಪ್ರಕೃತಿಯು ವಹಿಸಿರುವ ಭಾಗವು ಮಾತ್ರ ಮುಖ್ಯವಾಗಿ ಕಾಣುತ್ತದೆ. ಈಶ್ವರನು ಅವತಾರ ಮಾಡುವಾಗ ಈ ವ್ಯಾಪಾರದಲ್ಲಿ ಈಶ್ವರನು ವಹಿಸುವ ಭಾಗವೇ ಮುಖ್ಯವಾಗಿ ಕಾಣುತ್ತದೆ. ಸಾಮಾನ್ಯ ಮನುಷ್ಯಜನ್ಮದಲ್ಲಿ ಮನುಷ್ಯನ ಪ್ರಕೃತಿಯು ಜೀವಾತ್ಮನನ್ನು ಅಧೀನದಲ್ಲಿಟ್ಟು ಕೊಂಡು ತನ್ನ ಇಷ್ಟಪ್ರಕಾರ ಕೆಲಸಮಾಡಿಸುತ್ತದೆ. ಅವತಾರದಲ್ಲಾದರೊ ಪರಮಾತ್ಮನು ತನ್ನ ಅಂಶಸ್ವರೂಪವಾದ ಜೀವಾತ್ಮನನ್ನೂ ಪ್ರಕೃತಿಯನ್ನೂ ಅಧೀನ ದಲ್ಲಿ ಇಟ್ಟುಕೊಂಡು ತನ್ನ ಇಷ್ಟಪ್ರಕಾರ ಅದು ವರ್ತಿಸುವಂತೆ ಮಾಡುತ್ತಾನೆ. ಗೀತೆಯಪ್ರಕಾರ, ಭಗವಂತನು ಅವತಾರಮಾಡುವಾಗ ಸಾಮಾನ್ಯ ಮನುಷ್ಯನಂತೆ ಅವನ ಚೈತನ್ಯವು ವಿಕಾಸಹೊಂದಿ ಕ್ರಮಕ್ರಮವಾಗಿ ಮೇಲಕ್ಕೇರುವುದಿಲ್ಲ; ನಿಧಾನ ವಾಗಿ ಬೆಳೆದು ಅಭಿವೃದ್ಧಿಯಾಗುವುದಿಲ್ಲ; ಈಶ್ವರ ಚೈತನ್ಯವು ನೇರವಾಗಿ ಮೇಲಿ ನಿಂದ ಮನುಷ್ಯಲೋಕಕ್ಕೆ ಇಳಿದು ಮನುಷ್ಯರೂಪವನ್ನು ಧರಿಸುತ್ತದೆ.

ಸಾಮಾನ್ಯ ಮನುಷ್ಯರಲ್ಲಿ ಚೈತನ್ಯವು ವಿಕಾಸಹೊಂದಿ ಈಶ್ವರತ್ವದ ಮಟ್ಟಕ್ಕೆ ಏರಲು ಸಹಾಯ ಮಾಡುವುದಕ್ಕಾಗಿಯೇ ಈಶ್ವರನು ಮೇಲಿನಿಂದ ಕೆಳಕ್ಕೆ ಬಂದು ಅವತಾರಮಾಡುತ್ತಾನೆ; ಇದನ್ನು ಗೀತೆಯು ಬಹಳ ಸ್ಪಷ್ಟವಾಗಿ ಹೇಳಿದೆ. ಮನುಷ್ಯರಲ್ಲಿ ಗೂಢವಾಗಿರುವ ಈಶ್ವರಚೈತನ್ಯವನ್ನು ಪೂರ್ಣವಾಗಿ ಪ್ರಕಾಶ ಗೊಳಿಸಿದರೆ ಹೇಗಿರುವುದೆಂಬ ಆದರ್ಶವನ್ನು ಎತ್ತಿ ತೋರಿಸುವುದರಿಂದ, ಈಶ್ವರನ ಸ್ವರೂಪವನ್ನು ಮನುಷ್ಯನು ಅರಿತು, ತಾನೂ ಆರೀತಿ ಬೆಳೆಯಬಹುದೆಂಬ ಭರವಸೆ ಯನ್ನು ಪಡೆಯುವುದಕ್ಕಾಗಿ ಅವತಾರವು ಸಂಭವಿಸುತ್ತದೆಂದು ಹೇಳಬಹುದು. ಭಗವಂತನು ಸ್ಥೂಲಲೋಕದ ಪ್ರಕೃತಿಯಲ್ಲಿ ವ್ಯಕ್ತವಾಗುವುದರಿಂದ ಆ ಪ್ರಕೃತಿಯ ಮೇಲೆ ಬಹುಕಾಲ ನಿಲ್ಲುವ ಪ್ರಭಾವವನ್ನು ಬೀರುವುದೂ ಮತ್ತು ಈ ಪ್ರಕೃತಿ ಯಲ್ಲಿರುವ ಜೀವಾತ್ಮನು ಮೇಲಿನ ಮಟ್ಟಕ್ಕೆ ಏರಲು ಮಾಡುವ ಪ್ರಯತ್ನಕ್ಕೆ ಒತ್ತಾಸೆಯನ್ನು ಕೊಡುವುದೂ ಅವತಾರದ ಉದ್ದೇಶ. ಲೋಹದಿಂದ ವಸ್ತುವನ್ನು ತಯಾರಿಸಲು ಸರಿಯಾದ ಆಕಾರವುಳ್ಳ ಪಡಿಯಚ್ಚಿನಲ್ಲಿ ಅದನ್ನು ಎರಕಹುಯ್ಯು

ವಂತೆ ಆಧ್ಯಾತ್ಮಿಕ ಪ್ರಗತಿಯನ್ನು ಸಾಧಿಸಿ ಮನುಷ್ಯರೂಪದಲ್ಲಿ ಈಶ್ವರತ್ವವನ್ನು ಪಡೆಯಲು ಅವತಾರವು ಸಾಧಕರಿಗೆ ಪಡಿಯಚ್ಚಿನಂತೆ ಇದೆ. ಈಶ್ವರತ್ವವನ್ನು ಪಡೆಯಲು ಮನುಷ್ಯನಿಗೆ ಒಂದು ಧರ್ಮವನ್ನೂ, ಒಂದು ಮಾರ್ಗವನ್ನೂ ತನ್ನ ಪ್ರಗತಿಯನ್ನು ತಾನೇ ರೂಪಿಸಿಕೊಳ್ಳುವ ಒಂದು ರೀತಿಯನ್ನೂ ಅವತಾರವು ಒದಗಿಸಿ ಕೊಡುತ್ತದೆ. ಧರ್ಮವೆಂದರೆ ಹೊರಗಿನಿಂದ ವಿಧಿಸಲ್ಪಟ್ಟ ಬಾಹ್ಯವಾದ ಆಚರಣೆ ಮಾತ್ರವಲ್ಲ; ಬಾಹ್ಯವಾದ ಮತ್ತು ಅಂತರವಾದ ಜೀವನದ ಒಂದು ರೀತಿ.

ಜೀವಿಗಳು ಬೆಳವಣಿಗೆ ಹೊಂದಿ ಮೇಲ್ಮಟ್ಟಕ್ಕೆ ಏರುವುದು ಕೇವಲ ವೈಯಕ್ತಿಕವಾದ ವ್ಯಾಪಾರವಲ್ಲ; ಸೃಷ್ಟಿಯಲ್ಲಿ ಇತರ ದೈವಿಕಕ್ರಿಯೆಗಳಂತೆ ಈ ದೈವಿಕ ಕ್ರಿಯೆಯೂ ಸಾಮೂಹಿಕವಾಗಿ ನಡೆಯುತ್ತದೆ. ಆದುದರಿಂದ ಒಟ್ಟು ಮಾನವ ವರ್ಗದ ಉದ್ಧಾರಕ್ಕಾಗಿಯೂ, ಅದರ ಮುನ್ನಡೆಗೆ ಸಹಾಯಮಾಡುವುದಕ್ಕಾಗಿಯೂ, ಅತ್ಯಂತ ವಿಷಮ ಸನ್ನಿವೇಶಗಳಲ್ಲಿ ಎಲ್ಲರನ್ನೂ ಒಟ್ಟಾಗಿ ಸೇರಿಸಿ ಈ ಅಪಾಯವನ್ನು ಪರಿಹರಿಸುವುದಕ್ಕಾಗಿಯೂ, ಜೀವಿಗಳ ಅಧಃಪತನಕ್ಕೆ ಕಾರಣವಾದ ಶಕ್ತಿಗಳು ಅತ್ಯಂತ ಪ್ರಬಲವಾದಾಗ ಅವುಗಳನ್ನು ಮುರಿಯುವುದಕ್ಕಾಗಿಯೂ, ಈಶ್ವರನನ್ನು ಹೊಂದಬೇಕೆಂಬ ಮನುಷ್ಯನ ಸ್ವಭಾವಧರ್ಮವನ್ನು ಬಲಪಡಿಸುವುದಕ್ಕಾಗಿಯೂ, ಎಷ್ಟು ದೀರ್ಘಕಾಲವಾದರೂ ಮುಂದೆ ಬಂದೇ ಬರುವ ಸತ್ಯಯುಗಕ್ಕೆ ತಳಹದಿಯನ್ನು ಹಾಕುವುದಕ್ಕಾಗಿಯೂ, ಸಾಧುಗಳ ಮತ್ತು ಮುಮುಕ್ಷುಗಳ ಮೇಲ್ಮೆ ಮತ್ತು ಜಯಕ್ಕಾಗಿಯೂ ಮತ್ತು ಅಧರ್ಮ ಮತ್ತು ಅಜ್ಞಾನಗಳನ್ನು ಸ್ಥಾಪಿಸಲು ಯತ್ನಿಸುತ್ತಿರುವವರನ್ನು ಧ್ವಂಸಮಾಡುವುದಕ್ಕಾಗಿಯೂ ಭಗವಂತನು ಅವತಾರ ಮಾಡುತ್ತಾನೆ. ಇವೆಲ್ಲವೂ ಅವತಾರದ ಉದ್ದೇಶಗಳೆಂಬುದು ಸರ್ವವಿದಿತವಾಗಿದೆ. ಇವುಗಳನ್ನು ಸಾಧಿಸಲು ಅವತಾರಪುರುಷನು ಮಾಡುವ ಕೆಲಸಗಳಿಂದಲೆ ಅವನನ್ನು ಲೋಕವು ಗುರ್ತಿಸುತ್ತದೆ; ಅದಕ್ಕಾಗಿಯೆ ಅವನನ್ನು ಪೂಜಿಸುತ್ತದೆ. ಬ್ರಹ್ಮಜ್ಞಾನಿಗಳಿಗಾದರೆ ಅವತಾರದ ಅಂತರವಾದ ತತ್ವವು ಗೋಚರವಾಗುತ್ತದೆ. ಬಾಹ್ಯವಾಗಿ ಭಗವಂತನು ಅವತಾರಮಾಡುವುದು ಸಾಂಕೇತಿಕವಾಗಿದೆ; ಒಬ್ಬ ವ್ಯಕ್ತಿಯ ಅಂತರಂಗಜೀವನದಲ್ಲಿ ಅವನ ಹೃದಯದಲ್ಲಿರುವ ಶಾಶ್ವತನಾದ ಪರಮಾತ್ಮನು ಹೆಚ್ಚು ಹೆಚ್ಚಾಗಿ ಅವನ ದೇಹ ಮತ್ತು ಮನಸ್ಸುಗಳಲ್ಲಿ ವ್ಯಕ್ತವಾಗಿ ಅವನನ್ನು ವಶಮಾಡಿಕೊಂಡು, ಅವನು ತನ್ನಲ್ಲಿ ಐಕ್ಯವಾಗಲು ಸಹಾಯಮಾಡುವುದನ್ನು ಬಾಹ್ಯವಾದ ಅವತಾರವು ಸೂಚಿಸುತ್ತದೆ. ಹೊರಗಿನ ಪ್ರಪಂಚದಲ್ಲಿ ಕ್ರಿಸ್ತ, ಕೃಷ್ಣ ಅಥವಾ ಬುದ್ಧ ಇವರ ಅವತಾರದಿಂದ ಸೂಚಿತವಾಗುವ ತತ್ವವೇನೆಂದರೆ ನಮ್ಮ ಹೃದಯಪ್ರಪಂಚ

ದಲ್ಲಿಯೂ ಶಾಶ್ವತವಾದ ಪರಮಾತ್ಮನು ವ್ಯಕ್ತವಾಗುವನೆಂಬ ಅಂಶ. ಹೊರಗಿನ ಪ್ರಪಂಚದಲ್ಲಿ ಮಾನವಕೋಟಿಯಲ್ಲಿ ಯಾವ ಅವತಾರವು ಆಗುತ್ತದೆಯೋ ಅದೇ ಅವತಾರವು ಪ್ರತಿ ವ್ಯಕ್ತಿಯ ಅಂತರಜೀವನದಲ್ಲಿಯೂ ಆಗುವುದು ಸಾಧ್ಯ.

ಇಲ್ಲಿಯವರೆಗೆ ಅವತಾರದ ಉದ್ದೇಶಗಳನ್ನು ವಿವರಿಸಿದುದಾಯಿತು; ಈಗ ಅವತಾರವು ಯಾವ ರೀತಿಯಲ್ಲಾಗುತ್ತದೆಂಬುದನ್ನು ವಿಚಾರಮಾಡೋಣ. ಮೊಟ್ಟ ಮೊದಲು, ಎಲ್ಲವನ್ನೂ ಕೇವಲ ವೈಜ್ಞಾನಿಕಮನಸ್ಸಿನ ಸಂಕುಚಿತದೃಷ್ಟಿಯಿಂದಲೆ ನೋಡುವ ಕೆಲವರ ಅಭಿಪ್ರಾಯದಲ್ಲಿ ಮನುಷ್ಯಸಾಮಾನ್ಯರಲ್ಲಿರುವ ಸದ್ಗುಣಗಳು, ಬುದ್ಧಿಶಕ್ತಿ, ಸಾಮರ್ಥ್ಯ ಮತ್ತು ಎಲ್ಲರನ್ನೂ ಆಕರ್ಷಿಸುವ ಶಕ್ತಿ ಇವುಗಳು ಅತ್ಯಂತ ಅತಿಶಯವಾದ ಪ್ರಮಾಣದಲ್ಲಿ ಒಬ್ಬನಲ್ಲಿ ವ್ಯಕ್ತವಾಗುವುದೆ ಅವತಾರ. ಈ ಅಭಿಪ್ರಾಯವು ಸ್ವಲ್ಪಮಟ್ಟಿಗೆ ನಿಜವೇಯೆ. ಅವತಾರಪುರುಷನು ವಿಭೂತಿಪುರುಷನೂ ಹೌದು. ಶ್ರೀಕೃಷ್ಣನು ಮನುಷ್ಯದೇಹವನ್ನು ಧರಿಸಿದ ಭಗವಂತ; ಅಲ್ಲದೆ ಬಾಹ್ಯ ದೃಷ್ಟಿಯಿಂದ ಅವನು ಧರಿಸಿದ್ದ ಶರೀರದಲ್ಲಿ ಅವನು ಆ ಯುಗದ ನಾಯಕನೂ, ವೃಷ್ಣಿಗಳಲ್ಲಿ ಅತ್ಯಂತ ಶ್ರೇಷ್ಠನೂ ಆಗಿದ್ದನು. ಈ ಭಾವನೆಯು ಪ್ರಕೃತಿಯ ದೃಷ್ಟಿಯಿಂದಲೆ ಹೊರತು ಆತ್ಮದೃಷ್ಟಿಯಿಂದಲ್ಲ. ತನ್ನ ಅನಂತಗುಣಗಳ ಮೂಲಕ ಈಶ್ವರನು ವ್ಯಕ್ತನಾಗುತ್ತಾನೆ; ಪ್ರಕಟವಾಗಿರುವ ಗುಣಗಳ ಪ್ರಭಾವ ಮತ್ತು ಅವುಗಳಿಂದ ಸಾಧಿಸಲ್ಪಡುವ ಕೆಲಸಗಳಿಂದ ಈಶ್ವರಚೈತನ್ಯವು ಎಷ್ಟುಮಟ್ಟಿಗೆ ವ್ಯಕ್ತವಾಗಿದೆಯೆಂದು ನಾವು ತಿಳಿಯಬಹುದು. ಹೀಗೆ ವೈಯಕ್ತಿಕ ದೃಷ್ಟಿಯಿಂದ ನೋಡದಿದ್ದರೆ, ಮನುಷ್ಯವರ್ಗದಲ್ಲಿ ವ್ಯಕ್ತವಾಗಿರುವ ಈಶ್ವರನ ಗುಣಗಳ ಮಟ್ಟವೆ ಅವನ ವಿಭೂತಿ; ಎಂದರೆ ಜ್ಞಾನ, ಶಕ್ತಿ, ಪ್ರೇಮ ಮುಂತಾದುವುಗಳಲ್ಲಿ ಈ ಗುಣಗಳು ವ್ಯಕ್ತವಾಗುವುದೇ ಈಶ್ವರನ ವಿಭೂತಿ. ವೈಯಕ್ತಿಕವಾಗಿ ಹೇಳುವುದಾದರೆ ಯಾವ ವ್ಯಕ್ತಿಯ ದೇಹಗಳಲ್ಲಿ, ಮನಸ್ಸಿನಲ್ಲಿ ಈ ಗುಣಗಳು ವ್ಯಕ್ತವಾಗಿ ಅವನಿಂದ ಮಹತ್ಕಾರ್ಯಗಳು ಸಾಧಿಸಲ್ಪಡುತ್ತವೆಯೊ ಅವನೆ ವಿಭೂತಿಪುರುಷ. ಬಾಹ್ಯಸ್ಥಿತಿಯಲ್ಲಿ ಮತ್ತು ಮಾನಸಿಕವಾಗಿ ಅತ್ಯುನ್ನತ ಮಟ್ಟವನ್ನು ಮುಟ್ಟಿರುವುದು, ದೈವೀ ಗುಣಗಳು ವಿಶೇಷವಾಗಿ ವ್ಯಕ್ತವಾಗಿರುವುದು ಮತ್ತು ಅತಿಶಯವಾದ ಶಕ್ತಿಯಿಂದ ಕೆಲಸಗಳನ್ನು ಮಾಡುವ ಸಾಮರ್ಥ್ಯ, ಇವು ಯಾವಾಗಲೂ ವಿಭೂತಿಪುರುಷನ ಲಕ್ಷಣಗಳು. ಈಶ್ವರತ್ವವನ್ನು ಮುಟ್ಟಲು ಮಾನವಕೋಟಿಯ ಸಾಹಸಕೃತ್ಯದಲ್ಲಿ ಮುಂದಾಳಾದ ವೀರನೆ, ಅಂದರೆ ಈಶ್ವರಶಕ್ತಿಯು ವ್ಯಕ್ತವಾಗಿರುವ ಮನುಷ್ಯನೆ ವಿಭೂತಿಪುರುಷನು. “ವೃಷ್ಣಿವಂಶದವರಲ್ಲಿ ನಾನು ವಾಸುದೇವ; ಪಾಂಡವರಲ್ಲಿ

ಅರ್ಜುನ; ಮುನಿಗಳಲ್ಲಿ ನಾನು ವ್ಯಾಸ; ಪಂಡಿತರಲ್ಲಿ ಅಸುರಗುರುವಾದ ಶುಕ್ರಾಚಾರ್ಯ" (೧೦-೩೭) ಎಂದು ಭಗವಂತನೆ ಗೀತೆಯಲ್ಲಿ ಹೇಳಿದ್ದಾನೆ. ವಿಭೂತಿ ಪುರುಷನು ಪ್ರತಿಯೊಂದರಲ್ಲಿಯೂ ಮೊದಲನೆಯವನು; ಎಲ್ಲ ವಿಧವಾದ ಗುಂಪುಗಳಲ್ಲಿಯೂ ಶ್ರೇಷ್ಠತಮನು; ಆತ್ಮಶಕ್ತಿಯು ವ್ಯಕ್ತವಾಗುವ ಗುಣಗಳಲ್ಲಿ ಮತ್ತು ಕರ್ಮಗಳಲ್ಲಿ ಪ್ರತಿಯೊಂದರಲ್ಲಿಯೂ ಆಯಾ ಭಾಗದ ಪರಾಕಾಷ್ಠತೆಯನ್ನು ಮುಟ್ಟಿರುತ್ತಾನೆ. ವ್ಯಕ್ತಿಯಲ್ಲಿನ ಶಕ್ತಿಗಳ ಮಟ್ಟವು ಅವನಲ್ಲಿರುವ ಪರಮಾತ್ಮನು ಹೆಚ್ಚು ಹೆಚ್ಚಾಗಿ ವ್ಯಕ್ತನಾಗುತ್ತಿರುವುದಕ್ಕೆ ಚಿಹ್ನೆಯಾಗಿದೆ. ಮನುಷ್ಯಸಾಮಾನ್ಯದ ಮಟ್ಟಕ್ಕಿಂತ ಮೇಲಿನ ಮಟ್ಟಕ್ಕೇರಿರುವ ಪ್ರತಿಯೊಬ್ಬ ಮಹಾಪುರುಷನೂ ತಾನು ಹಾಗೆ ಏರುವುದರಿಂದ ಮನುಷ್ಯವರ್ಗದ ಮಟ್ಟವನ್ನೆ ಸ್ವಲ್ಪಮಟ್ಟಿಗೆ ಮೇಲಕ್ಕೆತ್ತುತ್ತಾನೆ. ಎಲ್ಲರೂ ಈಶ್ವರತ್ವದ ಮಟ್ಟವನ್ನು ಮುಟ್ಟಬಹುದೆಂಬುದಕ್ಕೆ ಇಂತಹ ವಿಭೂತಿ ಪುರುಷರು ಜೀವಂತವಾದ ಸಾಕ್ಷಿಗಳು, ನಾವು ಈಶ್ವರತ್ವವನ್ನು ಹೊಂದುವೆವೆಂಬುದಕ್ಕೆ ಆಶ್ವಾಸನದಂತಿರುತ್ತಾರೆ; ಭಗವಂತನ ದಿವ್ಯಜ್ಯೋತಿಯ ಒಂದು ಕಿರಣ ಮತ್ತು ಅವನ ದಿವ್ಯಶಕ್ತಿಯ ಒಂದು ಅಂಶದಂತಿದ್ದಾರೆ.

ಮೇಧಾವಿಗಳನ್ನೂ ವೀರಪುರುಷರನ್ನೂ ದೇವರಂತೆ ಆರಾಧಿಸುವ ಸ್ವಭಾವವು ಮನುಷ್ಯರಿಗಿರುವುದು ಈ ಕಾರಣದಿಂದಲೆ. ಈ ಮನೋಧರ್ಮವು ಸ್ಪಷ್ಟವಾಗಿ ಭರತಖಂಡದ ಜನರಲ್ಲಿ ಕಾಣುತ್ತದೆ; ಹಿರಿಯ ಸಾಧು ಸಂತರನ್ನೂ, ಆಚಾರ್ಯರನ್ನೂ ಮತ್ತು ಮತಸ್ಥಾಪಕರನ್ನೂ ಅವರು ಈಶ್ವರನ ಅಂಶಾವತಾರಗಳೆಂದು ಎಣಿಸುತ್ತಾರೆ. ಈ ಸಂದರ್ಭದಲ್ಲಿ ದಕ್ಷಿಣದೇಶದ ಶ್ರೀವೈಷ್ಣವರ ನಂಬಿಕೆಯನ್ನು ನಾವು ಉದಾಹರಿಸಬಹುದು; ಅವರ ಆಳ್ವಾರುಗಳಲ್ಲಿ ಕೆಲವರು ವಿಷ್ಣುವಿನ ಜೀವಂತವಾದ ಆಯುಧವಿಶೇಷಗಳ ಅವತಾರಗಳೆಂದು ಅವರು ನಂಬುತ್ತಾರೆ. ಹೀಗೆಯೆ ಎಲ್ಲ ಮಹಾಪುರುಷರೂ ಈಶ್ವರನ ಶಕ್ತಿಸ್ವರೂಪರು; ಮಾನವ ವರ್ಗದ ಆಧ್ಯಾತ್ಮಿಕ ಪ್ರಗತಿಯ ಹೋರಾಟದಲ್ಲಿ ಇವರನ್ನು ಈಶ್ವರನು ತನ್ನ ಆಯುಧಗಳಂತೆ ಉಪಯೋಗಿಸುತ್ತಾನೆ. ಮನುಷ್ಯ ಮತ್ತು ಅವನ ಸ್ವಭಾವ ಇವು ಈಶ್ವರ ಮತ್ತು ಈಶ್ವರನ ಸ್ವಭಾವದಿಂದ ಬೇರೆಯಲ್ಲವೆಂದೂ, ನಮ್ಮ ಸ್ವಭಾವವನ್ನು ಈಶ್ವರ ಸ್ವಭಾವವನ್ನಾಗಿ ಪರಿವರ್ತಿಸಲು ಸಾಧ್ಯವೆಂದೂ ಒಪ್ಪುವ ಎಲ್ಲ ಮತಗಳೂ, ಆಧ್ಯಾತ್ಮಿಕ ಪಂಥಗಳೂ ಮೇಲೆ ಹೇಳಿದ ಅಭಿಪ್ರಾಯವನ್ನು ಒಪ್ಪಲೇಬೇಕಾಗುತ್ತದೆ; ಈ ಅಭಿಪ್ರಾಯವು ಅವುಗಳಲ್ಲೆಲ್ಲ ಅಂತರ್ಗತವಾಗಿದೆ. ಇದೆಲ್ಲ ನಿಜವಾದರೂ ವಿಭೂತಿ ಪುರುಷನು ಅವತಾರಪುರುಷನಲ್ಲ. ಹಾಗಾಗಿದ್ದರೆ, ಅರ್ಜುನ, ವ್ಯಾಸ, ಶುಕ್ರ

ಮುಂತಾದವರೂ ಸಹ ಕೃಷ್ಣನಂತೆಯೆ ಅಥವಾ ಸ್ವಲ್ಪ ಕಡಿಮೆ ಮಟ್ಟದಲ್ಲಿ ಅವತಾರ ಪುರುಷರೆಂದೆಣಿಸಲ್ಪಡಬೇಕಾಗಿತ್ತು. ಅವತಾರಪುರುಷನೆಂದು ಎಣಿಸಲು ದೈವೀ ಗುಣಗಳು ಇದ್ದರೆ ಮಾತ್ರ ಸಾಲದು; ಈಶ್ವರನು ಒಳಗಿದ್ದುಕೊಂಡು ಮನುಷ್ಯ ಪ್ರಕೃತಿಯನ್ನು ನಿಯಂತ್ರಿಸುತ್ತಿದ್ದಾನೆಂಬ ಸ್ಪಷ್ಟವಾದ ಅರಿವಿರಬೇಕು. ದೈವೀ ಗುಣಗಳು ಹೆಚ್ಚುಹೆಚ್ಚಾಗಿ ವ್ಯಕ್ತವಾಗುವುದು ಈ ಸೃಷ್ಟಿಯಲ್ಲಿ ಭೂತಗ್ರಾಮವು ಮೇಲಿನ ಮಟ್ಟಕ್ಕೆ ಕ್ರಮಕ್ರಮವಾಗಿ ಏರುವ ವಿಧಾನ. ಅವತಾರದಲ್ಲಿರುವ ವೈಶಿಷ್ಟ್ಯ ವೇನೆಂದರೆ, ಮೇಲ್ಮಟ್ಟದಿಂದ ಭಗವಂತನೆ ಇಳಿದುಬಂದು ವ್ಯಕ್ತನಾಗುತ್ತಾನೆ. ಶಾಶ್ವತನೂ ಸರ್ವವ್ಯಾಪಿಯೂ ಆದ ಪರಮಾತ್ಮನು ಮನುಷ್ಯದೇಹವನ್ನು ಧರಿಸು ತ್ತಾನೆ; ಆಂತರವಾಗಿ ಮಾತ್ರವಲ್ಲದೆ ಬಾಹ್ಯವಾಗಿ, ಪ್ರಕೃತಿಯಲ್ಲಿದ್ದುಕೊಂಡೂ ತನ್ನ ಸ್ವರೂಪದ ಜ್ಞಾನವನ್ನು ಹೊಂದಿರುತ್ತಾನೆ.

ಅವತಾರದ ವಿಚಾರವಾಗಿ ಮೇಲೆ ಹೇಳಿದ ಎರಡು ಅಭಿಪ್ರಾಯಗಳಲ್ಲದೆ ಇವೆರಡಕ್ಕೂ ಮಧ್ಯವರ್ತಿಯಾದ ಮೂರನೆಯ ಅಭಿಪ್ರಾಯವೊಂದಿದೆ. ಇದರ ಪ್ರಕಾರ ಜೀವನು ತಾನಾಗಿಯೇ ತನ್ನಲ್ಲಿ ಈಶ್ವರ ಚೈತನ್ಯವನ್ನು ಮೇಲಿನಿಂದ ಬರಮಾಡಿಕೊಳ್ಳುತ್ತಾನೆ; ತಾನು ಈ ಶಕ್ತಿಯನ್ನು ಪ್ರತಿಬಿಂಬಿಸುತ್ತಾನೆ. ಅಥವಾ ಈ ಶಕ್ತಿಗೆ ತಾನು ಸರಿಯಾದ ಕಾಲುವೆಯಾಗುತ್ತಾನೆ. ಈ ಅಭಿಪ್ರಾಯಕ್ಕೆ ಕೆಲವು ಆಧ್ಯಾತ್ಮಿಕ ಅನುಭವಗಳು ಆಧಾರವಾಗಿವೆ. ಮನುಷ್ಯನಲ್ಲಿ ಗೂಢವಾಗಿರುವ ಆತ್ಮನು ಹೆಚ್ಚಾಗಿ ವ್ಯಕ್ತವಾಗುವುದೆಂದರೆ ಜೀವಾತ್ಮನ ಪ್ರಜ್ಞೆಯು ಈಶ್ವರನ ಪ್ರಜ್ಞೆಯ ಮಟ್ಟಕ್ಕೆ ಬೆಳೆಯುವುದೆಂದರ್ಥ. ಜೀವಾತ್ಮನು ಈಶ್ವರನಲ್ಲಿ ಒಂದಾಗುವುದು ಈ ಆವಿರ್ಭಾವದ ಪರಮಾವಧಿ. ಜೀವಾತ್ಮನು ತನ್ನ ಪ್ರತ್ಯೇಕತೆಯನ್ನು ಅನಂತವಾದ ಸರ್ವವ್ಯಾಪಿಯಾದ ಈಶ್ವರನಲ್ಲಿ ಕಳೆದುಕೊಳ್ಳುತ್ತಾನೆ; ಎಲ್ಲಕ್ಕೂ ಅತೀತವಾಗಿರುವ ಆ ವಸ್ತುವಿನಲ್ಲಿ ಒಂದಾಗಿ ತನ್ನ ಪ್ರತ್ಯೇಕತೆಯನ್ನು ಕಳೆದುಕೊಳ್ಳುತ್ತಾನೆ. ಏಕನಾದ ಈಶ್ವರ, ಆತ್ಮ ಅಥವಾ ಬ್ರಹ್ಮನೊಡನೆ ಒಂದಾಗುತ್ತಾನೆ. ಇನ್ನೂ ಸರಿಯಾಗಿ ಹೇಳುವುದಾದರೆ, ಏಕನಾದ ಈಶ್ವರ, ಆತ್ಮ ಅಥವಾ ಬ್ರಹ್ಮನಾಗುತ್ತಾನೆ. ಗೀತೆಯು ಸಹ ಜೀವಾತ್ಮನು ಬ್ರಹ್ಮನಾಗುತ್ತಾನೆಂದೂ, ಶ್ರೀಕೃಷ್ಣನಲ್ಲಿಯೆ ವಾಸಮಾಡುತ್ತಾ ನೆಂದೂ ಹೇಳಿದೆ; ಜೀವನೆ ಈಶ್ವರಸ್ವರೂಪನೆಂದೂ, ಈಶ್ವರಾಂಶನೆಂದೂ ಹೇಳುತ್ತದೆ. ಆದರೆ ಇದು ಗಮನಾರ್ಹವಾದ ವಿಷಯ. ಜೀವನು ಪುರುಷೋತ್ತಮನಾಗುತ್ತಾ ನೆಂದು ಎಲ್ಲೂ ಹೇಳಿಲ್ಲ. ಜೀವನು ಬ್ರಹ್ಮನಲ್ಲಿ ಒಂದಾದಾಗಲೂ, ಅದು ಮೇಲಕ್ಕೆ ಏರುವ ಬೆಳವಣಿಗೆಯ ಕಾರ್ಯದ ಒಂದು ಅಂಶವೇಯೆ, ಇದು ಈಶ್ವರನು ಕೆಳ

ಕ್ಕಿಳಿದುಬರುವ ಅವತಾರವಾಗುವುದಿಲ್ಲ. ಬೌದ್ಧಸಿದ್ಧಾಂತದ ಪ್ರಕಾರ ಜೀವನು ಈಶ್ವರನನ್ನು ಸೇರುವುದೆಂದರೆ ಬುದ್ಧಪದವಿಯನ್ನು ಮುಟ್ಟಿದಂತೆ; ಪ್ರತ್ಯೇಕನಾದ ಜೀವನು ಆ ಮಟ್ಟದಿಂದ ಬೆಳೆದು ಅನಂತವಾದ ಈಶ್ವರ ಚೈತನ್ಯದ ಮಟ್ಟಕ್ಕೆ ಬೆಳೆಯುತ್ತಾನೆ; ಆದರೆ ಇದು ಅವತಾರವಾಗುವುದಿಲ್ಲ. ಇಂತಹವನಿಗೆ ಅವತಾರ ಪುರುಷನಿಗಿರುವಂತೆ ಸ್ವಸ್ವರೂಪಜ್ಞಾನ ವಿರಬೇಕಾಗಿಲ್ಲ; ಇವನು ಅವತಾರಪುರುಷನ ಕೆಲಸಗಳನ್ನು ಮಾಡಬೇಕಾಗಿಲ್ಲ. ಅಥವಾ ಜೀವನು ಈಶ್ವರಪ್ರಜ್ಞೆಯನ್ನು ಸೇರಿ ದೊಡನೆಯೆ, ಇದಕ್ಕೆ ಪ್ರತಿಕ್ರಿಯೆಯ ರೂಪದಲ್ಲಿ, ಈಶ್ವರನು ಜೀವನು ವ್ಯವಹರಿಸುವ ದೇಹಗಳ ಮೂಲಕ ತಾನೂ ವ್ಯಕ್ತನಾಗಬಹುದು; ಅವನ ಪ್ರಕೃತಿಯಲ್ಲೆಲ್ಲ ಆವರಿಸಿ, ಅವನ ದೇಹಗಳು, ಮನಸ್ಸು ಮತ್ತು ವ್ಯಾಪಾರಗಳ ಮೂಲಕ ವ್ಯಕ್ತವಾಗಬಹುದು. ಹೀಗಾದರೆ ಒಂದುಬಗೆಯ ಪೂರ್ಣವಲ್ಲದ ಅವತಾರವಾಗುವುದು. ಈಶ್ವರನು ಎಲ್ಲ ಜೀವಿಗಳ ಹೃದಯ ಪ್ರದೇಶದಲ್ಲಿದ್ದಾನೆಂದು ಗೀತೆಯಲ್ಲಿ ಹೇಳಿದೆ. ಇಲ್ಲಿ ಹೃದಯ ವೆಂದರೆ ಸೂಕ್ಷ್ಮದೇಹಕ್ಕೆ ಸಂಬಂಧಪಟ್ಟದ್ದು; ರಾಗದ್ವೇಷಗಳು, ಭಾವನೆಗಳು, ಮನಸ್ಸು ಇವುಗಳಿಗಿಂತಲೂ ಅತೀತವಾದ ಶರೀರದಲ್ಲಿ, ಕೇಂದ್ರಸ್ಥಾನದಲ್ಲಿ, ಜೀವಾತ್ಮನಿರುವ ಕಡೆಯಲ್ಲಿಯೆ ಈಶ್ವರನೂ ಇದ್ದಾನೆ, ಆದರೆ ತನ್ನ ಮಾಯೆಯೆಂಬ ತೆರೆಯಿಂದ ಆವೃತನಾಗಿದ್ದಾನೆ. ಇನ್ನೂ ಮೇಲ್ಮಟ್ಟದಲ್ಲಿ, ಎಂದರೆ ಇದಕ್ಕಿಂತಲೂ ಸೂಕ್ಷ್ಮವಾದ, ಈಗ ನಮಗೆ ಎಟಕದಿರುವ ಪ್ರಕೃತಿಯಲ್ಲಿ (ಇದನ್ನೇ ಕೆಲವರು ದೇವಲೋಕವೆಂದು ಕರೆದಿದ್ದಾರೆ)ಜೀವನೂ ಈಶ್ವರನೂ ಒಟ್ಟಿಗೆ ಇದ್ದಾರೆ, ವಸ್ತುತಃ ಒಬ್ಬರಾಗಿಯೇ ಇದ್ದಾರೆ. ಇದನ್ನೇ ಕ್ರೈಸ್ತಮತದಲ್ಲಿ (Father and Son) ತಂದೆ ಮತ್ತು ಮಗ ಎಂದು ಸೂಚಿಸುತ್ತಾರೆ; ಇವರಿಬ್ಬರೆ ಈಶ್ವರ ಮತ್ತು ಈಶ್ವರನಿಂದ ಅಥವಾ ಪರಾಪ್ರಕೃತಿಯಿಂದ ಕೆಳಮಟ್ಟದ ಮಾನುಷೀ ಪ್ರಕೃತಿಯಲ್ಲಿ ವ್ಯಕ್ತವಾಗಿರುವ ಈಶ್ವರನ ಅಂಶನಾದ ಮನುಷ್ಯ. ಇದೇ ಕ್ರೈಸ್ತಮತದಲ್ಲಿ ಅವತಾರದ ತತ್ವವಾಗಿರುವಂತೆ ತೋರುತ್ತದೆ. Father, Son ಮತ್ತು Holy Ghost ಎಂದು ಹೇಳುತ್ತಾರೆ.

ಇದರಲ್ಲಿ Father ಅಥವಾ ತಂದೆಯು ನಾವು ಹಿಂದೆ ಹೇಳಿದ ಅತ್ಯಂತ ಸೂಕ್ಷ್ಮವಾದ ಪ್ರಕೃತಿಯಲ್ಲಿ ಅಥವಾ ದೇವಲೋಕದಲ್ಲಿದ್ದಾನೆ. Son ಅಥವಾ ಮಗನು ಆ ಪರಾಪ್ರಕೃತಿಯಿಂದ ಇಳಿದುಬಂದು ಭೂಮಿಯಲ್ಲಿ ಮನುಷ್ಯರೂಪದಲ್ಲಿ ಹುಟ್ಟಿರುವ ದಿವ್ಯವಾದ ಜೀವಾತ್ಮ. Holy Ghost ಅಥವಾ ಪರಾಶಕ್ತಿ ಎನ್ನು ವುದು ಬ್ರಾಹ್ಮೀಸ್ಥಿತಿಯಲ್ಲಿರುವ ಚೈತನ್ಯ. ತಂದೆ, ಮಗ ಇವರಿಬ್ಬರೂ ಇದರಲ್ಲಿ ಒಂದಾಗುತ್ತಾರೆ; ಈ ಪರಾಶಕ್ತಿಯ ಮೂಲಕವೆ ಅವರಿಗೆ ಪರಸ್ಪರ ಸಂಬಂಧವಿರು

ವುದು. ಏಸುವಿನೊಳಗೆ ಈ ಪರಾಶಕ್ತಿಯು ಇಳಿದುಬಂದು ವ್ಯಕ್ತವಾಯಿತೆಂದು ಹೇಳಲ್ಪಟ್ಟಿದೆ. ಹೀಗೆ ಈ Holy Ghost ಅಥವಾ ಪರಾಶಕ್ತಿಯು ಇಳಿದುಬರುವುದರಿಂದಲೆ ಸಂತರೆನ್ನಿಸಿಕೊಳ್ಳುವ (Saint) ಮನುಷ್ಯರ ಪ್ರಕೃತಿಯಲ್ಲಿ ಉತ್ತಮ ಲೋಕಗಳ ಚೈತನ್ಯದ ಶಕ್ತಿಯು ಇಳಿದುಬಂದು ವ್ಯಕ್ತವಾಗುತ್ತದೆ.

ಅವತಾರದಲ್ಲಿ ಇನ್ನೊಂದು ರೀತಿಯನ್ನೂ ಪರಿಶೀಲಿಸಬೇಕು. ಪುರುಷೋತ್ತಮನ ದಿವ್ಯಚೈತನ್ಯವೆ ಮೇಲಿನಿಂದ ಮನುಷ್ಯನಲ್ಲಿ ಇಳಿದುಬಂದು, ಜೀವನ ಚೈತನ್ಯವು ಅದರಲ್ಲಿ ಐಕ್ಯವಾಗಬಹುದು. ಬಂಗಾಳದೇಶದಲ್ಲಿ ೧೬ ನೆಯ ಶತಮಾನದಲ್ಲಿದ್ದ ಶ್ರೀ ಚೈತನ್ಯನಿಗೆ ಆಗಾಗ ಉಂಟಾಗುತ್ತಿದ್ದ ದಿವ್ಯವಾದ ಆಧ್ಯಾತ್ಮಿಕ ಅನುಭವಗಳಲ್ಲಿ ಈ ವಿಧವಾದ ರೂಪಾಂತರವಾಗುತ್ತಿತ್ತೆಂದು ಅವನ ಜೊತೆಯಲ್ಲಿದ್ದವರು ಹೇಳಿದ್ದಾರೆ. ನಿತ್ಯಜೀವಿತದಲ್ಲಿ ಅವನು ಪರಮಾತ್ಮನ ಭಕ್ತನೂ ಪ್ರೇಮಿಯೂ ಆಗಿದ್ದನು; ತಾನು ಅವತಾರಪುರುಷನೆಂದು ಖಂಡಿತ ಗಣಿಸುತ್ತಿರಲಿಲ್ಲ; ಆದರೆ ಈ ದಿವ್ಯವಾದ ಆಧ್ಯಾತ್ಮಿಕಸ್ಥಿತಿಯಲ್ಲಿದ್ದಾಗ ಅವನೆ ಪರಮಾತ್ಮನಾಗುತ್ತಿದ್ದನು; ಹಾಗೆಯೆ ವರ್ತಿಸುತ್ತಿದ್ದನು, ಮಾತನಾಡುತ್ತಿದ್ದನು. ಆಗ ಪರಮಾತ್ಮನ ಸಾನ್ನಿಧ್ಯದಂತೆಯೆ ಅವನಿಂದ ದಿವ್ಯವಾದ ಪ್ರಭೆ, ಪ್ರೇಮ ಮತ್ತು ಶಕ್ತಿಗಳು ಹೊರಹೊಮ್ಮುತ್ತಿದ್ದುವು. ಕೊಂಚಕಾಲ ಮಾತ್ರ ಹೀಗಿರುವ ಬದಲು, ಸದಾಕಾಲವೂ ಒಬ್ಬ ಮನುಷ್ಯನು ಪುರುಷೋತ್ತಮನ ದಿವ್ಯಚೈತನ್ಯಕ್ಕೆ ಉಪಾಧಿಯಾಗಿದ್ದು ಅದು ಸರ್ವದಾ ಇವನ ಮೂಲಕ ವ್ಯಾಪಾರ ಮಾಡುತ್ತಿದ್ದರೆ, ಹಿಂದೆ ಹೇಳಿದ ಸಿದ್ಧಾಂತದ ಪ್ರಕಾರ ಅವನು ಅವತಾರಪುರುಷನಾಗುತ್ತಾನೆ. ಈ ವಿಧವಾದ ಅವತಾರವು ಸಾಧ್ಯವೆಂಬುದನ್ನು ನಾವು ಸುಲಭವಾಗಿ ಒಪ್ಪಿಕೊಳ್ಳಬಹುದು. ಮನುಷ್ಯನು ತನ್ನ ಪ್ರಜ್ಞೆಯನ್ನು ಮೇಲ್ಮಟ್ಟಕ್ಕೇರಿಸಿ, ಪರಮಾತ್ಮನ ಪ್ರಜ್ಞೆಯಲ್ಲಿ ಸೇರಿಸಿ, ಪರಮಾತ್ಮನ ಪ್ರಜ್ಞೆ, ಚೈತನ್ಯ, ಶಕ್ತಿ ಮತ್ತು ಪ್ರೇಮಗಳಿಗೆ ತಾನು ಕೇವಲ ಉಪಾಧಿಯಾಗಿ, ಇವನ ಅಸ್ತಿತ್ವವೂ ಇಚ್ಛೆಯೂ ಈಶ್ವರನಲ್ಲಿ ಮತ್ತು ಅವನ ಇಚ್ಛೆಯಲ್ಲಿ ಒಂದಾಗುವುದೆಂದು ನಾವು ಒಪ್ಪಿಕೊಂಡರೆ—ಈ ವಿಧವಾದ ಆಧ್ಯಾತ್ಮಿಕಸ್ಥಿತಿಯು ಸಾಧ್ಯವೆಂದು ಬಹಳ ಜನರು ಒಪ್ಪುತ್ತಾರೆ—ಆಗ ಈಶ್ವರನ ಇಚ್ಛೆ, ಶಕ್ತಿ, ಜ್ಞಾನ ಮತ್ತು ಪ್ರೇಮಗಳು ಇದೇರೀತಿಯಲ್ಲಿ ಜೀವನನ್ನು ಯಾವಾಗಲೂ ಮತ್ತು ಸಂಪೂರ್ಣವಾಗಿಯೂ ಆವರಿಸುವ ಸ್ಥಿತಿಯು ಅಸಾಧ್ಯವೆಂದು ಹೇಳಲು ಕಾರಣವಿಲ್ಲ. ಹೀಗಾದರೆ ಮನುಷ್ಯನು ಮೇಲಿನ ಮಟ್ಟಕ್ಕೆ ಏರಿ ಈಶ್ವರಸ್ವಭಾವವನ್ನೂ ಈಶ್ವರತ್ವವನ್ನೂ ಪಡೆಯುವುದರೊಡನೆ ಈಶ್ವರನೂ ಮೇಲಿನಿಂದ ಇಳಿದುಬಂದು ಮನುಷ್ಯರಲ್ಲಿ ಅವತರಿಸಿದಂತಾಗುವುದು. ಇದೂ ಒಂದು ವಿಧವಾದ ಅವತಾರ.

ಆದರೆ ಗೀತೆಯಲ್ಲಿ ಹೇಳಿರುವ ಅವತಾರವು ಇದೂ ಅಲ್ಲ; ಗೀತೆಯು ಇನ್ನೂ ಒಂದು ಹೆಜ್ಜೆ ಮುಂದಕ್ಕೆ ಹೋಗುತ್ತದೆ. ಈಶ್ವರನು ತಾನೆ ಸ್ವತಃ ಜನ್ಮತಾಳಿದ್ದಾನೆಂದು ಸ್ಪಷ್ಟವಾಗಿ ಹೇಳುತ್ತದೆ. ತಾನು ಹಿಂದೆ ಬಹಳ ಜನ್ಮಗಳನ್ನೆತ್ತಿದ್ದನೆಂದು ಶ್ರೀಕೃಷ್ಣನು ಹೇಳುವಾಗ ತಾನು ಹೇಳುವುದು ಭಗವಂತನ ಚೈತನ್ಯಕ್ಕೆ ಕಾಲುವೆಯಂತಿರುವ ಮನುಷ್ಯರ ವಿಷಯವಮಾತ್ರವಲ್ಲವೆಂದೂ, ಸಾಕ್ಷಾತ್ ಭಗವಂತನ ಅವತಾರವನ್ನೆ ಹೇಳುತ್ತಿರುವುದೆಂದೂ ಸ್ಪಷ್ಟವಾದ ಅರ್ಥಬರುವಂತೆ ಹೇಳಿದ್ದಾನೆ. ಪ್ರಪಂಚವನ್ನು ಸೃಷ್ಟಿಸಿದ ವಿಚಾರವನ್ನು ಹೇಳಲು ಉಪಯೋಗಿಸಿರುವ ಮಾತುಗಳನ್ನೆ ಬಳಸಿ, ಅವತಾರವನ್ನು ವರ್ಣಿಸುವಾಗಲೂ ತಾನೆ ಸೃಷ್ಟಿಕರ್ತನಾದ ಈಶ್ವರನೆಂಬ ಅಧಿಕಾರವಾಣಿಯಿಂದ ಮಾತನಾಡಿದ್ದಾನೆ. "ಹುಟ್ಟದೆ ಇರುವವನೂ, ನಾಶರಹಿತನೂ ಮತ್ತು ಪ್ರಾಣಿಗಳಿಗೆಲ್ಲ ಸ್ವಾಮಿಯೂ ಆಗಿದ್ದರೂ, ನನ್ನ ಮಾಯೆಯಿಂದ ನನ್ನ ಪ್ರಕೃತಿಯನ್ನು ಆಧಾರಮಾಡಿಕೊಂಡು **ನಾನು** ಹುಟ್ಟುತ್ತೇನೆ" ಮತ್ತು "ಪ್ರಕೃತಿಯ ವ್ಯಾಪಾರಗಳಿಗೆ ಅಧ್ಯಕ್ಷನಾಗಿರುತ್ತೇನೆ" ಎಂದು ಶ್ರೀಕೃಷ್ಣನು ಹೇಳಿದ್ದಾನೆ. ಇಲ್ಲಿ ಜೀವಾತ್ಮ ಮತ್ತು ಪರಮಾತ್ಮ ಅಥವಾ ಕ್ರೈಸ್ತರು ಹೇಳುವ ತಂದೆ ಮತ್ತು ಜೀವತ್ವವನ್ನು ಪಡೆದಿರುವ ಮಗ (Father and Son) ಎಂಬ ಎರಡು ಪುರುಷರ ಪ್ರಸ್ತಾಪವೆ ಇಲ್ಲ.

ಈಶ್ವರ ಮತ್ತು ಅವನು ಸೃಷ್ಟಿಸಿರುವ ಪ್ರಕೃತಿ ಅವುಗಳನ್ನು ಮಾತ್ರ ಪ್ರಸ್ತಾಪಿಸಿದೆ. ಈಶ್ವರನು ತನ್ನ ಪ್ರಕೃತಿಯನ್ನೆ ಆಧಾರಮಾಡಿಕೊಂಡು, ಕೆಳಕ್ಕಿಳಿದು, ಮನುಷ್ಯರೂಪವನ್ನೂ ದೇಹವನ್ನೂ ಧರಿಸುತ್ತಾನೆ. ಮನುಷ್ಯದೇಹದೊಳಗೆ ತನ್ನ ಈಶ್ವರಶಕ್ತಿಯನ್ನೂ ಪ್ರಜ್ಞೆಯನ್ನೂ ತರುತ್ತಾನೆ. ಈ ದೇಹದೊಳಗೆ, ರೂಪದೊಳಗೆ ಕೆಲಸಮಾಡಲು ಒಪ್ಪಿಕೊಂಡು ಅದರೊಳಗಿರುವ ಮತ್ತು ಅದಕ್ಕೆ ಅಧಿಪತಿಯಾದ ಆತ್ಮನಾಗಿ, ದೇಹದ ಎಲ್ಲ ವ್ಯಾಪಾರಗಳನ್ನೂ ನಿಯಂತ್ರಿಸುತ್ತಾನೆ.

ಮೇಲಿನಿಂದ, ತನ್ನ ಲೋಕದಿಂದ, ಈಶ್ವರನು ಎಲ್ಲ ಭೂತಗಳಿಗೂ, ಅಷ್ಟೇಕೆ, ಇಡೀ ಪ್ರಕೃತಿಯೆಲ್ಲಕ್ಕೂ ಸ್ವಾಮಿಯಾಗಿದ್ದಾನೆ; ಆದುದರಿಂದ ಎಲ್ಲ ಮನುಷ್ಯರನ್ನೂ ಆಳುತ್ತಾನೆ. ಎಲ್ಲದರಲ್ಲಿಯೂ ಅಂತರ್ಯಾಮಿಯಾಗಿದ್ದುಕೊಂಡು ಒಳಗಡೆಯಿಂದ ಗುಪ್ತವಾಗಿ ಎಲ್ಲ ಪ್ರಕೃತಿ ವ್ಯಾಪಾರಗಳಿಗೂ ಸದಾ ಪ್ರಭುವಾಗಿದ್ದಾನೆ. ಆದರೆ ಅವತಾರದಲ್ಲಿ ವಿಶೇಷವೇನೆಂದರೆ, ಇಲ್ಲಿ ಈಶ್ವರನು ಎಲ್ಲರಿಗೂ ಗೋಚರವಾಗುವಂತೆ ವ್ಯಕ್ತನಾಗುತ್ತಾನೆ. ಪ್ರಕೃತಿಗೆ ಈ ದೇಹದೊಳಗಿರುವವನು ಈಶ್ವರನೆ ಎಂಬ ಜ್ಞಾನವು ಸ್ಪಷ್ಟವಾಗಿರುತ್ತದೆ.

ಇಲ್ಲಿ ಅವನು ಪ್ರಕೃತಿವ್ಯಾಪಾರಗಳನ್ನು ನಿಯಂತ್ರಿಸುವುದು ಹೊರಗಡೆ ಇದ್ದು ಕೊಂಡೂ ಅಲ್ಲ; ಒಳಗಿನಿಂದ ಗುಪ್ತವಾಗಿಯೂ ಅಲ್ಲ; ಭಗವಂತನ ಇಚ್ಛೆಯಿಂದಲೂ ಅಲ್ಲ; (ಮೇಲಿನ ಲೋಕದಲ್ಲಿರುವ "The will of the Father which is in Heaven" ಅಲ್ಲ) ಆದರೆ ನೇರವಾಗಿ, ಪ್ರತ್ಯಕ್ಷವಾಗಿ, ಎಲ್ಲರಿಗೂ ಗೋಚರ ವಾಗುವ ರೀತಿಯಲ್ಲಿ ಪ್ರಕೃತಿವ್ಯಾಪಾರಗಳನ್ನು ನಿಯಂತ್ರಿಸುತ್ತಾನೆ. ಈಗ ಮನುಷ್ಯ ನನ್ನು ಉಪಾಧಿಯನ್ನಾಗಿ ಮಾಡಿಕೊಳ್ಳುವ ಅವಶ್ಯಕತೆಯೆ ಇಲ್ಲ. ಏತಕ್ಕೆಂದರೆ ಈಶ್ವರನು ಅವತಾರಮಾಡಿರುವುದು ತನ್ನ ಪ್ರಕೃತಿಯ ಸಹಾಯದಿಂದಲೆ ಹೊರತು ಜೀವನಿಗೆ ಸಂಬಂಧಿಸಿದ ಪ್ರಕೃತಿಯಿಂದಲ್ಲ.

ಈ ಸಿದ್ಧಾಂತವನ್ನು ಮನುಷ್ಯನ ಮನಸ್ಸು ಸುಲಭವಾಗಿ ಒಪ್ಪುವುದಿಲ್ಲ; ಏತಕ್ಕೆಂದರೆ ಅವತಾರಪುರುಷನೂ ಸಾಮಾನ್ಯ ಮನುಷ್ಯರಂತೆಯೆ ಅನೇಕ ವಿಷಯ ಗಳಲ್ಲಿ ವರ್ತಿಸುವುದರಿಂದ ಅವನೆ ಸಾಕ್ಷಾತ್ ಈಶ್ವರನೆಂದು ಒಪ್ಪುವುದು ಕಷ್ಟ ವಾಗುತ್ತದೆ. ಅವತಾರದಲ್ಲಿ ಈಶ್ವರತ್ವ ಮತ್ತು ಮನುಷ್ಯತ್ವಗಳೆರಡೂ ಸೇರಿವೆ. ಈಶ್ವರನು ತಾನಾಗಿಯೇ ಮನುಷ್ಯರೂಪವನ್ನು ಅದರ ಸಂಕುಚಿತವಾದ ಶಕ್ತಿ ಗಳೊಂದಿಗೆ ಧರಿಸುತ್ತಾನೆ. ಈ ಪರಿಮಿತಿಗೊಳಪಟ್ಟ ರೂಪವನ್ನೆ ತನ್ನ ದಿವ್ಯಶಕ್ತಿ ಮತ್ತು ಪ್ರಜ್ಞೆಯು ಕೆಲಸಮಾಡುವುದಕ್ಕೆ ಸಾಧನವನ್ನಾಗಿಯೂ ಉಪಯೋಗಿಸು ತ್ತಾನೆ. ಈಶ್ವರನು ಜನ್ಮವನ್ನು ತಾಳಿ ಕರ್ಮಗಳನ್ನು ಮಾಡಲು ಅವನಿಗೆ ಮನು ಷ್ಯತ್ವವು ಸಾಧನವಾಗುತ್ತದೆ. ಇದು ಹೀಗೆಯೆ ನಡೆಯಬೇಕು; ಇಲ್ಲದಿದ್ದರೆ ಅವತಾರದ ಉದ್ದೇಶವೆ ಸಫಲವಾಗುವುದಿಲ್ಲ. ಮನುಷ್ಯಜನ್ಮದಲ್ಲಿ ಎಷ್ಟೆ ಪರಿಮಿತಿ ಗಳೂ, ನಿರ್ಬಂಧಗಳೂ ಇದ್ದರೂ ಕೂಡ ಈಶ್ವರನು ಜನ್ಮವೆತ್ತಿ ತನ್ನ ಕರ್ಮಗಳನ್ನು ಮಾಡುವುದಕ್ಕೂ ಕೂಡ ಮನುಷ್ಯದೇಹವು ಸಾಧನವಾಗಬಲ್ಲದೆಂಬುದನ್ನು ಸಾಕ್ಷಾ ತ್ತಾಗಿ ತೋರಿಸಿಕೊಡುವುದೆ ಅವತಾರದ ಉದ್ದೇಶ. ಅವತಾರದ ಮೂಲಕ ವ್ಯಕ್ತ ವಾಗುವ ಈಶ್ವರನ ಪ್ರಜ್ಞೆಯ ಮಟ್ಟಕ್ಕೆ ಮನುಷ್ಯನ ಪ್ರಜ್ಞೆಯೂ ಏರುವುದು ಸಾಧ್ಯ; ಈಶ್ವರನು ವ್ಯವಹರಿಸುವುದಕ್ಕೆ ಮನುಷ್ಯನ ಪ್ರಜ್ಞೆಯೂ ಸಲಕರಣೆಯಾಗ ಬಲ್ಲದು; ಮನುಷ್ಯನ ಪ್ರಜ್ಞೆಯನ್ನೆ ಪರಿಶುದ್ಧವನ್ನಾಗಿ ಮಾಡಿ ಅದರ ಶಕ್ತಿ, ಪ್ರೇಮ ಮತ್ತು ವ್ಯಾಪ್ತಿಯನ್ನು ಹೆಚ್ಚಿಸಿದರೆ ಇದೇ ಈಶ್ವರನ ಪ್ರಜ್ಞೆಗೆ ಹೆಚ್ಚು ಹೆಚ್ಚು ಸದೃಶವಾಗುತ್ತದೆ. ಇದು ಸಾಧ್ಯವೆಂದು ಸಾರಿ, ಯಾವ ರೀತಿ ಇದನ್ನು ಮಾಡಬಹುದೆಂಬುದನ್ನು ತೋರಿಸುವುದೆ ಈಶ್ವರನ ಅವತಾರದ ಉದ್ದೇಶ. ಹೀಗಿರು ವಾಗ ಅವತಾರಪುರುಷನು ಸಂಪೂರ್ಣವಾಗಿ ಅತಿಮಾನುಷವಾದ ರೀತಿಯಲ್ಲಿ

ವ್ಯವಹರಿಸಿದರೆ ಈ ಉದ್ದೇಶವು ಸಫಲವಾಗುವುದಿಲ್ಲ. ಆದುದರಿಂದ ಅವತಾರ ಪುರುಷನು ಐಂದ್ರಜಾಲಿಕನಂತೆಯೂ, ಅದ್ಭುತವೂ ವಿಚಿತ್ರವೂ ಆದ ಪವಾಡ ಗಳನ್ನು ಮಾಡುವ ಪುರುಷನಾಗಿಯೂ ಬರುವುದಿಲ್ಲ. ಎಂದರೆ ಅವತಾರಪುರುಷನಿಗೆ ಅಮಾನುಷವಾದ ಶಕ್ತಿಯೇ ಇಲ್ಲವೆಂದೂ, ಅವನು ಪವಾಡಗಳನ್ನು ಮಾಡುವುದೇ ಇಲ್ಲವೆಂದೂ ನಮ್ಮ ಅಭಿಪ್ರಾಯವಲ್ಲ. ಕ್ರಿಸ್ತನು ತನ್ನ ದಿವ್ಯಶಕ್ತಿಯಿಂದ ಅನೇಕ ರೋಗಿಗಳನ್ನು ವಾಸಿಮಾಡಿದನೆಂದು ನಾವು ಕೇಳಿದ್ದೇವೆ. ಆದರೆ ಈ ರೀತಿಯಾದ ಅಸಾಧಾರಣಶಕ್ತಿಗಳನ್ನು ಪಡೆಯುವುದು ಮನುಷ್ಯನಿಗೂ ಸಾಧ್ಯ. ಆದರೆ ಈ ಶಕ್ತಿ ಗಳು ಅವತಾರಪುರುಷನಲ್ಲಿ ಇರಲೇಬೇಕಾದ ಅವಶ್ಯಕತೆಯಿಲ್ಲ; ಇದು ಮುಖ್ಯವಾದ ವಿಷಯವೂ ಅಲ್ಲ. ಇಂತಹ ಅಮಾನುಷಶಕ್ತಿಗಳನ್ನು ಪ್ರದರ್ಶಿಸುವುದೆ ಜೀವನದ ಆದ್ಯಂತ ಉದ್ಯೋಗವಾದರೆ ಅಂತಹ ಜೀವನದಿಂದ ಏನೂ ಪ್ರಯೋಜನವಿಲ್ಲ. ಅವತಾರಪುರುಷನು ಅದ್ಭುತವಾದ ಇಂದ್ರಜಾಲಗಳನ್ನು ಮಾಡುವುದಕ್ಕಾಗಿ ಜನ್ಮ ಧರಿಸುವುದಿಲ್ಲ; ಮನುಷ್ಯಕೋಟಿಯ ನಾಯಕನಾದ ಈಶ್ವರನಾಗಿಯೂ, ದೇವತ್ವದ ಕಡೆ ಮುನ್ನಡೆಯುತ್ತಿರುವ ಮಾನವರಿಗೆ ದಾರಿತೋರಿಸುವವನಾಗಿಯೂ ಬರುತ್ತಾನೆ. ಅವನು ಸ್ಥೂಲದೇಹದ ನೋವು, ವ್ಯಾಧಿಗಳನ್ನೂ ದುಃಖಶೋಕಗಳನ್ನೂ ಅನುಭವಿಸಿ ಅದನ್ನು ತನ್ನ ಕೆಲಸಕ್ಕೆ ಉಪಯೋಗಿಸಬೇಕಾಗುತ್ತದೆ. ಕ್ರಿಸ್ತನು ತೋರಿಸಿದಂತೆ ದುಃಖವೂ ಕೂಡ ಮನುಷ್ಯನನ್ನು ಉದ್ಧಾರಮಾಡಿ ಅವನ ಮೋಕ್ಷಕ್ಕೆ ಸಾಧನವಾಗ ಬಹುದು; ಬುದ್ಧನು ತೋರಿಸಿದಂತೆ, ಈಶ್ವರನಿಂದ ಧರಿಸಲ್ಪಟ್ಟ ಮನುಷ್ಯದೇಹಕ್ಕೆ ಮತ್ತು ಮನಸ್ಸಿಗೆ ಸಕಲ ದುಃಖಗಳಿಂದಲೂ ಪಾರಾಗಬಲ್ಲ ಶಕ್ತಿಯಿದೆ. ಅವತಾರ ಪುರುಷನಿಗೆ ಮನುಷ್ಯಸಹಜವಾದ ಯಾವ ಪರಿಮಿತಿಗಳೂ ಇರಕೂಡದೆಂದು ವಾದಿಸು ವವನು ಹೀಗೆ ಹೇಳಬಹುದು: "ಶಿಲುಬೆಗೆ ಏರಿಸಲ್ಪಟ್ಟು ಸಾಮಾನ್ಯ ಮನುಷ್ಯ ನಂತೆ ತಾನೂ ಮರಣಕ್ಕೆ ತುತ್ತಾದ ಕ್ರಿಸ್ತನು ಈಶ್ವರನ ಅವತಾರವಾಗಿರುವುದು ಸಾಧ್ಯವಿಲ್ಲ; ಹಾಗಾಗಿದ್ದರೆ ಅವನು ಅದರಿಂದ ಸುಲಭವಾಗಿ ತಪ್ಪಿಸಿಕೊಳ್ಳಬೇಕಾ ಗಿತ್ತು. ಹೀಗೆಯೆ ಮನುಷ್ಯರಂತೆ ಅಥವಾ ಪ್ರಾಣಿಗಳಂತೆ ಖಾಯಿಲೆಯಿಂದ ನರಳಿ ಸಾಯುವವರನ್ನು ಮತ್ತು ಇತರರಿಂದ ಕೊಲ್ಲಲ್ಪಡುವವರನ್ನು ಅವತಾರಪುರುಷ ರೆಂದು ಕರೆಯುವುದು ಹೇಗೆ ಸಾಧ್ಯ?" ಆದರೆ ಈರೀತಿ ಹೇಳುವವನಿಗೆ ಅವತಾರದ ವಾಸ್ತವವಾದ ಅರ್ಥವಾಗಲಿ ಉದ್ದೇಶಗಳಾಗಲಿ ತಿಳಿದಿಲ್ಲ. ಮುಖ್ಯವಾದ ವಿಷಯ ವನ್ನೆ ಅವನು ಮರೆತಿದ್ದಾನೆ. ದಿವ್ಯವಾದ ಸಂತೋಷವನ್ನೂ ಆನಂದವನ್ನೂ ಪ್ರದರ್ಶಿಸುವ ಅವತಾರವು ಆಗುವುದಕ್ಕೆ ಮುಂಚೆ ಕಷ್ಟಗಳನ್ನೂ ದುಃಖಗಳನ್ನೂ

ಅನುಭವಿಸುವ ಅವತಾರಗಳು ಆಗಲೇಬೇಕು. ಮನುಷ್ಯರಿಗಿರುವ ಪರಿಮಿತಿಗಳಿಗೆ ಮತ್ತು ನಿರ್ಬಂಧಗಳಿಗೆ ಈಶ್ವರನು ತಾನಾಗಿಯೆ ಒಳಗಾದ ಮೇಲೆಯೆ ಇದರಿಂದ ಪಾರಾಗುವುದು ಹೇಗೆಂದು ತೋರಿಸುವುದು ಸಾಧ್ಯವಾಗುತ್ತದೆ. ತಾನು ಅವತಾರ ಮಾಡುವ ಕಾಲದ ಜನರ ಬೆಳವಣಿಗೆಯ ಮಟ್ಟಕ್ಕೆ ಅನುಸಾರವಾಗಿ ಮನುಷ್ಯನು ಬಾಹ್ಯವಾದ ಮತ್ತು ಅಂತರವಾದ ತನ್ನ ಪರಿಮಿತಿಯಿಂದ ಮತ್ತು ನಿರ್ಬಂಧಗಳಿಂದ ಯಾವರೀತಿ ಪಾರಾಗಿ ಅವುಗಳಿಗೆ ಅತೀತನಾಗಬಹುದೆಂಬುದನ್ನು ಅವತಾರ ಪುರುಷನು ತೋರಿಸಿಕೊಡುತ್ತಾನೆ. ಸಾಮಾನ್ಯಮನುಷ್ಯರಿಗೆ ಅಸಾಧ್ಯವಾದ ಪವಾಡ ಗಳಿಂದ ಇದನ್ನು ಮಾಡಿ ತೋರಿಸಿದರೆ ಅದರಿಂದ ಅವರಿಗೆ ಯಾವ ಉಪ ಯೋಗವೂ ಆಗುವುದಿಲ್ಲ.

ಈಶ್ವರನು ಮನುಷ್ಯ*ದೇಹವನ್ನೂ ಮನಸ್ಸನ್ನೂ ಯಾವ ರೀತಿ ಪಡೆಯು ತ್ತಾನೆ ಎಂಬ ಪ್ರಶ್ನೆಯನ್ನು ಈಗ ಪರಿಶೀಲಿಸಬೇಕಾಗುತ್ತದೆ. ಇದು ಬಹಳ ಕಷ್ಟ ವಾದ ಪ್ರಶ್ನೆ. ನಮ್ಮ ಸಂಕುಚಿತ ಬುದ್ಧಿಗೆ ಅರ್ಥವಾಗುವುದು ಕಷ್ಟ. ಈ ದೇಹವೂ ಮನಸ್ಸೂ ಹಠಾತ್ತಾಗಿ ಒಂದೆ ಮುಹೂರ್ತದಲ್ಲಿ ಸೃಷ್ಟಿಸಲ್ಪಡಲಿಲ್ಲ: ಸ್ಥೂಲವಾದ ಅಥವಾ ಆಧ್ಯಾತ್ಮಿಕವಾದ (ಅಥವಾ ಎರಡು ವಿಧವಾದ) ಸಂಸರಣವನ್ನು ಹೊಂದಿದ ಮೇಲೆಯೆ ದೇಹ ಮತ್ತು ಮನಸ್ಸುಗಳು ಈಗಿರುವ ಮಟ್ಟವನ್ನು ಮುಟ್ಟಿವೆ. ಈಶ್ವರನು ಮೇಲಿನಿಂದ ಇಳಿದುಬರುವ ಅವತಾರವೆಂದರೆ ಮುಖ್ಯವಾಗಿ ಆಧ್ಯಾತ್ಮಿಕ ವ್ಯಾಪಾರವೆ ಹೌದು. (ಗೀತೆಯಲ್ಲಿ "ಆತ್ಮಾನಂ ಸೃಜಾಮಿ" ಎಂದು ಹೇಳಿದೆ) ಇದು ಆತ್ಮನಿಗೆ ಸಂಬಂಧಿಸಿದುದು. ಆದರೂ, ಇದರೊಡನೆ ಸ್ಥೂಲದೇಹದ ಜನನವೂ ಸೇರಿದೆ. ಅವತಾರದಿಂದ ಈ ಸ್ಥೂಲದೇಹ ಮತ್ತು ಮನಸ್ಸು ಯಾವರೀತಿ ಸೃಷ್ಟಿಸ ಲ್ಪಟ್ಟವು ? ದೇಹದ ಸಂಸರಣ ಮತ್ತು ಸೃಷ್ಟಿಗೆ ಅನುವಂಶೀಯತೆಯ ನಿಯಮ ಗಳು, ಜಡಪ್ರಕೃತಿ ಮತ್ತು ಅದರಲ್ಲಿರುವ ಪ್ರಾಣಶಕ್ತಿ, ಇವು ಮಾತ್ರ ಕಾರಣಗ ಳೆಂದೂ, ಇದರಲ್ಲಿ ಜೀವಾತ್ಮನ ಪಾತ್ರವೇನೂ ಇಲ್ಲವೆಂದೂ ನಾವು ಭಾವಿಸಿಕೊಂಡರೆ ಈ ಸಮಸ್ಯೆಯನ್ನು ಸುಲಭವಾಗಿ ಪರಿಹರಿಸಬಹುದು. ಶ್ರೇಷ್ಠವಾದ ವಂಶದಲ್ಲಿ ಉತ್ಕೃಷ್ಟವಾದ ಮತ್ತು ಅತ್ಯಂತ ಪರಿಶುದ್ಧವಾದ ದೇಹವನ್ನು ಮತ್ತು ಮನಸ್ಸು ಗಳನ್ನು ಧರಿಸಿ ಅವತಾರಪುರುಷನು ಜನ್ಮವೆತ್ತುತ್ತಾನೆಂದು ಭಾವಿಸಬಹುದು. ಆದರೆ ಗೀತೆಯಲ್ಲಿ ಈ ಸಂದರ್ಭದಲ್ಲೆ ಪುನರ್ಜನ್ಮಸಿದ್ಧಾಂತವನ್ನು ನಿರೂಪಿಸಿ ಅದನ್ನು ಸ್ಪಷ್ಟವಾಗಿ ಅವತಾರಪುರುಷನಿಗೆ ಅನ್ವಯಿಸಿದೆ. ಪುನರ್ಜನ್ಮಸಿದ್ಧಾಂತದ ಪ್ರಕಾರ ಜನ್ಮವೆತ್ತುವ ಜೀವಾತ್ಮನು ತನ್ನ ಹಿಂದಿನ ಆಧ್ಯಾತ್ಮಿಕ ಮತ್ತು

ಮಾನಸಿಕ ಅನುಭವಗಳಿಂದ ಆಗಿರುವ ಬೆಳವಳಿಗೆಗನುಸಾರವಾಗಿ, ಅದಕ್ಕೆ ಅನುಕೂಲವಾದ ಸ್ಥೂಲದೇಹವನ್ನೂ ಮತ್ತು ಮನೋದೇಹಗಳನ್ನೂ ನಿರ್ಮಿಸಿ, ಧರಿಸುತ್ತಾನೆ. ಜೀವಾತ್ಮನು ತಾನು ಧರಿಸುವ ದೇಹವನ್ನು ತಾನೆ ನಿರ್ಮಿಸಿಕೊಳ್ಳುತ್ತಾನೆ; ಅವನ ಮಾತ್ರವೆ ಇಲ್ಲದೆ ದೇಹ ಮತ್ತು ಮತ್ತು ಮನಸ್ಸುಗಳು ರೂಪುಗೊಳ್ಳುವುದಿಲ್ಲ. ಹಾಗಾದರೆ, ಈಶ್ವರನು ವಿಚ್ಛಿತಿಯಿಲ್ಲದೆ ಅವತಾರ ಮಾಡುತ್ತಿದ್ದಾನೆಂದೂ, ಆಯಾ ಕಾಲಕ್ಕೆ ತಕ್ಕಂತೆ, ಆಗಿನ ಜನಗಳ ಬೆಳವಳಿಕೆಯ ಮಟ್ಟಕ್ಕೆ ಅನುಸಾರವಾಗಿ ದೇಹವನ್ನೂ ಮನಸ್ಸನ್ನೂ ಧರಿಸುತ್ತಾನೆಂದೂ, ತನ್ನ ಈ ದೇಹ ಮತ್ತು ಮನಸ್ಸುಗಳನ್ನೂ ಕಾಲಕ್ಕನುಸಾರವಾಗಿ ವಿಕಾಸಗೊಳಿಸುತ್ತಿದ್ದಾನೆಂದೂ ಭಾವಿಸೋಣವೆ? ವಿಷ್ಣುವಿನ ದಶಾವತಾರಗಳಿಗೆ ಈ ರೀತಿಯಾಗಿ ಅರ್ಥಮಾಡಬೇಕೆಂಬುದು ಕೆಲವರ ಅಭಿಪ್ರಾಯ. ಮೊದಲು ಮತ್ಸ್ಯ, ಕೂರ್ಮ ಮತ್ತು ವರಾಹ ರೂಪಗಳಲ್ಲಿ ಪ್ರಾಣಿವರ್ಗದಲ್ಲಿಯೂ, ಅನಂತರ ಅರ್ಧ ಪ್ರಾಣಿ ಮತ್ತು ಅರ್ಧ ಮನುಷ್ಯನಾದ ನರಸಿಂಹನಾಗಿಯೂ ಅವತಾರ ಮಾಡಿದನು. ಆಮೇಲೆ ಕ್ರಮವಾಗಿ ಕುಳ್ಳನಾದ ಮನುಷ್ಯರೂಪದಲ್ಲಿ ವಾಮನನಾಗಿಯೂ, ಕ್ರೂರಸ್ವಭಾವವುಳ್ಳ ಶೂರನಾದ ಪರಶುರಾಮನಾಗಿಯೂ, ಆಮೇಲೆ ದೈವೀಸ್ವಭಾವವುಳ್ಳ ಶ್ರೀರಾಮನಾಗಿಯೂ ಅವತಾರಮಾಡಿದನು. ಕೊನೆಯದಾಗಿ ಆಧ್ಯಾತ್ಮಿಕ ಜ್ಞಾನವನ್ನೂ ಆತ್ಮಾನುಭವವನ್ನೂ ಪಡೆದ ಮನುಷ್ಯನಾದ ಬುದ್ಧನಾಗಿ ಅವತರಿಸಿದನು. ಕೃಷ್ಣಾವತಾರವು ಇದಕ್ಕಿಂತ ಹಿಂದೆ ಆದರೂ ಈ ಹತ್ತು ಅವತಾರಗಳಲ್ಲಿಯೂ ಮೇಲಿನ ಸ್ಥಾನವು ಇದಕ್ಕೆ ಸಲ್ಲುತ್ತದೆ. ಇನ್ನೂ ಮುಂದೆ ಅವತಾರ ಮಾಡಬೇಕಾಗಿರುವ ಕಲ್ಕಿಯೂ ಕೃಷ್ಣನು ಪ್ರಾರಂಭಿಸಿದ ಕೆಲಸವನ್ನು ಮುಂದುವರಿಸಿ ಪೂರ್ಣಗೊಳಿಸುತ್ತಾನೆ. ಅಷ್ಟೆ. ಕೃಷ್ಣನಲ್ಲಿ ಮನುಷ್ಯನು ಪರಿಪೂರ್ಣವಾದ ದೈವತ್ವವನ್ನು ಪಡೆದಿದ್ದಾನೆ. ಹಿಂದಿನ ಎಲ್ಲ ಅವತಾರಗಳೂ ಯಾವ ಕೆಲಸವನ್ನು ಸಾಧಿಸಲು ಮೊದಲುಮಾಡಿ ಪ್ರಯತ್ನಪಟ್ಟರೊ ಆ ಕೆಲಸವು ಶ್ರೀಕೃಷ್ಣಾವತಾರದಲ್ಲಿ ಸಾಫಲ್ಯವನ್ನು ಪಡೆಯುತ್ತದೆ. ಈಗಿನ ಕಾಲದವರ ಮನಸ್ಸಿಗೆ ಅವತಾರದ ಈ ಸಿದ್ಧಾಂತವು ಒಪ್ಪಿಗೆಯಾಗುವುದು ಬಹಳ ಕಷ್ಟ; ಆದರೆ ಗೀತೆಯ ವಾಕ್ಸರಣಿಯನ್ನು ನೋಡಿದರೆ ಅದು ಈ ಸಿದ್ಧಾಂತವನ್ನೇ ಪ್ರತಿಪಾದಿಸಿರುವಂತೆ ತೋರುತ್ತದೆ. ಗೀತೆಯು ಈ ಸಮಸ್ಯೆಗೆ ಸ್ಪಷ್ಟವಾದ ಉತ್ತರವನ್ನು ಕೊಟ್ಟಿಲ್ಲವಾದ್ದರಿಂದ ನಮ್ಮ ಮನಸ್ಸಿಗೆ ಸರಿತೋರುವ ಉತ್ತರವನ್ನು ನಾವು ಕೊಡಬಹುದು. ಜೀವಾತ್ಮನಿಂದ ದೇಹವು ಸೃಷ್ಟಿಸಲ್ಪಟ್ಟು ಅದನ್ನು ಅವತಾರಪುರುಷನ ಜನನ ಕಾಲದಲ್ಲಿ ಈಶ್ವರನು ಧರಿಸುತ್ತಾನೆಂದು ಒಂದು ಸಿದ್ಧಾಂತವಿದೆ;

ಅಥವಾ ಪ್ರತಿಯೊಂದು ಮನುಷ್ಯದೇಹ ಮತ್ತು ಮನಸ್ಸುಗಳಿಗೂ ಅಂತರವಾಗಿ ಮೂಲಕಾರಣರಾದ ನಾಲ್ಕುಮನುಗಳು ಈ ಅವತಾರಪುರುಷನು ಧರಿಸುವ ದೇಹ ಮತ್ತು ಮನಸ್ಸುಗಳನ್ನು ನಿರ್ಮಿಸುತ್ತಾರೆ ಎಂದು ಹೇಳಬಹುದು. ಹೀಗೆ ಯೋಚಿಸುವುದು ಇಂದ್ರಿಯ ಮತ್ತು ಮನಸ್ಸುಗಳಿಗೆ ಅತೀತವಾದ ಆಧ್ಯಾತ್ಮಿಕ ಪ್ರಪಂಚದ ವಿಚಾರಗಳಲ್ಲಿ ಬಹಳವಾಗಿ ಪ್ರವೇಶಿಸಿದಂತಾಗುತ್ತದೆ; ಇದು ಆಧುನಿಕ ವಿಚಾರಪರರಿಗೆ ಒಪ್ಪಿಗೆಯಿಲ್ಲ. ಆದರೆ ಅವತಾರತತ್ವವನ್ನು ನಾವು ಒಪ್ಪಿದೊಡನೆಯೆ ಈ ಆಧ್ಯಾತ್ಮಿಕ ವಿಚಾರದಲ್ಲಿ ಪ್ರವೇಶಿಸಿದಂತಾಯಿತು; ಹೀಗೆ ಪ್ರವೇಶಿಸಿದ ಮೇಲೆ, ದೃಢಮನಸ್ಸಿನಿಂದ ಈ ವಿಚಾರವನ್ನು ಕೂಲಂಕಷವಾಗಿ ಪರಿಶೀಲಿಸುವುದು ಒಳ್ಳೆಯದು.

ಗೀತೆಯಲ್ಲಿ ಅವತಾರತತ್ವದ ನಿರೂಪಣೆಯು ಇಷ್ಟರಮಟ್ಟಿಗೆ ಇದೆ. ಅವತಾರದ ಸಾಧ್ಯತೆಯನ್ನು ಕುರಿತು ಕೂಲಂಕಷವಾಗಿ ಪ್ರಸ್ತಾಪಿಸಿದಂತೆ, ಅವತಾರದ ರೀತಿಯನ್ನು ಕುರಿತೂ ಏಕಪ್ರಕಾರವಾಗಿ ವಿಚಾರಮಾಡಬೇಕಾಯಿತು. ಏತಕ್ಕೆಂದರೆ ವಿಚಾರಪರರಾದ ಮನುಷ್ಯರಿಗೆ ಹುಟ್ಟಬಹುದಾದ ಸಂಶಯಗಳನ್ನೂ ಆಕ್ಷೇಪಣೆಗಳನ್ನೂ ನಾವು ತಿಳಿದುಕೊಂಡು ಅವುಗಳಿಗೆ ಸಮಾಧಾನವನ್ನು ಕೊಡಬೇಕು. ಈಶ್ವರನು ಸ್ಥೂಲಲೋಕದಲ್ಲಿ ಅವತರಿಸುವ ಬಗೆಯನ್ನು ಕುರಿತು ಗೀತೆಯಲ್ಲಿ ಹೆಚ್ಚಾದ ಪ್ರಸ್ತಾಪವಿಲ್ಲವೆಂಬುದೇನೊ ನಿಜ; ಆದರೂ ಗೀತೆಯ ಉಪದೇಶಸರಣಿಯಲ್ಲಿ ಇದಕ್ಕೆ ಒಂದು ಮುಖ್ಯವಾದ ಸ್ಥಾನವಿದೆ; ಗೀತೆಯ ಎಲ್ಲ ಉಪದೇಶದ ಹಿನ್ನೆಲೆಯಲ್ಲಿಯೂ ಅವತಾರ ಸಿದ್ಧಾಂತವು ಕಂಡುಬರುತ್ತದೆ. ಮನುಷ್ಯವರ್ಗದಲ್ಲಿ ಅತ್ಯಂತ ಉನ್ನತಮಟ್ಟಕ್ಕೆ ಏರಿರುವ ವಿಭೂತಿಪುರುಷನನ್ನು ಅವತಾರಪುರುಷನು ಯಾವರೀತಿಯಲ್ಲಿ ಈಶ್ವರನ ದಿವ್ಯಕರ್ಮಗಳ ಮತ್ತು ಈಶ್ವರತ್ವದ ಕಡೆಗೆ ಒಯ್ಯುತ್ತಾನೆಂಬುದೆ ಗೀತೆಯ ಅವತಾರಸಿದ್ಧಾಂತದ ಸಾರ. ಅಂತರವಾಗಿ ನಮ್ಮ ಹೃದಯದಲ್ಲಿ ಈಶ್ವರನು ವ್ಯಕ್ತವಾಗಿ ಜೀವಾತ್ಮನನ್ನು ತನ್ನ ಮಟ್ಟಕ್ಕೆ ಎತ್ತುವುದು ಮುಖ್ಯವೆಂಬುದೇನೊ ನಿಜ; ಎಂದರೆ ನಮ್ಮ ಹೃದಯದಲ್ಲಿರುವ ಅಂತರ್ಯಾಮಿಯಾದ ಕ್ರಿಸ್ತ, ಬುದ್ಧ, ಅಥವಾ ಕೃಷ್ಣನು ಮುಖ್ಯವೆಂಬುದರಲ್ಲಿ ಸಂಶಯವಿಲ್ಲ. ಬಾಹ್ಯವ್ಯವಹಾರಗಳು ಯಾವರೀತಿ ನಮ್ಮ ಚೈತನ್ಯದ ವಿಕಾಸಕ್ಕೆ ಬಹಳ ಮುಖ್ಯವೊ ಹಾಗೆಯೇ ನಮ್ಮ ಹೃದಯದಲ್ಲಿ ಈಶ್ವರನು ವ್ಯಕ್ತವಾಗುವುದಕ್ಕೆ ಭಗವಂತನ ಸ್ಥೂಲವಾದ ಅವತಾರವು ಬಹಳ ಸಹಕಾರಿಯಾಗುತ್ತದೆ. ಭಗವಂತನು ಸ್ಥೂಲದೇಹವನ್ನೂ ಮನಸ್ಸನ್ನೂ ಧರಿಸಿ ಅವತಾರಮಾಡುವುದರಿಂದ ಮನುಷ್ಯರ ಹೃದಯದಲ್ಲಿಯೂ ಈಶ್ವರಚೈತನ್ಯವು

ವ್ಯಕ್ತವಾಗಿ ವಿಕಾಸಗೊಳ್ಳುವುದಕ್ಕೆ ಬಹಳ ಸಹಾಯವಾಗುತ್ತದೆ. ಅನಂತರ ಈ ಈಶ್ವರಚೈತನ್ಯವು ಹೆಚ್ಚು ಹೆಚ್ಚು ಶಕ್ತಿಯುತವಾಗಿ ತನ್ನ ಸ್ವರೂಪವನ್ನು ಹೆಚ್ಚು ಹೆಚ್ಚಾಗಿ ವ್ಯಕ್ತಗೊಳಿಸುತ್ತಾ ಪ್ರಕಾಶಿಸುತ್ತದೆ. ಈರೀತಿಯಾಗಿ ಎರಡು ಬಗೆಯಲ್ಲಿ ಈಶ್ವರನು ವ್ಯಕ್ತನಾಗುತ್ತಾನೆ—ಆಂತರವಾಗಿ ಮನುಷ್ಯರ ಹೃದಯದಲ್ಲಿ; ಮತ್ತು ಸ್ಥೂಲಶರೀರ ಮತ್ತು ಮನಸ್ಸನ್ನು ಧರಿಸಿರುವ ಅವತಾರಪುರುಷನಾಗಿ. ಇವೆರಡೂ ನಿರಂತರವಾಗಿ ನಡೆಯುತ್ತಾ ಪರಸ್ಪರ ಪೋಷಿಸಿಕೊಂಡು ಬರುತ್ತವೆ. ಮನುಷ್ಯರಲ್ಲಿ ಪರಮಾತ್ಮನ ಅವತಾರವು ಕೆಲವುಕಾಲ ವ್ಯಕ್ತಸ್ಥಿತಿಯಲ್ಲಿಯೂ ಅನಂತರ ಕೊಂಚ ಕಾಲ ಗುಪ್ತವಾಗಿಯೂ, ಹೀಗೆ ಒಂದಾದಮೇಲೊಂದು ಸುತ್ತುವ ಚಕ್ರದಂತೆ ಆಗುತ್ತದೆ.



# ಹದಿನೇಳನೆಯ ಪ್ರಕರಣ



## ಭಗವಂತನ ಜನ್ಮಕರ್ಮಗಳು

ಈಶ್ವರನ ಜನ್ಮವು ಎರಡು ವಿಧವಾಗಿದ್ದು ಎರಡು ವಿಧವಾದ ಉದ್ದೇಶಗಳನ್ನು ಹೊಂದಿರುವಂತೆ ಅವನ ಕರ್ಮಗಳೂ ಕೂಡ ಎರಡು ವಿಧವಾಗಿವೆ. ಮೊದಲನೆಯದಾಗಿ ಬಾಹ್ಯಪ್ರಪಂಚದ ಮೇಲೆ ಈ ಅವತಾರದ ಪ್ರಭಾವ; ಈ ಪ್ರಭಾವದಿಂದ ಲೋಕದಲ್ಲಿ ಧರ್ಮವು ರಕ್ಷಿಸಲ್ಪಟ್ಟು, ಕಾಲಕಾಲಕ್ಕೆ ಅನುಗುಣವಾಗಿ ಬದಲಾಯಿಸಲ್ಪಡುತ್ತದೆ. ಪ್ರಕೃತಿಯ ಸ್ವಭಾವವೇನೆಂದರೆ ಏರಿಳಿತಗಳಿಂದ, ಕ್ರಿಯೆ ಪ್ರತಿಕ್ರಿಯೆಗಳ ಕ್ರಮವಾದ ಆವರ್ತನಗಳಿಂದ—ಎಂದರೆ ಕೊಂಚಕಾಲ ಪ್ರಗತಿ ಮತ್ತು ಅನಂತರ ಕೊಂಚಕಾಲ ಅವನತಿ ಈ ರೀತಿಯಾಗಿ ಬೆಳೆಯುತ್ತದೆ. ಈ ಏರಿಳಿತವೆಂಬ ಪ್ರಕೃತಿನಿಯಮದಲ್ಲಿ ಧರ್ಮವು ನಾಶವಾಗದಂತೆಯೂ ಖಿಲವಾಗದಂತೆಯೂ ತಡೆಗಟ್ಟಿ, ಇನ್ನೂ ಒಂದು ಹೆಜ್ಜೆ ಮುಂದುವರಿಯುವಂತೆ ಮಾಡುವುದೆ ಅವತಾರಪುರುಷನ ಕೆಲಸದ ಒಂದು ಭಾಗ. ನಮಗೆ ಗೋಚರವಾಗದೆ, ಆಂತರವಾಗಿ, ಈಶ್ವರ ಚೈತನ್ಯದ ಕೆಲಸದ ಇನ್ನೊಂದು ಭಾಗವಿದೆ. ವ್ಯಕ್ತಿಯ ಮತ್ತು ಒಟ್ಟು ಮಾನವಕೋಟಿಯ ಆತ್ಮದ ಮೇಲೆ ಈಶ್ವರಚೈತನ್ಯವು ಪ್ರಭಾವ ಹೊಂದಿದೆ. ಇದರ ಪರಿಣಾಮವಾಗಿ ಮನುಷ್ಯರ ಹೃದಯದಲ್ಲಿರುವ ಈಶ್ವರನ ವಿಷಯವಾಗಿ ಜೀವಾತ್ಮನಿಗೆ ಹೆಚ್ಚು ಹೆಚ್ಚಾದ ಜ್ಞಾನವು ಉಂಟಾಗುತ್ತದೆ. ಮನುಷ್ಯರ ಹೃದಯದಲ್ಲಿರುವ

ಈಶ್ವರ ಚೈತನ್ಯವು ವಿಕಾಸ ಹೊಂದಿ ತನ್ನ ಸ್ವಸ್ವರೂಪದಲ್ಲಿ ಪೂರ್ಣವಾಗಿ ವ್ಯಕ್ತವಾಗಲು ಮಾಡುತ್ತಿರುವ ಪ್ರಯತ್ನಕ್ಕೆ ಪುಷ್ಟಿಯೂ ಮತ್ತು ಹೊಸ ಶಕ್ತಿಯೂ ಉಂಟಾಗುತ್ತದೆ. ಕಣ್ಣಿಗೆ ಕಾಣುವ ಪ್ರಯೋಜನದೃಷ್ಟಿಯಿಂದಲೆ ನೋಡುವ ಜನರು ತಿಳಿದಿರುವಂತೆ, ಅವತಾರದ ಕೆಲಸವು ಕೇವಲ ಸ್ಥೂಲಪ್ರಪಂಚದಲ್ಲಿ ಕರ್ಮಗಳನ್ನು ಮಾಡುವುದು ಮಾತ್ರವಲ್ಲ. ಕರ್ಮಕ್ಕಾಗಲಿ, ಯಾವುದೊಂದು ಘಟನೆಗಾಗಲಿ ಸ್ವತಃ ಯಾವ ಬೆಲೆಯೂ ಇಲ್ಲ; ಇವು ಯಾವುದೊ ಒಂದು ತತ್ವದ ಮತ್ತು ಶಕ್ತಿಯ ಪ್ರತೀಕಗಳು. ಈ ತತ್ವವನ್ನು ವ್ಯಕ್ತಪಡಿಸುವುದಕ್ಕಾಗಿ ಒಂದು ಶಕ್ತಿಯು ಈ ಕರ್ಮವನ್ನು ಅಥವಾ ಘಟನೆಯನ್ನು ಉಂಟುಮಾಡುತ್ತದೆ. ಹೀಗೆ ಕರ್ಮದ ಹಿಂದಿರುವ ತತ್ವ ಮತ್ತು ಅದನ್ನು ಮಾಡುವ ಶಕ್ತಿಯಿಂದಲೆ ಕರ್ಮಕ್ಕೆ ಒಂದು ಬೆಲೆ ಬರುತ್ತದೆ.

ಒಂದು ವಿಷಮಸನ್ನಿವೇಶವಿದ್ದಾಗ ಅವತಾರವು ಸಂಭವಿಸುತ್ತದೆಯಷ್ಟೆ. ಬಾಹ್ಯದೃಷ್ಟಿಯಿಂದ ನೋಡಿದರೆ ಈ ಸನ್ನಿವೇಶವು ಬಾಹ್ಯವಾದ ಘಟನೆಗಳಿಂದಲೂ, ಸ್ಥೂಲಪ್ರಪಂಚದಲ್ಲಿ ಆಗಿರುವ ದೊಡ್ಡ ಬದಲಾವಣೆಗಳಿಂದಲೂ ಕೂಡಿರುವಂತೆ ಕಾಣುತ್ತದೆ. ಆದರೆ ವಾಸ್ತವವಾಗಿ ಇದು ಒಟ್ಟು ಮಾನವಕೋಟಿಯ ಮನಸ್ಸಿನ ಕ್ಷೇತ್ರದಲ್ಲಿ ಉಂಟಾಗಿರುವ ವಿಷಮಸನ್ನಿವೇಶ. ಮನುಷ್ಯರ ಮನಸ್ಸಿನ ಕ್ಷೇತ್ರದಲ್ಲಿ ಒಂದು ಮಹತ್ವದ ಬದಲಾವಣೆಯಾಗಬೇಕಾದಾಗ, ಮನುಷ್ಯನ ಬೆಳವಣಿಗೆಯು ಒಂದು ಹೊಸದಿಕ್ಕಿನಲ್ಲಿ ನಡೆಯಬೇಕಾದಾಗ ಅವತಾರವು ಸಂಭವಿಸುತ್ತದೆ. ಈ ಹೊಸ ಬದಲಾವಣೆಯನ್ನು ಉಂಟುಮಾಡುವುದಕ್ಕೆ ಒಂದು ದೈವೀಶಕ್ತಿಯು ಅಗತ್ಯವಾಗಿ ಬೇಕು. ಈ ಶಕ್ತಿಯ ಪ್ರಮಾಣವು ಯಾವ ಚೈತನ್ಯದ ಮೂಲಕ ಇದು ಕೆಲಸಮಾಡುತ್ತದೆ ಆ ಚೈತನ್ಯಕ್ಕೆ ಅನುಗುಣವಾಗಿರುತ್ತದೆ. ಮೂಲಭೂತವಾಗಿರುವ ಬದಲಾವಣೆಯನ್ನು ಉಂಟುಮಾಡಲು ಅತ್ಯಧಿಕವಾದ ಪ್ರಮಾಣದಲ್ಲಿ ದಿವ್ಯಶಕ್ತಿಯು ಬೇಕು. ಆದುದರಿಂದ ಮನುಷ್ಯವರ್ಗದ ಹೃದಯದಲ್ಲಿ ಮತ್ತು ಮನಸ್ಸಿನಲ್ಲಿ ಈಶ್ವರಚೈತನ್ಯವೆ ವ್ಯಕ್ತವಾಗುವುದು ಅವಶ್ಯಕ. ಕೇವಲ ಸ್ಥೂಲವಾದ ಅಥವಾ ಮನಸ್ಸಿಗೆ ಸಂಬಂಧಿಸಿದ ಬದಲಾವಣೆಯಾಗಬೇಕಾದರೆ ಅವತಾರವು ಆಗಲೇಬೇಕಾದ ಅಗತ್ಯವಿಲ್ಲ. ಈ ವಿಧವಾದ ಬದಲಾವಣೆಯಾಗಬೇಕಾದಾಗ ಮನುಷ್ಯಕೋಟಿಯಲ್ಲಿ ಹೊಸಶಕ್ತಿಯು ಸಂಚಾರವಾಗುತ್ತದೆ. ಮನುಷ್ಯರು ತಮ್ಮ ಸಾಮಾನ್ಯಮಟ್ಟಕ್ಕಿಂತ ಮೇಲಕ್ಕೇಳುತ್ತಾರೆ. ಅವರಲ್ಲಿ ಹೆಚ್ಚು ಶಕ್ತಿಯೂ ಮನಸ್ಸಿನ ಸಾಮರ್ಥ್ಯವೂ ತತ್ಕಾಲದಲ್ಲಿ ವ್ಯಕ್ತವಾಗುತ್ತವೆ. ಈ ಚೈತನ್ಯತರಂಗವು ಪ್ರವಹಿಸಿ

ದಾಗ ಉಳಿದವರಿಗಿಂತ ಎಲ್ಲೋ ಕೆಲವು ಜನರು ಅತಿಶಯವಾದ ಶಕ್ತಿಸಾಮರ್ಥ್ಯ ಗಳನ್ನು ಪ್ರದರ್ಶಿಸಿ ಆಗಿನ ಸಮಾಜಕ್ಕೆ ಕಿರೀಟಪ್ರಾಯರಾಗಿರುತ್ತಾರೆ; ಇವರೆ ವಿಭೂತಿಪುರುಷರು. ಮನುಷ್ಯ ಸಾಮಾನ್ಯರಲ್ಲಿ ಆಗಬೇಕಾದ ಬದಲಾವಣೆಯು ಇವರ ನೇತೃತ್ವದಲ್ಲಿ ಆಗುತ್ತದೆ. ಯೂರೋಪಿನಲ್ಲಿ ಕ್ರೈಸ್ತಮತದಲ್ಲಿ ಆದ ರೆಫರ್ಮೇಷನ್ (Reformation) ಎಂಬ ಕ್ರಾಂತಿಕಾರಕವಾದ ಸುಧಾರಣೆಯೂ, ಫ್ರಾನ್ಸ್ ದೇಶದಲ್ಲಿ ನಡೆದ ರಾಜಕೀಯವಾದ ಮಹಾಕ್ರಾಂತಿಯೂ ಮೇಲೆ ಹೇಳಿದ ಗುಂಪಿಗೆ ಸೇರಿದ ಘಟನೆಗಳು. ಇವು ಆಧ್ಯಾತ್ಮ ಪ್ರಪಂಚಕ್ಕೆ ಸೇರಿದ ದೊಡ್ಡ ಘಟನೆಗಳಲ್ಲ; ವ್ಯವಹಾರಕ್ಕೆ ಸಂಬಂಧಿಸಿದ ಮತ್ತು ಮಾನಸಿಕವಾದ ಬದಲಾವಣೆಗಳು ಮಾತ್ರ. ರೆಫರ್ಮೇಷನ್ ಎನ್ನುವುದು ಕ್ರೈಸ್ತಮತದ ಸ್ವರೂಪ ಮತ್ತು ಆಚರಣೆಗೆ ಸಂಬಂಧಿಸಿದ ಕ್ರಾಂತಿ; ಫ್ರಾನ್ಸಿನ ಮಹಾಕ್ರಾಂತಿಯಲ್ಲಾದರೊ ರಾಜಕೀಯ ತತ್ವಗಳು, ರಾಜ್ಯಭಾರಕ್ರಮ, ಆಡಳಿತದ ಉದ್ದೇಶಗಳು ಇವುಗಳಿಗೆ ಮತ್ತು ಸಾಮಾಜಿಕ ತತ್ವಗಳಿಗೆ ಸಂಬಂಧಿಸಿದ ಭಾವನೆಗಳಲ್ಲಿ ವಿಶೇಷವಾದ ಬದಲಾವಣೆಗಳಾದುವು. ಇವುಗಳಿಂದ ಜನಸಾಮಾನ್ಯರ ಪ್ರಜ್ಞೆಯಲ್ಲಿ ಆದ ಬದಲಾವಣೆಯು ಬಾಹ್ಯವಾದ ಚಟುವಟಿಕೆ ಮತ್ತು ಮನಸ್ಸಿನ ಮಟ್ಟದಲ್ಲಾಯಿತೆ ಹೊರತು ಆಧ್ಯಾತ್ಮಿಕ ಮಟ್ಟದಲ್ಲಿ ಹೊಸ ಬೆಳವಣಿಗೆಯಾಗಲಿಲ್ಲ. ಆದರೆ ಪ್ರಪಂಚಕ್ಕೆ ಪ್ರಾಪ್ತವಾದ ವಿಷಮ ಸನ್ನಿವೇಶದ ಮೂಲಕಾರಣವು ಆಧ್ಯಾತ್ಮಿಕವಾದರೆ ಆಗ ಆಧ್ಯಾತ್ಮಿಕ ಬದಲಾವಣೆಯನ್ನುಂಟುಮಾಡಲು ಈಶ್ವರನ ಚೈತನ್ಯವೇ ಮನುಷ್ಯನ ದೇಹ ಮತ್ತು ಮನಸ್ಸುಗಳಲ್ಲಿ ಅಂಶರೂಪವಾಗಿಯೊ ಅಥವಾ ಪೂರ್ಣವಾಗಿಯೊ ವ್ಯಕ್ತವಾಗುತ್ತದೆ. ಇದೇ ಅವತಾರವೆಂದೆನಿಸಿಕೊಳ್ಳುತ್ತದೆ.

ಖಿಲವಾಗಿರುವ ಧರ್ಮವನ್ನು ಉದ್ಧರಿಸಿ ಪುನಃ ಸಂಸ್ಥಾಪನೆ ಮಾಡುವುದೆ ಅವತಾರಪುರುಷನು ಎಲ್ಲರಿಗೂ ಗೋಚರವಾಗುವಂತೆ ಮಾಡುವ ಕೆಲಸವೆಂದು ಗೀತೆಯಲ್ಲಿ ಹೇಳಿದೆ. ಪ್ರತಿಯೊಂದು ಯುಗದಲ್ಲಿಯೂ ಧರ್ಮವು ಕ್ಷೀಣವಾಗಿ, ವೀರ್ಯವನ್ನು ಕಳೆದುಕೊಳ್ಳುತ್ತದೆ; ಅಧರ್ಮವು ತಲೆಯೆತ್ತಿ, ಪ್ರಬಲವಾಗುತ್ತದೆ; ಧರ್ಮಮಾರ್ಗದಲ್ಲಿ ಹೋಗುವವರನ್ನು ಕಷ್ಟಕ್ಕೆ ಗುರಿಮಾಡುತ್ತದೆ. ಆಗ ಅವತಾರವು ಸಂಭವಿಸಿ ಧರ್ಮವನ್ನು ಪ್ರಬಲವನ್ನಾಗಿ ಮಾಡುತ್ತದೆ. ಧಾರ್ಮಿಕವಾದ ಕ್ರಿಯೆಗಳೂ ಧರ್ಮಮಾರ್ಗದಲ್ಲಿ ನಡೆಯುವವರೂ ಧರ್ಮವನ್ನು ಪ್ರತಿನಿಧಿಸುತ್ತಾರೆ; ಧರ್ಮವಿರುದ್ಧವಾದ ಕ್ರಿಯೆಗಳೂ, ಅಧರ್ಮಿಗಳಾದ ಜನರೂ ಅಧರ್ಮವನ್ನು ಪ್ರತಿನಿಧಿಸುತ್ತಾರೆ.

ಸ್ಥೂಲವಾಗಿ ನೋಡಿದಾಗ ಅವತಾರಪುರುಷನ ಕೆಲಸದಲ್ಲಿ ಎಲ್ಲರಿಗೂ ಗೋಚರವಾಗುವ ಭಾಗವು ಯಾವುದೆಂದರೆ ಅಧರ್ಮದ ಪ್ರಾಬಲ್ಯದಿಂದ ದುಃಖ ಕ್ಕೀಡಾಗಿರುವ ಸಾಧುಗಳ ಸಂಕಟವನ್ನು ನಿವಾರಿಸುವುದು; ಅಧರ್ಮವನ್ನೆ ಎತ್ತಿ ಹಿಡಿಯಲು ಯತ್ನಿಸುತ್ತಿರುವ ದುಷ್ಟರನ್ನು ನಾಶಮಾಡುವುದು. ಈ ವಿಷಯವಾಗಿ (ಅವತಾರಪುರುಷನ ಕೆಲಸವನ್ನು) ಗೀತೆಯಲ್ಲಿ ಹೇಳಿರುವ ಮಾತುಗಳಿಗೆ ಸಂಕುಚಿತ ವಾದ ಅರ್ಥವನ್ನು ಸುಲಭವಾಗಿ ಕೊಡಬಹುದು; ಹಾಗೆ ಮಾಡಿದರೆ ಅವತಾರ ಕ್ಕಿರುವ ಗಂಭೀರವಾದ ಆಧ್ಯಾತ್ಮಿಕ ಅರ್ಥವೆ ನಮಗೆ ಲಭಿಸುವುದಿಲ್ಲ. ಧರ್ಮ ಎಂಬ ಪದಕ್ಕೆ ನೈತಿಕ, ವ್ಯಾವಹಾರಿಕ, ನೈಸರ್ಗಿಕ, ತಾತ್ವಿಕ, ಮತಕ್ಕೆ ಸಂಬಂಧಿಸಿದ ಮತ್ತು ಆಧ್ಯಾತ್ಮಿಕ ಇವೆ ಮುಂತಾದ ಅನೇಕ ಮಟ್ಟಗಳಲ್ಲಿ ಅನೇಕ ಅರ್ಥಗಳಿವೆ. ಇವುಗಳಲ್ಲಿ ಉಳಿದುವುಗಳನ್ನೆಲ್ಲ ಎಣಿಸದೆ ಯಾವುದೊ ಒಂದು ಮಟ್ಟದಲ್ಲೆ, ದೃಷ್ಟಿಯಲ್ಲೆ ಅರ್ಥ ಮಾಡಬಹುದು; ಎಂದರೆ ಕೇವಲ ನೈತಿಕದೃಷ್ಟಿಯಿಂದ ಅಥವಾ ಮತದೃಷ್ಟಿಯಿಂದ ಅಥವಾ ತಾತ್ವಿಕದೃಷ್ಟಿಯಿಂದ ಅರ್ಥಮಾಡಬಹುದು. ನೈತಿಕದೃಷ್ಟಿಯಿಂದ ಹೇಳಿದರೆ ಧರ್ಮವು ಸದಾಚಾರದ ನಿಯಮ; ಎಂದರೆ ಸರಿಯಾದ ನಡತೆಯನ್ನು ನಿರೂಪಿ ಸುವ ನಿಯಮ. ಇನ್ನೂ ಬಾಹ್ಯವಾದ ಮತ್ತು ಸ್ಥೂಲವಾದ ದೃಷ್ಟಿಯಿಂದ ಹೇಳು ವುದಾದರೆ, ಧರ್ಮವು ಸಾಮಾಜಿಕ ಮತ್ತು ರಾಜಕೀಯ ಕ್ಷೇತ್ರಗಳಲ್ಲಿ, ಅಥವಾ ಕೇವಲ ಸಮಾಜದಲ್ಲಿ ಮಾತ್ರ, ನ್ಯಾಯವಾದ ನಡವಳಿಕೆ. ಹೀಗೆ ಅರ್ಥಮಾಡಿದರೆ ಆಗ ಪ್ರಪಂಚದಲ್ಲಿ ಅನ್ಯಾಯ, ಅಧರ್ಮ ಮತ್ತು ಹಿಂಸೆಗಳು ತಲೆಯೆತ್ತಿದಾಗ ಅವತಾರವು ಸಂಭವಿಸುವುದೆಂದೂ, ಒಳ್ಳೆಯವರನ್ನು ರಕ್ಷಿಸಿ ದುಷ್ಟರನ್ನು ನಾಶಮಾಡಿ ಅವತಾರಪುರುಷನು ಅನ್ಯಾಯವನ್ನೂ ಅಧರ್ಮವನ್ನೂ ತೊಡೆದು ಹಾಕುತ್ತಾನೆಂದೂ ಮನುಷ್ಯರಲ್ಲಿ ಮತ್ತೊಮ್ಮೆ ನ್ಯಾಯವಾದ ನಡವಳಿಕೆಯನ್ನು ಸ್ಥಾಪಿಸುತ್ತಾನೆಂದೂ, ಅರ್ಥಮಾಡಬೇಕಾಗುತ್ತದೆ.

ಈ ದೃಷ್ಟಿಯಿಂದ ಕೃಷ್ಣಾವತಾರವು ಪುರಾಣದಲ್ಲಿ ಹೀಗೆ ವರ್ಣಿಸಲ್ಪಟ್ಟಿದೆ. ಭೂಮಿಯಲ್ಲಿ ರಾಕ್ಷಸರ ಮತ್ತು ದುರ್ಯೋಧನ ಮುಂತಾದ ಕೌರವರ ಹಾವಳಿಯು ಅತ್ಯಧಿಕವಾಯಿತು. ಭೂದೇವಿಯು ಭಗವಂತನನ್ನು ಅವತಾರಮಾಡಬೇಕೆಂದೂ, ಭೂಭಾರವನ್ನು ಕಡಿಮೆ ಮಾಡಬೇಕೆಂದೂ ಪ್ರಾರ್ಥಿಸಿಕೊಂಡಳು. ವಿಷ್ಣುವು ಕೃಷ್ಣ ನಾಗಿ ಅವತಾರಮಾಡಿದನು. ಹಿಂಸೆಗೆ ಗುರಿಯಾಗಿದ್ದ ಪಾಂಡವರನ್ನು ರಕ್ಷಿಸಿ, ಅಧರ್ಮನಿರತರಾದ ಕೌರವರನ್ನು ನಾಶಮಾಡಿದನು. ಇದರ ಹಿಂದಿನ ಅವತಾರ ಗಳಲ್ಲಿಯೂ ಹೀಗೆಯೇ; ರಾವಣನ ಅಧರ್ಮದ ಆಳ್ವಿಕೆಯನ್ನು ಕೊನೆಗಾಣಿಸಲು

ವಿಷ್ಣುವು ರಾಮನಾಗಿ ಅವತಾರಮಾಡಿದನು. ಅಧರ್ಮಕ್ಕೆ ಬಿದ್ದಿದ್ದ ಕ್ಷತ್ರಿಯರನ್ನು ನಾಶಮಾಡಲು ಪರಶುರಾಮಾವತಾರವಾಯಿತು. ರಾಕ್ಷಸನಾದ ಬಲಿಯ ಆಳ್ವಿಕೆಯನ್ನು ಕೊನೆಗಾಣಿಸಲು ವಾಮನಾವತಾರವಾಯಿತು. ಆದರೆ ಈರೀತಿ ದುಷ್ಟರನ್ನು ನಾಶಮಾಡಿ ಶಿಷ್ಟರನ್ನು ರಕ್ಷಿಸಿ ಅಧರ್ಮವನ್ನು ತೊಡೆದು, ಧರ್ಮವನ್ನು ಅವತಾರ ಪುರುಷರು ಉದ್ಧರಿಸಿದರು ಎಂಬ ಪುರಾಣಕಥೆಗಳಲ್ಲಿರುವ ನಿರೂಪಣೆಯು ಅವತಾರದ ವಿಷಯದಲ್ಲಿ ಸಂಪೂರ್ಣವಾದ ತಿಳಿವಳಿಕೆಯನ್ನು ಕೊಡುವುದಿಲ್ಲ; ಅವತಾರದ ಆಧ್ಯಾತ್ಮಿಕ ಉದ್ದೇಶವನ್ನು ತಿಳಿಸುವುದಿಲ್ಲ. ಅವತಾರಪುರುಷನ ಕೆಲಸವು ಕೇವಲ ಬಾಹ್ಯವಾದ ಸಾಮಾಜಿಕ ಉದ್ಧಾರಮಾತ್ರವಲ್ಲ. ಹಾಗಾಗಿದ್ದರೆ ಕ್ರಿಸ್ತ ಮತ್ತು ಬುದ್ಧರ ಅವತಾರಕ್ಕೆ ಕಾರಣವೆ ಇಲ್ಲ. ಅವರು ದುಷ್ಟನಿಗ್ರಹ ಮತ್ತು ಶಿಷ್ಟಪರಿಪಾಲನೆಗಾಗಿ ಅವತರಿಸಲಿಲ್ಲ. ಜನರಿಗೆ ಒಂದು ಹೊಸ ಆಧ್ಯಾತ್ಮಿಕ ಸಂದೇಶವನ್ನು ನೀಡಿ, ಬೆಳವಳಿಕೆಗೆ ಮತ್ತು ಆತ್ಮಸಾಕ್ಷಾತ್ಕಾರಕ್ಕೆ ಒಂದು ಹೊಸ ಮಾರ್ಗವನ್ನು ತೋರಿಸಿ ಕೊಡುವುದೆ ಕ್ರಿಸ್ತ ಮತ್ತು ಬುದ್ಧರು ಅವತರಿಸಿದ ಉದ್ದೇಶ.

ಹೀಗಲ್ಲದೆ ಮತದ ದೃಷ್ಟಿಯಿಂದ ಮತ್ತು ಆಧ್ಯಾತ್ಮಿಕ ದೃಷ್ಟಿಯಿಂದ ಮಾತ್ರ **ಧರ್ಮ** ಎಂಬ ಪದಕ್ಕೆ ಅರ್ಥಮಾಡಬಹುದು. ಇದೇನೊ ಧರ್ಮದ ಸಾರವೇ ಹೌದು; ಆದರೆ, ನಾವು ಹೀಗೆ ಅರ್ಥಮಾಡಿದರೆ, ಅವತಾರದಿಂದಾಗುವ ಒಂದು ಮುಖ್ಯವಾದ ಕೆಲಸವನ್ನು ಅಲಕ್ಷ್ಯಮಾಡಿದಂತಾಗುತ್ತದೆ. ಅವತಾರಪುರುಷರ ಕೆಲಸಗಳನ್ನು ಗಮನಿಸಿದರೆ ಅವರಿಂದ ಎರಡು ವಿಧವಾದ ಕೆಲಸಗಳು ನಡೆದಿರುವುದು ಗೋಚರವಾಗುತ್ತದೆ. ಆಂತರವಾಗಿ ಜನರಲ್ಲಿ ಆಧ್ಯಾತ್ಮಿಕಶಕ್ತಿ ಹೆಚ್ಚುವಂತೆ ಮಾಡುವುದು ಮತ್ತು ಬಾಹ್ಯವಾಗಿ ಆಗಿನ ಸಮಾಜದಲ್ಲಿ ನೈತಿಕ ಮತ್ತು ರಾಜಕೀಯ ಕ್ಷೇತ್ರಗಳಲ್ಲಿ ಮಹತ್ವಪೂರ್ಣವಾದ ಬದಲಾವಣೆಗಳನ್ನು ಮಾಡುವುದು. ಅವತಾರವೆಂದರೆ ಮನುಷ್ಯರೂಪದಲ್ಲಿ ಈಶ್ವರನು ವ್ಯಕ್ತವಾಗಿ ಮನುಷ್ಯರೊಡನೆ ಇದ್ದುಕೊಂಡು ವ್ಯವಹರಿಸುವುದು; ಬಾಹ್ಯಪ್ರಪಂಚದಲ್ಲಿ ಈಶ್ವರನ ಸಂಕಲ್ಪ ಮತ್ತು ಜ್ಞಾನ, ಇವು ವ್ಯಕ್ತವಾಗುವುದು. ಆದುದರಿಂದ ಸಹಜವಾಗಿಯೆ ಈ ಕೆಲಸವು ಆಂತರವಾಗಿಯೂ ಮತ್ತು ಬಾಹ್ಯವಾಗಿಯೂ ಆಗಬೇಕು. ಆಂತರವಾಗಿ ಆಧ್ಯಾತ್ಮಿಕ ಬೆಳವಳಿಕೆ ಮತ್ತು ಬಾಹ್ಯವಾಗಿ ಜನರ ನಿತ್ಯಜೀವನದಲ್ಲಿ ಗೋಚರವಾಗುವ ಬದಲಾವಣೆಗಳು ಇವೆರಡೂ ಅವತಾರಪುರುಷನ ಕೆಲಸ.

ಕೆಲವು ವೇಳೆ ಕ್ರಿಸ್ತ ಬುದ್ಧರಂತೆ, ಭಗವಂತನು ಹೊಸ ಆಧ್ಯಾತ್ಮಿಕ ಮಾರ್ಗವನ್ನು ಬೋಧಿಸುವ ಗುರುವಾಗಿ ಅವತರಿಸಬಹುದು. ಅವರ ಭೂಲೋಕವಾಸವು

ಮುಗಿದನಂತರ, ಅವರ ಕೆಲಸ ಮತ್ತು ಉಪದೇಶಗಳ ಪ್ರಭಾವದಿಂದ ಜನರ ಶೀಲದಲ್ಲಿ ಬೆಳೆವಣಿಗೆಯು, ಬಾಹ್ಯವಾಗಿಯೂ ಜನರ ನಿತ್ಯಜೀವನದಲ್ಲಿ ಮತ್ತು ಸಾಮಾಜಿಕ ಕ್ಷೇತ್ರಗಳಲ್ಲಿ, ಜನಾಂಗದ ಲಕ್ಷ್ಯದಲ್ಲಿ ಮತ್ತು ಆದರ್ಶಗಳಲ್ಲಿ ಮಹತ್ತಾದ ಬದಲಾವಣೆಗಳು ಉಂಟಾಗುತ್ತವೆ.

ಅಥವಾ ಪ್ರಪಂಚದಲ್ಲಿ ಬಾಹ್ಯವಾದ ಬದಲಾವಣೆಗಳನ್ನು ಮಾಡುವುದಕ್ಕಾಗಿ ಪರಮಾತ್ಮನ ಶಕ್ತಿಯನ್ನು ಕಾರ್ಯರೂಪದಲ್ಲಿ ಪ್ರಯೋಗಿಸುವ ಅವತಾರಗಳೂ ಆಗಬಹುದು. ಇಂತಹ ಅವತಾರಗಳ ಉದ್ದೇಶವು ಸಾಮಾಜಿಕ, ರಾಜಕೀಯ ಮತ್ತು ನೈತಿಕ ಈ ಕ್ಷೇತ್ರಗಳಲ್ಲಿ ಬದಲಾವಣೆಗಳನ್ನು ಮಾಡುವುದೆಂದು ಜನರಿಗೆ ತೋರಬಹುದು. ಪುರಾಣದ ಪ್ರಕಾರ ರಾಮ ಮತ್ತು ಕೃಷ್ಣಾವತಾರಗಳು ಇಂತಹವು. ಆದರೆ ಇಂತಹ ಅವತಾರಪುರುಷರ ಜೀವನದ ಪರಿಣಾಮವಾಗಿ ಆಗಿನ ಜನಾಂಗದ ಅಂತರಜೀವನದ ಮೇಲೆ ಪ್ರಬಲವಾದ ಪ್ರಭಾವವು ಉಂಟಾಗುತ್ತದೆ; ಅವರ ಆಧ್ಯಾತ್ಮಿಕಜೀವನಕ್ಕೆ ಹೊಸ ಚೈತನ್ಯವು ಉಂಟಾಗಿ, ಆಧ್ಯಾತ್ಮಿಕಪ್ರಪಂಚದಲ್ಲಿ ನವಯುಗವು ಉದಯಿಸುತ್ತದೆ.

ಕ್ರಿಸ್ತ ಮತ್ತು ಬುದ್ಧರು ಆಧ್ಯಾತ್ಮಿಕ ಬೆಳವಳಿಕೆಗೆ ಒಂದು ಹೊಸ ಮಾರ್ಗ ವನ್ನು ತೋರಿಸುವ ಗುರುಗಳಾಗಿ ಅವತರಿಸಿದರು. ಆದರೆ ಇಷ್ಟು ದಿನಗಳಾದ ಮೇಲೆ, ಕ್ರೈಸ್ತ ಮತ್ತು ಬೌದ್ಧಮತಗಳ ಶಾಶ್ವತವಾದ ಮತ್ತು ಜೀವಂತವಾದ ಶಕ್ತಿ ಮತ್ತು ಪ್ರಭಾವಗಳು ವಿಶೇಷವಾಗಿ ನೈತಿಕ, ಸಾಮಾಜಿಕ ಮತ್ತು ನಿತ್ಯಜೀವ ನದ ಆಚರಣೆಯ ರಂಗಗಳಲ್ಲಿಯೂ ಕಂಡುಬರುತ್ತದೆ. ಇದು ಗಮನಾರ್ಹವಾದ ವಿಷಯ. ಈ ಮತಗಳ ತತ್ವಗಳನ್ನೂ ದರ್ಶನಗಳನ್ನೂ ತಿರಸ್ಕರಿಸಿದ ಜನರೂ ಜನಾಂಗಗಳೂ ಕೂಡ ಇವುಗಳ ಪ್ರಭಾವಕ್ಕೆ ಒಳಗಾಗಿದ್ದಾರೆ. ಬುದ್ಧನು ಕಾಲ ವಾದ ಮೇಲೆ ಹಿಂದೂಮತವು "ಬುದ್ಧ", "ಸಂಘ" ಮತ್ತು "ಧರ್ಮ" ಎಂಬ ಬೌದ್ಧಮತದ ಮೂರು ತತ್ವಗಳನ್ನೂ ನಿರಾಕರಿಸಿತು. ಆದರೆ ಹಿಂದೂಸಮಾಜ, ಜನರ ಭಾವನೆಗಳು ಮತ್ತು ಜೀವನ ಇವುಗಳ ಮೇಲೆ ಬೌದ್ಧಮತದ ನೈತಿಕ ಉಪದೇಶದ ಪ್ರಭಾವವು ಅಚ್ಚಳಿಯದೆ ಮೂಡಿದೆ. ಹಾಗೆಯೆ ಈಗ ಯೂರೋಪ್ ಖಂಡದಲ್ಲಿ ಎಲ್ಲರೂ ಹೆಸರಿಗೆ ಮಾತ್ರ ಕ್ರೈಸ್ತಮತದವರಾದರೂ ಕ್ರಿಸ್ತನು ಬೋಧಿ ಸಿದ ಆಧ್ಯಾತ್ಮಿಕತತ್ವಗಳನ್ನು ಅನೇಕ ಜನರು ಆಧ್ಯಾತ್ಮಿಕದೃಷ್ಟಿಯಿಂದ ತಿಳಿದು ಕೊಂಡಿಲ್ಲ. ಈ ಉಪದೇಶದ ಪ್ರಭಾವವು ನೈತಿಕ ಮತ್ತು ಸಾಮಾಜಿಕ ಮಟ್ಟದಲ್ಲಿ ಪರೋಪಕಾರದ ಮತ್ತು ಸೇವೆಯ ಮೂಲಕವೂ, ರಾಜಕೀಯ ಮತ್ತು ಸಾಮಾಜಿಕ

ಮಟ್ಟಗಳಲ್ಲಿ ಸ್ವಾತಂತ್ರ್ಯ, ಸಮತೆ ಮತ್ತು ಸೋದರಭಾವಗಳೆಂಬ ಆದರ್ಶಗಳಾಗಿಯೂ ವ್ಯಕ್ತವಾಗಿದೆ. ಕ್ರೈಸ್ತಮತದ ಸಿದ್ಧಾಂತಗಳನ್ನೂ, ಆಧ್ಯಾತ್ಮಿಕತತ್ವಗಳನ್ನೂ ತಿರಸ್ಕರಿಸಿದ ಜನರಿಂದಲೂ, ಕ್ರೈಸ್ತಮತದ ಸಿದ್ಧಾಂತಗಳನ್ನೂ, ಅದರಲ್ಲಿರುವ ಕೆಲವು ಅಂಧ ಶ್ರದ್ಧೆಗಳನ್ನೂ ಹೋಗಲಾಡಿಸಿ ವಿಜ್ಞಾನದ ಮನೋಭಾವವನ್ನು ಹರಡಲು ಯತ್ನಿಸಿದ ಯುಗದಲ್ಲಿಯೂ ಕೂಡ ಮೇಲೆ ಹೇಳಿದ ರೀತಿಯಲ್ಲಿ ಈ ಆಧ್ಯಾತ್ಮಿಕತತ್ವಗಳ ಪ್ರಭಾವವು ಸಾಮಾಜಿಕ, ರಾಜಕೀಯ ಮತ್ತು ನೈತಿಕಕ್ಷೇತ್ರಗಳಲ್ಲಿ ಕಾಣಿಸಿಕೊಳ್ಳುತ್ತದೆ.

ಏಸುಕ್ರಿಸ್ತನಾದರೊ ಚಾರಿತ್ರಿಕವ್ಯಕ್ತಿ. ಅವನು ಬಾಳಿದುದು, ಉಪದೇಶಿಸಿದುದು ಇತಿಹಾಸಸಿದ್ಧವಾದ ವಿಷಯ. ಆದರೆ ರಾಮ ಮತ್ತು ಕೃಷ್ಣರು ಬಹಳ ಹಿಂದಿನ ಕಾಲದಲ್ಲಿ ಜೀವಿಸಿದ್ದರೆಂದು ಹೇಳಿದೆ. ಅವರ ವಿಚಾರವನ್ನು ಕಾವ್ಯ ಮತ್ತು ಪುರಾಣಗಳಲ್ಲಿ ಮಾತ್ರ ಕಾಣಬಹುದು. ಇವು ಕೇವಲ ಕಾಲ್ಪನಿಕವೆಂದೂ, ಕಟ್ಟುಕತೆಗಳೆಂದೂ ಕೆಲವರ ಅಭಿಪ್ರಾಯ. ಇವರು ನಿಜವಾಗಿ ಜೀವಿಸಿದ್ದರೊ ಅಥವಾ ಇದೆಲ್ಲವೂ ಕಟ್ಟುಕತೆಯೊ ಎಂಬುದು ನಮಗೆ ಸದ್ಯಕ್ಕೆ ಅಪ್ರಕೃತ. ಆದರೆ ಇವರ ಪ್ರಭಾವವು ಜನಾಂಗದ ಮನಸ್ಸಿನ ಮೇಲೂ, ಮನುಷ್ಯರ ಹೃದಯದಲ್ಲಿಯೂ ಶಾಶ್ವತವಾಗಿದೆ. ಜನರ ಆಧ್ಯಾತ್ಮಿಕಬೆಳವಳಿಕೆಗೆ ಅದು ಸಹಾಯಕವಾಗಿದೆಯೆಂಬುದೆ ನಮಗೆ ಮುಖ್ಯವಾದ ವಿಷಯ. ಅವತಾರವೆಂದರೆ ಭಗವಂತನ ಪ್ರಜ್ಞೆಯು ಈ ಲೋಕದಲ್ಲಿ ವ್ಯಕ್ತವಾಗುವುದು ; ಅವತಾರಪುರುಷನ ಜೀವನಕಾಲದಲ್ಲಿ ಬಾಹ್ಯವಾಗಿ ಕರ್ಮಗಳನ್ನು ಮಾಡುವುದು ಇವನ ಕೆಲಸದ ಒಂದುಭಾಗ ; ಅವನ ಜೀವನದ ನಂತರವೂ ಬಹುಕಾಲ ಜನರ ಹೃದಯದಲ್ಲಿ ಆಧ್ಯಾತ್ಮಿಕ ಪ್ರಭಾವವನ್ನು ಬೀರುವುದು ಅವತಾರದ ಕೆಲಸದ ಇನ್ನೊಂದು ಭಾಗ. ಅಥವಾ ಅವತಾರಪುರುಷನು ಮುಖ್ಯವಾಗಿ ಆಧ್ಯಾತ್ಮಿಕಮಾರ್ಗವನ್ನೆ ಬೋಧಿಸುವ ಗುರುವಾಗಿ ಬರಬಹುದು ; ಆಗ ಇವನು ಸ್ಥಾಪಿಸಿದ ಮತವು ಬೇಗ ಖಿಲವಾದರೂ ಆವನ ಪ್ರಭಾವವು ಜನರ ಮನಸ್ಸಿನಲ್ಲಿ, ಆಚರಣೆಯಲ್ಲಿ ಮತ್ತು ಬಾಹ್ಯಜೀವನದಲ್ಲಿ ಬಹಳಕಾಲದನಂತರವೂ ಕಂಡುಬರುತ್ತದೆ.

ಗೀತೆಯಲ್ಲಿ ಹೇಳಿರುವ ರೀತಿಯಲ್ಲಿ ಅವತಾರಪುರುಷನ ಕಾರ್ಯವನ್ನು ಚೆನ್ನಾಗಿ ಮತ್ತು ಪೂರ್ಣವಾಗಿ ಗ್ರಹಿಸಬೇಕಾದರೆ, ನಾವು "ಧರ್ಮ" ಎಂಬ ಪದಕ್ಕೆ ಸಂಪೂರ್ಣವಾದ ಗಂಭೀರವಾದ ಮತ್ತು ಅತ್ಯಂತ ವ್ಯಾಪಕವಾದ ಅರ್ಥವನ್ನು ಕೊಡಬೇಕು. ಜನಾಂಗದಲ್ಲಿ ಈಶ್ವರನ ಸಂಕಲ್ಪ ಮತ್ತು ಜ್ಞಾನಗಳು ಮಾನವವರ್ಗದ ಆಧ್ಯಾತ್ಮಿಕ ಬೆಳವಳಿಕೆಯನ್ನೂ ಮತ್ತು ಜೀವನದ ಸನ್ನಿವೇಶ

ವನ್ನೂ ಮತ್ತು ಘಟನೆಗಳನ್ನೂ ಕೆಲವು ಆಂತರವಾದ ಮತ್ತು ಬಾಹ್ಯವಾದ ನಿಯಮ ಗಳಿಗೆ ಅನುಸಾರವಾಗಿ ರೂಪಿಸುತ್ತವೆ. ಈ ನಿಯಮಗಳೆ ಧರ್ಮವೆನಿಸಿಕೊಳ್ಳುತ್ತವೆ. ಆರ್ಯಸಂಸ್ಕೃತಿಯಲ್ಲಿ ಧರ್ಮವೆಂದರೆ ಒಳ್ಳೆಯದು ; ಸರಿಯಾದುದು ; ನೀತಿಯುತ ವಾದುದು. ನ್ಯಾಯ ಮತ್ತು ಸದಾಚಾರಮಾತ್ರವಲ್ಲ. ಇತರ ಜೀವಿಗಳೊಡನೆಯೂ, ಜಡಪ್ರಪಂಚದೊಡನೆಯೂ ಮತ್ತು ದೇವರೊಡನೆಯೂ ಮನುಷ್ಯನಿಗಿರುವ ಎಲ್ಲ ಸಂಬಂಧಗಳೂ ಧರ್ಮವೆಂಬ ಪದದಲ್ಲಿ ಅಡಗಿವೆ. ಪ್ರಪಂಚದಲ್ಲಿ ಎಲ್ಲ ವಿಧವಾದ ವ್ಯಾಪಾರಗಳಲ್ಲಿಯೂ ಬಾಹ್ಯಜೀವನ ಮತ್ತು ಆಂತರವಾದ ಜೀವನಗಳಿಗೆ ಸಂಬಂಧಿ ಸಿದ ಎಲ್ಲ ವ್ಯಾಪಾರಗಳಲ್ಲಿಯೂ ಈಶ್ವರಚೈತನ್ಯವು ಯಾವ ಯಾವ ರೂಪಗಳಲ್ಲಿ, ಯಾವ ಯಾವ ನಿಯಮಗಳಿಗನುಸಾರವಾಗಿ ಪ್ರಕಟವಾಗುವುದೊ ಅವೆಲ್ಲವನ್ನೂ ಕೂಡ ಧರ್ಮವೆಂಬ ಪದವು ಸೂಚಿಸುತ್ತದೆ. ಧರ್ಮವು ಎಲ್ಲಕ್ಕೂ ಆಧಾರವಾಗಿದೆ. ಮತ್ತು ಬಾಹ್ಯವಾದ ಮತ್ತು ಆಂತರವಾದ ಎಲ್ಲ ಕರ್ಮಗಳನ್ನೂ ಒಂದನ್ನಾಗಿ ಸೇರಿಸಿ ಧರಿಸಿದೆ. ತತ್ತ್ವತಃ ನಮ್ಮ ಎಲ್ಲ ವ್ಯಾಪಾರಗಳನ್ನೂ ನಮಗೆ ಗೋಚರವಿಲ್ಲ ದಂತೆಯೆ ನಿಯಂತ್ರಿಸುವ ಪ್ರಕೃತಿಯ ಮೂಲಸಿಯಮವನ್ನೆ ಧರ್ಮವೆನ್ನಬಹುದು. ಈ ದೃಷ್ಟಿಯಿಂದ ನೋಡಿದರೆ ಪ್ರತಿ ಜೀವಿಗೆ, ಜಾತಿಗೆ, ವರ್ಗಕ್ಕೆ, ವ್ಯಕ್ತಿಗೆ ಮತ್ತು ಸಮೂಹಕ್ಕೆ ಅನ್ವಯಿಸುವ ಜಾತಿಧರ್ಮ, ಕುಲಧರ್ಮ, ಸ್ವಧರ್ಮ, ಜನಾಂಗದಧರ್ಮ ಮುಂತಾದ ಧರ್ಮಗಳಿವೆ. ಇದಲ್ಲದೆ ನಮ್ಮಲ್ಲಿರುವ ದೈವಾಂಶವು ಬೆಳೆದು, ಪೂರ್ಣವಾಗಿ, ವ್ಯಕ್ತವಾಗಬೇಕು ; ಹೀಗೆ ನಮ್ಮಲ್ಲಿರುವ ಈಶ್ವರಚೈತನ್ಯದ ವಿಕಾಸಕ್ಕೆ ಕಾರಣವಾದ ಆಧ್ಯಾತ್ಮಿಕ ನಿಯಮವೂಕೂಡ ಧರ್ಮವೇ. ಕೊನೆಯದಾಗಿ ಇತರ ರೊಡನೆ ನಾವು ಮಾಡುವ ವ್ಯವಹಾರಗಳನ್ನೂ ಇತರರನ್ನು ಕುರಿತು ಮಾಡುವ ಯೋಚನೆಗಳನ್ನೂ ನಿಯಂತ್ರಿಸುವ ನಿಯಮವೂ ಧರ್ಮವೇ; ಈಶ್ವರತ್ವವೆಂಬ ಗುರಿಯನ್ನು ನಾವೂ ಮತ್ತು ಒಟ್ಟು ಮಾನವವರ್ಗವೂ ಆದಷ್ಟು ಬೇಗನೆ ಮುಟ್ಟು ವಂತೆ ನಮ್ಮ ವರ್ತನೆಯನ್ನು ಧರ್ಮಾನುಸಾರವಾಗಿ ರೂಪಿಸಿಕೊಳ್ಳಬೇಕು.

ಧರ್ಮವೆಂಬುದು ಶಾಶ್ವತವೆಂದೂ, ಯಾವ ಮಾರ್ಪಾಟೂ ಅದರಲ್ಲಿ ಆಗುವು ದಿಲ್ಲವೆಂದೂ ಸಾಮಾನ್ಯವಾದ ತಿಳಿವಳಿಕೆ. ತತ್ತ್ವತಃ ಇದು ನಿಜವೆ; ಧರ್ಮವೆಂಬ ಯಾವ ಆದರ್ಶವು ನಮ್ಮ ಕಲ್ಪನೆಯಲ್ಲಿರುವುದೊ, ಅದರಲ್ಲಿ ಬದಲಾವಣೆಯಾಗು ವುದಿಲ್ಲ. ಆದರೆ ಅದರ ವ್ಯಕ್ತರೂಪಗಳಲ್ಲಿ ಧರ್ಮವು ನಿರಂತರವಾದ ಬದಲಾವಣೆಗೂ, ಬೆಳವಳಿಕೆಗೂ ಒಳಪಟ್ಟಿದೆ. ಇದಕ್ಕೆ ಕಾರಣವೇನೆಂದರೆ ಆದರ್ಶವನ್ನು ಮನುಷ್ಯನು ಇನ್ನೂ ಸಾಧಿಸಿಲ್ಲ; ಅದಕ್ಕನುಸಾರವಾಗಿ ನಡೆಯುತ್ತಿಲ್ಲ; ವರ್ತಿಸಲು ಪ್ರಯತ್ನ

ವನ್ನೇನೋ ಮಾಡುತ್ತಿದ್ದಾನೆ. ಧರ್ಮದ ವಿಷಯವಾಗಿ ಪೂರ್ಣವಾದ ಜ್ಞಾನವನ್ನು ಪಡೆದು ಅದನ್ನು ಆಚರಿಸುವ ಸ್ಥಿತಿಯನ್ನು ಕ್ರಮಕ್ರಮವಾಗಿ ಮುಟ್ಟುತ್ತಿದ್ದಾನೆ. ಹೀಗೆ ಬೆಳೆಯುವಾಗ ಈಶ್ವರನಲ್ಲಿರುವ ಪರಿಶುದ್ಧತೆ, ವೈಶಾಲ್ಯ, ಜ್ಯೋತಿ, ಸ್ವಾತಂತ್ರ್ಯ, ಶಕ್ತಿ, ಬಲ, ಆನಂದ, ಪ್ರೇಮ, ಸತ್ವ, ಏಕತ್ವ, ಸೌಂದರ್ಯ ಇವೇ ಮುಂತಾದ ಗುಣಗಳನ್ನು ನಮ್ಮಲ್ಲಿ ಬೆಳೆಸಿಕೊಳ್ಳಲು ಸಹಾಯಮಾಡುವುದೆಲ್ಲವೂ ಧರ್ಮವೇಯೆ. ಇದಕ್ಕೆ ವಿರುದ್ಧವಾಗಿ ಈ ಬೆಳವಳಿಕೆಗೆ ಅಡ್ಡಿಮಾಡುತ್ತಾ ನಿಯಮದ ಕಟ್ಟಿಗೆ ಒಳಪಡದೆ, ತನ್ನಲ್ಲಿ ಹುದುಗಿರುವ ದೈವಾಂಶವನ್ನು ವ್ಯಕ್ತಪಡಿಸದೆ, ವ್ಯಕ್ತವಾಗಲು ಅಡ್ಡಿಯಾಗಿರುವುದೆಲ್ಲವನ್ನೂ ಅಧರ್ಮವೆಂದು ಹೇಳಬೇಕು. ಈಶ್ವರನಲ್ಲಿರುವ ಕಲ್ಯಾಣಗುಣಗಳಿಗೆ ಬದಲಾಗಿ ವಿಕಾರ, ವಿರೋಧ, ಕೊಳೆ, ಸಂಕುಚಿತಭಾವ, ಬಂಧನ, ಅಜ್ಞಾನ, ಅಂಧಕಾರ, ದೌರ್ಬಲ್ಯ, ದುಷ್ಟತನ, ವಿರಸ, ದುಃಖ, ಭೇದ, ವಿಕಟವಾದುದು ಮತ್ತು ಒರಟುತನ ಇವೆಲ್ಲವೂ ಅಧರ್ಮದಲ್ಲಿ ಎದ್ದು ಕಾಣುತ್ತವೆ. ಆಧ್ಯಾತ್ಮಮಾರ್ಗದಲ್ಲಿ ಮುಂದುವರೆಯುವಾಗ ಮಾನವನು ಇದೆಲ್ಲವನ್ನೂ ಹಿಂದೆ ಬಿಡಬೇಕು. ಈ ಅಧರ್ಮವು ಧರ್ಮಕ್ಕೆ ವಿರುದ್ಧವಾಗಿದ್ದು ಅದರೊಡನೆ ಹೋರಾಡುತ್ತದೆ; ಅದನ್ನು ಜಯಿಸಿ, ಹಿಂದೂಡಿ, ಕೆಳಕ್ಕೆ ಅದುಮಲು ಯತ್ನಿಸುತ್ತಿರುತ್ತದೆ. ದುಃಖ, ಅಜ್ಞಾನ ಮತ್ತು ಅಂಧಕಾರಗಳನ್ನು ಉಂಟುಮಾಡುತ್ತದೆ. ಇವೆರಡಕ್ಕೂ ನಿರಂತರವಾಗಿ ಹೋರಾಟವು ನಡೆಯುತ್ತಲೇ ಇದೆ; ಕೆಲವುವೇಳೆ ಧರ್ಮಕ್ಕೂ, ಕೆಲವುಬಾರಿ ಅಧರ್ಮಕ್ಕೂ ಜಯವಾಗುತ್ತಿರುತ್ತದೆ ವೇದದಲ್ಲಿ ಇದನ್ನೆ ದೇವಾಸುರರ ಯುದ್ಧವೆಂದು ವರ್ಣಿಸಿದೆ; ಎಂದರೆ ಅದಿತಿಯ ಪುತ್ರರಾದ ದೇವತೆಗಳಿಗೂ ದಿತಿಯ ಪುತ್ರರಾದ ದೈತ್ಯರಿಗೂ ನಡೆಯುವ ಯುದ್ಧರೂಪದಲ್ಲಿ ವರ್ಣಿಸಿದೆ. ಅದಿತಿ ಎಂದರೆ ಪಾರವಿಲ್ಲದ್ದು, ಅಖಂಡವಾದುದು ಎಂದರ್ಥ; ದಿತಿ ಎಂದರೆ ಪರಿಮಿತವಾದುದು, ಖಂಡವಾಗಿರುವುದು ಎಂದರ್ಥ. ದೇವ ಎಂದರೆ ಪ್ರಕಾಶಮಾನ ಎಂದರ್ಥ. ಪಾರ್ಸಿಗಳ ಮತದಲ್ಲಿ ಅಹುರ ಮಜ್ದ ಮತ್ತು ಅಹ್ರಿಮಾನ್ ಇವರ ನಡುವೆ ನಡೆದ ಯುದ್ಧವೆಂದೂ, ಹಾಗೆಯೆ ಇಸ್ಲಾಂ ಮತದಲ್ಲಿ ಭಗವಂತ ಮತ್ತು ಅವನ ಪರಿವಾರಕ್ಕೂ ಮತ್ತು ಸೈತಾನ್ ಅಥವಾ ಇಬ್ಲಿಸ್ ಮತ್ತು ಅವನ ಪರಿವಾರಕ್ಕೂ ಮಾನವನ ಆತ್ಮವನ್ನು ವಶಪಡಿಸಿಕೊಳ್ಳುವುದಕ್ಕಾಗಿ ನಡೆದ ಯುದ್ಧವೆಂದೂ ನಿರೂಪಿಸಿದೆ.

ಅವತಾರಪುರುಷನ ಕಾರ್ಯವನ್ನು ರೂಪಿಸುವುದು ಈ ವಿಷಯವೇ. ಬೌದ್ಧ ಮತದಲ್ಲಿ ಭಿಕ್ಷುವು ನಿರ್ವಾಣಕ್ಕೆ ಇರುವ ಅಡ್ಡಿಗಳನ್ನು ನಿವಾರಿಸಲು ಬುದ್ಧ, ಸಂಘ

ಮತ್ತು ಧರ್ಮ, ಇವನ್ನು ಶರಣು ಹೋಗುತ್ತಾನೆ. ಇದೇರೀತಿ ಕ್ರೈಸ್ತಮತದಲ್ಲಿಯೂ ಕೂಡ ಕ್ರಿಶ್ಚಿಯನ್ ಜೀವನಧರ್ಮ, ಚರ್ಚ್ ಮತ್ತು ಕ್ರಿಸ್ತ ಎಂಬ ಮೂರು ತತ್ವಗಳಿವೆ. ಈ ಮೂರೂ ಅವತಾರಪುರುಷನ ಕೆಲಸದ ಅವಶ್ಯಕವಾದ ಅಂಶಗಳು. ಮೊದಲನೇದಾಗಿ ಒಂದು ಧರ್ಮವನ್ನು ಉಪದೇಶಮಾಡುತ್ತಾನೆ; ನಾವು ವಿಕಾಸ ಹೊಂದಿ ಕೆಳಮಟ್ಟದ ಜೀವನದಿಂದ ಮೇಲ್ಮಟ್ಟದ ಜೀವನಕ್ಕೆ ಏರಲು ಸಾಧನವಾಗುವ ಆತ್ಮಸಂಯಮರೂಪವಾದ ಧರ್ಮವನ್ನು ಬೋಧಿಸುತ್ತಾನೆ; ಸದಾಚಾರವೂ, ಇತರ ಮನುಷ್ಯರೊಡನೆ ಮತ್ತು ಪ್ರಾಣಿಗಳೊಡನೆ ನಾವು ಹೇಗೆ ವರ್ತಿಸಬೇಕೆಂಬ ನಿಯಮಗಳೂ ಈ ಧರ್ಮದಲ್ಲಿ ಅಡಗಿವೆ; ಉದಾಹರಣೆಗೆ ಬುದ್ಧನು ಉಪದೇಶಿಸಿದ ಆರ್ಯ ಅಷ್ಟಾಂಗಪಥ ಮತ್ತು ಕ್ರಿಸ್ತನು ಬೋಧಿಸಿದ ಶ್ರದ್ಧೆ (Faith) ಪ್ರೇಮ (Love) ಮತ್ತು ಶುಚಿತ್ವದ (Purity) ಧರ್ಮ.

ಎರಡನೆಯದೇನೆಂದರೆ ಸಂಘದ ಸ್ಥಾಪನೆ. ಮನುಷ್ಯನ ಎಲ್ಲ ವರ್ತನೆಗೂ ಎರಡು ಮುಖಗಳಿವೆ—ವೈಯಕ್ತಿಕ (ಪ್ರಾತಿಸ್ವಿಕ) ಮತ್ತು ಸಾಮೂಹಿಕ. ಏತಕ್ಕೆಂದರೆ ಒಂದೆ ಮಾರ್ಗವನ್ನನುಸರಿಸುವವರು, ಎಂದರೆ ಒಂದೆ ಆಧ್ಯಾತ್ಮಿಕ ಪಂಥವನ್ನನುಸರಿಸುವವರು ಸಹಜವಾಗಿಯೆ ಒಟ್ಟಿಗೆ ಸೇರಿ ಒಂದು ಗುಂಪಾಗಿ (ಸಮಾಜ) ಆಗುತ್ತಾರೆ ತನ್ನ ಮಹಿಮೆಯಿಂದಲೂ ಉಪದೇಶದಿಂದಲೂ ಆಕರ್ಷಿತರಾದ ಶಿಷ್ಯರನ್ನು ಒಟ್ಟಿಗೆ ಸೇರಿಸಲು ಅವತಾರಪುರುಷನು ಒಂದು ಸಂಘವನ್ನು ಸ್ಥಾಪಿಸುತ್ತಾನೆ.

ಇದೇ ರೀತಿಯಾಗಿ ವೈಷ್ಣವಮತದಲ್ಲಿ ಭಾಗವತ, ಭಕ್ತ ಮತ್ತು ಭಗವಾನ್ ಎಂಬ ಮೂರು ತತ್ವಗಳಿವೆ. ಭಾಗವತವು ಭಕ್ತಿ, ಪ್ರೇಮ ಮತ್ತು ಪೂಜೆಗಳ ಸಂಪ್ರದಾಯವನ್ನೊಳಗೊಂಡಿರುವುದು. ಭಕ್ತನು ಈ ಸಂಪ್ರದಾಯವನ್ನನುಸರಿಸುವ ಸಮಾಜದ ಪ್ರತಿನಿಧಿ. ಪ್ರೇಮಮಯನಾದ ಮತ್ತು ಪ್ರೇಯಸೀಭಾವದಿಂದ ತನ್ನನ್ನು ಭಜಿಸುವ ಭಕ್ತರ ಪ್ರೇಮಕ್ಕೆ ಪಾತ್ರನಾದ ದೇವರೆ ಭಗವಾನ್. ಇವನಲ್ಲಿ ಪ್ರೇಮವೆಂಬ ದಿವ್ಯತತ್ವವು ಆಶ್ರಯಹೊಂದಿದೆ ಮತ್ತು ಪೂರ್ಣತೆಯನ್ನು ಹೊಂದುತ್ತದೆ. ಅವತಾರಪುರುಷನು ಈ ಮೂರನೆಯ ತತ್ವವನ್ನು (ಭಗವಾನ್) ಪ್ರತಿಬಿಂಬಿಸುತ್ತಾನೆ. ಧರ್ಮ ಮತ್ತು ಸಂಘಗಳೆರಡಕ್ಕೂ ಪ್ರಾಣಸ್ವರೂಪನಾದ ದಿವ್ಯಪುರುಷನೂ, ದಿವ್ಯ ವಸ್ತುವೂ ಆಗಿದ್ದಾನೆ. ಅವೆರಡನ್ನೂ ತನ್ನ ಚೈತನ್ಯದಿಂದ ತುಂಬಿ ಅವುಗಳನ್ನು ಸಜೀವವಾಗಿ ಇಟ್ಟಿದ್ದಾನೆ. ಮಾನವರನ್ನು ಆನಂದಕ್ಕೂ ಮೋಕ್ಷಕ್ಕೂ ಆಕರ್ಷಿಸುತ್ತಾನೆ.

ಇತರ ಮತಗಳಂತೆ ಗೀತೆಯ ಉಪದೇಶವು ಸಂಕುಚಿತವಾಗಿಲ್ಲ; ಎಲ್ಲರಿಗೂ ಅನ್ವಯಿಸುವಷ್ಟು ವಿಶ್ವವ್ಯಾಪಕವಾಗಿದೆ. ಸರಿಯಾಗಿ ಗ್ರಹಿಸುವುದಕ್ಕೆ ಸ್ವಲ್ಪ ಕಷ್ಟ

ವಾಗುತ್ತದೆ. ಇದು ಉಪದೇಶಿಸುವ ತತ್ವಗಳಿಗೆ ವಿಶ್ವವ್ಯಾಪಕವಾದ ಅರ್ಥವಿದೆ. ಗೀತೆಯು ಹೇಳುವ ಏಕತ್ವವು ವೇದಾಂತದಲ್ಲಿ ಹೇಳುವ ಏಕತ್ವವೇಯೆ; ಎಂದರೆ ಆತ್ಮನು ಎಲ್ಲದರಲ್ಲಿಯೂ ತನ್ನನ್ನೇ ನೋಡುತ್ತಾನೆ ಮತ್ತು ತನ್ನಲ್ಲಿ ಎಲ್ಲವನ್ನೂ ನೋಡುತ್ತಾನೆ; ಸರ್ವಭೂತಗಳೊಡನೆ ಒಂದಾಗುತ್ತಾನೆ. ಇಲ್ಲಿ ಧರ್ಮಕ್ಕೆ ಅರ್ಥ ಮಾಡುವಾಗ ಮನುಷ್ಯರ ಎಲ್ಲ ವ್ಯವಹಾರಗಳಿಗೂ ಉನ್ನತಮಟ್ಟದ ಆಧ್ಯಾತ್ಮಿಕ ದೃಷ್ಟಿಯಿಂದ ಅರ್ಥಮಾಡಬೇಕು. ಮುಮುಕ್ಷುವು ವಾಸಮಾಡುತ್ತಿರುವ ಸಮಾಜದಲ್ಲಿರುವ ಸದಾಚಾರದ ನಿಯಮಗಳು, ಸಾಮಾಜಿಕ ಧರ್ಮ ಮತ್ತು ಮತಗಳು, ಇವುಗಳಿಂದ ಮೊದಲುಮಾಡಿ ಎಲ್ಲವನ್ನೂ ಗೀತೆಯು ಬ್ರಾಹ್ಮೀಸ್ಥಿತಿಯ ಮಟ್ಟಕ್ಕೆ ಎತ್ತುತ್ತದೆ. ಇದೇ ಏಕತ್ವ ಮತ್ತು ಸಮತ್ವಗಳ ಧರ್ಮ; ಸ್ವತಂತ್ರವಾದ, ಈಶ್ವರ ಪ್ರೇರಿತವಾದ ನಿಷ್ಕಾಮಕರ್ಮದ ನಿಯಮ; ಎಲ್ಲ ವ್ಯಾಪಾರಗಳನ್ನೂ ಮತ್ತು ಪ್ರಕೃತಿಯನ್ನೂ ಬೆಳಗುತ್ತಾ ತನ್ನ ಕಡೆಗೆ ಆಕರ್ಷಿಸುವ ಆತ್ಮಜ್ಞಾನ ಮತ್ತು ಬ್ರಹ್ಮಜ್ಞಾನ; ಪ್ರಕೃತಿವ್ಯಾಪಾರಗಳೆಲ್ಲವನ್ನೂ ಈಶ್ವರಚೈತನ್ಯ ಮತ್ತು ಬ್ರಾಹ್ಮೀಸ್ಥಿತಿಯ ಮಟ್ಟಕ್ಕೆ ಏರಿಸುತ್ತದೆ; ಎಲ್ಲ ಜ್ಞಾನ ಕರ್ಮಗಳಿಗೂ ಶಿಖರಪ್ರಾಯವಾಗಿರುವ ಭಗವದ್ಭಕ್ತಿಯಲ್ಲಿ ಸೇರಿಸುತ್ತದೆ. ಭಕ್ತಿಯಿಂದಲೂ ಪೂಜೆಯಿಂದಲೂ ಭಗವಂತನನ್ನು ಸೇರಬಹುದೆಂಬ ಅಂಶವನ್ನು ಪ್ರಸ್ತಾಪಮಾಡುವಾಗ ಭಕ್ತರು ಒಟ್ಟಿಗೆ ಸೇರಿ ಭಗವಂತನನ್ನು ಭಜಿಸುವುದರಿಂದ ಮತ್ತು ವಿಚಾರವಿನಿಮಯ ಮಾಡುವುದರಿಂದ ಎಲ್ಲರ ಪ್ರಗತಿಗೂ ಸಹಾಯವಾಗುತ್ತದೆಯೆಂದು ಸೂಚಿಸುತ್ತದೆ. ಇದೇ ಸಂಘದ ತತ್ತ್ವ. ಆದರೆ ಇಲ್ಲಿ ಹೇಳಿರುವ ಸಂಘವೆಂದರೆ ಒಟ್ಟು ಮಾನವವರ್ಗ. ಈ ಧರ್ಮವು ಹೇಳುವ ಏಕತ್ವವೆಂಬ ಲಕ್ಷ್ಯದಕಡೆಗೆ ಒಟ್ಟು ಲೋಕವೆ ಸಾಗುತ್ತಿದೆ. ಪ್ರತಿಮನುಷ್ಯನೂ ತನ್ನ ಶಕ್ತ್ಯನುಸಾರ ಮುಂದೆ ಹೋಗುತ್ತಿದ್ದಾನೆ. "ಎಲ್ಲ ಮನುಷ್ಯರು ಅನುಸರಿಸುವುದೂ ನನ್ನ ಮಾರ್ಗವನ್ನೇ" (ಗೀತೆ: ೩-೨೩) ಸಾಧಕನು ಎಲ್ಲರಲ್ಲಿಯೂ ಒಂದಾಗುತ್ತಾನೆ; ಎಲ್ಲರ ಕಷ್ಟ ಸುಖಗಳನ್ನೂ, ಜೀವನವನ್ನೂ ತನ್ನದನ್ನಾಗಿ ಮಾಡಿಕೊಂಡು ಮಾನವಕೋಟಿಯ ಜೀವನದಲ್ಲಿ ಒಂದಾಗುತ್ತಾನೆ; ಎಲ್ಲರಲ್ಲಿಯೂ ಇರುವ ಆತ್ಮನಿಗಾಗಿ, ಭಗವಂತನಿಗಾಗಿ ಜೀವಿಸುತ್ತಾನೆ; ಲೋಕಸಂಗ್ರಹಕ್ಕಾಗಿ ಕೆಲಸಮಾಡುತ್ತಾನೆ. ಎಲ್ಲರೂ ತಮ್ಮ ತಮ್ಮ ಧರ್ಮದಂತೆ ನಡೆಯುವುದಕ್ಕಾಗಿಯೂ, ಧರ್ಮದ ರಕ್ಷಣೆಗಾಗಿಯೂ ಕೆಲಸಮಾಡುತ್ತಾನೆ. ಎಲ್ಲ ಜೀವಿಗಳೂ ತಮ್ಮ ತಮ್ಮ ದಾರಿಯಲ್ಲಿ, ಮಟ್ಟಗಳಲ್ಲಿ ಬೆಳೆದು ಆತ್ಮಸಾಕ್ಷಾತ್ಕಾರದ ಕಡೆ ಮುಂದೆ ಸಾಗಲು ಸಹಾಯಮಾಡುತ್ತಾನೆ.

ಗೀತೆಯನ್ನು ಉಪದೇಶಿಸುತ್ತಿರುವ ಅವತಾರ ಪುರುಷನಾದ ಶ್ರೀ ಕೃಷ್ಣನು ತನ್ನ ಈ ಒಂದು ಅವತಾರಕ್ಕೆ ವಿಶೇಷವಾದ ಪ್ರಾಧಾನ್ಯವನ್ನು ಕೊಟ್ಟಿಲ್ಲ; ಅವನು ವಿಶೇಷವಾದ ಪ್ರಾಧಾನ್ಯವನ್ನು ಕೊಡುವುದು ಈ ಎಲ್ಲ ಅವತಾರಗಳ ಹಿಂದೆ ಇರುವ ಪುರುಷೋತ್ತಮನಿಗೆ. ಎಲ್ಲ ಅವತಾರಗಳೂ ಈ ಪುರುಷೋತ್ತಮನು ಎತ್ತಿರುವ ಜನ್ಮಗಳು; ಮನುಷ್ಯರು ದೇವರನ್ನು ಯಾವ ಯಾವ ನಾಮ, ರೂಪಗಳಿಂದ ಪೂಜಿಸುತ್ತಾರೆಯೋ, ಅವೆಲ್ಲವೂ ಈ ಪುರುಷೋತ್ತಮನವೆ ಆಗಿವೆ. ಶ್ರೀ ಕೃಷ್ಣನು ಇಲ್ಲಿ ಉಪದೇಶಿಸಿರುವ ಮಾರ್ಗವನ್ನನುಸರಿಸಿ ಮನುಷ್ಯರು ನಿಜವಾದ ಜ್ಞಾನವನ್ನೂ ಮುಕ್ತಿಯನ್ನೂ ಪಡೆಯಬಹುದೆಂದು ಇಲ್ಲಿ ಸ್ಪಷ್ಟವಾಗಿ ಹೇಳಿದೆ. ಈ ಮಾರ್ಗವು ಇತರ ಎಲ್ಲ ಮಾರ್ಗಗಳನ್ನೂ ಒಳಗೊಂಡಿದೆ; ಯಾವುದನ್ನೂ ಹೊರಕ್ಕೆ ತಳ್ಳಿಲ್ಲ. ಎಲ್ಲ ಅವತಾರಗಳೂ, ಉಪದೇಶಗಳೂ ಮತ್ತು ಎಲ್ಲ ಧರ್ಮಗಳೂ ವಿಶ್ವಾತ್ಮನಾದ ಪುರುಷೋತ್ತಮನಲ್ಲಿ ಅಂತರ್ಗತವಾಗಿವೆ.

ಈ ಪ್ರಪಂಚವು ಒಂದು ರಣರಂಗವೆಂದೂ, ಇದರಲ್ಲಿ ಯುದ್ಧವು ದ್ವಿಮುಖವಾಗಿ, ಎಂದರೆ ಮನಸ್ಸಿನಲ್ಲಿಯೂ ಮತ್ತು ಹೊರಗಡೆಯಲ್ಲಿಯೂ ನಡೆಯುತ್ತಿದೆಯೆಂದೂ ಗೀತೆಯು ಒತ್ತಿ ಹೇಳಿದೆ. ಅಂತರಂಗದಲ್ಲಿ ನಡೆಯುವ ಯುದ್ಧದಲ್ಲಿ ಶತ್ರುಗಳು ಮನುಷ್ಯನ ಒಳಗಡೆ ಇದ್ದಾರೆ. ಈ ಯುದ್ಧದಲ್ಲಿ ಜಯವೆಂದರೆ ಅಜ್ಞಾನ, ಕಾಮ ಮತ್ತು ಅಹಂಕಾರಗಳನ್ನು ನಾಶಮಾಡುವುದು. ಇದಲ್ಲದೆ ಹೊರಗಿನ ಪ್ರಪಂಚದಲ್ಲಿ, ಧರ್ಮ ಮತ್ತು ಅಧರ್ಮದ ಪಕ್ಷಗಳ ಬಲಗಳಿಗೆ ಯುದ್ಧವು ನಡೆಯುತ್ತಿದೆ. ಧರ್ಮಪಕ್ಷದ ಬಲಗಳಿಗೆ ಮನುಷ್ಯನಲ್ಲಿರುವ ದೈವೀಗುಣಗಳ, ಈ ಗುಣಗಳನ್ನು ಮೂರ್ತೀಭವಿಸುವವರ ಮತ್ತು ಅವನ್ನು ಈ ಜೀವನದಲ್ಲಿ ಪೂರ್ಣವಾಗಿ ವಿಕಾಸಗೊಳಿಸಲು ಯತ್ನಿಸುತ್ತಿರುವವರ ಬೆಂಬಲವಿದೆ. ಅಧರ್ಮಪಕ್ಷದ ಬಲಗಳಿಗಾದರೊ ಉಗ್ರವಾದ ಅಹಂಕಾರವನ್ನೆ ಮೂಲವನ್ನಾಗಿ ಉಳ್ಳ ಆಸುರೀ ಪ್ರಕೃತಿಯ ಮತ್ತು ಈ ಆಸುರೀ ಗುಣಗಳನ್ನು ಪ್ರತಿನಿಧಿಸುತ್ತಾ ಈ ಶಕ್ತಿಗಳನ್ನೆ ಆರಾಧಿಸುವವರ ಬೆಂಬಲವಿದೆ. ದೇವಾಸುರರ ಯುದ್ಧವೆಂದರೆ ಇದೇಯೆ; ಇಂತಹ ಯುದ್ಧಗಳ ವರ್ಣನೆಯು ಹಿಂದೂ ಪುರಾಣಗಳಲ್ಲಿ ಹೇರಳವಾಗಿದೆ. ಶ್ರೀ ಕೃಷ್ಣನು ಮುಖ್ಯ ಪಾತ್ರವನ್ನು ವಹಿಸಿರುವ ಮಹಾಭಾರತ ಯುದ್ಧವನ್ನೂ ಕೂಡ ಕೆಲವುಬಾರಿ ದೇವಾಸುರರ ಯುದ್ಧವೆಂದು ವರ್ಣಿಸಿದೆ. ಧರ್ಮರಾಜ್ಯದ ಸ್ಥಾಪನೆಗಾಗಿ ಯುದ್ಧ ಮಾಡಿದ ಪಾಂಡವರು ದೇವತೆಗಳ ಮಕ್ಕಳೆಂದೂ, ನರರೂಪವನ್ನು ಧರಿಸಿದ ದೇವತೆಗಳೆಂದೂ; ಅವರ ಪ್ರತಿಪಕ್ಷಿಗಳು ಅಸುರ ಬಲಗಳ ಪ್ರತಿನಿಧಿಗಳೆಂದೂ,

ಅಸುರರೆಂದೂ, ಕೆಲವು ಕಡೆ ಹೇಳಲ್ಪಟ್ಟಿದೆ. ಈ ಬಾಹ್ಯವಾದ ಯುದ್ಧದಲ್ಲಿಯೂ ಕೂಡ ಶ್ರೀ ಕೃಷ್ಣನು ಪ್ರತ್ಯಕ್ಷವಾಗಿಯೊ ಅಥವಾ ಪರೋಕ್ಷವಾಗಿಯೊ ಭಾಗವಹಿಸಿ ದುಷ್ಕರ್ಮಿಗಳನ್ನೂ ಆಸುರೀ ಶಕ್ತಿಗಳನ್ನೂ ಕುಗ್ಗಿಸಿ, ನಾಶಮಾಡಿ, ನಶಿಸಿಹೋಗು ತ್ತಿರುವ ಧರ್ಮವನ್ನು ಪುನರುದ್ಧಾರ ಮಾಡುತ್ತಾನೆ. ಭೂಲೋಕವನ್ನು ಸ್ವರ್ಗ ಲೋಕಕ್ಕೆ ಸದೃಶವಾಗಿ ಮಾಡುವುದಕ್ಕೂ, ಮನುಷ್ಯರ ಹೃದಯದಲ್ಲಿ ಸ್ವರ್ಗೀಯವಾದ ಸುಖಶಾಂತಿಗಳು ನೆಲಸುವಂತೆ ಮಾಡುವದಕ್ಕೂ ಭಗವಂತನು ಅವತರಿಸುತ್ತಾನೆ

ಭಗವಂತನ ಜನ್ಮ ಮತ್ತು ಕರ್ಮಗಳ ನಿಜವಾದ ಸ್ವರೂಪವನ್ನು ತಿಳಿದ ವರು ಅವತಾರದ ಸಂಪೂರ್ಣವಾದ ಪ್ರಯೋಜನವನ್ನು ಪಡೆಯುತ್ತಾರೆ. ಇವರು ಸರ್ವಭಾವದಿಂದ ಭಗವಂತನನ್ನೆ ಶರಣು ಹೊಂದಿ, ತನ್ಮಯರಾಗಿ, ಜ್ಞಾನದಿಂದಲೂ ತಪಸ್ಸಿನಿಂದಲೂ ಶುದ್ಧರಾಗಿ, ಕೀಳುಸ್ವಭಾವದಿಂದ ಬಿಡುಗಡೆ ಹೊಂದಿ, ಈಶ್ವರ ಭಾವವನ್ನು ಪಡೆಯುತ್ತಾರೆ. ಮನುಷ್ಯನಲ್ಲಿ ಕೀಳುಮಟ್ಟದ ಸ್ವಭಾವದ ಜೊತೆಗೆ ದೇವಸ್ವಭಾವವೂ ಇದೆಯೆಂಬುದನ್ನು ತೋರಿಸಿಕೊಡುವುದೂ ಅವತಾರಪುರುಷನ ಕಾರ್ಯಗಳಲ್ಲೊಂದು. ಹಾಗೆಯೆ ದೈವಿಕವಾದ ಕರ್ಮಗಳನ್ನೂ ತೋರಿಸಿ ಕೊಡು ತ್ತಾನೆ. ಎಂದರೆ ಬಂಧರಹಿತವಾದ, ಅಹಂಕಾರವಿಲ್ಲದ, ಮಮಕಾರವಿಲ್ಲದ, ಸ್ವಾರ್ಥ ವಿಲ್ಲದ, ಸಾರ್ವತ್ರಿಕವಾದ ಮತ್ತು ದಿವ್ಯವಾದ ಶಕ್ತಿ, ಜ್ಞಾನ ಮತ್ತು ಪ್ರೇಮಗಳಿಂದ ಕೂಡಿರುವ ಕರ್ಮಗಳ ಸ್ವರೂಪವನ್ನು ತೋರಿಸಿ ಕೊಡುತ್ತಾನೆ. ಮನುಷ್ಯನ ಚೈತನ್ಯವನ್ನು ಸಂಪೂರ್ಣವಾಗಿ ಆವರಿಸುವ ದಿವ್ಯಚೈತನ್ಯವಾಗಿ ಬಂದು ಮನುಷ್ಯನ ಅಹಂಭಾವದಿಂದ ಕೂಡಿದ, ಸಂಕುಚಿತವಾದ ವ್ಯಕ್ತಿತ್ವವನ್ನು ಹೋಗಲಾಡಿಸುತ್ತಾನೆ. ಮನುಷ್ಯನು ಪರಿಮಿತವಾದ ವ್ಯಕ್ತಿತ್ವದಿಂದ ಬಿಡುಗಡೆ ಹೊಂದಿ ಅನಂತತೆಯನ್ನು ಸೇರುತ್ತಾನೆ. ಜನನ ಮರಣಗಳನ್ನು ದಾಟಿ ಅಮರನಾಗುತ್ತಾನೆ. ಅವತಾರ ಪುರುಷನು ಮೂರ್ತಿಮತ್ತಾದ ದೈವೀಶಕ್ತಿಯೂ ಪ್ರೇಮವೂ ಆಗಿದ್ದಾನೆ. ಮನುಷ್ಯ ರನ್ನು ತನ್ನ ಕಡೆಗೆ ಆಕರ್ಷಿಸುತ್ತಾನೆ. ಮನುಷ್ಯಸಂಕಲ್ಪ ಮತ್ತು ಮನುಷ್ಯಸಹಜ ವಾದ ಕಾಮ, ಕ್ರೋಧ ಮತ್ತು ಭಯಗಳನ್ನು ದಾಟಿ, ಅವರು ಭಗವಂತನ ಶಕ್ತಿ ಮತ್ತು ಪ್ರೇಮಗಳಲ್ಲಿ ಶರಣು ಹೋಗಲು ಸಾಧ್ಯವಾಗುತ್ತದೆ. ಎಲ್ಲ ದುಃಖ ಗಳಿಂದಲೂ ಮತ್ತು ಅಶಾಂತಿಯಿಂದಲೂ ಪಾರಾಗಿ ದಿವ್ಯವಾದ ಶಾಂತಿಯನ್ನೂ ಮತ್ತು ಶಾಶ್ವತವಾದ ಆನಂದವನ್ನೂ ಪಡೆಯಬಹುದು. “ನನ್ನ ದಿವ್ಯವಾದ ಜನ್ಮ ಕರ್ಮಗಳನ್ನು ಯಾವನು ತಿಳಿಯುತ್ತಾನೆಯೊ ಅವನು ದೇಹವನ್ನು ಬಿಟ್ಟನಂತರ ಪುನರ್ಜನ್ಮವನ್ನು ಹೊಂದದೆ ನನ್ನನ್ನೆ ಸೇರುತ್ತಾನೆ. ಆಸೆ, ಭಯ, ಕೋಪ ಇವು

ಗಳನ್ನು ಕಳೆದುಕೊಂಡು, ನನ್ನಿಂದ ತುಂಬಲ್ಪಟ್ಟು, ನನ್ನನ್ನು ಆಶ್ರಯಿಸಿಕೊಂಡಿರುವ ಅನೇಕರು ಜ್ಞಾನವೆಂಬ ತಪಸ್ಸಿನಿಂದ ಶುದ್ಧರಾಗಿ ನನ್ನನ್ನು ಸೇರುತ್ತಾರೆ." ಭಗವಂತನು ಯಾವ ಹೆಸರಿನಲ್ಲಿ, ಯಾವ ರೂಪದಲ್ಲಿ ಅವತಾರ ಮಾಡುತ್ತಾನೆಂಬುದು ಅಷ್ಟೇನೂ ಮುಖ್ಯವಲ್ಲ. ಮನುಷ್ಯರು ನಾನಾ ಮಾರ್ಗಗಳಲ್ಲಿ ತಮ್ಮ ಸ್ವಭಾವಕ್ಕನುಸಾರವಾಗಿ ಅವತಾರ ಪುರುಷರು ತೋರಿಸಿರುವ ಮಾರ್ಗವನ್ನು ಅನುಸರಿಸುತ್ತಾರೆ. ಇವೆಲ್ಲವೂ ಕೊನೆಯಲ್ಲಿ, ಭಗವಂತನನ್ನೆ ಸೇರುತ್ತವೆ. ಇವರಿಗೆ ದಾರಿ ತೋರಿಸಲು ಭಗವಂತನು ಅವತರಿಸಿದಾಗ, ತಮಗೆ ಸಹಜವಾದ ಮಾರ್ಗವನ್ನು ಅನುಸರಿಸುವುದೆ ಅವರಿಗೆ ಶ್ರೆಯಸ್ಕರವಾದುದು. "ಯಾರು ಯಾವ ರೀತಿಯಿಂದ ನನ್ನನ್ನು ಶರಣು ಹೋಗುತ್ತಾರೊ, ಅದೇ ರೀತಿಯಿಂದ ನಾನು ಅವರಿಗೆ ಒಲಿಯುತ್ತೇನೆ."

(ಗೀತೆ. 4-110)



# ಹದಿನೆಂಟನೆಯ ಪ್ರಕರಣ



## ಈಶ್ವರಸಂಕಲ್ಪದೊಡನೆ ಒಂದಾದ ಕೆಲಸಗಾರ

ಗೀತೆಯಲ್ಲಿ ಹೇಳಿರುವ ಕರ್ಮಯೋಗವು ಹೀಗಿದೆ: ದಿವ್ಯಜನ್ಮವನ್ನು ತಾಳಿದಾಗ ನಮ್ಮ ಪ್ರಜ್ಞೆಯು ಈಗಿರುವ ಸಂಕುಚಿತವಾದ ಸ್ಥಿತಿಯನ್ನು ಬಿಟ್ಟು ಇನ್ನೂ ಮೇಲ್ಮಟ್ಟದ ದಿವ್ಯಸ್ಥಿತಿಯನ್ನು ಪಡೆಯುವುದು; ಈ ದಿವ್ಯಸ್ಥಿತಿಯನ್ನು ಪಡೆಯಲು ಸಾಧನವಾಗಿಯೂ, ಪಡೆದನಂತರ ಅದರ ಪ್ರಕಾಶಕ್ಕಾಗಿಯೂ ದಿವ್ಯ ಕರ್ಮಗಳನ್ನು ಮಾಡುವುದು. ಆದರೆ ಈ ದಿವ್ಯ ಕರ್ಮವನ್ನು ತಿಳಿಯುವುದಕ್ಕೆ ಅಥವಾ ಅಳೆಯುವುದಕ್ಕೆ ಹೊರಗಿನ ಗುರುತನ್ನಾಗಲಿ, ಲೋಕಾಭಿಪ್ರಾಯವನ್ನಾಗಲಿ, ಬೇರೆ ಯಾವ ಉಪಾಯವನ್ನಾಗಲಿ ಗೀತೆಯು ಹೇಳಿಲ್ಲ. ತಮ್ಮ ಬುದ್ಧಿಗೆ ಅನುಸಾರವಾಗಿ ಮನುಷ್ಯರು ಅನುಸರಿಸಲು ಯತ್ನಿಸುವ ಸದಾಚಾರದ ಮತ್ತು ಧರ್ಮಾಧ

ನಿಯಮಗಳನ್ನೂ ಕೂಡ ಗೀತೆಯು ಉದ್ದೇಶಪೂರ್ವಕವಾಗಿಯೇ ನಿರೂಪಿಸದೆ ಬಿಟ್ಟುಬಿಟ್ಟಿದೆ. ದಿವ್ಯಕರ್ಮಗಳನ್ನು ತಿಳಿದುಕೊಳ್ಳಲು ಗೀತೆಯು ಹೇಳುವ ಗುರುತುಗಳು ಕೇವಲ ಆಂತರವಾದುವು ಮತ್ತು ಅವರವರ ಹೃದಯ ವೇದ್ಯವಾದುವು. ಈ ಗುರುತುಗಳು ಪರೋಕ್ಷ ಮತ್ತು ಆಧ್ಯಾತ್ಮಿಕ; ಶಾಸ್ತ್ರದ ಧರ್ಮಕ್ಕೆ ಅತೀತವಾಗಿರುವವು.

ಆಯಾ ಮನುಷ್ಯನು ತನ್ನ ಅಂತರಾತ್ಮನ ಜ್ಯೋತಿಯಿಂದಲೆ ಇಂತಹ ಕರ್ಮಗಳು ದಿವ್ಯಕರ್ಮಗಳೆಂದು ಕಂಡುಕೊಳ್ಳಬೇಕು. ಗೀತೆಯಲ್ಲಿ ಹೇಳುವಂತೆ "ಯಾವುದು ಕರ್ಮ, ಯಾವುದು ಅಕರ್ಮ? ಈ ವಿಷಯದಲ್ಲಿ ಪ್ರಾಜ್ಞರೂ ಕೂಡ ಭ್ರಮೆಗೆ ಒಳಗಾಗಿದ್ದಾರೆ. ಇವರು ವ್ಯಾವಹಾರಿಕವಾದ, ಸಾಮಾಜಿಕ, ಮಾನಸಿಕ ಮತ್ತು ಶಾಸ್ತ್ರದ ದೃಷ್ಟಿಯಿಂದ ಇದನ್ನು ನಿರ್ಣಯಿಸಲು ಯತ್ನಿಸುತ್ತಾರೆಯೆ ಹೊರತು, ವಿಷಯದ ಮೂಲಕ್ಕೆ ಹೋಗುವುದಿಲ್ಲ. "ಯಾವುದನ್ನು ತಿಳಿದುಕೊಳ್ಳುವುದರಿಂದ ನಿನಗೆ ಅಶುಭಕರ್ಮದಿಂದ ಬಿಡುಗಡೆಯಾಗುತ್ತದೆಯೊ, ಅಂತಹ ಕರ್ಮವನ್ನು ನಿನಗೆ ಹೇಳುತ್ತೇನೆ. ಸರಿಯಾದ ಕರ್ಮವು ಯಾವುದು, ದುಷ್ಕರ್ಮವು ಯಾವುದು, ಮಾಡಲು ಅವಶ್ಯಕವಲ್ಲದ್ದು ಯಾವುದು, ಇವೆಲ್ಲವನ್ನೂ ತಿಳಿಯಬೇಕು. ಇದರ ಮಾರ್ಗವನ್ನು ತಿಳಿದುಕೊಳ್ಳುವುದು ಬಹಳ ಕಷ್ಟ." (4-16,17) ಕರ್ಮವೆಂಬುದು ಗಹನವಾದ ಅರಣ್ಯದಂತೆ; ಇದರಲ್ಲಿ ಮನುಷ್ಯನು ಎಡವುತ್ತಾ, ಮುಗ್ಗರಿಸುತ್ತಾ, ತನ್ನ ಕೈಲಾದಷ್ಟು ಮಟ್ಟಿಗೆ ಮುಂದೆ ಹೋಗುತ್ತಾನೆ. ಆ ಕಾಲದ ಜನರ ಅಭಿಪ್ರಾಯಗಳು, ಇವನ ಆದರ್ಶಗಳು ಮತ್ತು ಇವನ ಸನ್ನಿವೇಶಗಳು ಬೀರುವ ಬೆಳಕೆ ಇವನಿಗೆ ಮಾರ್ಗದರ್ಶಕವಾಗಿರುತ್ತವೆ. ವಾಸ್ತವವಾಗಿ ಬಹು ಹಿಂದಿನ ಕಾಲದಿಂದ ಬಂದಿರುವ ಅಭಿಪ್ರಾಯಗಳು, ಅನೇಕ ಮನುಷ್ಯರ ಧ್ಯೇಯಗಳು ಮತ್ತು ನಾನಾ ವಿಧವಾದ ಧರ್ಮದ ನಿಯಮಗಳು ಇವನ ಮನಸ್ಸಿನಲ್ಲಿ ಒತ್ತಾಗಿ ಹೆಣೆದುಕೊಂಡು ಕೊಡುವ ಸಂದಿಗ್ಧವಾದ ಬೆಳಕಿನಲ್ಲಿ ಇವನು ಮುನ್ನಡೆಯಬೇಕಾಗಿದೆ. ಈ ಅಭಿಪ್ರಾಯಗಳನ್ನೂ ನಿಯಮಗಳನ್ನೂ ಕಾಲದೇಶಾತೀತವಾದ ಪರಮ ಸತ್ಯವೆಂದು ಹೇಳಿದ್ದರೂ ಅವು ಯಾವುದೊ ಒಂದು ಕಾಲಕ್ಕೆ ಮತ್ತು ಸನ್ನಿವೇಶಕ್ಕೆ ಮಾತ್ರ ಅನ್ವಯಿಸುವಂತಹವು; ಸುಸಂಗತವೆಂದೂ, ತರ್ಕಬದ್ಧವೆಂದೂ, ಹೇಳಿದ್ದರೂ ಆಧಾರ ರಹಿತವಾಗಿಯೂ ಇರುತ್ತವೆ. ಈ ಪರಿಸ್ಥಿತಿಯಲ್ಲಿ, ಮುಮುಕ್ಷುವು ಈ ಗೊಂದಲದಲ್ಲಿ ಶಾಶ್ವತವಾದ ಧರ್ಮದ ಆಧಾರವನ್ನೂ, ಮೂಲ ಸತ್ಯವನ್ನೂ ಹುಡುಕುವಾಗ, ಈ ಕಠಿಣವಾದ ಪ್ರಶ್ನೆಯನ್ನು ಕೇಳುತ್ತಾನೆ; ಇಡೀ

ಜೀವನ ಮತ್ತು ಕರ್ಮಗಳು ಎಲ್ಲವೂ ಕೇವಲ ಮಾಯೆಯಲ್ಲವೆ? ಮನಸ್ಸನ್ನು ಬಂಧಿಸುವ ಪಾಶವಲ್ಲವೆ? ಬೇಸತ್ತು ಬಳಲಿರುವ ಜೀವನಿಗೆ ಕರ್ಮವನ್ನು ಮಾಡದೆ ಇರುವುದೆ ಕೊನೆಯ ಶರಣಲ್ಲವೆ?" ಕರ್ಮದ ವಿಷಯದಲ್ಲಿ ಪ್ರಾಜ್ಞರೂ ಕೂಡ ಭ್ರಾಂತಿಗೊಳಗಾಗಿದ್ದಾರೆಂದು ಶ್ರೀ ಕೃಷ್ಣನು ಹೇಳಿದ್ದಾನೆ. ಜ್ಞಾನವೂ ಮೋಕ್ಷವೂ ಕರ್ಮವನ್ನು ಮಾಡುವುದರಿಂದ ಬರುತ್ತವೆಯೇ ಹೊರತು ಕರ್ಮವನ್ನು ಮಾಡದೆ ಇರುವುದರಿಂದಲ್ಲ.

ಈ ಸಮಸ್ಯೆಗೆ ಪರಿಹಾರವೇನು? ನಾವು ಅತ್ಯಂತ ಶುದ್ಧವಾದ ಹೃದಯ ದಿಂದ, ಉತ್ತಮವಾದ ಉದ್ದೇಶದಿಂದ ಕರ್ಮವನ್ನು ಮಾಡಿದಾಗಲೂ ಕೂಡ ಒಳ್ಳೆಯ ಮತ್ತು ಕೆಟ್ಟ ಪರಿಣಾಮಗಳೆರಡೂ ಉಂಟಾಗುತ್ತವೆ. ಇಂತಹ ತೊಡಕಿನ ಪರಿಸ್ಥಿತಿಯಲ್ಲಿ ಜೀವನದ ನಾನಾ ಕಷ್ಟಗಳಿಂದಲೂ, ಸಂಶಯಗಳಿಂದಲೂ, ದೋಷ ಗಳಿಂದಲೂ, ನೂರಾರು ವಿಧವಾದ ದುಃಖ ಮತ್ತು ಕಷ್ಟಗಳಿಂದಲೂ ನಮ್ಮನ್ನು ಪಾರುಮಾಡುವ ದಿವ್ಯಕರ್ಮಗಳ ಲಕ್ಷಣವೇನು? ದಿವ್ಯಕರ್ಮಗಳು ಇಂತಹವೆ ಎಂದು ಹೇಳಲು ಯಾವ ಬಾಹ್ಯವಾದ ಗುರುತೂ ಇಲ್ಲ. ಲೋಕಕ್ಕೆ ಅವಶ್ಯಕವಾದ ಯಾವ ಕರ್ಮವನ್ನೂ ತ್ಯಜಿಸಬೇಕಾಗಿಲ್ಲ. ಮನುಷ್ಯನ ವ್ಯಾಪಾರಗಳಿಗೆ ಯಾವ ಎಲ್ಲೆ ಯನ್ನೂ ಪರಿಮಿತಿಯನ್ನೂ ವಿಧಿಸಬೇಕಾಗಿಲ್ಲ. ಎಲ್ಲ ಕರ್ಮಗಳನ್ನೂ ಮಾಡಬೇಕು, ಆದರೆ ಪುರುಷೋತ್ತಮನಲ್ಲಿ ನೆಲೆಸಿರುವ ಯೋಗಸ್ಥಿತಿಯಲ್ಲಿದ್ದುಕೊಂಡು ಮಾಡ ಬೇಕು. ಅಕರ್ಮ ಅಥವಾ ಕರ್ಮಗಳನ್ನು ಮಾಡದೆ ಇರುವುದು ಇದಕ್ಕೆ ಮಾರ್ಗ ವಲ್ಲ. ಕರ್ಮವನ್ನು ಮಾಡದೆ ಇರುವುದೂ ಕೂಡ ನಿರಂತರವಾದ ಒಂದು ವಿಧವಾದ ಕರ್ಮವೇಯೆ; ಈ ಸ್ಥಿತಿಯು ಪ್ರಕೃತಿಗೂ, ಅದರ ಗುಣಗಳಿಗೂ ಒಳಪಟ್ಟಿರುವುದು. ಈ ವಿಷಯವನ್ನು ಕರ್ಮದ ಅಂತರವಾದ ತತ್ತ್ವವನ್ನು ಬಲ್ಲವರು ತಿಳಿದಿರುತ್ತಾರೆ. ಕರ್ಮಗಳನ್ನು ಮಾಡದೆ ಇರುವ ಸ್ಥಿತಿಯನ್ನು ಸಾಧಿಸಲು ಯತ್ನಿಸುತ್ತಿರುವ ಮನು ಷ್ಯನ ಮನಸ್ಸಿನಲ್ಲಿ, ಕರ್ಮಗಳನ್ನು ಮಾಡುವವನು ತಾನೇಯೆ, ಪ್ರಕೃತಿಯಲ್ಲ ಎಂಬ ಭ್ರಾಂತಿಯಿರುವುದು. ಜಡಸ್ಥಿತಿಯನ್ನೇ ಮೋಕ್ಷವೆಂದು ಭ್ರಮಿಸಿದ್ದಾನೆ. ಒಂದು ಕಲ್ಲು ಅಥವಾ ಮಣ್ಣು ಹೆಂಟೆಯಂತಹ ಅತ್ಯಂತ ಜಡವಾದ ವಸ್ತುವಿ ನಲ್ಲಿಯೂ ಕೂಡ ಪ್ರಕೃತಿ ವ್ಯಾಪಾರವು ನಡೆಯುತ್ತಲೆ ಇದೆಯೆಂಬ ವಿಷಯವನ್ನು ಇವನು ತಿಳಿದಿಲ್ಲ. ಗೀತೆಯ ಪ್ರಕಾರ ಕರ್ಮದಲ್ಲಿ ಸಂಪೂರ್ಣವಾಗಿ ಮುಳುಗಿರು ವಾಗಲೂ ಕೂಡ ಆತ್ಮನು ಸ್ವತಂತ್ರನು; ಕರ್ತೃವಲ್ಲ, ಮತ್ತು ಕರ್ಮಗಳಿಂದ ಬದ್ಧ ನಲ್ಲ. ಇಂತಹ ಸ್ಥಿತಿಯಲ್ಲಿರುವವನು ಕರ್ಮದಿಂದ ಬದ್ಧನಲ್ಲವೆ ಹೊರತು ಪ್ರಕೃತಿಯ

ಗುಣಗಳಿಗೆ ಒಳಗಾಗಿರುವವನು ಕರ್ಮಬಂಧನದಿಂದ ಬಿಡುಗಡೆ ಹೊಂದಿದವನಲ್ಲ. "ಯಾವನು ಕರ್ಮದಲ್ಲಿ ಅಕರ್ಮವನ್ನೂ ಮತ್ತು ಅಕರ್ಮದಲ್ಲಿ ಕರ್ಮವು ಮುಂದು ವರಿಯುವುದನ್ನೂ ನೋಡುತ್ತಾನೆಯೊ ಅವನೇ ನಿಜವಾದ ವಿವೇಕಿ" ಎಂಬ ಗೀತೆಯ ವಾಕ್ಯಕ್ಕೆ ಇದೇ ಅರ್ಥ. ಪುರುಷ ಮತ್ತು ಪ್ರಕೃತಿಗಳಿಗೆ ಸಾಂಖ್ಯದಲ್ಲಿ ಹೇಳಿರುವ ಭೇದವನ್ನೆ ಮೇಲಿನ ವಾಕ್ಯವು ಸೂಚಿಸಿದೆ. ಸಾಂಖ್ಯದ ಪ್ರಕಾರ ಪುರುಷನು ಸ್ವತಂತ್ರ, ನಿಷ್ಕ್ರಿಯ; ಯಾವಾಗಲೂ ಶಾಂತವಾಗಿಯೂ ಶುದ್ಧವಾಗಿಯೂ ಇರುವವನು; ಕರ್ಮಗಳ ಮಧ್ಯೆ ಇದ್ದರೂ ಅಚಲಿತನಾಗಿರುತ್ತಾನೆ. ಪ್ರಕೃತಿಯಾದರೊ ಸದಾ ಕ್ರಿಯೆಗಳಲ್ಲಿಯೇ ನಿರತವಾಗಿದೆ; ಗೋಚರವಾಗುವಂತೆ ಬಾಹ್ಯವಾಗಿ ವ್ಯಾಪಾರಗಳನ್ನು ನಡೆಸುವಾಗಲೂ, ಯಾವ ಕೆಲಸವನ್ನೂ ಮಾಡದೆ ಇರುವಂತೆ ತೋರುವ ಜಡಸ್ಥಿತಿಯಲ್ಲಿಯೂ ಕೂಡ ಪ್ರಕೃತಿಯು ಕರ್ಮಮಾಡುವುದರಲ್ಲಿ ಮಗ್ನವಾಗಿದೆ; ಬುದ್ಧಿಯು ಅತ್ಯಂತ ಮೇಲ್ಮಟ್ಟದಲ್ಲಿ ಕೆಲಸಮಾಡುವಾಗ ನಮಗೆ ಸ್ಫುರಿಸುವ ಜ್ಞಾನವು ಇದೆಯೆ. ಆದುದರಿಂದ ಈ ವಿಧವಾದ ಜ್ಞಾನವಿರುವವನೆ ನಿಜವಾದ "ಬುದ್ಧಿವಂತ" (ಸ ಬುದ್ಧಿಮಾನ್ ಮನುಷ್ಯೇಷು) ಕೇವಲ ಮನಸ್ಸಿನ ಕೆಳಗಿನ ಮಟ್ಟದಿಂದ, ಬಾಹ್ಯವಾದ ಅನಿಶ್ಚಿತವಾದ ಮತ್ತು ಅಶಾಶ್ವತವಾದ ಚಿಹ್ನೆಗಳಿಂದ ಕರ್ಮಗಳಿಗೂ ಮತ್ತು ಜೀವನಕ್ಕೂ ಬೆಲೆ ಕಟ್ಟುವವನು ನಿಜವಾದ ಬುದ್ಧಿವಂತನಲ್ಲ.

ಮುಕ್ತನಾದ ಮನುಷ್ಯನು ಕರ್ಮಮಾಡುವುದಕ್ಕೆ ಹಿಂಜರಿಯುವುದಿಲ್ಲ. ಅವನು ಎಲ್ಲ ಕರ್ಮಗಳನ್ನೂ ಮಾಡುತ್ತಾನೆ. (ಕೃತ್ಸ್ನ ಕರ್ಮಕೃತ್) ಇತರರಂತೆ ಪ್ರಕೃತಿಯ ಗುಣಗಳಿಗೆ ವಶನಾಗಿ ಮಾಡುವುದಿಲ್ಲ; ಆತ್ಮನ ಮೌನವಾದ ಶಾಂತಿಯಲ್ಲಿ ಇದ್ದುಕೊಂಡು, ಬ್ರಾಹ್ಮೀಸ್ಥಿತಿಯಲ್ಲಿ ಇದ್ದುಕೊಂಡು ಕರ್ಮಗಳನ್ನು ಮಾಡುತ್ತಾನೆ. ಅವನು ಮಾಡುವ ಕರ್ಮಗಳಿಗೆಲ್ಲ ಈಶ್ವರನೇ ಪ್ರಭು. ಈ ಕರ್ಮಗಳನ್ನು ಮಾಡುವುದಕ್ಕೆ ಇವನು ನಿಮಿತ್ತಮಾತ್ರ; ಇವನ ಅಧೀನದಲ್ಲಿರುವ ಪ್ರಕೃತಿಯು ಕರ್ಮಗಳನ್ನು ಮಾಡುತ್ತದೆ. ಶುದ್ಧವಾದ ಮತ್ತು ಪ್ರಖರವಾದ ಅವನ ಜ್ಞಾನಾಗ್ನಿಯು ಅಲ್ಲಿಗೆ ಕರ್ಮಗಳನ್ನು ಕೊನೆಮಾಡುತ್ತದೆ; ಕರ್ಮಪರಂಪರೆಯು ಬೆಳೆಯುವುದಕ್ಕೆ ಅವಕಾಶಕೊಡುವುದಿಲ್ಲ. ಕರ್ಮಗಳಿಂದ ಅವನ ಮನಸ್ಸಿನಲ್ಲಿ ಯಾವ ಮಾಲಿನ್ಯವೂ, ವಿಕಾರವೂ ಉಂಟಾಗುವುದಿಲ್ಲ. ಅವನ ಮನಸ್ಸು ಶಾಂತವಾಗಿಯೂ, ನಿರ್ಮಲವಾಗಿಯೂ, ನಿರ್ಲಿಪ್ತವಾಗಿಯೂ ಮತ್ತು ಶುದ್ಧವಾಗಿಯೂ ಇರುತ್ತದೆ. ತಾನೇ ಕರ್ತೃವೆಂಬ ಅಹಂಕಾರವು ಸ್ವಲ್ಪವೂ ಇಲ್ಲದೆ, ಇಂತಹ ಮೋಕ್ಷಪ್ರದವಾದ

ಜ್ಞಾನದಿಂದ ಕರ್ಮಗಳನ್ನು ಮಾಡುವುದೆ ದಿವ್ಯಕರ್ಮಗಳನ್ನು ಮಾಡುವುದರ ಮೊದಲನೆಯ ಗುರುತು.

ಎರಡನೆಯ ಗುರುತೇನೆಂದರೆ: ಆಸೆ (ಕಾಮ, ರಾಗ) ಇಲ್ಲದಿರುವುದು. ಕರ್ಮಗಳನ್ನು ಮಾಡುವವನಿಗೆ ಅಹಂಕಾರವಿಲ್ಲದಿರುವಾಗ, ಆಸೆ ಇರುವುದಕ್ಕೆ ಸಾಧ್ಯವಿಲ್ಲ. ಆಸೆಯು ಆಹಾರವಿಲ್ಲದೆ ಕುಗ್ಗಿಹೋಗಿ ಕೊನೆಗೆ ಕ್ಷಯಿಸಿಹೋಗುತ್ತದೆ. ಜನಗಳ ನೋಟಕ್ಕೆ ಮುಕ್ತಸ್ಥಿತಿಯಲ್ಲಿರುವ ಮನುಷ್ಯನೂ ಇತರರಂತೆಯೆ ಎಲ್ಲ ವಿಧವಾದ ಕೆಲಸಕಾರ್ಯಗಳಲ್ಲಿಯೂ ತೊಡಗಿರುವಂತೆ ತೋರುತ್ತದೆ; ಕೆಲವು ವೇಳೆ ಇತರರಿಗಿಂತ ಅಧಿಕ ಪ್ರಮಾಣದಲ್ಲಿಯೆ ತೊಡಗಿರುವಂತೆ ತೋರುತ್ತದೆ; ಇತರರಿಗಿಂತ ಹೆಚ್ಚು ವೀರ್ಯ ಮತ್ತು ಸಾಮರ್ಥ್ಯಗಳಿಂದ ಮಾಡುತ್ತಾನೆ. ಕಾರಣವೇನೆಂದರೆ ಭಗವಂತನ ಇಚ್ಛಾಶಕ್ತಿಯು ಯಾವ ಅಡಚಣೆಯೂ ಇಲ್ಲದೆ ಇವನ ಮೂಲಕ ಕೆಲಸಮಾಡುತ್ತಿದೆ. ಅವನು ಮಾಡುವ ವ್ಯಾಪಾರಗಳಲ್ಲಿ ಮತ್ತು ಕರ್ಮಗಳಲ್ಲಿ ಕೀಳ್ಮಟ್ಟದ ಭಾವನೆಗಳ ಮತ್ತು ಆಸೆ-ಕಾಮಗಳ ಸೊಂಕು ಕೊಂಚವೂ ಇಲ್ಲ. ತಾನು ಮಾಡುವ ಕರ್ಮಗಳ ಫಲಕ್ಕೆ ಸಂಬಂಧಿಸಿದಂತೆ ಇವನಿಗೆ ಯಾವ ಆಸಕ್ತಿಯೂ ಇಲ್ಲ; ಹೀಗೆ ಫಲದ ಕಡೆ ಗಮನಕೊಡದೆ ಎಲ್ಲ ಕರ್ಮಗಳ ಪ್ರಭುವಾದ ಪರಮಾತ್ಮನು ತನ್ನ ಮೂಲಕ ಕೆಲಸಮಾಡುತ್ತಿದ್ದಾನೆಂಬ ಭಾವನೆಯಿರುವಾಗ ಆಸೆಯೆಂಬುದು (ರಾಗ ಇಚ್ಛೆ) ಇರುವುದಕ್ಕೆ ಸಾಧ್ಯವೆ ಇಲ್ಲ. ಈಶ್ವರನು ತನ್ನ ಮೂಲಕ ಮಾಡುವ ಕೆಲಸವು ಫಲಕಾರಿಯಾಗಬೇಕೆಂಬ ಆಸೆಯೂ ಇರುವುದಿಲ್ಲ. ಫಲವು ಈಶ್ವರನಿಗೆ ಸೇರಿದುದು; ಅದು ಈಶ್ವರನಿಂದ ಗೊತ್ತುಮಾಡಲ್ಪಡುತ್ತದೆಯೆ ಹೊರತು ತನ್ನ ಸ್ವಂತ ಸಂಕಲ್ಪದಿಂದ ಮತ್ತು ಪ್ರಯತ್ನಗಳಿಂದಲ್ಲ. ಯಶಸ್ವಿಯಾಗಿಯೂ, ಈಶ್ವರನಿಗೆ ತೃಪ್ತಿಯಾಗುವಂತೆಯೂ ಕೆಲಸಮಾಡಬೇಕೆಂಬ ಆಸೆಯೂ ಇರುವುದಿಲ್ಲ; ಏತಕ್ಕೆಂದರೆ ನಿಜವಾದ ಕರ್ತೃವು ಈಶ್ವರನೇಯೆ; ಎಲ್ಲ ಯಶಸ್ಸೂ ಪ್ರಕೃತಿಯಲ್ಲಿರುವ ಅವನ ಶಕ್ತಿಗೇ ಸೇರಿದುದು. ಪರಿಮಿತವಾದ ಶಕ್ತಿಯುಳ್ಳ ಮನುಷ್ಯನಿಗೆ ಸೇರಿದುದಲ್ಲ. ಮುಕ್ತನಾದ ಮನುಷ್ಯನ ಮನಸ್ಸು ಯಾವ ಕರ್ಮವನ್ನೂ ಮಾಡುವುದಿಲ್ಲ. ತನ್ನ ಪ್ರಕೃತಿಯ ಮೂಲಕ ಇವನು ಕೆಲಸ ಮಾಡಿದರೂ ಕೂಡ, ಕೆಲಸಮಾಡುವುದು ಅಂತರ್ಯಾಮಿಯಾದ ಭಗವಂತನ ಶಕ್ತಿಯೆ.

ಹೀಗೆಂದ ಮಾತ್ರಕ್ಕೆ ಕರ್ಮಗಳನ್ನು ಚೆನ್ನಾಗಿ, ಯಶಸ್ವಿಯಾಗಿ ಮಾಡ ಕೂಡದೆಂದೂ, ಲಕ್ಷ್ಯಕ್ಕೆ ತಕ್ಕಂತಹ ಸಾಧನಗಳನ್ನು ಆರಿಸಿಕೊಳ್ಳದೆಯೇ ಮಾಡ ಬೇಕೆಂದೂ ಅರ್ಥವಲ್ಲ. ವಾಸ್ತವವಾಗಿ ಬೇಕು ಮತ್ತು ಬೇಡ ಎಂಬವುಗಳ ಪ್ರೇರಣೆ

ಗೊಳಗಾದ ಬುದ್ಧಿಯಿಂದ ಎಂದರೆ ಸ್ವತಂತ್ರವಲ್ಲದ ಒಂದೇಕಡೆ ದೃಷ್ಟಿಯಿರುವ ಮನಸ್ಸಿನ ಎಳೆತಕ್ಕೆ ಸಿಕ್ಕಿ ಆತಂಕಗಳಿಂದ ಮತ್ತು ಆತುರಗಳಿಂದ, ಕೂಡಿ ಮಾಡುವ ಕರ್ಮಗಳಿಗಿಂತಲೂ, ಯೋಗದಲ್ಲಿದ್ದುಕೊಂಡು, ಸಮಾಧಾನದಿಂದ ಮಾಡುವ ಕರ್ಮಗಳಿ ಚೆನ್ನಾಗಿಯೂ, ಯಶಸ್ವಿಯಾಗಿಯೂ ಆಗುತ್ತವೆ. ಗೀತೆಯಲ್ಲಿ ಇನ್ನೊಂದು ಕಡೆ ಹೇಳಿರುವಂತೆ, ಕರ್ಮಮಾಡುವುದರಲ್ಲಿ ಕೌಶಲ್ಯವೆ ಯೋಗ. ಆದರೆ ಈ ಕರ್ಮಗಳನ್ನು ಮಾಡುವವನು ಮುಕ್ತನಾದ ಯೋಗಿಯಲ್ಲ; ಅವನ ಪ್ರಕೃತಿಯ ಮೂಲಕ ಸರ್ವವ್ಯಾಪಿಯಾದ ಈಶ್ವರನ ಶಕ್ತಿ ಸಂಕಲ್ಪಗಳು ಮಾಡುತ್ತವೆ. ತನ್ನ ಶಕ್ತಿಯು ಮಾಡಬೇಕಾದ ಕೆಲಸಕ್ಕೆ ಅನುಗುಣವಾಗಿರುವುದೆಂದೂ ತಾನು ಮಾಡುವ ಕರ್ಮವು ಈಶ್ವರ ಸಂಕಲ್ಪಕ್ಕೆ ಅನುಸಾರವಾಗಿದೆಯೆಂದೂ ಕರ್ಮಯೋಗಿಯು ಬಲ್ಲನು. ಇವನ ಸಂಕಲ್ಪವು ಆಸೆ ಅಥವಾ ರಾಗಗಳಿಗೆ ಸಂಬಂಧಿಸಿಲ್ಲ; ವೈಯುಕ್ತಿಕವಲ್ಲದ ಒಂದು ಧ್ಯೇಯವನ್ನು ಸಾಧಿಸುವುದಕ್ಕಾಗಿ ಇವನ ಸಂಕಲ್ಪವು ಈಶ್ವರನ ಇಚ್ಛಾಶಕ್ತಿಯೊಂದಿಗೆ ಒಂದಾಗಿದೆ. ತನ್ನ ಸಂಕಲ್ಪದ ಶಕ್ತಿಯನ್ನು ಮತ್ತು ಸರಣಿಯನ್ನು ಈಶ್ವರಸಂಕಲ್ಪವು ಸೂಕ್ಷ್ಮವಾಗಿ ನಿಯಂತ್ರಿಸುತ್ತಿದೆಯೆಂಬುದನ್ನು ಕರ್ಮಯೋಗಿಯು ಬಲ್ಲನು. ಇವನ ಕರ್ಮವು ಲೋಕದ ದೃಷ್ಟಿಯಲ್ಲಿ ಕೆಲವು ವೇಳೆ ಸಫಲವೂ, ಯಶಸ್ವಿಯೂ ಆದಂತೆಯೂ, ಬೇರೆ ಕೆಲವು ವೇಳೆ ವಿಫಲವೂ, ವ್ಯರ್ಥವೂ ಆದಂತೆಯೂ ಕಾಣಬಹುದು. ಕರ್ಮಯೋಗಿಯ ದೃಷ್ಟಿಯಲ್ಲಾದರೊ ಅವನು ಮಾಡುವ ಕರ್ಮಗಳು ಯಾವಾಗಲೂ ಸಫಲವೇಯೆ. ಎಲ್ಲ ಕರ್ಮಗಳಿಗೂ ಫಲಗಳಿಗೂ ನಿಯಾಮಕನಾದ ಸರ್ವಜ್ಞನಾದ ಈಶ್ವರನೆ ನಿಯಂತ್ರಿಸಿರುವುದರಿಂದ ಆ ಕರ್ಮಗಳು ಸಫಲವೆ ಆಗಿರಬೇಕು. ಕರ್ಮಯೋಗಿಯು ಯಶಸ್ಸನ್ನು ಕೋರುವುದಿಲ್ಲ; ಈಶ್ವರಸಂಕಲ್ಪವು ನೆರವೇರಿದರೆ ಸಾಕು. ಬಾಹ್ಯದೃಷ್ಟಿಗೆ ತೋರುವ ಜಯಾಪಜಯ ಗಳೆರಡರ ಹಿನ್ನೆಲೆಯಲ್ಲಿಯೂ ಈಶ್ವರನ ಜ್ಞಾನವೂ ಸಂಕಲ್ಪವೂ ಒಂದೇ ರೀತಿಯಾಗಿ ಇವೆ. ಕೆಲವು ವೇಳೆ ಲೋಕವು ಸಾರ್ಥಕವಾಯಿತೆಂದು ಭಾವಿಸುವ ಕರ್ಮಗಳ ಹಿಂದೆಯೆ ಈಶ್ವರನ ಸಂಕಲ್ಪವೂ ಮತ್ತು ಜ್ಞಾನವೂ ಅಧಿಕ ಪ್ರಮಾಣದಲ್ಲಿರಬಹುದು. ಯುದ್ಧಮಾಡೆಂದು ಆಜ್ಞಾಪಿಸಲ್ಪಟ್ಟ ಅರ್ಜುನನಿಗೆ ಜಯವು ಖಂಡಿತವಾದರೂ ಕೂಡ, ಅರ್ಜುನನು ಯುದ್ಧ ಮಾಡಲೇಬೇಕು. ಈಶ್ವರಸಂಕಲ್ಪದ ಪ್ರಕಾರ ಆಗಬೇಕಾದ ಮಹತ್ತಾದ ಕಾರ್ಯದಲ್ಲಿ ಇವನಿಗೆ ವಹಿಸಿರುವ ಭಾಗವು ಯುದ್ಧಮಾಡುವುದೆ ಆಗಿದೆ; ಆ ಕೆಲಸವನ್ನು ಅವನು ನಿರ್ವಹಿಸಬೇಕು.

ಮುಕ್ತನಾದವನು ತನಗೋಸ್ಕರ ಏನನ್ನೂ ಕೋರುವುದಿಲ್ಲ. ತನ್ನ ಸ್ವತ್ತೆಂದು ಯಾವ ವಸ್ತುವನ್ನೂ ಗ್ರಹಿಸುವುದಿಲ್ಲ. ಈಶ್ವರೇಚ್ಛೆಯಪ್ರಕಾರ ಯಾವುದು ಬರುತ್ತದೆಯೊ ಅದನ್ನು ತೆಗೆದುಕೊಳ್ಳುತ್ತಾನೆ; ಯಾವುದಕ್ಕಾಗಿಯೂ ಆನೆಪಡುವುದಿಲ್ಲ; ಯಾರನ್ನು ಕಂಡರೂ ಇವನಿಗೆ ಮತ್ಸರವಿಲ್ಲ. ರಾಗವಿಲ್ಲದೆ, ದ್ವೇಷವಿಲ್ಲದೆ, ಬಂದುದೆಲ್ಲವನ್ನು ಪ್ರಸನ್ನತೆಯಿಂದ ಈಶ್ವರಪ್ರಸಾದವೆಂದು ಸ್ವೀಕರಿಸುತ್ತಾನೆ. ತನ್ನ ಕೈಬಿಟ್ಟು ಯಾವುದು ಹೋದಾಗ್ಯೂ ವ್ಯಥೆಪಡುವುದಿಲ್ಲ, ಶೋಕಿಸುವುದಿಲ್ಲ. ತನ್ನ ಹೃದಯವನ್ನೂ, ಮನಸ್ಸನ್ನೂ, ಸಂಪೂರ್ಣವಾಗಿ ಸ್ವಾಧೀನದಲ್ಲಿಟ್ಟುಕೊಂಡಿದ್ದಾನೆ. ಅವನ ಮನಸ್ಸಿನಲ್ಲಿ ಕ್ಷೋಭೆಯಾಗಲಿ ಉದ್ವೇಗವಾಗಲಿ ಇರುವುದಿಲ್ಲ. ಬಾಹ್ಯಸ್ಪರ್ಶಗಳಿಂದ ಇವನ ಮನಸ್ಸಿನಲ್ಲಿ ಉದ್ವೇಗವುಂಟಾಗುವುದಿಲ್ಲ. ಇವನು ಮಾಡುವ ಕರ್ಮಗಳನ್ನು ಇವನ ಶರೀರವು ಒಂದು ಯಂತ್ರದಂತೆ ಮಾಡುತ್ತದೆ. ಈ ಕರ್ಮಗಳಿಗೆ ಬೇಕಾದ ಶಕ್ತಿಯೆಲ್ಲವೂ ಮೇಲಿನಿಂದ ಬರುತ್ತದೆ; ಏತಕ್ಕೆಂದರೆ ಈ ಕರ್ಮಗಳ ಕಾರಣವು ಸ್ಥೂಲಲೋಕಕ್ಕೆ ಸಂಬಂಧಿಸಿದುದಲ್ಲ. ಆ ಕರ್ಮಗಳು ಪುರುಷೋತ್ತಮನ ಸಂಕಲ್ಪ, ಜ್ಞಾನ ಮತ್ತು ಆನಂದಗಳ ಪ್ರತಿಬಿಂಬವೆ ಹೊರತು ಬೇರೇನೂ ಅಲ್ಲ. ಕೆಲಸಗಳನ್ನು ಮಾಡುವುದಕ್ಕೂ, ಅದರ ಉದ್ದೇಶಕ್ಕೂ, ಕರ್ಮಯೋಗಿಯು ಪ್ರಾಮುಖ್ಯತೆಯನ್ನು ಕೊಡುವುದಿಲ್ಲ; ಆದುದರಿಂದ ಅವನ ಮನಸ್ಸಿನಲ್ಲಿ ಮತ್ತು ಹೃದಯದಲ್ಲಿ ರಾಗ, ದ್ವೇಷ, ಪಾಪ ಎಂಬುದಾಗಿ ನಾವು ಕರೆಯುವ ಪ್ರತಿಕ್ರಿಯೆಗಳು ಉಂಟಾಗುವುದಿಲ್ಲ. ಪಾಪವೆಂಬುದು ಬಾಹ್ಯವಾದ ಕರ್ಮವನ್ನು ಮಾಡುವುದರಲ್ಲಿಲ್ಲ; ಈ ಕರ್ಮಕ್ಕೆ ಕಾರಣವಾಗಿ ಅಥವಾ ಕರ್ಮವನ್ನು ಮಾಡುವಾಗ ನಮ್ಮ ಸಂಕಲ್ಪ, ಮನಸ್ಸು ಮತ್ತು ಹೃದಯಗಳ ಮೇಲೆ ಉಂಟಾಗುವ ಅಶುದ್ಧವಾದ ಪ್ರತಿಕ್ರಿಯೆಯೆ ಪಾಪವೆನಿಸಿಕೊಳ್ಳುತ್ತದೆ. ನಿರಾಕಾರವಾದ ಪರಮಾತ್ಮನ ಚೈತನ್ಯವು ನಿತ್ಯಶುದ್ಧವಾದದ್ದು; ಅದು ಮಾಡುವ ಕೆಲಸಗಳಿಗೆ ತನ್ನದೆ ಆದ ಪರಿಶುದ್ಧತೆಯನ್ನು ಕೊಡುತ್ತದೆ. ಹೀಗೆ ವೈಯಕ್ತಿಕವಾದ ಯಾವ ಭಾವನೆಯನ್ನೂ ಇಟ್ಟುಕೊಳ್ಳದೆ ಆಧ್ಯಾತ್ಮಿಕ ಸ್ವಭಾವವನ್ನು ಹೊಂದಿರುವುದು ದಿವ್ಯಕರ್ಮಗಳನ್ನು ಮಾಡುವ ಕರ್ಮಯೋಗಿಯ ಮೂರನೆಯ ಲಕ್ಷಣ. ಒಂದು ಮಟ್ಟದ ಮನೋವೈಶಾಲ್ಯವನ್ನೂ, ಬೆಳವಳಿಕೆಯನ್ನೂ ಮುಟ್ಟಿರುವ ಜೀವರೆಲ್ಲರಿಗೂ ತಮ್ಮ ವ್ಯಕ್ತಿತ್ವಕ್ಕೆ ಅತೀತವಾಗಿರುವ ಒಂದು ದಿವ್ಯ ಶಕ್ತಿ ಅಥವಾ ಸಂಕಲ್ಪ ಮತ್ತು ಜ್ಞಾನವು ತಮ್ಮ ಮೂಲಕ ಕೆಲಸ ಮಾಡುವುದರ ಅನುಭವವು ಆಗುತ್ತದೆ. ಆದರೆ ಇವರಿಗೆ ಸ್ವಾರ್ಥಸಂಬಂಧವಾದ ಮನೋಭಾವವು ಇನ್ನೂ ಹೋಗಿಲ್ಲ; ಕೆಲವು ವೇಳೆ ಪ್ರಬಲವಾಗಿಯೆ ಇದೆ.

ಮುಕ್ತನಾದವನಿಗಾದರೊ ಇಂತಹ ಮನೋಭಾವಗಳು ಸ್ವಲ್ಪವೂ ಇರುವುದಿಲ್ಲ. ಇವನು ತನ್ನ ವ್ಯಕ್ತಿತ್ವವನ್ನು ನಿರಾಕಾರನಾದ ಪರಮಾತ್ಮನಲ್ಲಿ ಲೀನಮಾಡಿದ್ದಾನೆ; ಆ ಪರಮಾತ್ಮನಾದ ಪುರುಷೋತ್ತಮನು ಇತರ ಪರಿಮಿತಗುಣಗಳಂತೆ ಇವನ ಗುಣಗಳನ್ನೂ ತನ್ನಲ್ಲಿ ಸೇರಿಸಿಕೊಂಡು, ಇವುಗಳನ್ನು ಅಪರಿಮಿತವಾಗಿ ಮಾಡಿಕೊಂಡು ಉಪಯೋಗಿಸುತ್ತಾನೆ. ಪರಿಮಿತವಾದ ಇವುಗಳು ಯಾವುದರಿಂದಲೂ ಅವನ ಕಾರ್ಯಕ್ಕೆ ಅಡಚಣೆಯಾಗುವುದಿಲ್ಲ. ಈ ಕರ್ಮಯೋಗಿಯು ಆತ್ಮಚೈತನ್ಯದ ಕೇಂದ್ರವಾಗಿದ್ದಾನೆ; ಪ್ರಕೃತಿಯ ಗುಣಗಳಿಗೆ ಒಂದು ಉಪಾಧಿಯಲ್ಲ. ಪ್ರಕೃತಿಯಲ್ಲಿ ವ್ಯವಹರಿಸುವಾಗ ಆ ಕೇಂದ್ರವು ಅಖಂಡವಾಗಿಯೂ, ವಿಶಾಲವಾಗಿಯೂ ಮತ್ತು ವ್ಯಾಪಕವಾಗಿಯೂ ಇದೆ. ಅಪರಿಮೇಯವಾದ ಚೈತನ್ಯವು ವ್ಯಕ್ತವಾಗಲು ಈ ವ್ಯಕ್ತಿತ್ವವು ಒಂದು ಎಲ್ಲೆಯಿಲ್ಲದ ಪಡಿಯಚ್ಚಾಗಿದೆ. ಇವನು ಪುರುಷೋತ್ತಮನ ಸಜೀವವಾದ ಮುಖವಾಡವಾಗಿದ್ದಾನೆ.

ಈ ಜ್ಞಾನ ವೈರಾಗ್ಯ ಮತ್ತು ಅಹಂಕಾರರಾಹಿತ್ಯಗಳ ಪರಿಣಾಮವೇನೆಂದರೆ ಕರ್ಮಯೋಗಿಯು ಆತ್ಮನಲ್ಲಿಯೂ ಪ್ರಕೃತಿಯಲ್ಲಿಯೂ ಸಮತ್ವದಿಂದ ಇರುತ್ತಾನೆ. ಈ ರೀತಿಯಾದ ಸಮತ್ವವು ಕರ್ಮಯೋಗಿಯ ನಾಲ್ಕನೆಯ ಲಕ್ಷಣ. ಇವನು ದ್ವಂದ್ವಕ್ಕೆ ಅತೀತನಾಗಿದ್ದಾನೆ. ಕಾರ್ಯಸಿದ್ಧಿ, ಅಸಿದ್ಧಿ ಅಥವಾ ಜಯಾಪಜಯಗಳನ್ನು ಮನಸ್ಸಿನಲ್ಲಿ ಯಾವ ವಿಕಾರವೂ ಇಲ್ಲದೆ ಸಮದೃಷ್ಟಿಯಿಂದ ನೋಡುತ್ತಾನೆ. ಇವು ಮಾತ್ರವಲ್ಲದೆ ಎಲ್ಲ ವಿಧವಾದ ದ್ವಂದ್ವಗಳೂ ಕೂಡ ಇವನಲ್ಲಿ ಸಮನ್ವಯ ಹೊಂದುತ್ತವೆ. ಸಾಮಾನ್ಯ ಜನರು ಪ್ರಪಂಚದ ವ್ಯಾಪಾರಗಳನ್ನೂ, ಅವುಗಳ ಬಾಹ್ಯಲಕ್ಷಣಗಳನ್ನೂ ಮಾತ್ರ ನೋಡಿ ಬೆಲೆ ಕಟ್ಟುತ್ತಾರೆಯಷ್ಟೆ; ಇವನ ದೃಷ್ಟಿಯಲ್ಲಾದರೊ ಈ ಲಕ್ಷಣಗಳು ಅಷ್ಟು ಪ್ರಧಾನವಲ್ಲ; ಅವು ಗೌಣವೂ ನಿಮಿತ್ತಮಾತ್ರವೂ ಆಗಿರುತ್ತವೆ. ಇವುಗಳನ್ನು ಅವನು ಲಕ್ಷ್ಯಮಾಡುವುದಿಲ್ಲ; ಎಂದರೆ ಅವುಗಳಿಂದ ಇವನ ಮನಸ್ಸಿನ ಮೇಲೆ ಯಾವ ಪರಿಣಾಮವೂ ಆಗುವುದಿಲ್ಲ. ಆಸೆಯಿಂದ ಬದ್ಧರಾದ ಸಾಮಾನ್ಯ ಜನರಿಗೆ ಒಳ್ಳೆಯದೆಂಬುದೂ ಕೆಟ್ಟದ್ದೆಂಬುದೂ ಬಹಳ ಮುಖ್ಯವಾಗಿ ಕಾಣುತ್ತವೆ. ಇವನಾದರೊ ಅವೆರಡನ್ನೂ ಒಂದೇ ಸಮನಾಗಿ ಎಣಿಸಿ, ಸ್ವಾಗತಿಸುತ್ತಾನೆ. ಇವೆರಡೂ ಕೂಡ ಶಾಶ್ವತವಾದ ಶುಭದ ರೂಪಗಳೆ; ಈ ಘಟನೆಗಳ ಮೂಲಕ ಆ ಶುಭವು ವಿಕಾಸಹೊಂದುತ್ತದೆ. ಇವನಿಗೆ ಸೋಲೆಂಬುದಿಲ್ಲ. ಪ್ರಕೃತಿಯೆಂಬ ಕುರುಕ್ಷೇತ್ರದಲ್ಲಿ ಎಲ್ಲವೂ ಈಶ್ವರಸಂಕಲ್ಪದ ನಿರ್ವಹಣೆಗಾಗಿಯೆ ನಡೆಯುತ್ತಿದೆ. ಈ ಕರ್ಮರಂಗವು ಧರ್ಮವು ವಿಕಾಸಹೊಂದಲು ನಿರ್ಮಿಸಿರುವ

ಕ್ಷೇತ್ರ. ಇಲ್ಲಿ ಜರಗುವ ಪ್ರತಿಯೊಂದು ಘಟನೆಯನ್ನೂ ಕೂಡ ಈ ಯುದ್ಧದ ಒಡೆಯನೂ, ಕರ್ಮಗಳ ಅಧ್ಯಕ್ಷನೂ ಮತ್ತು ಧರ್ಮದ ನೇತೃವೂ ಆದ ಪರಮಾತ್ಮನು ಮುಂದಾಗಿಯೆ ನಿರ್ಣಯಿಸಿದ್ದಾನೆ. ಲೋಕದ ನಿಂದೆ ಅಥವಾ ಸ್ತುತಿಯಾಗಲಿ ಮಾನ ಅಥವಾ ಅವಮಾನವಾಗಲಿ ಕರ್ಮಯೋಗಿಯ ಮನಸ್ಸಿನ ಮೇಲೆ ಯಾವ ಪರಿಣಾಮವನ್ನೂ ಉಂಟುಮಾಡುವುದಿಲ್ಲ. ಅವನು ಇಟ್ಟುಕೊಂಡಿರುವ ಲಕ್ಷ್ಯ ಮತ್ತು ಆದರ್ಶಗಳೆ ಬೇರೆ; ಈ ಕರ್ಮಗಳ ಸ್ವರೂಪವನ್ನು ಯಥಾವತ್ತಾಗಿ ನೋಡಿ ಬೆಲೆಕಟ್ಟುವ ಶ್ರೇಷ್ಠನಾದ ವಿಮರ್ಶಕನು ಬೇರೆ ಇದ್ದಾನೆ. ಪ್ರಾಪಂಚಿಕವಾದ ಯಾವ ಪ್ರತಿಫಲವೂ ಅವನ ಉದ್ದೇಶವಲ್ಲ. ಕ್ಷತ್ರಿಯನಾದ ಅರ್ಜುನನು ಕೀರ್ತಿಯನ್ನೂ ಸನ್ಮಾನವನ್ನೂ ಆಶಿಸುವುದು ಸಹಜವಾಗಿಯೆ ಇದೆ. ಅಪಕೀರ್ತಿ ಹೊಂದಿ ಹೇಡಿ ಎಂದೆನಿಸಿಕೊಳ್ಳುವುದಕ್ಕಿಂತ ಮರಣವೆ ಲೇಸೆಂದು ಭಾವಿಸುವುದೂ ಅವನಿಗೆ ಸ್ವಾಭಾವಿಕವೆ ಆಗಿದೆ. ತನ್ನ ವಂಶದ ಸ್ಥಾನಕ್ಕೆ, ಗೌರವಕ್ಕೆ, ಪೌರುಷಕ್ಕೆ ಮತ್ತು ಶೂರತನಕ್ಕೆ ಸ್ವಲ್ಪವೂ ಕಳಂಕ ಬರದಂತೆ ನಡೆದುಕೊಳ್ಳುವುದೂ ಅವನ ಧರ್ಮವೇಯೆ. ಆದರೆ ಬ್ರಾಹ್ಮೀಸ್ಥಿತಿಯನ್ನು ಪಡೆದ ಅರ್ಜುನನು ಈ ವಿಷಯಗಳಿಗೆ ಸ್ವಲ್ಪವೂ ಗಮನಕೊಡಬೇಕಾಗಿಲ್ಲ. ಪರಮಾತ್ಮನು ತನಗೆ ವಿಧಿಸಿರುವ ಕರ್ಮವು ಯಾವುದೆಂದು ತಿಳಿದುಕೊಂಡು ಅದನ್ನು ಮಾಡಿದರೆ ಅವನ ಕರ್ತವ್ಯವಾಯಿತು; ಫಲವನ್ನು ಕರ್ಮಗಳ ಪ್ರಭುವಿಗೆ ಬಿಟ್ಟು ಬಿಡಬೇಕು.

ಪಾಪಪುಣ್ಯಗಳೆಂಬ ದ್ವಂದ್ವವದ್ನು ಅವನು ದಾಟಿದ್ದಾನೆ. ಅಹಂಕಾರದ ಹಿಡಿತವನ್ನು ಸಡಿಲಪಡಿಸಲು ಮತ್ತು ರಾಗದ್ವೇಷಗಳ ದೃಢವಾದ ಬಂಧನದಿಂದ ಬಿಡಿಸಿಕೊಳ್ಳಲು ಯತ್ನಿಸುತ್ತಿರುವ ಮನುಷ್ಯಜೀವನಿಗಾದರೊ ಪಾಪಪುಣ್ಯಗಳ ಭೇದವು ಬಹು ಮುಖ್ಯವಾಗಿದೆ. ಬ್ರಾಹ್ಮೀಸ್ಥಿತಿಯನ್ನು ಹೊಂದಿದವನು ಈ ಹೋರಾಟದಿಂದ ಮುಕ್ತನಾಗಿದ್ದಾನೆ. ಸಾಕ್ಷಿಯೂ, ಶುದ್ಧನೂ ಮತ್ತು ಜ್ಞಾನಸ್ವರೂಪಿಯೂ ಆದ ಆತ್ಮನಲ್ಲಿ ಇವನು ಪ್ರತಿಷ್ಠಿತನಾಗಿದ್ದಾನೆ. ಪಾಪವು ಇವನಿಂದ ಜಾರಿಹೋಗಿದೆ. ಅವನು ನಿತ್ಯ ಶುದ್ಧ ಬುದ್ಧ ಸ್ವಭಾವವೆಂಬ ಉತ್ತಮವಾದ ಸ್ಥಿತಿಯನ್ನು ಮುಟ್ಟಿ ಅಲ್ಲಿ ಸುಪ್ರತಿಷ್ಠಿತನಾಗಿದ್ದಾನೆ; ಈ ಸ್ಥಿತಿಯು ಅವ್ಯಯವಾದದ್ದು, ಚ್ಯುತಿಯಿಲ್ಲದ್ದು; ಅವನು ಮಾಡುವ ಕರ್ಮಗಳಿಂದ—ನಮ್ಮ ದೃಷ್ಟಿಯಲ್ಲಿ ಈ ಕರ್ಮಗಳು ಒಳ್ಳೆಯದಾಗಿರಲಿ, ಕೆಟ್ಟದ್ದಾಗಿರಲಿ—ಅವನ ಸ್ಥಿತಿಯಲ್ಲಿ ಎಳ್ಳಷ್ಟೂ ಬದಲಾವಣೆಯಾಗುವುದಿಲ್ಲ. ಈ ಸ್ಥಿತಿಯಲ್ಲಿ ಪಾಪಪುಣ್ಯಗಳೆಂಬ ಭಾವನೆಗಳು ಹುಟ್ಟುವುದಕ್ಕೂ ಕೂಡ ಅವಕಾಶವಿಲ್ಲ.

ಇನ್ನೂ ಅಜ್ಞಾನದಲ್ಲಿಯೇ ಇರುವ ಅರ್ಜುನನ ಹೃದಯದಲ್ಲಿ ಎರಡು ವಿಧವಾದ ಭಾವನೆಗಳು ಉಂಟಾಗಬಹುದು. ನ್ಯಾಯ ಮತ್ತು ಧರ್ಮಗಳ ಕರೆಯನ್ನು ಅವನ ಹೃದಯವು ಕೇಳಿ ಯುದ್ಧದಿಂದ ವಿಮುಖನಾಗುವುದು ಪಾಪವೆಂದೂ, ಹೀಗೆ ತಾನು ವಿಮುಖನಾದರೆ ಅಧರ್ಮವು ಜಯಿಸಿ ಅದರ ಪರಿಣಾಮವಾಗಿ ಮನುಷ್ಯರಿಗೆ ಮತ್ತು ಜನಾಂಗಗಳಿಗೆ ಉಂಟಾಗುವ ಅನ್ಯಾಯ, ದುಃಖ ಮತ್ತು ಶೋಕ ಇವುಗಳಿಗೆ ತಾನು ಹೊಣೆಯಾಗುವನೆಂಬ ಭಾವನೆಯು ಅವನ ಮನಸ್ಸಿನಲ್ಲಿ ಉಂಟಾಗಬಹುದು. ಅಥವಾ ಕೊಲೆ ಮತ್ತು ಹಿಂಸೆಗಳಿಂದ ಅವನ ಹೃದಯವು ಹಿಂಜರಿದು, ಯಾವ ಉದ್ದೇಶದಿಂದಲೇ ಆಗಲಿ, ರಕ್ತಪಾತವನ್ನುಂಟುಮಾಡುವುದು ಮಹಾಪಾಪವೆಂದು ಅವನಿಗೆ ತೋರಬಹುದು. ಆಗಿನ ಕಾಲ, ಸನ್ನಿವೇಶ, ಲೋಕಾಭಿಪ್ರಾಯ ಮತ್ತು ಆಯಾ ಮನುಷ್ಯನ ಸ್ವಭಾವ, ಇವಕ್ಕನುಗುಣವಾಗಿ ಈ ಎರಡರಲ್ಲಿ ಯಾವ ಒಂದು ದೃಷ್ಟಿಯಾದರೂ ಧರ್ಮಬುದ್ಧಿಯುಳ್ಳ ಮನುಷ್ಯನ ಮನಸ್ಸಿಗೆ ಸರಿಯೆಂದು ತೋರಬಹುದು. ಅಥವಾ ಬಂಧುಪ್ರೇಮದಿಂದಲೂ ಆತ್ಮಾಭಿಮಾನದಿಂದಲೂ ಪ್ರೇರಿತನಾಗಿ, ತನ್ನ ಶತ್ರುಗಳಿಗೆ ಎದುರಾಗಿ, ತನ್ನ ಬಂಧುಮಿತ್ರರ ಕಡೆ ಮತ್ತು ಅನ್ಯಾಯ ಅಧರ್ಮಗಳಿಗೆ ವಿರುದ್ಧವಾಗಿ ನ್ಯಾಯ ಮತ್ತು ಧರ್ಮಗಳ ಪಕ್ಷದಲ್ಲಿ ಹೋರಾಡುವುದೆ ತನ್ನ ಕರ್ತವ್ಯವೆಂದು ಅವನು ಭಾವಿಸಬಹುದು. ಬ್ರಾಹ್ಮೀಸ್ಥಿತಿಯಲ್ಲಿರುವ ಜೀವನಾದರೊ ಈ ಪರಸ್ಪರ ವಿರುದ್ಧವಾದ ದೃಷ್ಟಿಗಳನ್ನು ಹಿಂದೆಬಿಟ್ಟು, ಧರ್ಮದ ಸ್ಥಾಪನೆ ಮತ್ತು ರಕ್ಷಣೆಗಾಗಿ ಭಗವಂತನು ತನ್ನಿಂದ ಯಾವ ಕರ್ತವ್ಯವನ್ನು ನಿರೀಕ್ಷಿಸುತ್ತಾನೆ ಎಂಬುದನ್ನು ಮಾತ್ರ ಗಮನಿಸುತ್ತಾನೆ. ಅವನಿಗೆ ತಾನು ವೈಯಕ್ತಿಕವಾಗಿ ಸಾಧಿಸಬೇಕಾದ ಫಲವಾವುದೂ ಇಲ್ಲ; ವೈಯಕ್ತಿಕವಾದ ರಾಗದ್ವೇಷಗಳೂ ಇಲ್ಲ. ಯಾವ ಬದಲಾವಣೆಗೂ ಅವಕಾಶಕೊಡದ, ಮೊದಲೆ ನಿರ್ಣಯವಾದ ನಿಯಮಗಳ ಕಟ್ಟಿಗೆ ಇವನು ಸಿಕ್ಕಿಲ್ಲ. ಆದುದರಿಂದ ಅನಂತನಾದ ಅಂತರಾತ್ಮನ ಕರೆಯನ್ನು ಎದುರಿಸುವ, ಸನ್ನಿವೇಶಕ್ಕನುಸಾರವಾಗಿ ಮುನ್ನಡೆಯುತ್ತಿರುವ ಮಾನವಕೋಟಿಯ ಪ್ರಗತಿಗೆ ಅಡ್ಡಿಬರುವ, ಯಾವ ನಿಯಮಕ್ಕೂ ಇವನು ಕಟ್ಟುಬಿದ್ದಿಲ್ಲ. ಜಯಿಸಬೇಕಾದ ಮತ್ತು ಕೊಲ್ಲಬೇಕಾದ ಯಾವ ವೈಯಕ್ತಿಕ ಶತ್ರುಗಳೂ ಇವನಿಗಿಲ್ಲ. ಇವನನ್ನು ಎದುರಿಸುವ ಮನುಷ್ಯರು ಮಾತ್ರ ಇದ್ದಾರೆ; ಅವರೂ ಕೂಡ ತಮ್ಮ ವಿರೋಧದಿಂದ ಭಗವತ್ಸಂಕಲ್ಪಕ್ಕೆ ಆ ಸನ್ನಿವೇಶದಲ್ಲಿ ಸಹಾಯಮಾಡುವವರೆ ಆಗಿದ್ದಾರೆ. ಆದುದರಿಂದ ಅವರ ಮೇಲೆ ಇವನಿಗೆ ಕೋಪವಾಗಲಿ ದ್ವೇಷವಾಗಲಿ ಇಲ್ಲ; ದೈವೀಸ್ವಭಾವಕ್ಕೆ ಇವುಗಳ ಸಂಪರ್ಕವೆ ಇಲ್ಲ. ತಮಗೆ ಎದುರಾದು

ದನ್ನೆಲ್ಲ ತೊಡೆದುಹಾಕಿ ನಾಶಮಾಡುವುದು ಅಸುರರ ಸ್ವಭಾವ; ರಾಕ್ಷಸರಿಗೆ ರಕ್ತಪಾತ ಮಾಡುವುದರಲ್ಲಿ ದಾಹವಿರುವುದು; ಬ್ರಾಹ್ಮೀಸ್ಥಿತಿಯಲ್ಲಿರುವವನಿಗೆ ಈ ವಿಧವಾದ ಮನೋಭಾವವಿರುವುದು ಅಸಾಧ್ಯ; ಅವನಲ್ಲಿ ಶಾಂತಿ, ಪ್ರಸನ್ನತೆ, ವಿಶ್ವವ್ಯಾಪಕವಾದ ಅನುಕಂಪ ಮತ್ತು ಪ್ರೇಮ, ಇವು ತುಂಬಿವೆ. ಯಾರಿಗೂ ಹಿಂಸೆಮಾಡುವ ಇಚ್ಛೆ ಅವನಿಗಿಲ್ಲ. ಎಲ್ಲರಲ್ಲಿಯೂ ಮೈತ್ರಿಯನ್ನೂ, ಕರುಣೆಯನ್ನೂ ಹೊಂದಿದ್ದಾನೆ. ಈ ಕರುಣೆಯಾದರೊ ಎಲ್ಲರನ್ನೂ ಗಮನಿಸುತ್ತಿರುವ, ಎಲ್ಲ ಜೀವರನ್ನೂ ಒಳಗೊಂಡಿರುವ, ಪರಮಾತ್ಮನ ಕರುಣೆ. ಸಾಮಾನ್ಯ ಮನುಷ್ಯರಲ್ಲಿ ಕಂಡುಬರುವಂತೆ ಹೃದಯವು ಕುಗ್ಗಿ, ನರಗಳು ಸಂಕೋಚವಾಗುವಂತಹ ಕರುಣೆಯಲ್ಲ. ಈ ಶರೀರದ ಕಷ್ಟಸುಖಗಳಿಗೆ ಹೆಚ್ಚು ಬೆಲೆಯನ್ನು ಅವನು ಕಟ್ಟುವುದಿಲ್ಲ; ಶರೀರದಲ್ಲಿರುವ ಜೀವನ ಹಿತಾಹಿತಗಳಿಗೆ ಹೆಚ್ಚು ಗಮನಕೊಡುತ್ತಾನೆ; ತನಗೆ ಸಾಧನಮಾತ್ರವೆಂಬ ದೃಷ್ಟಿಯಿಂದ ಶರೀರಕ್ಕೆ ಲಕ್ಷ್ಯಕೊಡುತ್ತಾನೆ. ಯುದ್ಧಕ್ಕಾಗಲಿ, ಕೊಲ್ಲುವುದಕ್ಕಾಗಲಿ ಇವನು ಮುನ್ನುಗ್ಗುವುದಿಲ್ಲ. ಧರ್ಮಕ್ಕಾಗಿ ಯುದ್ಧಮಾಡಬೇಕಾದಾಗ ಸಮತ್ವಬುದ್ಧಿಯಿಂದ ಇದರಲ್ಲಿ ತೊಡಗುತ್ತಾನೆ. ತನ್ನ ಪ್ರತಿಕಕ್ಷಿಗಳಲ್ಲಿ ಸಂಪೂರ್ಣವಾದ ಸಹಾನುಭೂತಿಯನ್ನೂ, ಅನುಕಂಪವನ್ನೂ ಇಟ್ಟುಕೊಂಡೆ ಅವರ ಪ್ರಭುತ್ವವನ್ನೂ ಅಧಿಕಾರಮದವನ್ನೂ ನಿರ್ಮೂಲಮಾಡಿ, ವಿಜಯೋತ್ಸಾಹವನ್ನು ಕುಗ್ಗಿಸಿ ಅವರನ್ನು ನಾಶಮಾಡುತ್ತಾನೆ.

ಪ್ರತಿಯೊಂದು ಜೀವಿಯಲ್ಲಿಯೂ ಕರ್ಮಯೋಗಿಗೆ ಕಾಣುವ ಎರಡು ಅಂಶಗಳು ಯಾವುವೆಂದರೆ—ಎಲ್ಲದರಲ್ಲಿಯೂ ಒಂದೇ ಸಮನಾಗಿರುವ ಈಶ್ವರಚೈತನ್ಯ ಮತ್ತು ತತ್ಕಾಲದ ಸನ್ನಿವೇಶಕ್ಕನುಗುಣವಾಗಿ ಈ ಚೈತನ್ಯವು ಬೇರೆ ಬೇರೆ ಪ್ರಮಾಣಗಳಲ್ಲಿ ವ್ಯಕ್ತವಾಗಿರುವುದರಿಂದ ಜೀವಿಗಳಲ್ಲಿ ವ್ಯಕ್ತವಾಗಿರುವ ಚೈತನ್ಯದ ಅಸಮತೆ. ಮನುಷ್ಯ ಮತ್ತು ಪ್ರಾಣಿ, ಒಂದು ನಾಯಿ, ಚಂಡಾಲ ಅಥವಾ ಜ್ಞಾನಿಯಾದ ಬ್ರಾಹ್ಮಣ, ಸಾಧು ಮತ್ತು ಪಾಪಿ, ತನ್ನ ಮಿತ್ರರು, ಶತ್ರುಗಳು ಮತ್ತು ತನ್ನ ವಿಷಯದಲ್ಲಿ ಉದಾಸೀನರಾಗಿರುವವರು, ತನ್ನನ್ನು ಪ್ರೀತಿಸಿ ಉಪಕಾರ ಮಾಡುವವರು ಮತ್ತು ತನ್ನನ್ನು ದ್ವೇಷಿಸಿ ಅಪಕಾರ ಮಾಡುವವರು, ಇವರೆಲ್ಲರಲ್ಲಿಯೂ ತನ್ನನ್ನೆ ನೋಡುತ್ತಾನೆ; ಪರಮಾತ್ಮನನ್ನೆ ಕಾಣುತ್ತಾನೆ; ಇವರೆಲ್ಲರ ವಿಷಯದಲ್ಲಿಯೂ ಒಂದೇ ಸಮನಾದ ಕರುಣೆಯನ್ನೂ ಪ್ರೇಮವನ್ನೂ ಹೊಂದಿರುತ್ತಾನೆ. ಬಾಹ್ಯ ಸನ್ನಿವೇಶಗಳಿಂದ ಅವನಿಗೆ ತಾತ್ಕಾಲಿಕವಾಗಿ ಕೆಲವರು ಶತ್ರುಗಳಾಗಿಯೂ ಕೆಲವರು ಮಿತ್ರರಾಗಿಯೂ ಇರಬಹುದು; ಇದರಿಂದ ಅವನ ಸಮತ್ವ

ದೃಷ್ಟಿಗೆ ಭಂಗಬರುವುದಿಲ್ಲ; ಎಲ್ಲರಿಗೂ ಇರುವ ಹಾರ್ದಿಕ ಪ್ರೇಮಕ್ಕೆ ಅಡ್ಡಿಬರುವುದಿಲ್ಲ. ಅವನ ಎಲ್ಲ ಕರ್ಮಗಳಲ್ಲಿಯೂ ಆತ್ಮನ ನಿಜವಾದ ತತ್ವವು, ಎಂದರೆ ಸಮತ್ವವು, ಕಂಡುಬರುತ್ತದೆ. ಬ್ರಾಹ್ಮೀಸ್ಥಿತಿಯನ್ನು ಹೊಂದಲು ಕ್ರಮಕ್ರಮವಾಗಿ ಮುಂದುವರೆಯುತ್ತಿರುವ, ಮಾನವಕೋಟಿಗೆ ಸಹಾಯಮಾಡುತ್ತಿರುವ ಈಶ್ವರ ಸಂಕಲ್ಪವು ಇವನ ಎಲ್ಲ ಕರ್ಮಗಳಲ್ಲಿಯೂ ವ್ಯಕ್ತವಾಗುತ್ತದೆ.

ಕರ್ಮಯೋಗಿಯ ಇನ್ನೊಂದು ಲಕ್ಷಣವೇನೆಂದರೆ ಸದಾ ಅವನಿಗಿರುವ ಪರಿಪೂರ್ಣವಾದ ಆನಂದ ಮತ್ತು ಶಾಂತಿ. ಇವು ಭಗವಂತನಲ್ಲಿರುವ ಆನಂದ ಮತ್ತು ಶಾಂತಿಗಳೆ ಆಗಿರುವುವು; ಈ ಪ್ರಪಂಚದ ಯಾವ ವಿಷಯವನ್ನೂ ಅವು ಅವಲಂಬಿಸಿಲ್ಲ. ಇವು ಸಹಜವಾದುವು; ಆತ್ಮನ ನೈಜವಾದ ಲಕ್ಷಣವೂ ಮತ್ತು ಬ್ರಹ್ಮನ ನಿಜಸ್ವರೂಪವೂ ಆಗಿರುವುವು. ಸಾಮಾನ್ಯ ಮನುಷ್ಯನ ಸುಖಕ್ಕೆ ಬಾಹ್ಯವಿಷಯಗಳು ಅವಶ್ಯಕ; ಅದರಿಂದಲೆ ಅವನಿಗೆ ಆಸೆ ಉಂಟಾಗುತ್ತದೆ. ಆದುದರಿಂದ ಅವನಿಗೆ ರಾಗದ್ವೇಷಗಳೂ, ದುಃಖ ಸಂತೋಷಗಳೂ ಮತ್ತು ಕಷ್ಟಸುಖಗಳೂ ಉಂಟಾಗುತ್ತವೆ. ಎಲ್ಲ ವಿಷಯಗಳನ್ನೂ ಅವುಗಳಿಂದ ಉಂಟಾಗುವ ಸುಖದುಃಖಗಳೆಂಬ ಒರೆಗಲ್ಲಿನಲ್ಲಿ ಒರೆಹಚ್ಚುತ್ತಾನೆ. ಸುಖ, ದುಃಖ ಮುಂತಾದುವು ಕರ್ಮಯೋಗಿಯ ಮೇಲೆ ಯಾವ ಪರಿಣಾಮವನ್ನೂ ಮಾಡುವುದಿಲ್ಲ. ಅವನಿಗೆ ಯಾವ ಆಶ್ರಯವೂ ಬೇಕಿಲ್ಲ; ಸ್ವಯಂತೃಪ್ತ ಮತ್ತು ನಿತ್ಯತೃಪ್ತನು. ತನ್ನೊಳಗೆ ಸುಖಿಯಾಗಿರುತ್ತಾನೆ; ಸಂತೋಷವುಳ್ಳವನಾಗಿರುತ್ತಾನೆ. ಇವನೊಳಗಿರುವ ಆನಂದಮಯವಾದ ಜ್ಯೋತಿಯು ಶಾಶ್ವತವಾಗಿರುತ್ತದೆ. ಪ್ರಪಂಚದ ವಸ್ತುಗಳಲ್ಲಿ ಇವನು ಪಡೆಯುವ ಆನಂದವು ಆ ವಸ್ತುಗಳಿಂದಲ್ಲ; ಆದುದರಿಂದ ಅವುಗಳಲ್ಲಿ ತನಗೆ ದೊರೆಯದೆ ಇರುವ ಅಂಶಗಳಿಂದ ಇವನು ನಿರಾಶನಾಗುವುದಿಲ್ಲ. ಇವನಿಗೆ ಬೇಕಾಗಿರುವುದು ಅವುಗಳಲ್ಲಿರುವ ಆತ್ಮವಸ್ತು; ಆ ವಸ್ತುಗಳಲ್ಲಿ ಅಭಿವ್ಯಕ್ತವಾಗಿರುವ ಈಶ್ವರಚೈತನ್ಯದಿಂದ ಅವನಿಗೆ ಆನಂದವುಂಟಾಗುತ್ತದೆ. ಈ ಆನಂದವು ಶಾಶ್ವತವಾದುದು; ಇದು ಅವನಿಗೆ ಲಭಿಸದೆ ಇರಲು ಸಾಧ್ಯವೇ ಇಲ್ಲ. ಆ ವಸ್ತುಗಳ ಬಾಹ್ಯಸ್ಪರ್ಶದಲ್ಲಿ ಇವನು ಆಸಕ್ತನಾಗಿಲ್ಲ; ತನ್ನೊಳಗೆ ತನ್ನಿಂದ ತಾನು ಯಾವ ಸುಖವನ್ನು ಪಡೆಯುತ್ತಾನೆಯೊ, ಅದನ್ನೆ ಹೊರಗಿನ ಎಲ್ಲ ವಿಷಯಗಳಿಂದಲೂ ಪಡೆಯುತ್ತಾನೆ; ಏತಕ್ಕೆಂದರೆ ಇವನ ಆತ್ಮವೆ ಅವುಗಳಲ್ಲಿಯೂ ಇದೆ. ಇವನು ಸಮಸ್ತ ಭೂತಗಳಲ್ಲಿರುವ ಆತ್ಮನಲ್ಲಿ ಒಂದಾಗಿದ್ದಾನೆ; ಎಲ್ಲದರಲ್ಲಿಯೂ ಇರುವ ಬ್ರಹ್ಮನಲ್ಲಿ ಐಕ್ಯವಾಗಿದ್ದಾನೆ. ಪ್ರಿಯವಾದುದರ ಸ್ಪರ್ಶದಿಂದ ಇವನಿಗೆ ಸಂತೋಷವೂ ಇಲ್ಲ; ಅಪ್ರಿಯವಾದುದರ ಸ್ಪರ್ಶ

ದಿಂದ ದುಃಖವೂ ಇಲ್ಲ. ವಸ್ತುಗಳಿಂದ, ಮಿತ್ರರಿಂದ ಅಥವಾ ಶತ್ರುಗಳಿಂದ ಆಗುವ ತೊಂದರೆಗಳು ಪ್ರಪಂಚದ ಕಡೆಗೆ ತಿರುಗಿದ್ದರೂ ಇವನ ಮನಸ್ಸು ಯಾವ ಪರಿಣಾಮ ವನ್ನೂ ಮಾಡುವುದಿಲ್ಲ; ಇವನ ತೆರೆದ ಹೃದಯವನ್ನು ಭ್ರಾಂತಿಗೊಳಿಸುವುದಿಲ್ಲ. ಈ ಆತ್ಮನಿಗೆ ಗಾಯವಾಗಲಿ, ವ್ರಣವಾಗಲಿ ಇಲ್ಲ. ಎಲ್ಲ ವಿಷಯಗಳಿಂದಲೂ ಒಂದೆ ವಿಧವಾದ, ಅಕ್ಷಯವಾದ ಸುಖವನ್ನು ಅನುಭವಿಸುತ್ತಾನೆ.

ಮೇಲೆ ಹೇಳಿದ ಸಮತ್ವ, ಅಹಂಕಾರರಾಹಿತ್ಯ, ಶಾಂತಿ, ಆನಂದ, ಸ್ವಾತಂತ್ರ್ಯ ಮುಂತಾದುವು ಕರ್ಮಗಳನ್ನು ಮಾಡುವುದು ಅಥವಾ ಮಾಡದೆ ಇರುವುದು ಎಂಬ ಕೇವಲ ಬಾಹ್ಯವಾದ ವಿಷಯವನ್ನು ಅವಲಂಬಿಸಿಲ್ಲ. ಬಾಹ್ಯವಾದ ತ್ಯಾಗ ಮತ್ತು ಆಂತರವಾದ ಸನ್ಯಾಸಗಳಿಗಿರುವ ಭೇದವನ್ನು ಗೀತೆಯು ಅನೇಕಬಾರಿ ವಿವರಿಸಿದೆ. ಗೀತೆಯ ಪ್ರಕಾರ ಆಂತರವಾದ ಸನ್ಯಾಸವಿಲ್ಲದೆ ಬರಿಯ ಬಾಹ್ಯತ್ಯಾಗಕ್ಕೆ ಬೆಲೆಯಿಲ್ಲ; ಮತ್ತು ಈ ಬಾಹ್ಯತ್ಯಾಗವನ್ನು ಸಂಪೂರ್ಣವಾಗಿ ಸಾಧಿಸಲು ಆಗುವುದೂ ಇಲ್ಲ. ಆಂತರವಾದ ಸ್ವಾತಂತ್ರ್ಯವಿರುವಾಗ ಬಾಹ್ಯವಾದ ತ್ಯಾಗವು ಅವಶ್ಯಕವೂ ಅಲ್ಲ. ಚನ್ನಾಗಿ ವಿಮರ್ಶಿಸಿದರೆ ತ್ಯಾಗವೆ ನಿಜವಾದ ಸನ್ಯಾಸವೆಂದು ಗೊತ್ತಾಗುವುದು. "ಯಾರು ದ್ವೇಷಿಸುವುದಿಲ್ಲವೊ, ಅಪೇಕ್ಷಿಸುವುದಿಲ್ಲವೊ ಅವನನ್ನು ನಿತ್ಯಸನ್ಯಾಸಿ ಎಂದು ತಿಳಿಯಬೇಕು, ದ್ವಂದ್ವವಿಲ್ಲದ ಅವನು ಸುಖವಾಗಿ ಬಂಧದಿಂದ ಬಿಡುಗಡೆ ಹೊಂದುತ್ತಾನೆ" (ಗೀತೆ ೫-೩).

ಬಾಹ್ಯವಾದ ತ್ಯಾಗವು ಕಷ್ಟ ಮತ್ತು ಅನವಶ್ಯಕ. ಎಲ್ಲ ಕರ್ಮಗಳನ್ನೂ ಮತ್ತು ಕರ್ಮಫಲಗಳನ್ನೂ ತ್ಯಜಿಸಬೇಕೆಂಬುದೇನೋ ನಿಜ; ಆದರೆ ಈ ತ್ಯಾಗವು ಬಾಹ್ಯವಾದುದಲ್ಲ, ಆಂತರವಾದ ತ್ಯಾಗವಾಗಬೇಕು. ಫಲವನ್ನು ತ್ಯಜಿಸಬೇಕಾದುದು ಜಡವಾದ ಪ್ರಕೃತಿಗಲ್ಲ; ಭಗವಂತನಿಗೆ ಯಜ್ಞರೂಪದಲ್ಲಿ ಅರ್ಪಿಸಬೇಕು. ಅವನ ಶಾಂತಿಗೆ ಭಂಗಬರದಂತೆ ಕರ್ಮಗಳೆಲ್ಲವೂ ಭಗವಂತನಿಂದಲೆ ಉದ್ಭವಿಸುತ್ತವೆ; ಅವನ ಶಾಂತಿ ಮತ್ತು ಆನಂದಗಳಲ್ಲಿ ಕರ್ಮಫಲಗಳನ್ನು ಅರ್ಪಿಸಬೇಕು. ನಿಜವಾದ ಕರ್ಮಸನ್ಯಾಸವೆಂದರೆ ಎಲ್ಲ ಕರ್ಮಗಳನ್ನೂ ಬ್ರಹ್ಮಾರ್ಪಣ ಮಾಡುವುದು. "ಯಾವ ಮನುಷ್ಯನು ಸಂಗವನ್ನು ಬಿಟ್ಟು ಬ್ರಹ್ಮಾರ್ಪಣ ಬುದ್ಧಿಯಿಂದ ಕರ್ಮಗಳನ್ನು ಮಾಡುತ್ತಾನೆಯೊ ಅವನು ನೀರಿನಿಂದ ತಾವರೆ ಎಲೆಯು ಹೇಗೊ ಹಾಗೆ ಪಾಪ ಗಳಿಂದ ಲೇಪವನ್ನು ಹೊಂದುವುದಿಲ್ಲ" (ಗೀತೆ ೫-೧೦). "ಆದುದರಿಂದ ಯೋಗಿ ಗಳು ಆತ್ಮಶುದ್ಧಿಗಾಗಿ ಆಸಕ್ತಿಯನ್ನು ಬಿಟ್ಟು ಶರೀರ, ಮನಸ್ಸು, ಬುದ್ಧಿ ಮತ್ತು ಇಂದ್ರಿಯಗಳಿಂದಲೂ ಕೂಡ ಕರ್ಮಗಳನ್ನು ಮಾಡುತ್ತಾರೆ. ಫಲಾಫಲಗಳಲ್ಲಿ

ಸಮಬುದ್ಧಿಯುಳ್ಳ ಯೋಗಿಯು ಕರ್ಮಫಲವನ್ನು ಬಿಟ್ಟು ಶಾಶ್ವತವಾದ ಶಾಂತಿಯನ್ನು ಹೊಂದುತ್ತಾನೆ. ಯೋಗಿಯಲ್ಲದವನು ಕರ್ಮಫಲದಲ್ಲಿ ಆಸಕ್ತಿಯುಳ್ಳವನಾಗಿರುವುದರಿಂದ ಬಂಧಕ್ಕೆ ಒಳಗಾಗುತ್ತಾನೆ.'' (ಗೀತೆ ೫–೧೧, ೧೨)

ಶಾಂತಿಯಿಂದ ತುಂಬಿರುವ ಪರಿಶುದ್ಧವಾದ ಬ್ರಾಹ್ಮೀಸ್ಥಿತಿಯನ್ನು ಒಮ್ಮೆ ಮುಟ್ಟಿದ ಮೇಲೆ ಪ್ರಕೃತಿಯನ್ನು ತನ್ನ ಹಿಡಿತದಲ್ಲಿಟ್ಟುಕೊಂಡು ಆತ್ಮನು ಕರ್ಮಗಳನ್ನು ಆಂತರವಾಗಿ ತ್ಯಾಗಮಾಡಿ—ಬಾಹ್ಯವಾಗಿ ಅಲ್ಲ—ನವದ್ವಾರಗಳುಳ್ಳ ದೇಹದಲ್ಲಿ ಕರ್ಮಗಳನ್ನು ಮಾಡದೆಯೂ ಮಾಡಿಸದೆಯೂ ಕುಳಿತಿರುತ್ತಾನೆ. ಎಲ್ಲರಲ್ಲಿಯೂ ಇರುವ ಆತ್ಮನೆ ಇವನಾಗಿದ್ದಾನೆ; ಸರ್ವವ್ಯಾಪಿಯಾದ ವಿಭು, ಪ್ರಭು. ಈ ಆತ್ಮನಿಗೆ ಕರ್ತೃತ್ವವಿಲ್ಲ; ಲೋಕದ ಕರ್ಮಗಳನ್ನು ಸೃಷ್ಟಿಸುವುದಿಲ್ಲ; ಕರ್ಮಕ್ಕೂ ಅದರ ಫಲಕ್ಕೂ ಸಂಬಂಧವನ್ನೂ ಕಲ್ಪಿಸುವುದಿಲ್ಲ; ಎಂದರೆ ಕಾರ್ಯಕಾರಣ ಭಾವವನ್ನು ಕಲ್ಪಿಸುವುದಿಲ್ಲ. ಇದೆಲ್ಲವೂ ಮನುಷ್ಯನ ಸ್ವಭಾವದ ಕೆಲಸ. ಸ್ವಭಾವವೆಂದರೆ ತಾನೇ ಆಗುವಿಕೆಯೆಂದರ್ಥ. ಸರ್ವವ್ಯಾಪಿಯಾದ ಆತ್ಮನು ಯಾರ ಪಾಪವನ್ನಾಗಲಿ ಪುಣ್ಯವನ್ನಾಗಲಿ ಸ್ವೀಕರಿಸುವುದಿಲ್ಲ. ಈ ಭಾವನೆಗಳೆಲ್ಲಕ್ಕೂ ಕಾರಣವೇನೆಂದರೆ, ಮನುಷ್ಯನ ಅಜ್ಞಾನ; ಅಹಂಕಾರ; ತನ್ನಲ್ಲಿ ಅಂತರ್ಗತನಾಗಿರುವ ಪರಮಾತ್ಮನನ್ನು ಅರಿಯದಿರುವುದು ಮತ್ತು ಪ್ರಕೃತಿವ್ಯಾಪಾರಗಳಲ್ಲಿ ಸಿಕ್ಕಿಕೊಂಡಿರುವುದು. ಅವನಲ್ಲಿರುವ ಆವರಣಗಳೆಂಬ ಈ ಅಂಧಕಾರದಲ್ಲಿ ಆತ್ಮಜ್ಞಾನವು ಬೆಳಗಿದಾಗ ಅದು ಅವನಲ್ಲಿರುವ ಆತ್ಮನನ್ನು ಸೂರ್ಯನಂತೆ ಪ್ರಕಾಶಮಾನವನ್ನಾಗಿ ಮಾಡುತ್ತದೆ. ಪ್ರಕೃತಿವ್ಯಾಪಾರಗಳಿಗೆ ಅತೀತನಾದ ಆತ್ಮನೆ ತಾನೆಂದು ಆಗ ಅರಿಯುತ್ತಾನೆ. ಪರಿಶುದ್ಧನೂ, ಪರಿಪೂರ್ಣನೂ, ವಿಕಾರರಹಿತನೂ ಆದ ಅವನ ಮೇಲೆ ಪ್ರಕೃತಿಯು ಯಾವ ಪರಿಣಾಮವನ್ನೂ ಉಂಟುಮಾಡಲಾರದು. ಪ್ರಕೃತಿ ವ್ಯಾಪಾರಗಳಿಂದ ತನ್ನಲ್ಲಿ ಬದಲಾವಣೆಯಾಗುವುದೆಂಬ ಭ್ರಾಂತಿಗೆ ಅವನು ಒಳಗಾಗುವುದಿಲ್ಲ. ಬ್ರಹ್ಮನಲ್ಲಿ ಒಂದಾಗುವುದರಿಂದ ಪುನಃ ಜನ್ಮವೆತ್ತಿ ಪ್ರಕೃತಿಯ ಚಲನವಲನಗಳಿಗೆ ಸಿಕ್ಕಿಕೊಳ್ಳುವ ನಿರ್ಬಂಧದಿಂದ ಅವನು ತಪ್ಪಿಸಿಕೊಳ್ಳಬಹುದು.

ಹೀಗೆ ಬಿಡುಗಡೆ ಹೊಂದಿದ್ದರೂ ಕರ್ಮಗಳನ್ನು ಮಾಡಲು ಅವನಿಗೇನೂ ಅಡ್ಡಿಯಿಲ್ಲ. ಆದರೆ ಕೆಲಸಮಾಡುತ್ತಿರುವುದು ತಾನಲ್ಲವೆಂದೂ, ಪ್ರಕೃತಿಯ ಮೂರು ಗುಣಗಳೆಂದೂ ಅವನು ತಿಳಿದಿದ್ದಾನೆ.

"ಯೋಗಯುಕ್ತನಾದ ತತ್ವಜ್ಞಾನಿಯು ನೋಡುವಾಗ, ಕೇಳುವಾಗ, ಮುಟ್ಟುವಾಗ, ವಾಸನೆ ನೋಡುವಾಗ, ತಿನ್ನುವಾಗ, ಹೋಗುವಾಗ, ಉಸಿರಾಡುವಾಗ, ನಿದ್ರೆಮಾಡುವಾಗ, ಮಾತನಾಡುವಾಗ, ತೆಗೆದುಕೊಳ್ಳುವಾಗ, ಮತ್ತು ವಿಸರ್ಜನೆಮಾಡುವಾಗ, ಕಣ್ಣು ಮುಚ್ಚುವಾಗ ಮತ್ತು ತೆರೆಯುವಾಗ, ಈ ಎಲ್ಲ ಸಂದರ್ಭಗಳೆಲ್ಲಿಯೂ ಇಂದ್ರಿಯಗಳು ಇಂದ್ರಿಯವಿಷಯಗಳಲ್ಲಿ ವರ್ತಿಸುತ್ತವೆ ಎಂದು ತಿಳಿಯುವನು; ತಾನು ಏನನ್ನೂ ಮಾಡುವುದಿಲ್ಲವೆಂದು ತಿಳಿಯುವನು."

(ಗೀತೆ 5-8,9)

ಕೂಟಸ್ಥನೂ ಅವಿಕಾರನೂ ಆದ ಬ್ರಹ್ಮನಲ್ಲಿ ನೆಲೆಸಿರುವ ಇವನು ಪ್ರಕೃತಿಯ ಗುಣಗಳಿಗೆ ಅತೀತನಾಗಿದ್ದಾನೆ; ಅವನು ಸಾತ್ವಿಕನೂ ಅಲ್ಲ, ರಾಜಸನೂ ಅಲ್ಲ, ತಾಮಸನೂ ಅಲ್ಲ. ತನ್ನ ಕ್ರಿಯೆಗಳಲ್ಲಿ ಪ್ರಕೃತಿಯ ಗುಣಗಳು ಒಂದಾದ ಮೇಲೊಂದು ಕೆಲಸಮಾಡುವುದನ್ನೂ ಜ್ಞಾನ ಸುಖಗಳೂ, ಕ್ರಿಯೆ ಮತ್ತು ಶಕ್ತಿಯೂ, ನಿಷ್ಕ್ರಿಯತ್ವ ಜಡತ್ವಗಳೂ ಕ್ರಮವಾಗಿ ವ್ಯಕ್ತವಾಗುವುದನ್ನೂ ಶಾಂತವಾಗಿ ಸ್ವಸ್ಥ ಚಿತ್ತದಿಂದ ನೋಡುತ್ತಾನೆ. ಹೀಗೆ ತನ್ಮೂಲಕ ಕರ್ಮಗಳು ನಡೆಯುತ್ತಿದ್ದರೂ ಅವುಗಳನ್ನು ನೋಡಿಕೊಂಡಿದ್ದು ಅವುಗಳಿಗೆ ಅಂಟಿಕೊಳ್ಳದೆ ಇರುವುದೆ ಎಂದರೆ, ತ್ರಿಗುಣಗಳನ್ನು ದಾಟಿರುವುದೆ-ಶಾಂತನಾದ ಆತ್ಮನ ಹಿರಿಮೆ; ಇದೂ ಕರ್ಮಯೋಗಿಯ ಒಂದು ಮುಖ್ಯ ಲಕ್ಷಣ. ಇಷ್ಟು ಮಾತ್ರವನ್ನು ಹೇಳಿದರೆ ಆಗ "ಪ್ರಕೃತಿಯು ತನ್ನ ಗುಣಗಳಿಗನುಸಾರವಾಗಿ ಯಂತ್ರದಂತೆ ಎಲ್ಲ ಕರ್ಮಗಳನ್ನೂ ಮಾಡುತ್ತದೆ. ಆತ್ಮನಿಗೆ ಕರ್ಮಗಳ ಲೇಪವಿಲ್ಲದಿರುವುದರಿಂದ ಅವನಿಗೆ ಯಾವ ಜವಾಬ್ದಾರಿಯೂ ಇಲ್ಲ" ಎಂಬ ಸಿದ್ಧಾಂತಕ್ಕೆ ಅವಕಾಶವಾಗುತ್ತದೆ. ಬ್ರಹ್ಮಕ್ಕಿಂತ ಮೇಲಾದ ಪುರುಷೋತ್ತಮನ ನಿರೂಪಣೆಯಿಂದ ಈ ಅಪೂರ್ಣವಾದ ಸಿದ್ಧಾಂತದ ದೋಷಕ್ಕೆ ಗೀತೆಯು ಅವಕಾಶ ಕೊಡುವುದಿಲ್ಲ. ಕೊನೆಯವರೆಗೆ ಕೂಲಂಕಷವಾಗಿ ಪರಿಶೀಲಿಸಿದರೆ ಯಂತ್ರದಂತೆ ಕೆಲಸಮಾಡುವ ಪ್ರಕೃತಿಯು ತನ್ನ ಕೆಲಸಗಳನ್ನು ತಾನೆ ಗೊತ್ತುಮಾಡುವುದಿಲ್ಲವೆಂದೂ, ಪುರುಷೋತ್ತಮನ ಇಚ್ಛೆಯೆ ಪ್ರಕೃತಿಗೆ ಪ್ರೇರಕವೆಂದೂ ಗೀತೆಯು ಸ್ಪಷ್ಟಪಡಿಸುತ್ತದೆ. ಯುದ್ಧಕ್ಕಿಂತ ಮುಂಚೆಯೆ ಕೌರವರನ್ನು ನಾಶಪಡಿಸಿರುವ ಈ ಪುರುಷೋತ್ತಮನಿಗೆ ಅರ್ಜುನನು ನಿಮಿತ್ತಮಾತ್ರನು; ಈ ಪುರುಷೋತ್ತಮನೆ ಪ್ರಕೃತಿಯ ಕೆಲಸಗಳಿಗೆಲ್ಲ ಪ್ರಭು. "ನಾನೆ ಕರ್ಮಗಳನ್ನು ಮಾಡುವವನು" ಎಂಬ ಅಹಂಭಾವವನ್ನು ಕಳೆದುಕೊಳ್ಳಲು ನಿರಾಕಾರನಾದ ಬ್ರಹ್ಮನಲ್ಲಿ ಎಲ್ಲ ಕರ್ಮಗಳನ್ನೂ ಅರ್ಪಿಸುವುದು ಒಂದು ಸಾಧನ ಮಾತ್ರ. ಎಲ್ಲ

ಕರ್ಮಗಳನ್ನೂ ಸರ್ವಭೂತ ಮಹೇಶ್ವರನಾದ ಪುರುಷೋತ್ತಮನಿಗೆ ಅರ್ಪಿಸುವುದೆ ಕೊನೆಯ ಹೆಜ್ಜೆ. "ಸಮಸ್ತ ಕೆಲಸಗಳನ್ನೂ ಆತ್ಮಬುದ್ಧಿಯಿಂದ ನನ್ನಲ್ಲಿ ಬಿಟ್ಟು, ಆಶೆಯೂ, ಮಮಕಾರವೂ, ಅಹಂಕಾರವೂ, ಉದ್ವೇಗವೂ ಇಲ್ಲದೆ ಯುದ್ಧಮಾಡು" (ಗೀತೆ 3-30)

ಕರ್ಮಗಳನ್ನು ಮಾಡಿ ಪ್ರಪಂಚದಲ್ಲಿ ನನ್ನ ಸಂಕಲ್ಪವನ್ನು ನೆರವೇರಿಸು ಎಂದು ಶ್ರೀ ಕೃಷ್ಣನು ಹೇಳಿದ್ದಾನೆ. ಎಲ್ಲ ಕರ್ಮಗಳಿಗೂ ಭಗವಂತನೆ ಪ್ರೇರಕನೂ ನಿಯಂತೃವೂ ಆಗಿದ್ದಾನೆ. ನಿರಾಕಾರನಾದ ಬ್ರಹ್ಮನಲ್ಲಿ ನೆಲೆಸಿರುವ ಮನುಷ್ಯನ ಆತ್ಮನು ಬ್ರಹ್ಮನ ಶಕ್ತಿಯು ಹರಿಯುವುದಕ್ಕೆ ಶುದ್ಧವಾದ ಕಾಲುವೆಯಾಗುತ್ತಾನೆ. ಈ ಶಕ್ತಿಯು ಪ್ರಕೃತಿಯಲ್ಲಿ ನಿಂತು ಭಗವಂತನ ಕಾರ್ಯವನ್ನು ನಡೆಸುತ್ತದೆ. ಮುಕ್ತನಾದವನ ಮತ್ತು ಕರ್ಮಯೋಗಿಯ ಕೆಲಸವು ಈ ರೀತಿಯಾದುದೇಯೆ; ತನ್ನ ಸ್ವಂತ ಇಚ್ಛೆಯಿಂದ ಅವನು ಯಾವ ಕರ್ಮವನ್ನೂ ಮಾಡುವುದಿಲ್ಲ. "ಸಂಗವಿಲ್ಲದ, ಮುಕ್ತನಾದ, ಜ್ಞಾನದಲ್ಲಿ ನಿಲ್ಲಿಸಲ್ಪಟ್ಟ ಮನಸ್ಸುಳ್ಳ, ಯಜ್ಞಕ್ಕೋಸ್ಕರ ಕೆಲಸಮಾಡುವವನ ಕರ್ಮವೆಲ್ಲವೂ ಲಯವಾಗುತ್ತದೆ" (ಗೀತೆ, 4-23)



# ಹತ್ತೊಂಭತ್ತನೆಯ ಪ್ರಕರಣ

## ಸಮತ್ವ

ಜ್ಞಾನ, ವೈರಾಗ್ಯ, ಅಹಂಭಾವವಿಲ್ಲದಿರುವುದು, ಸಮತ್ವ, ಆಂತರವಾದ ಶಾಂತಿ ಮತ್ತು ಆನಂದ, ಪ್ರಕೃತಿಯ ಮೂರುಗುಣಗಳ ಬಂಧನದಿಂದ ಬಿಡುಗಡೆ ಹೊಂದಿರುವುದು ಅಥವಾ ಅವುಗಳಿಗೆ ಅತೀತನಾಗಿರುವುದು ಇವೆಲ್ಲವೂ ಮುಕ್ತನಾದವನ ಲಕ್ಷಣಗಳು. ಆದುದರಿಂದ ಅವನ ಎಲ್ಲ ಕರ್ಮಗಳಲ್ಲಿಯೂ ಈ ಗುಣಗಳು ವ್ಯಕ್ತವಾಗಬೇಕು. ಪ್ರಪಂಚದಲ್ಲಿ ಪ್ರಕೃತಿವ್ಯಾಪಾರಗಳ ಚಲನವಲನಗಳು, ಆಘಾತಗಳು ಮತ್ತು ನಾನಾ ಶಕ್ತಿಗಳ ಘರ್ಷಣೆಗಳು ಇವುಗಳ ನಡುವೆ ಇವನು ಒಂದೆ

ಸಮನಾದ ಶಾಂತಿಯನ್ನು ಹೊಂದಿರಬೇಕಾದರೆ ಈ ಲಕ್ಷಣಗಳು ಅವಶ್ಯಕವಾಗಿರಬೇಕು. ಎಲ್ಲವೂ ಬದಲಾವಣೆಯಾಗುತ್ತಿರುವಾಗ ಅವುಗಳ ಮಧ್ಯೆ ಬದಲಾವಣೆ ಹೊಂದದೆ ಇರುವ ಬ್ರಹ್ಮನ ನಿರ್ವಿಕಾರತ್ವವನ್ನು ಇಂತಹವನು ಪ್ರತಿಬಿಂಬಿಸುತ್ತಾನೆ. ಪ್ರಪಂಚದಲ್ಲಿ ಇರುವ ವ್ಯತ್ಯಾಸಗಳಲ್ಲಿ ಮತ್ತು ನಾನಾತ್ವಗಳಲ್ಲಿ ಅಂತರ್ಗತವಾಗಿರುವ ಪಕ್ಷಪಾತರಹಿತವೂ ಅಖಂಡವೂ ಆದ ಏಕತ್ವವನ್ನು ಅವನು ಪ್ರತಿಬಿಂಬಿಸುತ್ತಾನೆ. ಪ್ರಪಂಚದ ಕೋಟಿಗಟ್ಟಲೆ ಭೇದಗಳಲ್ಲಿಯೂ ಮತ್ತು ವ್ಯತ್ಯಾಸಗಳಲ್ಲಿಯೂ ಇರುವ ಏಕತ್ವವೆ ಎಲ್ಲವನ್ನೂ ಸಮವನ್ನಾಗಿ ಮಾಡುವ ಮತ್ತು ಸಮತ್ವವುಳ್ಳ ಆತ್ಮ. ಆತ್ಮನ ಸಮತ್ವವೇ ನಿಜವಾದ ಸಮತ್ವ. ಸೃಷ್ಟಿಯಲ್ಲಿ ಒಂದು ವಸ್ತುವು ಇನ್ನೊಂದನ್ನು ಹೋಲುತ್ತದೆ; ಸನ್ನಿವೇಶಕ್ಕೆ ಸರಿಹೋಗುವಂತೆ ಮಾರ್ಪಾಡು ಹೊಂದುತ್ತದೆ. ಇಂತಹವನ್ನು ನಾವು ಲೌಕಿಕವ್ಯವಹಾರದಲ್ಲಿ ಒಂದಕ್ಕೆ ಇನ್ನೊಂದು ಸಮನೆಂದು ಹೇಳುತ್ತೇವೆ. ಹಾಗೆ ನಾವು ಹೇಳುವ ವಸ್ತುಗಳಲ್ಲಿ ಈ ಎರಡು ಲಕ್ಷಣಗಳಿರಲು ಮಾತ್ರ ಸಾಧ್ಯ. ಆದರೆ ಅವು ಸಮತ್ವವಾಗಲಾರವು. ಅತ್ಯಂತ ಸಮೀಪವಾದ ಹೋಲಿಕೆಯಿರುವಾಗಲೂ ಕೂಡ ಅಸಮತ್ವ ಮತ್ತು ವ್ಯತ್ಯಾಸಗಳು ಇದ್ದೇ ಇರುತ್ತವೆ. ಸಮಸ್ಥಿತಿಯು ಉಂಟಾದಾಗಲೂ, ಅದು ಬೇರೆ ಬೇರೆಯಾದ ಮತ್ತು ಅಸಮವಾದ ಶಕ್ತಿಗಳ ಜೋಡಣೆಯಿಂದ ಉಂಟಾದುದು.

ಈ ಕಾರಣದಿಂದಲೇ ಗೀತೆಯು ಕರ್ಮಯೋಗವನ್ನು ಉಪದೇಶ ಮಾಡುವಾಗ ಸಮತ್ವಕ್ಕೆ ಬಹಳ ಹೆಚ್ಚಾದ ಪ್ರಾಧಾನ್ಯವನ್ನು ಕೊಟ್ಟಿದೆ. ಮುಕ್ತನಾದ ಆತ್ಮನು ಪ್ರಪಂಚದಲ್ಲಿ ಸಂಪೂರ್ಣ ಸ್ವಾತಂತ್ರ್ಯದಿಂದ ವ್ಯವಹರಿಸಲು ಈ ಸಮತ್ವವೆ ಅವಲಂಬನವಾಗಿದೆ. ಆತ್ಮಜ್ಞಾನ, ವೈರಾಗ್ಯ, ಅಹಂಕಾರ ರಾಹಿತ್ಯ, ಆನಂದ, ಪ್ರಕೃತಿಯ ತ್ರಿಗುಣಗಳಿಗೆ ಅತೀತನಾಗಿರುವುದು ಈ ಲಕ್ಷಣಗಳನ್ನು ಹೊಂದಿರುವಾಗ, ಆತ್ಮನು ತನ್ನಲ್ಲೆ ನಿರತನಾಗಿರುವಾಗ, ನಿಷ್ಕ್ರಿಯನಾಗಿರುವಾಗ, ಸಮತ್ವದ ಅವಶ್ಯಕತೆಯೆ ಇಲ್ಲ. ಕಾರಣವೇನೆಂದರೆ ಸಮತ್ವ ಮತ್ತು ಭೇದವು ಕಂಡು ಬರುವ ಮಟ್ಟಕ್ಕಿಂತ ಅವನು ಮೇಲಿದ್ದಾನೆ. ನಾನಾತ್ವ, ಅನೇಕ ಜೀವಿಗಳು, ವ್ಯತ್ಯಾಸಗಳು, ಪ್ರಕೃತಿವ್ಯಾಪಾರಗಳ ಅಸಮತೆ ಮುಂತಾದುವುಗಳನ್ನು ಗ್ರಹಿಸಿ ಅವುಗಳಲ್ಲಿ ಆತ್ಮನು ವರ್ತಿಸತೊಡಗಿದ ಒಡನೆಯೆ ಸಮತ್ವದ ಮೂಲಕ ಮೇಲೆ ಹೇಳಿದ ಆತ್ಮಜ್ಞಾನ, ವೈರಾಗ್ಯ, ಆನಂದ ಮುಂತಾದ ಗುಣಗಳನ್ನು ಕಾರ್ಯಕಾರಿಯಾಗಿ ಮಾಡಬೇಕು. ಜ್ಞಾನವೆಂದರೆ ಒಂದೆ ಆದ ಬ್ರಹ್ಮನಲ್ಲಿ ಐಕ್ಯಹೊಂದಿರುವೆವೆಂಬ ಅರಿವು. ಪ್ರಪಂಚದಲ್ಲಿರುವ ನಾನಾ ಜೀವಿಗಳೊಡನೆ ಮತ್ತು ವಸ್ತುಗಳೊಡನೆ ಒಂದೆ ವಿಧವಾದ ಸಮತ್ವದಿಂದ

ವ್ಯವಹರಿಸುವುದರ ಮೂಲಕ ಈ ಜ್ಞಾನವು ವ್ಯಕ್ತವಾಗಬೇಕು. ಈ ಸೃಷ್ಟಿಯಲ್ಲಿ ಪರಮಾತ್ಮನು ನಾನಾವ್ಯಕ್ತಿಗಳ ರೂಪದಲ್ಲಿ ಕಾಣಿಸಿಕೊಳ್ಳುತ್ತಾನೆ; ಆದರೆ ಅವನಲ್ಲಿ ಅಹಂಭಾವವಿಲ್ಲ; ಅವನು ವ್ಯತ್ಯಾಸಗಳಿಗೆ ಒಳಪಟ್ಟವನಲ್ಲ; ಆದುದರಿಂದ ಅವನು ನಾನಾವ್ಯಕ್ತಿಗಳಿಗಿರುವ ಭೇದಗಳಿಗೆ ಅತೀತನಾಗಿದ್ದಾನೆ. ಸೃಷ್ಟಿಯಲ್ಲಿ ಬೇರೆ ಬೇರೆ ಜೀವಿಗಳೊಡನೆ ವ್ಯವಹರಿಸುವಾಗ ಆಯಾ ಸನ್ನಿವೇಶಗಳಿಗೆ ತಕ್ಕಂತೆ ಅವನ ವರ್ತನೆಯು ನಾನಾ ವಿಧವಾಗಿದ್ದಾಗ್ಯೂ, ಅವನ ಈ ಎಲ್ಲ ವರ್ತನೆಗಳಲ್ಲಿಯೂ, ಎಲ್ಲರೊಡನೆಯೂ ಅವನು ಪಕ್ಷಪಾತವಿಲ್ಲದೆ ಸಮತ್ವದಿಂದ ವರ್ತಿಸುತ್ತಾನೆ. ಶ್ರೀ ಕೃಷ್ಣನು ಗೀತೆಯಲ್ಲಿ ಹೇಳುವಂತೆ ಅವನಿಗೆ ಶತ್ರುಗಳೂ ಇಲ್ಲ; ಮಿತ್ರರೂ ಇಲ್ಲ; ಅವನಿಗೆ ಎಲ್ಲರೂ ಸಮ. ಆದಾಗ್ಯೂ ಭಕ್ತನ ಕಡೆಗೆ ಅವನ ಅನುಗ್ರಹವು ವಿಶೇಷ ವಾಗಿ ಹರಿಯುತ್ತದೆ; ಏತಕ್ಕೆಂದರೆ ಆ ಭಕ್ತನು ಭಗವಂತನೊಡನೆ ಬೆಳಸಿರುವ ಸಂಬಂಧವು ಇತರರಿಗಿಂತ ಬೇರೆಯಾದುದು. ಯಾರು ಯಾರು ಯಾವ ಯಾವ ವಿಧದಲ್ಲಿ ಅವನನ್ನು ಭಜಿಸುತ್ತಾರೆಯೊ ಅದಕ್ಕೆ ಅನುಸಾರವಾಗಿ ಭಗವಂತನು ಅವರನ್ನು ಎದುರುಗೊಳ್ಳುತ್ತಾನೆ. ಭೋಗ್ಯವಸ್ತುಗಳ ಪರಿಮಿತವಾದ ಆಕರ್ಷಣ ಶಕ್ತಿಗೆ ಅಪರಿಚ್ಛಿನ್ನವಾದ ಆತ್ಮನು ಒಳಗಾಗದೆ ಇರುವುದನ್ನೆ ವೈರಾಗ್ಯವೆಂದು ಕರೆ ಯುತ್ತೇವೆ. ಈ ಭೋಗ್ಯವಸ್ತುಗಳೊಡನೆ ಸಂಬಂಧವನ್ನು ಬೆಳೆಸಬೇಕಾದಾಗ, ಎಲ್ಲ ವಸ್ತುಗಳ ವಿಷಯದಲ್ಲಿಯೂ ಒಂದೆ ಸಮನಾದ, ನಿಷ್ಪಕ್ಷಪಾತವಾದ ಔದಾಸೀನ್ಯ ವನ್ನು ತೋರಿಸಬೇಕು; ಅಥವಾ, ಎಲ್ಲದರಲ್ಲಿಯೂ ಒಂದೆವಿಧವಾದ ಪ್ರೇಮವನ್ನೂ ಮತ್ತು ಒಂದೆ ಸಮನಾದ ಮತ್ತ ಸಂಗರಹಿತವಾದ ಹರ್ಷವನ್ನೂ ತೋರಿಸಬೇಕು. ಈ ಹರ್ಷವು ಆತ್ಮನಿಗೆ ಸಹಜವಾದುದರಿಂದ ಭೋಗ್ಯವಸ್ತುಗಳ ಪ್ರಾಪ್ತಿ ಅಥವಾ ಅಪ್ರಾಪ್ತಿಯನ್ನು ಅದು ಅವಲಂಬಿಸುವುದಿಲ್ಲ; ಸ್ಥಿರವಾಗಿಯೂ ಅಚಲವಾಗಿಯೂ ಇರುತ್ತವೆ. ಏತಕ್ಕೆಂದರೆ ಆತ್ಮನಿಗೆ ಆನಂದವು ಸ್ವಾಭಾವಿಕ; ಅವನಲ್ಲಿಯೆ ಇದೆ. ಈ ಆನಂದವು ಸೃಷ್ಟಿಯಾಗಿರುವ ವಸ್ತುಗಳೊಡನೆ ಮತ್ತು ಜೀವಿಗಳೊಡನೆ ಸಂಬಂಧ ಬೆಳೆಸಬೇಕಾದರೆ ಮೇಲೆ ಹೇಳಿದ ರೀತಿಯಲ್ಲಿಯೆ ವ್ಯಕ್ತವಾಗಬೇಕು. ಪ್ರಕೃತಿ ವ್ಯಾಪಾರಗಳಲ್ಲಿ ಪ್ರಕೃತಿಯ ಮೂರುಗುಣಗಳು ಅಸಮವಾಗಿಯೂ ಕ್ಷುಬ್ಧವಾಗಿಯೂ ಇರುವುವಷ್ಟೆ; ನಿರಂತರವಾದ ಈ ವ್ಯಾಪಾರಗಳ ಗತಿಗೆ ಶಾಂತವಾದ ಆತ್ಮನು ಅತೀತನಾಗಿದ್ದಾನೆ. ಇದನ್ನೆ ತ್ರಿಗುಣಾತೀತತ್ವ ಎಂದು ಹೇಳುತ್ತಾರೆ. ಈ ಆತ್ಮನು ಅಸಮವೂ ಪರಸ್ಪರವಿರುದ್ಧವೂ ಆದ ಪ್ರಕೃತಿವ್ಯಾಪಾರಗಳಲ್ಲಿ ತೊಡಗಬೇಕಾದಾಗ, ತನ್ನಲ್ಲಿ ಪ್ರಕೃತಿಯ ವ್ಯಾಪಾರಗಳಿಗೆ ಅವಕಾಶ ಕೊಡಬೇಕಾದಾಗ, ಎಲ್ಲ ಕರ್ಮಗಳ

ಮತ್ತು ಕರ್ಮಫಲಗಳ ವಿಷಯದಲ್ಲಿಯೂ ಒಂದೆ ವಿಧವಾದ ನಿಷ್ಪಕ್ಷಪಾತವಾದ ಸಮತ್ವವನ್ನು ತೋರಿಸುವುದರ ಮೂಲಕ ತಾನು ತ್ರಿಗುಣಗಳಿಗೆ ಅತೀತನಾಗಿರುವ ನೆಂಬುದನ್ನು ವ್ಯಕ್ತಪಡಿಸುತ್ತಾನೆ.

ಮುಮುಕ್ಷುವಿಗೆ ಸಮತ್ವವು ಒಂದು ಲಕ್ಷಣವಷ್ಟೆ ಅಲ್ಲ; ಅದು ಅವನನ್ನು ಒರೆಹಚ್ಚುವ ಒಂದು ಸಾಧನವೂ ಆಗಿದೆ. ಆತ್ಮನಲ್ಲಿ ಸಮತ್ವವಿಲ್ಲದಿದ್ದರೆ, ಆಗ, ಪ್ರಕೃತಿಯ ಗುಣಗಳ ವ್ಯಾಪಾರದಲ್ಲಿಯೂ ವೈಷಮ್ಯವಿರುತ್ತದೆ; ರಾಗವು ಹುಟ್ಟು ತ್ತದೆ; ವೈಯಕ್ತಿಕವಾದ ಇಚ್ಛೆ, ಭಾವನೆ ಮತ್ತು ಕ್ರಿಯೆಗಳು ಕಾಣಿಸಿಕೊಳ್ಳುತ್ತವೆ; ಹರ್ಷ ಮತ್ತು ಶೋಕಗಳ ವೇಗವು ಕಂಡುಬರುತ್ತವೆ; ಉದ್ವೇಗವನ್ನುಂಟು ಮಾಡುವ ಮತ್ತು ಕ್ಷಣಿಕವಾದ ಸಂತೋಷವು ಉಂಟಾಗುತ್ತದೆ. ಆದರೆ ಇದು ಆತ್ಮನ ನೈಜವಾದ ಆನಂದವಲ್ಲ. ಕೇವಲ ಮಾನಸಿಕ ಸಂತೋಷ; ಇದರ ಹಿಂದೆಯೆ ಮಾನಸಿಕ ದುಃಖವೂ ತಪ್ಪದೆ ಬರುತ್ತದೆ. ಆತ್ಮನಲ್ಲಿ ಸಮತ್ವವಿಲ್ಲದಿದ್ದರೆ ಜ್ಞಾನಕ್ಕೆ ಚ್ಯುತಿಬರುತ್ತದೆ; ಎಲ್ಲವನ್ನೂ ಒಳಗೊಂಡಿರುವ ಮತ್ತು ಎಲ್ಲವನ್ನೂ ಸಮನ್ವಯಮಾಡುವ ಏಕನಾದಬ್ರಹ್ಮನಲ್ಲಿ, ಎಲ್ಲ ವಸ್ತುಗಳ ಐಕ್ಯದಲ್ಲಿ ದೃಢವಾಗಿ ನೆಲೆಸಿರುವುದಕ್ಕೆ ಭಂಗಬರುತ್ತದೆ. ಸಮತ್ವವಿರುವುದರಿಂದ ತಾನು ಕರ್ಮಗಳನ್ನು ಮಾಡುತ್ತಿದ್ದರೂ ಮುಕ್ತನೆಂಬ ಅರಿವು ಕರ್ಮಯೋಗಿಗೆ ಇರುತ್ತದೆ.

ಸಮತ್ವದ ವಿಷಯದಲ್ಲಿ ಆಧ್ಯಾತ್ಮಿಕತೆಯನ್ನು ಗೀತೆಯು ಒತ್ತಿ ಹೇಳಿರು ವುದಷ್ಟೆ; ಈ ಸಮತ್ವವು ಬಹಳ ಶ್ರೇಷ್ಠವಾದುದು ಮತ್ತು ಸಾರ್ವತ್ರಿಕವ್ಯಾಪ್ತಿ ಯುಳ್ಳದ್ದು; ಈ ವಿಷಯದಲ್ಲಿ ಗೀತೆಯ ಉಪದೇಶದ ವೈಶಿಷ್ಟ್ಯವು ಇದೇಯೆ. ಇದನ್ನು ನಾವು ಏತಕ್ಕೆ ಒತ್ತಿ ಹೇಳುತ್ತೇವೆಂದರೆ, ಮನಸ್ಸಿನ ಮತ್ತು ಭಾವನೆಗಳ ಮಟ್ಟದಲ್ಲಿ ಸಮತ್ವವು ಬಹಳ ಒಳ್ಳೆಯ ಗುಣವೆಂದೂ, ಮನುಷ್ಯಸಹಜವಾದ ಲೋಪದೋಷಗಳಿಗೆ ನಾವು ಅವಕಾಶಕೊಡದಿರಲು ಸಮತ್ವವು ಸಹಕಾರಿಯಾಗುವು ದೆಂದೂ ಉಪದೇಶ ಮಾಡುವುದು ಗೀತೆಯೊಂದೆ ಅಲ್ಲ. ಸಮತ್ವವು ಎಲ್ಲ ದಾರ್ಶನಿ ಕರ ಮೆಚ್ಚಿಗೆಯನ್ನೂ ಪಡೆದಿರುವ ಆದರ್ಶ. ಮತ್ತು ಮುನಿಗಳ ಸಹಜವಾದ ಒಂದು ಲಕ್ಷಣ. ದಾರ್ಶನಿಕರ ಈ ಆದರ್ಶವನ್ನು ಗೀತೆಯು ತೆಗೆದುಕೊಂಡು ಇನ್ನೂ ಬಹಳ ಮೇಲಿನ ಮಟ್ಟಕ್ಕೆ ಒಯ್ಯುತ್ತದೆ. ರಾಗ ದ್ವೇಷಗಳ ಉದ್ವೇಗಕ್ಕೆ ಮತ್ತು ಸೆಳೆತಕ್ಕೆ ಸಿಕ್ಕದೆ ಶಾಂತಿಯನ್ನೂ ಮತ್ತು ಆನಂದವನ್ನೂ—ದೇವತೆಗಳ ಆನಂದ ಕ್ಕಿಂತ ಮೇಲಿನ ಮಟ್ಟದ ಭಗವಂತನ ಆನಂದವನ್ನು—ಪಡೆಯಲು, ಕಷ್ಟಗಳನ್ನೆಲ್ಲ ಹಣೆಯ ಬರಹವೆಂದು ಅನುಭವಿಸುವುದೂ ಮತ್ತು ಕಷ್ಟಸುಖಗಳು ಬರುವುದು

ಸ್ವಾಭಾವಿಕವೆಂದು ತಿಳಿದು ಅವುಗಳನ್ನು ಮನಸ್ಸಿಗೆ ಹಚ್ಚಿಕೊಳ್ಳದೆ ಇರುವುದೂ ಮೊದಲನೆಯ ಮತ್ತು ಎರಡನೆಯ ಹೆಜ್ಜೆ ಮಾತ್ರ. ಸಮತ್ವದಲ್ಲಿ ಬೇರೆ ಬೇರೆ ವಿಧಗಳಿವೆ. ಮೊದಲನೆಯದು ಮನೋದಾರ್ಢ್ಯದಿಂದ ಕಷ್ಟಗಳನ್ನು ಹುಲ್ಲುಕಡ್ಡಿಯಂತೆ ಅಲಕ್ಷ್ಯಮಾಡುವ ಸಮತ್ವ; ಇದಕ್ಕೆ ಒಳ್ಳೆಯ ನಡತೆ ಮತ್ತು ಮನೋದಾರ್ಢ್ಯವೆ ಆಧಾರ; ಕಷ್ಟಕರವಾದ ಸಹಿಷ್ಣುತೆಯಿಂದ ದೇಹವನ್ನೂ ಮತ್ತು ಮನಸ್ಸನ್ನೂ ಅಧೀನ ಮಾಡಿಕೊಳ್ಳುವುದು ಇದರ ಮಾರ್ಗ. ಎರಡನೆಯದಾದ ತತ್ತ್ವಜ್ಞಾನಿಗಳ ಸಮತ್ವವು ಇದಕ್ಕಿಂತ ಹಿತಕರವಾದುದು; ಜ್ಞಾನದಿಂದ, ನಿಸ್ಸಂಗತ್ವದಿಂದ ಮತ್ತು ನಮ್ಮ ಪ್ರಕೃತಿಯ ಕ್ಷೋಭೆಗಳ ಮತ್ತು ಉದ್ವೇಗಗಳ ವಿಷಯದಲ್ಲಿ ಜ್ಞಾನದಿಂದ ಹುಟ್ಟಿದ ಔದಾಸೀನ್ಯವನ್ನು ತಾಳುವುದರ ಮೂಲಕ ದೇಹವನ್ನೂ, ಮನಸ್ಸನ್ನೂ ವಶದಲ್ಲಿಟ್ಟುಕೊಳ್ಳುವುದು ಇದರ ಗುರಿ. ಇದಲ್ಲದೆ ಕ್ರೈಸ್ತಮತದಲ್ಲಿ ಮತ್ತು ವೈಷ್ಣವ ಮತದಲ್ಲಿ ಕಂಡುಬರುವ ಇನ್ನೊಂದು ವಿಧವಾದ ಸಮತ್ವವಿದೆ; ಭಗವಂತನ ಇಚ್ಛೆಗೆ ತಲೆಬಾಗಿ, ಎಲ್ಲವೂ ಅವನು ಕರುಣಿಸುವ ಪ್ರಸಾದವೆಂದು ಸ್ವಾಗತಿಸುವ ಮನೋಭಾವ. ದಿವ್ಯವಾದ ಶಾಂತಿಯನ್ನು ಪಡೆಯಲು ಈ ಮೂರು ಹಂತಗಳಿವೆ: ದೃಢಮನಸ್ಸಿನಿಂದ ಕಷ್ಟಗಳನ್ನು ಸಹಿಸುವುದು ಅಥವಾ ತಿತಿಕ್ಷೆ; ವಿವೇಕದಿಂದ ಉಂಟಾದ ಔದಾಸೀನ್ಯ ಮತ್ತು ಎಲ್ಲವನ್ನೂ ಪರಮಾತ್ಮನ ಪ್ರಸಾದವೆಂದು ಸ್ವಾಗತಿಸುವುದು ಅಥವಾ ನತಿ. ತನಗೆ ಸಹಜವಾದ ರೀತಿಯಲ್ಲಿ ಗೀತೆಯು ಇವೆಲ್ಲವನ್ನೂ ಸಮನ್ವಯಮಾಡುತ್ತದೆ; ತನ್ನ ಊರ್ಧ್ವಗಾಮಿಯಾದ ಆಧ್ಯಾತ್ಮಿಕ ದರ್ಶನದಲ್ಲಿ ಇವನ್ನು ಹೆಣೆದಿದೆ. ಆದರೆ ಪ್ರತಿಯೊಂದಕ್ಕೂ ಇನ್ನೂ ಹೆಚ್ಚು ಆಳವಾದ ತಳಹದಿಯನ್ನೂ, ವ್ಯಾಪಕವಾದ ದೃಷ್ಟಿಯನ್ನೂ, ಸಾರ್ವತ್ರಿಕವೂ ಮತ್ತು ಆಧ್ಯಾತ್ಮಿಕವೂ ಆದ ಅರ್ಥವನ್ನೂ ಕೊಡುತ್ತದೆ. ಇವುಗಳಿಗೆ ಗೀತೆಯು ಆಧ್ಯಾತ್ಮಿಕ ತಳಹದಿಯನ್ನೂ, ಪ್ರಯತ್ನವಿಲ್ಲದೆ ಕಷ್ಟಗಳನ್ನು ಸಹಿಸುವಂತಹ, ಕಷ್ಟಕರವಾದ ವಿವೇಕಕ್ಕಿಂತ ಮೇಲ್ಮಟ್ಟದ, ಭಾವೋದ್ರೇಕಗೊಳ್ಳುವ ಸ್ಥಿತಿಯನ್ನು ಮೀರಿರುವ, ಉನ್ನತ ಆಧ್ಯಾತ್ಮಿಕ ಸ್ಥಿತಿಯ ಶಕ್ತಿಯನ್ನೂ ಕೊಡುತ್ತದೆ.

ಸಾಮಾನ್ಯ ಮನುಷ್ಯನಿಗೆ ತನ್ನ ಪ್ರಕೃತಿವ್ಯಾಪಾರಗಳ ಸಹಜವಾದ ಪರಿಳಿತಗಳಲ್ಲಿ ಆಸಕ್ತಿಯೂ, ಹರ್ಷವೂ ಉಂಟಾಗುತ್ತವೆ. ಹೀಗೆ ಹರ್ಷವುಂಟಾಗುವುದರಿಂದ, ಆ ಹರ್ಷಕ್ಕಾಗಿ ಪ್ರಕೃತಿ ವ್ಯಾಪಾರಗಳಲ್ಲಿ ಕ್ಷೋಭೆಗೆ ಅನುಮತಿ ಕೊಡುವುದರಿಂದಲೆ ಆ ವ್ಯಾಪಾರಗಳು ನಿರಂತರವಾಗಿ ಸಾಗುತ್ತವೆ. ತನ್ನ ಒಡೆಯನೂ, ಭೋಕ್ತೃವೂ ಆದ ಪುರುಷನ ಅನುಮತಿಯೂ, ಸಂತೋಷವೂ ಇಲ್ಲದೆ ಪ್ರಕೃತಿಯು ಯಾವುದನ್ನೂ

ಮಾಡುವುದಿಲ್ಲ. ಈ ಸತ್ಯವನ್ನು ನಾವು ಕಣ್ಣುಬಿಟ್ಟು ನೋಡುವುದಿಲ್ಲ; ಏತಕ್ಕೆಂದರೆ ಅಪಮಾನ, ಅಪವಾದ, ಅಪಜಯ, ದುರದೃಷ್ಟ, ತೊಂದರೆ, ವೇದನೆ, ದುಃಖ ಮುಂತಾದ ಅಪ್ರಿಯವಾದ ಘಟನೆಗಳು ನಮಗೆ ಒದಗಿದಾಗ, ಇವುಗಳ ಘಾತದಿಂದ ಮನಸ್ಸು ಹಿಮ್ಮೆಟ್ಟುತ್ತದೆ. ಇವುಗಳಿಗೆ ವಿರುದ್ಧವಾದ ಹರ್ಷ, ಸಂತೋಷ, ಎಲ್ಲ ವಿಧವಾದ ಸುಖಗಳು, ಅಭ್ಯುದಯ, ಜಯ, ಯಶಸ್ಸು, ಕೀರ್ತಿ ಮುಂತಾದ ಪ್ರಿಯ ವಾದ ಅನುಭವಗಳ ಕಡೆಗೆ ಮನಸ್ಸು ಉತ್ಸುಕತೆಯಿಂದ ಮುನ್ನುಗ್ಗುತ್ತದೆ. ಹೀಗೆ ಮನಸ್ಸು ಎರಡು ವಿಧಗಳಲ್ಲಿ ವರ್ತಿಸಿದರೂ ಇವುಗಳ ಹಿಂದೆ ಜೀವನದಲ್ಲಿ ಆತ್ಮನ ಆನಂದವು ಎಲ್ಲದರಲ್ಲಿಯೂ ಒಂದೆ ಸಮನಾಗಿರುತ್ತದೆ. ಈ ಆನಂದಕ್ಕೆ ಚ್ಯುತಿಯಿಲ್ಲ. ಹಾಗೆಂದರೆ ಯೋಧನು ತನ್ನ ಗಾಯಗಳಿಂದ ಸುಖವನ್ನಾಗಲಿ, ಸೋಲಿನಿಂದ ಹರ್ಷ ವನ್ನಾಗಲಿ ಹೊಂದುತ್ತಾನೆಂದು ಅರ್ಥವಲ್ಲ. ನೋವು, ಅಪಜಯ ಮತ್ತು ಜಯ ಇವುಗಳನ್ನು ಕೊಡುವ ಯುದ್ಧದ ಅಧಿದೇವತೆಯ ಆರಾಧನೆಯಲ್ಲಿ ಅವನಿಗೆ ಸಂಪೂರ್ಣವಾದ ಆನಂದವಿದೆ. ತನ್ನ ಸ್ವಂತ ಇಚ್ಛೆಯಿಂದ ಮಾಡುವ ಯುದ್ಧ ದಲ್ಲಿ ಜಯಾಪಜಯಗಳೆರಡೂ ಹಾಸುಹೊಕ್ಕುಗಳಾಗಿ ಸೇರಿವೆಯೆಂದು ಅರಿತು ಎರಡನ್ನೂ ಒಂದೇ ಸಮನಾಗಿ ಸ್ವಾಗತಿಸುತ್ತಾನೆ. ಹಿಂದೆ ತನಗಾದ ಗಾಯಗಳ ನೆನಪು ಕೂಡ ಅವನಿಗೆ ಹರ್ಷವನ್ನೂ, ಹೆಮ್ಮೆಯನ್ನೂ ಉಂಟುಮಾಡುತ್ತವೆ; ಗಾಯದ ನೋವು ಸಂಪೂರ್ಣವಾಗಿ ಮಾಗಿದಮೇಲೆ ಇವು ಪೂರ್ಣವಾಗಿ ವ್ಯಕ್ತ ವಾದರೂ, ನೋವಿರುವಾಗಲೂ ಕೂಡ ತಕ್ಕಮಟ್ಟಿಗೆ ಈ ಹರ್ಷವು ಪುಷ್ಟಿಯನ್ನು ಪಡೆಯುತ್ತದೆ. ಯೋಧನು ಕೆಳಗಿನ ಮಟ್ಟದವನಾದರೆ ಸೋಲು ಉಂಟಾದಾಗ ದ್ವೇಷದಿಂದ, ಪ್ರತೀಕಾರ ಭಾವನೆಯಿಂದ, ಶತ್ರುವಿಗೆ ಹಾನಿಯನ್ನುಂಟುಮಾಡುವ ಪ್ರತ್ಯಾಶೆಯಿಂದ ಕೆಳಗಿನ ಮಟ್ಟದ ಸಂತೋಷವುಂಟಾಗುತ್ತದೆ. ಮೇಲ್ಮಟ್ಟದ ಯೋಧನಿಗಾದರೊ ತನಗಿಂತಲೂ ಶ್ರೇಷ್ಠನಾದ ಶತ್ರುವಿನೊಡನೆ ಧೈರ್ಯದಿಂದ ಹಿಮ್ಮೆಟ್ಟದೆ ಯುದ್ಧಮಾಡಿದೆನೆಂದು ಹೆಮ್ಮೆಯೂ ಸಂತೋಷವೂ ಉಂಟಾಗುತ್ತವೆ. ನಮ್ಮ ದಿನಗಟ್ಟಲೆ ಜೀವನದಲ್ಲಿ ಆತ್ಮನಿಗಾಗುವ ಆನಂದವು ಈ ರೀತಿಯದಾಗಿರು ತ್ತದೆ.

ಜೀವನದಲ್ಲಿ ಅಹಿತವಾದ ಅನುಭವಗಳಿಂದ ಉಂಟಾಗುವ ನೋವಿನಿಂದ ಮತ್ತು ದುಃಖಗಳಿಂದ ಮನಸ್ಸು ಹಿಂಜರಿಯುತ್ತದೆ. ಇದು ನಮ್ಮ ಆತ್ಮರಕ್ಷಣೆಗಾಗಿ ಪ್ರಕೃತಿಯು ಕಲ್ಪಿಸಿರುವ ಒಂದು ವಿಧಾನ. ನಮ್ಮ ನರಮಂಡಲ ಮತ್ತು ಅಂಗಗಳು ಆತ್ಮವಿನಾಶದ ಕಡೆ ಓಡದಿರುವಂತೆ ಈ ಮೂಲಕ ಪ್ರಕೃತಿಯು ಏರ್ಪಡಿಸಿದೆ.

ಹಿತವಾದ ಅನುಭವಗಳುಂಟಾದಾಗ ಮನಸ್ಸಿಗೆ ಹರ್ಷವಾಗುತ್ತದೆ. ಈ ಹರ್ಷವು ರಜೋಗುಣ ಸಂಬದ್ಧವಾದುದು; ಜಡತ್ವ, ಸೋಮಾರಿತನ ಮೊದಲಾದ ತನ್ನ ತಾಮಸ ಪ್ರವೃತ್ತಿಗಳನ್ನು ಜಯಿಸಿ, ಜೀವಿಗಳು ಕರ್ಮಗಳಲ್ಲಿ ತೊಡಗುವಂತೆ ಮೊದಲು ಪ್ರಕೃತಿಯು ಈ ಆಕರ್ಷಣೆಯನ್ನು ಏರ್ಪಡಿಸಿದೆ. ಜೀವಿಗಳನ್ನು ಚಟುವಟಿಕೆ, ಆಕಾಂಕ್ಷೆ, ಹೋರಾಟ ಮತ್ತು ಜಯಗಳ ಕಡೆ ಆಕರ್ಷಿಸಿ ಅದರ ಮೂಲಕ ಪ್ರಕೃತಿಯು ತನ್ನ ಉದ್ದೇಶಗಳನ್ನು ಸಾಧಿಸುತ್ತದೆ. ನಮ್ಮ ಹೃದಯ ಗುಹೆಯಲ್ಲಿರುವ ಆತ್ಮನು ಈ ಪ್ರಯತ್ನದಿಂದ ಮತ್ತು ಹೋರಾಟದಿಂದ, ದುಃಖದಿಂದ ಮತ್ತು ತೊಂದರೆಗಳಿಂದಲೂ ಕೂಡ, ಈ ಹರ್ಷವನ್ನು ಪಡೆಯುತ್ತಾನೆ. ಕಷ್ಟಗಳು ಕಳೆದು ಹೋಗಿ ಈ ಅನುಭವಗಳು ನೆನಪಿಗೆ ಬಂದಾಗ ಈ ಹರ್ಷವು ಪೂರ್ಣವಾಗಿರುತ್ತದೆ; ಕೆಲವು ವೇಳೆ ಕಷ್ಟಗಳನ್ನು ಅನುಭವಿಸುವಾಗಲೂ ಈ ಹರ್ಷವು ಗೋಚರವಾಗಿ ಮನಸ್ಸಿಗೆ ಸ್ಥೈರ್ಯವನ್ನು ಕೊಡುವುದುಂಟು. ಆತ್ಮನನ್ನು ಆಕರ್ಷಿಸುವುದು ಯಾವುದೆಂದರೆ ಇವೆಲ್ಲವನ್ನು ಒಳಗೊಂಡಿರುವ ಪೂರ್ಣಜೀವನ; ಹೋರಾಟ, ಪ್ರಯತ್ನ, ರಾಗದ್ವೇಷಗಳು, ಆಸೆ ಮತ್ತು ಭಯಗಳು ಮುಂತಾದ ನಾನಾ ವಿಧವಾದ ಅನುಭವಗಳು ಹಾಸುಹೊಕ್ಕಾಗಿ ಹೆಣೆದುಕೊಂಡಿರುವ ಜೀವನ. ರಾಜಸಸ್ವಭಾವವುಳ್ಳ ಜೀವನ ಮನಸ್ಸಿಗೆ ಒಂದೇ ರೀತಿಯಾದ ಸುಖ, ಹೋರಾಟವಿಲ್ಲದ ವಿಜಯ ಮತ್ತು ವ್ಯತ್ಯಾಸವಿಲ್ಲದ ಸುಖ ಇವು ಕೆಲವು ಕಾಲವಾದ ಮೇಲೆ ಸಪ್ಪೆಯಾಗಿ ತೋರಿ, ಬೇಸರವಾಗಿ, ಬೇಡವಾಗುತ್ತವೆ. ಅಂತಹ ಜೀವಿಯು ಜೀವನದಲ್ಲಿ ಸಂಪೂರ್ಣವಾಗಿ ಸುಖವನ್ನು ಅನುಭವಿಸಬೇಕಾದರೆ ಕಷ್ಟದ ಹಿನ್ನಲೆ ಇರಬೇಕು; ಎಂದರೆ ಕಷ್ಟದ ಅನುಭವವಿರಬೇಕು. ಇಂತಹವನ ಮನಸ್ಸು ಬಯಸುವ ಮತ್ತು ಅವನಿಗೆ ಹಿತಕರವಾಗಿರುವ ಸುಖವು ಸಹಜವಾಗಿ ರಾಜಸಸ್ವಭಾವದ್ದು; ಕಷ್ಟಕ್ಕೆ ಪ್ರತಿಯಾಗಿರುವುದರಿಂದ ಇದು ಸುಖವಾಗಿ ಆವನಿಗೆ ಕಾಣಿಸಿಕೊಳ್ಳುತ್ತದೆ. ದ್ವಂದ್ವದಿಂದ ಉಂಟಾಗುವ ಸುಖವೆ ಮನಸ್ಸಿಗೆ ಹಿತವೆಂದೆನ್ನಿಸುತ್ತದೆ; ಇದೆ ಮನಸ್ಸಿನ ಸ್ವಭಾವ.

'ರಾಜಸಸ್ವಭಾವವುಳ್ಳ ಮನಸ್ಸಿಗೆ ಆಧಾರವಾಗಿದ್ದುಕೊಂಡು, ಅದನ್ನು ಪೋಷಿಸುತ್ತಾ, ಅದರ ಅಸ್ತಿತ್ವಕ್ಕೆ ಕಾರಣವಾದ ಆತ್ಮನ ಶುದ್ಧವಾದ ಮತ್ತು ವ್ಯತ್ಯಾಸಹೊಂದದ ಆನಂದಸ್ಥಿತಿಯನ್ನು ಹೊಂದು; ಈ ಹೋರಾಟಗಳನ್ನು ಬಿಟ್ಟುಬಿಡು' ಎಂದು ಮನಸ್ಸಿಗೆ ಹೇಳಿದರೆ, ಈ ಮಾತನ್ನು ಅದು ಖಂಡಿತವಾಗಿ ನಿರಾಕರಿಸುವುದು. ಇಂತಹ ಆನಂದದ ಸ್ಥಿತಿಯು ಸಾಧ್ಯವೆಂದು ಅದಕ್ಕೆ ನಂಬಿಕೆಯಿಲ್ಲ.

ಇಂತಹ ಸ್ಥಿತಿಯು ತನಗೆ ಪರಿಚಯವಿರುವ, ಸುಖವನ್ನುಂಟುಮಾಡುವ ಈ ಪ್ರಪಂಚದಲ್ಲಿ ವ್ಯವಹರಿಸುವುದರಿಂದ ದೊರಕದೆಂದೂ, ಆದುದರಿಂದ ಅಂತಹ ಜೀವನವು ಜೀವನವೇ ಅಲ್ಲವೆಂದೂ ಮನಸ್ಸು ತಿಳಿಯುತ್ತದೆ. ಅಂತಹ ಜೀವನವು ಸಪ್ಪೆಯಾಗಿಯೂ, ನೀರಸವಾಗಿಯೂ ಇರುವುದೆಂದು ಅದು ಭಾವಿಸುತ್ತದೆ. ಅಥವಾ ಇಂತಹ ಶಾಶ್ವತವಾದ ಆನಂದ ಸ್ಥಿತಿಯಲ್ಲಿರುವುದು ತನಗೆ ಬಹಳ ಪ್ರಯಾಸಕರವೆಂದು ಆ ಮನಸ್ಸು ಯೋಚಿಸಬಹುದು; ಈ ಸ್ಥಿತಿಗೆ ಏರಲು ಮಾಡಬೇಕಾದ ಪ್ರಯತ್ನದಿಂದ ಮನಸ್ಸು ಹಿಂಜರಿಯುತ್ತದೆ. ವಾಸ್ತವವಾಗಿ ನೋಡಿದರೆ ಕಾಮಮಯವಾದ, ರಾಜಸಸ್ವಭಾವದ ಮನಸ್ಸು ತನ್ನ ಕನಸುಗಳನ್ನು ನನಸುಗಳನ್ನಾಗಿ ಮಾಡಲು ಪಡುವ ಪ್ರಯತ್ನಕ್ಕಿಂತ ಇದೇನೂ ಹೆಚ್ಚು ಕಷ್ಟವಲ್ಲ. ಕ್ಷಣಿಕವಾದ ಭೋಗ್ಯವಸ್ತುಗಳ ಕಡೆ ಆಸಕ್ತಿಯಿಂದ ಧಾವಿಸಿ ಅವುಗಳನ್ನು ಪಡೆಯಲು ಕಾಮಮಯವಾದ ಮನಸ್ಸು ಪಡುವ ಅಗಾಧವಾದ ಪ್ರಯತ್ನಗಳು ಮತ್ತು ಕಷ್ಟಗಳು ಈ ಶಾಶ್ವತವಾದ ಆನಂದದ ಸ್ಥಿತಿಯನ್ನು ಪಡೆಯಲು ಬೇಕಾಗಿಲ್ಲ. ಈ ಪ್ರಯತ್ನದಿಂದ ಮನಸ್ಸು ಹಿಂಜರಿಯಲು ಕಾರಣವೇನೆಂದರೆ ತನ್ನ ಸ್ವಾಭಾವಿಕವಾದ ವಾತಾವರಣವನ್ನು ಬಿಟ್ಟು ಅದಕ್ಕಿಂತ ಶುದ್ಧವಾದ ಮತ್ತು ಸೂಕ್ಷ್ಮವಾದ ವಾತಾವರಣದ ಸ್ಥಿತಿಗೆ ಏರಲು ರಾಜಸಸ್ವಭಾವವುಳ್ಳ ಮನಸ್ಸು ಸಿದ್ಧವಾಗಿಲ್ಲ; ತನಗೆ ಒಗ್ಗಿರುವ ದುಃಖಮಿಶ್ರಣದಿಂದ ಅಶುದ್ಧವಾದ ಮತ್ತು ಕೆಳಮಟ್ಟದ ವಾತಾವರಣವೆ ಅದಕ್ಕೆ ಸ್ಪಷ್ಟವಾಗಿ ಗೋಚರವಾಗುತ್ತದೆ; ಮೇಲ್ಮಟ್ಟದ ವಾತಾವರಣದ ಆನಂದವಾಗಲಿ, ಶಕ್ತಿಯಾಗಲಿ ಈ ಮನಸ್ಸಿಗೆ ಗೋಚರವಾಗುವುದಿಲ್ಲ—ಅದು ನಿಜವಾಗಿದೆಯೆಂದು ನಂಬುವುದೂ ಮನಸ್ಸಿಗೆ ಕಷ್ಟ. ತತ್ವ ದೃಷ್ಟಿಯಿಂದ ನೋಡಿದರೆ ಐಹಿಕ ಸುಖಗಳು ಮತ್ತು ಭೋಗಗಳೂ ಕೂಡ ಕೆಟ್ಟದ್ದೆಂದೂ ನಿಷ್ಪ್ರಯೋಜಕವೆಂದೂ ಹೇಳಲಾಗುವುದಿಲ್ಲ. ನಮ್ಮ ಭೌತಿಕ ದೇಹವು ಜಡತ್ವಕ್ಕೆ ಮತ್ತು ಅಜ್ಞಾನಕ್ಕೆ ವಿಶೇಷವಾಗಿ ಒಳಗಾಗಿದೆ. ಈ ಸ್ಥಿತಿಯನ್ನು ಬಿಟ್ಟು ಮೇಲಕ್ಕೆ ಹೋಗಬೇಕಾದರೆ ಐಹಿಕ ಸುಖಕ್ಕಾಗಿ ಪ್ರಯತ್ನಿಸುವುದೆ ಮಾರ್ಗ. ಸಂಪೂರ್ಣವಾದ ಜ್ಞಾನ, ಶಕ್ತಿ ಮತ್ತು ಆನಂದ ಇವನ್ನು ಪಡೆಯುವುದಕ್ಕೆ ಮೊದಲು ಮಧ್ಯದ ಹಂತವೆ ರಾಜಸಸ್ವಭಾವದ ಈ ಸ್ಥಿತಿ. ಈ ಮಧ್ಯದ ಹಂತದಲ್ಲಿಯೆ ನಾವು ಚಿರಕಾಲ ನಿಂತುಬಿಟ್ಟರೆ, ನಮ್ಮ ಬೆಳವಣಿಗೆ ಪೂರ್ಣವಾಗುವುದಿಲ್ಲ. ಈ ರಾಜಸಸ್ಥಿತಿಯಿಂದ ಸಾತ್ವಿಕ ಸ್ಥಿತಿಗೆ ಹೋಗಿ, ಅಲ್ಲಿಂದ ಮುಂದೆ ಇರುವ ತ್ರಿಗುಣಾತೀತವಾದ ಸ್ಥಿತಿಯನ್ನು ಮುಟ್ಟಿದಾಗ ನಮ್ಮ ಬೆಳವಣಿಗೆ ಪೂರ್ಣವಾಗುತ್ತದೆ.

ತ್ರಿಗುಣಾತ್ಮಕವಾದ ಕೆಳಗಿನ ಮಟ್ಟದ ಸ್ವಭಾವದಿಂದ ಮೇಲಿನ ಮಟ್ಟಕ್ಕೆ ಒಯ್ಯುವ ನಮ್ಮ ಮುನ್ನಡೆಯು ಅವಶ್ಯಕವಾಗಿಯೆ ಹೃದಯದಲ್ಲಿ, ಮನಸ್ಸಿನಲ್ಲಿ ಮತ್ತು ಆತ್ಮನಲ್ಲಿ ಸಮತ್ವವನ್ನು ಉಂಟುಮಾಡಬೇಕು. ನಮ್ಮ ಕೆಳಗಿನ ಸ್ವಭಾವದ ಮೂರು ಗುಣಗಳಿಗೂ ನಾವು ಕೊನೆಯಲ್ಲಿ ಅತೀತರಾಗಬೇಕಾದರೂ, ಪ್ರಾರಂಭದಲ್ಲಿ ಇವುಗಳಲ್ಲಿ ಯಾವುದಾದರೊಂದು ಗುಣವನ್ನು ಅವಲಂಬಿಸಿ ಮುಂದಕ್ಕೆ ಹೆಜ್ಜೆಯಿಡ ಬೇಕು. ಸಮತ್ವವನ್ನು ಗುರಿಯಾಗಿ ಉಳ್ಳ ಈ ಪ್ರಯತ್ನವನ್ನು ತಾಮಸದಿಂದ ಅಥವಾ ರಾಜಸದಿಂದ ಅಥವಾ ಸಾತ್ವಿಕದಿಂದ ಪ್ರಾರಂಭಿಸಬಹುದು. ತಾಮಸ ಸ್ವಭಾವಕ್ಕೆ ಸಂಬಂಧಿಸಿರುವಂತಹ ಸಮತ್ವವೂ ಕೂಡ ಸಾಧ್ಯ. ಸಂಪೂರ್ಣವಾಗಿ ತಾಮಸಸ್ವಭಾವವುಳ್ಳ ಮನುಷ್ಯನ ಮನಸ್ಸಿನಲ್ಲಿ ಜೀವನದ ಆಘಾತಗಳು ಯಾವ ಪರಿಣಾಮವನ್ನೂ ಉಂಟುಮಾಡುವುದಿಲ್ಲ; ಅವನಿಗೆ ಅವುಗಳ ಅರಿವೆ ಆಗುವುದಿಲ್ಲ. ಅವನು ಜಡಸ್ವಭಾವದಿಂದ ಕೂಡಿ, ಜೀವದದಲ್ಲಿ ಸುಖಗಳನ್ನೆ ಅಪೇಕ್ಷಿಸದೆ, ಒಂದು ವಿಧವಾದ ಸಮತ್ವವನ್ನು ಹೊಂದಿರುತ್ತಾನೆ. ಅಥವಾ ವಿಷಯಸುಖವನ್ನು ಅತಿಯಾಗಿ ಅನುಭವಿಸಿ, ಅವನ ಇಂದ್ರಿಯಗಳಿಗೂ, ಮನಸ್ಸಿಗೂ ಇವುಗಳ ವಿಷಯ ದಲ್ಲಿ ಬೇಸರ ಮತ್ತು ಜಿಹಾಸೆ ಉಂಟಾಗಿರಬಹುದು; ಇಲ್ಲವೆ, ಜೀವನಪಲ್ಲಿ ತಾನು ಅನುಭವಿಸಿದ ನೋವಿನಿಂದ ಮತ್ತು ಕಷ್ಟಗಳಿಂದ ಜೀವನದ ವಿಷಯದಲ್ಲಿ ನಿರಾಶೆಯೂ ಮತ್ತು ಜಿಗುಪ್ಸೆಯೂ, ಪ್ರಪಂಚವನ್ನು ಕುರಿತು ಭೀತಿಯೂ ಮತ್ತು ದ್ವೇಷವೂ ಅವನ ಮನಸ್ಸಿನಲ್ಲಿ ಉಂಟಾಗಬಹುದು; ಇವೆರಡು ಸಂದರ್ಭಗಳಲ್ಲಿಯೂ ಅವನಲ್ಲಿ ಉಂಟಾಗಿರುವ ಸಮತ್ವವು ರಾಜಸ—ತಾಮಸವಾದುದು; ಆದರೆ ತಾಮಸ ಸ್ವಭಾವವೆ ಇದರಲ್ಲಿ ಪ್ರಧಾನವಾಗಿದೆ. ಅಥವಾ ಈ ತಾಮಸ ಸ್ವಭಾವವು ಸಾತ್ವಿಕಸ್ವಭಾವದೊಡನೆ ಕಲೆತು ಈ ರೀತಿಯಾಗಿ ಪರಿಣಮಿಸಬಹುದು: "ಜೀವನ ದಲ್ಲಿ ನಮ್ಮ ಬಯಕೆಗಳೆಲ್ಲವನ್ನೂ ಪೂರೈಸಲಾಗುವುದಿಲ್ಲ; ತನ್ನ ಬಾಳಿಗೆ ಸ್ವಾಮಿ ಯಾಗಿರಲು ಆತ್ಮನಿಗೆ ಶಕ್ಯವಿಲ್ಲ; ಇವೆಲ್ಲವೂ ಬರಿಯ ದುಃಖ ಮತ್ತು ನಶ್ವರವಾದ ಪ್ರಯತ್ನ; ಇದರಲ್ಲಿ ಸತ್ಯವಾಗಲಿ, ವಿವೇಕವಾಗಲಿ, ಸುಖವಾಗಲಿ ಎಳ್ಳಷ್ಟೂ ಇಲ್ಲ." ಇದು ತಾಮಸ—ಸಾತ್ವಿಕ ಸಮತ್ವ. ಇದನ್ನು ನಿಜವಾದ ಸಮತ್ವವೆಂದು ಕರೆ ಯುವುದು ಕಷ್ಟ. ಇದು ಉದಾಸೀನತೆ ಮಾತ್ರ; ಎಂದರೆ, ಎಲ್ಲದರಲ್ಲಿಯೂ ಒಂದೆ ಸಮವಾದ ತಿರಸ್ಕಾರ. ತಾಮಸಸ್ವಭಾವದ ಸಮತ್ವವನ್ನು ಮೂಲತಃ ಪ್ರಕೃತಿಗೆ ಸಹಜವಾದ ಜಿಗುಪ್ಸೆ ಅಥವಾ ಆತ್ಮರಕ್ಷಣೆಗಾಗಿ ಹಿಮ್ಮೆಟ್ಟುವಿಕೆ ಎನ್ನಬಹುದು; ಆತ್ಮನು ಬಯಸುವ ಆನಂದಕ್ಕೆ ಬದಲಾಗಿ ಜೀವನದಲ್ಲಿ ಪ್ರಕೃತಿ ವ್ಯಾಪಾರಗಳಿಂದ

ಉಂಟಾಗುವ ಹಿಂಸೆಯೂ, ಸ್ವಯಂಕೃತವಾದ ನೋವೂ ತುಂಬಿದೆಯೆಂಬ ಭಾವನೆಯಿರುವುದರಿಂದ ತಾಮಸ ಸ್ವಭಾವವುಳ್ಳವನು ತನಗೆ ಉಂಟಾಗುವ ಅಹಿತವಾದ ವಿಷಯಗಳಿಂದ ಮಾತ್ರವಲ್ಲದೆ, ಒಟ್ಟು ಜೀವನದಿಂದಲೆ ಹಿಂಜರಿಯುತ್ತಾನೆ.

ಆದುದರಿಂದ ತಾಮಸಸ್ವಭಾವದ ಸಮತ್ವದಿಂದ ನಿಜವಾದ ಮುಕ್ತಿ ದೊರೆಯುವುದಿಲ್ಲ. ಆದರೆ ತಪಸ್ವಿಗಳು ಮಾಡುವಂತೆ ನಾವು ಅದನ್ನು ನಿಜವಾದ ಮುಕ್ತಿಗೆ ಮೊದಲನೆಯ ಹಂತವನ್ನಾಗಿ ಮಾಡಿಕೊಳ್ಳಬಹುದು; ಪ್ರಕೃತಿಗೆ ಅತೀತವಾಗಿರುವ ನಿರ್ವಿಕಾರನಾದ ಆತ್ಮನ ಸತ್ಯ, ಆನಂದ ಮತ್ತು ಶಕ್ತಿಗಳನ್ನು ಅರಿತು ತಾಮಸವಾದುದನ್ನು ಸಾತ್ವಿಕವಾದ ಸಮತ್ವವನ್ನಾಗಿ ಮಾರ್ಪಡಿಸಬಹುದು. ಆದರೆ ಈ ಮಾರ್ಗವು ಸಹಜವಾಗಿ ಸನ್ಯಾಸದೆಡೆಗೆ, ಎಂದರೆ ಜೀವನದ ಮತ್ತು ಕರ್ಮಗಳ ತ್ಯಾಗದ ಕಡೆಗೆ, ಒಯ್ಯುವುದು; ಗೀತೆಯು ಹೇಳುವ ಆಂತರವಾದ ಸನ್ಯಾಸ ಮತ್ತು ಕರ್ಮಫಲದ ತ್ಯಾಗ ಇವುಗಳೊಡನೆ ಬಾಹ್ಯಜೀವನದಲ್ಲಿ ಕರ್ಮಗಳನ್ನು ಮಾಡುತ್ತಲೆ ಇರುವ ಸ್ಥಿತಿಗೆ ಸಾಮಾನ್ಯವಾಗಿ ಒಯ್ಯುವುದಿಲ್ಲ. ಗೀತೆಯಾದರೊ ಈ ಮಾರ್ಗಕ್ಕೂ ಅವಕಾಶವನ್ನು ಕಲ್ಪಿಸಿದೆ. ಇಹಲೋಕಜೀವನದಲ್ಲಿ ಹುಟ್ಟುಸಾವುಗಳು, ಮುಪ್ಪು, ವ್ಯಾಧಿ ಮುಂತಾದ ದುಃಖಗಳು ಇವೆಯೆಂದು ತಿಳಿದು ಬುದ್ಧನಿಗೆ ಆದಂತೆ ಇವುಗಳಿಂದ ಬಿಡುಗಡೆ ಹೊಂದಬೇಕೆಂಬ ಇಚ್ಛೆಯೆ ಮೊದಲನೆಯ ಹಂತವಾಗಬಹುದೆಂದು ಗೀತೆಯು ಒಪ್ಪುತ್ತದೆ; ಈ ದುಃಖಗಳಿಂದ ಪಾರಾಗಬೇಕೆಂಬ ಉದ್ದೇಶದಿಂದಲೆ ತಪಸ್ಸನ್ನು ಮಾಡುವವರ ಪ್ರಯತ್ನವೂ ಗೀತೆಗೆ ಸಮ್ಮತವಾಗಿದೆ. ಇಂತಹ ಪ್ರಯತ್ನಗಳು ಫಲಕಾರಿಯಾಗಬೇಕಾದರೆ ಸಾತ್ವಿಕವಾದ ಸಮತ್ವವನ್ನು ಅರಿಯಬೇಕು*; ಭಗವಂತನಲ್ಲಿ ನೆಲೆಸಿ ಅವನ ಆನಂದವನ್ನು ಅನುಭವಿಸಬೇಕು; ಈ ಶ್ಲೋಕದಲ್ಲಿರುವ **ಮಾಂ ಆಶ್ರಿತ್ಯ** ಎಂಬ ಪದಗಳು ಇದನ್ನು ಸೂಚಿಸುತ್ತವೆ. ಆಗ ಜೀವಿಯು ತ್ರಿಗುಣಗಳಿಗೆ ಅತೀತನಾಗಿ ಜನ್ಮ, ಮರಣ, ಮುಪ್ಪು ಮತ್ತು ದುಃಖ ಇವುಗಳಿಂದ ಬಿಡುಗಡೆ ಹೊಂದಿ ಅಮರತ್ವವನ್ನು ಪಡೆಯುತ್ತಾನೆ. ಜೀವನದ ಕಷ್ಟಗಳನ್ನೆದುರಿಸಲು ಹಿಂಜರಿಯುವ ತಾಮಸ ಪ್ರವೃತ್ತಿಯು ವಾಸ್ತವವಾಗಿ ಒಂದು ದೌರ್ಬಲ್ಯ; ಇಷ್ಟರಿಂದ ಮಾತ್ರ ಮನುಷ್ಯನ ದೃಷ್ಟಿಗೆ ಪರಮಪದವು ಗೋಚರವಾಗುವುದಿಲ್ಲ. ಆದಕಾರಣ ಇಹಲೋಕದ ವಿಷಯಗಳಲ್ಲಿ ಜಿಹಾಸೆ, ವೈರಾಗ್ಯ ಮುಂತಾದುವನ್ನು ವಿವೇಚನೆಯಿಲ್ಲದೆ ಎಲ್ಲರಿಗೂ ಉಪ

---

* ಜರಾಮರಣಮೋಕ್ಷಾಯ ಮಾಂ ಆಶ್ರಿತ್ಯ ಯತಂತಿ ಯೇ ।
ತೇ ಬ್ರಹ್ಮ ತದ್ವಿದುಃ ಕೃತ್ಸ್ನಂ ಅಧ್ಯಾತ್ಮಂ ಕರ್ಮ ಚಾಖಿಲಂ ॥

ದೇಶಿಸುವುದರಲ್ಲಿ ಅಪಾಯವಿದೆ. ಇನ್ನೂ ಅರ್ಹತೆ ಹೊಂದಿಲ್ಲದ ಜೀವಿಗಳಲ್ಲಿ ತಾಮಸವಾದ ದೌರ್ಬಲ್ಯವೂ, ಕರ್ಮಗಳಿಂದ ಹಿಂಜರಿಯುವ ಸ್ವಭಾವವೂ ಹುಟ್ಟು ತ್ತದೆ. ಅವರ ಬುದ್ಧಿಗೆ ಭ್ರಾಂತಿಯುಂಟಾಗುತ್ತದೆ. ಜೀವನದಲ್ಲಿ ಹುರುಪನ್ನೂ, ಸನ್ನಿವೇಶಕ್ಕೆ ಅಡಿಯಾಳಾಗದೆ ಅದನ್ನು ತನಗೆ ಹಿತಕರವಾಗುವಂತೆ ಮಾರ್ಪಾಟು ಮಾಡಿಕೊಳ್ಳುವ ರಾಜಸಸ್ವಭಾವದ ಪ್ರಯತ್ನವನ್ನೂ ಕುಗ್ಗಿಸುತ್ತದೆ. ಪುರುಷ ಪ್ರಯತ್ನವನ್ನು ತಪ್ಪಿಸಿ, ಅದಕ್ಕೆ ಪ್ರತಿಯಾಗಿ ಉತ್ತಮವಾದ, ಮೇಲ್ಮಟ್ಟದ ಗುರಿ ಯನ್ನಾಗಲಿ, ಪ್ರಯತ್ನವನ್ನಾಗಲಿ, ಸಾಧನೆಯನ್ನಾಗಲಿ ಪ್ರೇರಿಸುವುದಿಲ್ಲ; ಹಾಗೆ ಪ್ರೇರಿಸಲು ಈ ತಾಮಸಸಮತ್ವಕ್ಕೆ ಸಾಮರ್ಥ್ಯವಿಲ್ಲ. ಪಕ್ವವಾದ ಜೀವಿಗಳಿಗೆ ತಾಮಸ ಸ್ವಭಾವದ ಈ ವೈರಾಗ್ಯದಿಂದ ಪ್ರಯೋಜವಾಗಬಹುದು; ರಾಜಸಸ್ವಭಾವದ ರಾಗ ದ್ವೇಷಗಳನ್ನು ದೂರಮಾಡಲು ಅದು ಸಹಾಯ ಮಾಡಬಹುದು; ಐಹಿಕ ಜೀವನದ ತುಚ್ಛವಿಷಯಗಳಲ್ಲಿ ಇರುವ ಆಸಕ್ತಿಯನ್ನು ಕುಗ್ಗಿಸಬಹುದು; ಮೇಲ್ಮಟ್ಟದ ಸಾತ್ವಿಕಸ್ಥಿತಿಯನ್ನು ಮುಟ್ಟಲು ಇವುಗಳಿಂದ ಆಗುವ ಅಡ್ಡಿಯನ್ನು ನಿವಾರಿಸಲು ಈ ವೈರಾಗ್ಯವು ಸಹಾಯ ಮಾಡುತ್ತದೆ. ಈ ರೀತಿ ಬರಿದಾದ ಜಾಗದಲ್ಲಿ ಬೇರೊಂದು ಆಶ್ರಯವನ್ನು ಅವರು ಹುಡುಕುವಾಗ ಪರಮಾತ್ಮನ ಈ ಕರೆಯನ್ನು ಕೇಳಲು ಸಾಧ್ಯವಾಗುತ್ತದೆ: "ಅನಿತ್ಯವೂ ಕಷ್ಟಮಯವೂ ಆದ ಈ ಪ್ರಪಂಚದಲ್ಲಿರುವ ನೀನು ನನ್ನ ಕಡೆ ತಿರುಗಿ ನನ್ನನ್ನು ಭಜಿಸು".

ಎಷ್ಟಾದರೂ ತಾಮಸ ಸ್ವಭಾವದ ಸಮತ್ವವೆಂದರೆ ಪ್ರಪಂಚದ ಎಲ್ಲ ವಿಷಯ ಗಳಿಂದಲೂ ಒಂದೆ ರೀತಿಯಲ್ಲಿ ವಿಮುಖವಾಗುವುದೇಯೆ; ಎಲ್ಲದರಿಂದಲೂ ದೂರ ವಾಗಿರಬೇಕು; ಇದೆ ಇದರ ಗುರಿ. ಹರ್ಷ ಶೋಕಗಳಿಲ್ಲದೆ ಹಿತವಾದ ಮತ್ತು ಅಹಿತವಾದ ಪ್ರಪಂಚದ ಎಲ್ಲ ಅನುಭವಗಳನ್ನೂ ಅಂಗೀಕರಿಸುವ ಸ್ಥಿತಿಗೆ ಒಯ್ಯುವುದಿಲ್ಲ; ಗೀತೆಯಪ್ರಕಾರ ಎಲ್ಲವನ್ನೂ ಅಂಗೀಕರಿಸುವ ಸ್ಥಿತಿಗೆ ಬರುವುದು ಬಹಳ ಮುಖ್ಯ. ಆದುದರಿಂದ ತಾಮಸಸ್ವಭಾವದ ವಿಷಯವಿಮುಖತ್ವವು ಅವಶ್ಯಕವೇನಲ್ಲ; ಒಂದು ವೇಳೆ ಇದರಿಂದಲೆ ನಾವು ಮೊದಲು ಮಾಡಿದರೂ, ಇದು ಶಾಶ್ವತವಾಗಿ ಉಳಿಯಬಾರದು. ಮೇಲ್ಮಟ್ಟದ ಸಾಧನೆಗೆ ಪ್ರೇರಕವಾಗಬೇಕು. ಮೊದಲು ನಾವು ತಪ್ಪಿಸಿಕೊಂಡು ದೂರಮಾಡಲು ಯತ್ನಿಸುತ್ತಿದ್ದ ಪ್ರಾಪಂಚಿಕ ಸುಖ ದುಃಖಾನುಭವಗಳನ್ನು ಅಧೀನಪಡಿಸಿಕೊಳ್ಳುವ ಪ್ರಯತ್ನದಿಂದಲೆ ನಿಜವಾದ ಸಾಧನೆಯು ಪ್ರಾರಂಭವಾಗುತ್ತದೆ. ಇಂತಹ ಸನ್ನಿವೇಶದಲ್ಲಿ ರಾಜಸಸ್ವಭಾವದ ಸಮತ್ವಕ್ಕೆ ಅವಕಾಶ ದೊರೆಯುವ ಸಂಭವವಿದೆ. ರಾಜಸಸಮತ್ವವು ಕೀಳ್ಮಟ್ಟದಲ್ಲಿ ರಾಗದ್ವೇಷಗಳಿಗೆ ಮತ್ತು ದೌರ್ಬಲ್ಯಗಳಿಗೆ ಅತೀತವಾದ ಆತ್ಮಸಂಯಮವಿದೆ

ಯೆಂಬ ಹೆಮ್ಮೆಯ ರೂಪದಲ್ಲಿ ವ್ಯಕ್ತವಾಗುತ್ತದೆ. ಜೀವನದ ಕಷ್ಟಗಳನ್ನು ಎದೆಗುಂದದೆ ಸಹಿಸಬೇಕೆಂಬ ಈ ವಿಧವಾದದೃಢಮನೋಭಾವವು, ಜೀವನು ತನ್ನ ಕೀಳ್ಮಟ್ಟದ ಸ್ವಭಾವದ ದೌರ್ಬಲ್ಯಗಳಿಂದ ಸಂಪೂರ್ಣವಾಗಿ ಪಾರಾಗಿ ಮೇಲಕ್ಕೇಳಲು ಸಾಧನವಾಗುತ್ತದೆ. ತಾಮಸಸ್ವಭಾವದ ಸಮತ್ವವು, ಎಂದರೆ ಪ್ರಪಂಚದ ಕಷ್ಟದುಃಖಗಳಿಂದ ಹಿಮ್ಮೆಟ್ಟಿ, ಆತ್ಮರಕ್ಷಣೆ ಮಾಡಿಕೊಳ್ಳುವ ಪ್ರವೃತ್ತಿಯು, ಅಹಿತದಿಂದ ಹಿಂದಕ್ಕೆ ಸರಿಯಬೇಕೆಂಬ ಪ್ರಕೃತಿಯ ತತ್ವಕ್ಕನುಸಾರವಾಗಿದೆ. ಹಾಗೆಯೆ ರಾಜಸಸ್ವಭಾವದ ಸಮತ್ವವು, ಎಂದರೆ ಪ್ರಪಂಚದ ಕಷ್ಟದುಃಖಗಳನ್ನು ಸ್ವಾಗತಿಸಿ, ಪ್ರಯತ್ನದಿಂದ ಅವುಗಳನ್ನು ಗೆದ್ದು ವಶಪಡಿಸಿಕೊಳ್ಳುವ ಪ್ರವೃತ್ತಿಯು, ಪ್ರತಿಬಂಧಕಗಳನ್ನು ಪ್ರಯತ್ನಪೂರ್ವಕವಾಗಿ ಗೆಲ್ಲಬೇಕೆಂಬ ಪ್ರಕೃತಿಯ ಇನ್ನೊಂದು ತತ್ವಕ್ಕೆ ಅನುಸಾರವಾಗಿದೆ. ಈ ಪ್ರವೃತ್ತಿಯು ಹೋರಾಟವನ್ನು ಇನ್ನೊಂದು ಕ್ಷೇತ್ರಕ್ಕೆ ಒಯ್ಯುತ್ತದೆ. ಜಯವನ್ನು ಗಳಿಸಲು ಈ ಕ್ಷೇತ್ರದಲ್ಲಿ ಮಾತ್ರವೆ ಸಾಧ್ಯ. ನಾನಾ ವಿಧವಾದ ಹೊರಗಿನ ಗುರಿಗಳಿಗಾಗಿ ಮತ್ತು ಕ್ಷಣಿಕವಾದ ಜಯಕ್ಕಾಗಿ ಹೋರಾಡುವುದಕ್ಕೆ ಬದಲು ಆಂತರವಾದ ಜಯವನ್ನು ಗುರಿಯಾಗಿ ಉಳ್ಳ ಆಧ್ಯಾತ್ಮಿಕ ಹೋರಾಟದಿಂದ ಪ್ರಕೃತಿ ಮತ್ತು ಪ್ರಪಂಚವನ್ನು ಗೆಲ್ಲುವುದು ಇದರ ಉದ್ದೇಶ. ತಾಮಸ ಪ್ರವೃತ್ತಿಯು ಪ್ರಪಂಚದ ಕಷ್ಟ ಸುಖಗಳೆರಡರಿಂದಲೂ ಏಕರೀತಿಯಾಗಿ ಹಿಂಜರಿಯುತ್ತದೆ; ರಾಜಸಪ್ರವೃತ್ತಿಯಾದರೊ ಅವುಗಳನ್ನು ಎದುರಿಸಿ, ವಶಮಾಡಿಕೊಂಡು, ಅವುಗಳ ಹಿಡಿತದಿಂದ ಬಿಡಿಸಿಕೊಂಡು ಅದಕ್ಕೆ ಅತೀತವಾಗುತ್ತದೆ. ಇನ್ನೊಂದು ವಿಧವಾದ ಸಮತ್ವವನ್ನು ಹೊಂದಿರುವವರು ಆಸೆಯನ್ನೂ ರಾಗದ್ವೇಷಗಳನ್ನೂ ಮಲ್ಲನಂತೆ ಪಟ್ಟು ಹಿಡಿದು ತಬ್ಬಿಗೊಂಡು, ಧೃತರಾಷ್ಟ್ರನು ಭೀಮನೆಂದು ತಿಳಿದು ಭೀಮನ ಲೋಹದ ಪ್ರತಿಮೆಯನ್ನು ಮಾಡಿದಂತೆ, ನುಚ್ಚುನೂರು ಮಾಡುತ್ತಾರೆ. ಶಾರೀರಿಕ ಮತ್ತು ಮಾನಸಿಕ ವಿಕಾರಗಳಿಗೆ ಕಾರಣವಾದ ಹಿತವಾದ ಮತ್ತು ಅಹಿತವಾದ ಅನುಭವಗಳನ್ನೆಲ್ಲ ಸಹಿಸಿ, ಅವುಗಳ ಪರಿಣಾಮಗಳನ್ನು ನಾಶಮಾಡುತ್ತಾರೆ. ರಾಗದ್ವೇಷಗಳಿಲ್ಲದೆ, ನಿರ್ವಿಕಾರವಾಗಿ, ಎಲ್ಲ ಸ್ಪರ್ಶಗಳನ್ನೂ ಅನುಭವಿಸುವ ಸ್ಥಿತಿಯನ್ನು ಮನುಷ್ಯನು ಮುಟ್ಟಿದಾಗ ಅವನ ಈ ಸಮತ್ವವು ಪೂರ್ಣವಾಯಿತೆಂದು ಹೇಳಬಹುದು. ತನ್ನ ಪ್ರಕೃತಿಯಮೇಲೆ ಪ್ರಭುತ್ವವನ್ನು ಪಡೆಯಲು ಮನುಷ್ಯನಿಗೆ ಈ ಸಮತ್ವದಿಂದ ಸಹಾಯವಾಗುತ್ತದೆ.

ಈ ಸಮತ್ವವನ್ನು ಸಾಧಿಸಬೇಕೆಂಬ ದಿಟ್ಟತನದ ಕರೆಯನ್ನು ಗೀತೆಯು ಅರ್ಜುನನ ಕ್ಷಾತ್ರಸ್ವಭಾವಕ್ಕೆ ನೀಡುತ್ತದೆ. ಮಹಾವೈರಿಯಾದ ಕಾಮವನ್ನು

ಎದುರಿಸಿ ಕೊಳ್ಳಬೇಕೆಂದು ಪ್ರಚೋದಿಸುತ್ತದೆ. ಗೀತೆಯು ಮೊದಲು ಹೇಳುವುದು ಈ ಮೂರನೆಯ ವಿಧವಾದ ಸಮತ್ವವನ್ನೆಯೆ. (ಇದನ್ನೆ ಗ್ರೀಸ್ ದೇಶದಲ್ಲಿ stoic ದಾರ್ಶನಿಕರು ಬೋಧಿಸುತ್ತಿದ್ದರು.) "ದುಃಖಗಳಿಂದ ಉದ್ವೇಗ ಪಡದ, ಸುಖಗಳಲ್ಲಿ ಆಸೆಯಿಲ್ಲದ, ಆಸೆ, ಭಯ ಮತ್ತು ಕೋಪಗಳನ್ನು ಕಳೆದುಕೊಂಡವನು ಮುನಿ, ಸ್ಥಿರಬುದ್ಧಿಯುಳ್ಳವನು. ಯಾರು ಹಿತಬರಲಿ, ಅಹಿತಬರಲಿ, ಎಲ್ಲದರಲ್ಲಿಯೂ ಸ್ನೇಹವುಳ್ಳವರಾಗಿ ಅವುಗಳ್ನು ಪ್ರೀತಿಸದೆಯೂ, ದ್ವೇಷಿಸದೆಯೂ ಇರುವರೊ, ಅವರ ಪ್ರಜ್ಞೆಯು ಸ್ಥಿರವಾದದ್ದು." (ಗೀತೆ 2-56, 57)

ಉದಾಹರಣೆಗಾಗಿ ಒಬ್ಬ ಮನುಷ್ಯನು ಭೋಜ್ಯವಸ್ತುಗಳನ್ನು ಬಿಟ್ಟಮಾತ್ರದಿಂದ ಅವುಗಳ ಮೇಲೆ ಇರುವ ರುಚಿಯು ಹೋಗುವುದಿಲ್ಲ. ಇಂದ್ರಿಯಗಳು ವ್ಯಾಪಾರಮಾಡುತ್ತಿದ್ದಾಗಲೂ ಕೂಡ ವಿಷಯಲಾಲಸೆಯನ್ನು, ವಿಷಯಗಳ ರುಚಿಯನ್ನು ಅನುಭವಿಸಬೇಕೆಂಬ ಆಸೆಯನ್ನು ಬಿಟ್ಟಾಗ ಮಾತ್ರ ಸಮತ್ವದ ಮೇಲಿನ ಮಟ್ಟವನ್ನು ಮುಟ್ಟಿರುವನೆಂದು ತಿಳಿಯಬೇಕು. ರಾಗದ್ವೇಷಗಳಿಂದ ಬಿಡುಗಡೆ ಹೊಂದಿರುವ ಮತ್ತು ಆತ್ಮನಿಗೆ ವಶವಾಗಿರುವ ಇಂದ್ರಿಯಗಳ ಮೂಲಕ ವಿಷಯಗಳಲ್ಲಿ ವ್ಯವಹರಿಸಿದರೆ, ದುಃಖ ಮತ್ತು ಉದ್ವೇಗಗಳಿಲ್ಲದ ವಿಶಾಲವಾದ ಮತ್ತು ಪ್ರಸನ್ನವಾದ ಮನೋಭಾವವನ್ನು ಪಡೆಯಬಹುದು. ನೀರು ಸಮುದ್ರವನ್ನು ಪ್ರವೇಶಿಸುವಂತೆ ಕಾಮಗಳು ಆತ್ಮನನ್ನು ಪ್ರವೇಶಿಸಬೇಕು; ಆದರೂ ಆತ್ಮನು ಅಚಲನಾಗಿ, ಶಾಂತನಾಗಿ ಉದ್ವೇಗವಿಲ್ಲದೆ ಇರಬೇಕು. ಈ ರೀತಿಯಲ್ಲಿ ಎಲ್ಲ ಆಸೆಗಳಿಂದಲೂ ಬಿಡುಗಡೆ ಹೊಂದಬಹುದು. ಮುಕ್ತಸ್ಥಿತಿಯನ್ನು ಪಡೆಯಲು ರಾಗದ್ವೇಷಗಳು, ಭಯ ಮತ್ತು ಕಾಮಕ್ರೋಧ ಇವುಗಳಿಂದ ಬಿಡುಗಡೆ ಹೊಂದಬೇಕೆಂದು ಗೀತೆಯಲ್ಲಿ ಮೇಲೆ ಮೇಲೆ ಒತ್ತಿಹೇಳಿದೆ ಹೀಗೆ ಬಿಡುಗಡೆ ಹೊಂದಬೇಕಾದರೆ ಅವುಗಳ ಪಟ್ಟುಗಳಿಂದ ಓಡಿಹೋಗದೆ ಸಹಿಸುವುದನ್ನು ಕಲಿಯಬೇಕು. ಹಾಗಲ್ಲದೆ ನಾವು ಹಿಮ್ಮೆಟ್ಟಿ ಓಡಿಹೋದರೆ ಈ ಸಹನೆಯನ್ನು ಕಲಿಯಲು ಸಾಧ್ಯವಿಲ್ಲ. "ಇಲ್ಲಿ, ಈ ದೇಹವನ್ನು ಧರಿಸಿರುವಾಗಲೆ, ರಾಗದ್ವೇಷಗಳ ಉದ್ವೇಗವನ್ನು ಸಹಿಸಬಲ್ಲವನೆ ಯೋಗಿ, ಅವನೆ ಸುಖಪುರುಷನು" (ಗೀತೆ 5-23). ಸಹಿಸುವ ಶಕ್ತಿ ಅಥವಾ ತಿತಿಕ್ಷೆಯೆ ಇದಕ್ಕೆ ಸಾಧನ. "ಪಂಚಭೂತಗಳ ಸ್ಪರ್ಶದಿಂದ ಶೀತೋಷ್ಣ ಸುಖದುಃಖಗಳು ಉಂಟಾಗುತ್ತವೆ ಮತ್ತು ಹೋಗುತ್ತವೆ. ಆ ಸುಖದುಃಖಗಳೂ ಕೂಡ ಶಾಶ್ವತವಲ್ಲ. ಅವುಗಳನ್ನು ನೀನು ಸಹಿಸು. ಮೇಲೆ ಹೇಳಿದ ಪ್ರಕಾರ ವಿಷಯಗಳಿಂದ ಮತ್ತು ಇಂದ್ರಿಯಸಂಯೋಗದಿಂದ ಉಂಟಾಗುವ ಕಷ್ಟ

ಸುಖಗಳ ಮಧ್ಯದಲ್ಲಿ ಸಮಸ್ಥಿತಿಯಲ್ಲಿ ಪ್ರಾಜ್ಞನಾದ ಯಾವ ಮನುಷ್ಯನಿರುವನೊ, ಯಾವನನ್ನು ಇವು ವ್ಯಥೆಪಡಿಸುವುದಿಲ್ಲವೊ ಅಂತಹ ಮನುಷ್ಯನು ಮೋಕ್ಷಕ್ಕೆ ಅರ್ಹನಾಗುತ್ತಾನೆ." (ಗೀತೆ 2-14, 15) ಸಮಸ್ಥಿತಿಯಲ್ಲಿರುವವನು ದ್ವೇಷವಿಲ್ಲದೆ ದುಃಖಗಳನ್ನು ಅನುಭವಿಸಬೇಕು; ಹರ್ಷವಿಲ್ಲದೆ ಸುಖವನ್ನನುಭವಿಸಬೇಕು. ಸ್ಥೂಲ ಶರೀರದ ಹಿತಾಹಿತಗಳನ್ನೂ ಕೂಡ ಸಹನೆಯಿಂದ ಗೆಲ್ಲಬಹುದು; ಇದೂ ಸಮತ್ವದ ಒಂದು ಅಂಗ. ಮುಪ್ಪು, ಸಾವು, ದುಃಖ ಮತ್ತು ನೋವುಗಳಿಂದ ಹಿಮ್ಮೆಟ್ಟಿ ಓಡಿಹೋಗಕೂಡದು; ಅವುಗಳನ್ನು ಎದುರಿಸಿ ಪರಮ ಔದಾಸೀನ್ಯದಿಂದ ಗೆಲ್ಲಬೇಕು. ಮನುಷ್ಯನಲ್ಲಿರುವ ಪ್ರಕೃತಿಯ ಕೆಳಗಿನ ಆವರಣವು ಇವಕ್ಕೆ ಬೆದರಿ ಹಿಮ್ಮೆಟ್ಟುತ್ತದೆ. ಅವನ್ನು ಧೈರ್ಯವಾಗಿ ಎದುರಿಸಿ ಗೆಲ್ಲುವುದು ಧೀರರಾದ ಮನುಷ್ಯರ ಸ್ವಭಾವ. ಹೀಗೆ ಎದುರಿಸಿದಾಗ ಪ್ರಕೃತಿಯು ತನ್ನ ಕೆಳಗಿನ ಆವರಣ ವನ್ನು ಬಿಸುಟು ತಾನು ಸ್ವತಂತ್ರನಾದ ಆತ್ಮಸ್ವರೂಪನೆಂದೂ ಪ್ರಕೃತಿಯ ಅಡಿ ಯಾಳಲ್ಲವೆಂದೂ, ತಾನೆ ಪ್ರಕೃತಿಯ ಸಮ್ರಾಟನೆಂದೂ ಮನುಷ್ಯನಿಗೆ ತೋರಿಸಿ ಕೊಡುತ್ತದೆ. ತಾಮಸ ಸ್ವಭಾವದ ಸಮತ್ವವನ್ನು ಯಾವ ದೃಷ್ಟಿಯಿಂದ ಗೀತೆಯು ಅಂಗೀಕರಿಸಿದೆಯೊ ಆ ದೃಷ್ಟಿಯಿಂದಲೆ ಮೇಲೆ ಹೇಳಿದ ಸ್ಟಾಯಿಕ್ (stoic) ಸಮತ್ವವೂ ಗೀತೆಗೆ ಸಮ್ಮತವಾಗಿದೆ. ಎಂದರೆ, ಈ ವಿಧವಾದ ಸಮತ್ವವನ್ನು ಅನುಸರಿಸುವವರಿಗೆ ಅದು ಸಾತ್ವಿಕಜ್ಞಾನಕ್ಕೆ ಸಾಧನವೆಂಬ ಅರಿವು ಇರಬೇಕು; ಆತ್ಮಸಾಕ್ಷಾತ್ಕಾರದ ಗುರಿಯೆ ಇವರ ದೃಷ್ಟಿಯಲ್ಲಿರಬೇಕು; ದೈವೀಸ್ವಭಾವಕ್ಕೆ ಏರಿಸುವ ಮಾರ್ಗದಲ್ಲಿ ಅವರು ಹೋಗಬೇಕು. ನಮಗೆ ಬರುವ ಹಿತಾಹಿತಗಳನ್ನು ಕಠಿಣಮನಸ್ಸಿನಿಂದ ಸಹಿಸಬೇಕೆಂಬ ಸ್ಟಾಯಿಕ್ ದಾರ್ಶನಿಕರ ಉಪದೇಶವು ತಾಮ ಸಸ್ವಭಾವದ ಸಮತ್ವಕ್ಕಿಂತ ಉತ್ತಮವೆಂಬುದರಲ್ಲಿ ಸಂದೇಹವಿಲ್ಲ. ತಾಮಸಸ್ವಭಾವ ದಲ್ಲಿ ಜೀವನವನ್ನು ಕುರಿತು ಬೇಸರವೂ, ನಿರರ್ಥಕವಾದ ನಿರಾಶೆಯೂ, ನಿಷ್ಫಲವಾದ ಜಡತ್ವವೂ ಇರುವುವು. ಸ್ಟಾಯಿಕ್ ಸಮತ್ವದಿಂದ ಜೀವನು ತನ್ನ ಉಪಾಧಿಗಳನ್ನು ವಶಪಡಿಸಿಕೊಳ್ಳುವುದಕ್ಕೆ ಸಹಾಯವಾಗುವುದು. ಆದರೆ ಈ ಸ್ಟಾಯಿಕ್ ದರ್ಶನವು ರಾಗ ದ್ವೇಷಗಳೊಡನೆ ಪ್ರೇಮ, ಕರುಣೆ ಮುಂತಾದ ಮನುಷ್ಯಸಹಜವಾದ

---

* "ಧೀರಃ ತತ್ರ ನ ಮುಹ್ಯತಿ" ಎಂದು ಗೀತೆಯು ಈ ಸಂದರ್ಭದಲ್ಲಿ ಹೇಳುತ್ತದೆ. ಧೀರನೂ ಜ್ಞಾನಿಯೂ ಆದ ಮನುಷ್ಯನು ಕಷ್ಟದುಃಖಗಳಿಂದ ಮೋಹ ಗೊಳ್ಳುವುದಿಲ್ಲ; ತನ್ನ ಶಾಂತ ಸ್ಥಿತಿಯನ್ನು ಕಳೆದುಕೊಳ್ಳುವುದಿಲ್ಲ. ಆದರೆ ಅವುಗಳನ್ನು ಒಪ್ಪಿಕೊಳ್ಳುತ್ತಾನೆ ಮತ್ತು ಗೆಲ್ಲುತ್ತಾನೆ.

ಭಾವನೆಗಳನ್ನು ತಲೆಯೆತ್ತದಂತೆ ಮಾಡಿ, ಇಂದ್ರಿಯಗಳ ಪಟುತ್ವವನ್ನು ಕಡಿಮೆ ಮಾಡಿ, ಎಲ್ಲರಿಗಿಂತಲೂ ತಾನು ಬೇರೆ ಎಂಬ ಪ್ರತ್ಯೇಕತೆಯನ್ನು ಉಂಟುಮಾಡ ಬಹುದು. ಆದುದರಿಂದ ಇದನ್ನು ಸಂಪೂರ್ಣವಾಗಿ ಒಳ್ಳೆಯದೆಂದೂ, ಇದು ಮೋಕ್ಷಕ್ಕೆ ಒಯ್ಯುವುದೆಂದೂ ಹೇಳಲಾಗುವುದಿಲ್ಲ. ಬದಲಾವಣೆಗೆ ಒಳಪಡುವ ಮನುಷ್ಯನಲ್ಲಿರುವ ನಿರ್ವಿಕಾರನಾದ ಆತ್ಮನನ್ನು ಸಾಕ್ಷಾತ್ಕರಿಸಿಕೊಳ್ಳುವುದಕ್ಕೂ, ಈ ಬ್ರಾಹ್ಮೀಸ್ಥಿತಿಯಲ್ಲಿ ನೆಲೆಸುವುದಕ್ಕೂ ಸ್ಟಾಯಿಕ್ ಸಮತ್ವವು ಸಾಧನವಾಗಿರುವುದ ರಿಂದಲೆ ಅದು ಗೀತೆಯ ಉಪದೇಶದ ಒಂದು ಅಂಗವಾಗಿದೆ. "ಬುದ್ಧಿಗಿಂತಲೂ ಶ್ರೇಷ್ಠವಾದ ಪರವಸ್ತುವನ್ನು ತಿಳಿದುಕೊಂಡು, ಆತ್ಮನಿಂದ ಆತ್ಮನನ್ನು ವಶಮಾಡಿ ಕೊಂಡು, ಗೆಲ್ಲುವುದಕ್ಕೆ ಕಷ್ಟವಾದ ಕಾಮರೂಪಿಯಾದ ಶತ್ರುವನ್ನು ಕೊಲ್ಲು"

(ಗೀತೆ: 3-43)

ತಾಮಸ ಸ್ವಭಾವದ ಸಮತ್ವದ ಹಿಮ್ಮೆಟ್ಟುವಿಕೆಯೂ, ರಾಜಸಸ್ವಭಾವದ ಸಮತ್ವದ ಹೋರಾಟ ಮತ್ತು ವಿಜಯಗಳೂ ತಮಗಿಂತ ಅತೀತವಾದ ಸಾತ್ವಿಕ ಸ್ವಭಾವದ ಮೂಲಕ ಆತ್ಮಜ್ಞಾನವನ್ನು ಪಡೆದುಕೊಳ್ಳಲು ಸಾಧಕವಾದಾಗ ಮಾತ್ರ ಸಾರ್ಥಕವಾಗುವುವು. ನಿಜವಾದ ತತ್ವಜ್ಞಾನಿ, ದಾರ್ಶನಿಕ, ಅಥವಾ ಮುನಿಯು ತನ್ನ ಲಕ್ಷ್ಯವನ್ನು ಮುಟ್ಟಲು ಸಾತ್ವಿಕಗುಣವು ಸಾಧನವೆಂದು ತಿಳಿದಿರುವುದು ಮಾತ್ರವಲ್ಲದೆ, ಪ್ರಾರಂಭದಿಂದಲೂ ಆತ್ಮಸಂಯಮಕ್ಕೆ ಅದನ್ನು ಸಾಧನವನ್ನಾಗಿ ಉಪಯೋಗಿಸಿಕೊಳ್ಳುತ್ತಾನೆ. ಮೊಟ್ಟಮೊದಲಿನಲ್ಲಿಯೆ ಅವನು ಸಾತ್ವಿಕ ಸಮತ್ವ ವನ್ನು ಹೊಂದಿರುತ್ತಾನೆ. ಬಾಹ್ಯ ಪ್ರಪಂಚದ ಭೋಗ್ಯವಸ್ತುಗಳು ಕ್ಷಣಿಕವೆಂದೂ, ಅವು ಇಂದ್ರಿಯಗಳ ಆಸೆಗಳನ್ನು ಪೂರೈಸಲಾರವೆಂದೂ, ನಿಜವಾದ ಆನಂದವನ್ನು ಕೊಡಲಾರವೆಂದೂ ಅವನಿಗೂ ಗೋಚರವಾಗುತ್ತದೆ; ಆದರೆ ಇದರಿಂದ ಇವನಿಗೆ ದುಃಖವಾಗಲಿ, ಭಯವಾಗಲಿ ಅಥವಾ ನಿರಾಶೆಯಾಗಲಿ ಉಂಟಾಗುವುದಿಲ್ಲ. ಎಲ್ಲ ವನ್ನೂ ಶಾಂತವಾಗಿ, ವಿವೇಕ ದೃಷ್ಟಿಯಿಂದ ನೋಡುತ್ತಾನೆ; ಜುಗುಪ್ಸೆಯಿಲ್ಲದೆ, ಮೋಹವಿಲ್ಲದೆ, ತನಗೆ ಅವಶ್ಯಕವಾದುದನ್ನು ಆರಿಸುತ್ತಾನೆ.

"ಬಾಹ್ಯಸ್ಪರ್ಶದಿಂದ ಉಂಟಾಗುವ ಸುಖಗಳಿಗೆ ಮೊದಲು ಮತ್ತು ಕೊನೆ ಗಳುಂಟು. ಇವು ದುಃಖವನ್ನುಂಟುಮಾಡುತ್ತವೆ. ಪ್ರಾಜ್ಞನು ಇವುಗಳಲ್ಲಿ ಸಂತೋಷಪಡುವುದಿಲ್ಲ" (ಗೀತೆ: 5-22)

"ಆತ್ಮನು ಬಾಹ್ಯಸ್ಪರ್ಶಗಳಲ್ಲಿ ಆಸಕ್ತಿಯನ್ನು ಹೊಂದಿಲ್ಲ; ತನ್ನ ಅಂತ ರಂಗದಲ್ಲಿ ಆನಂದವನ್ನು ಅನುಭವಿಸುತ್ತಾನೆ." (ಗೀತೆ: 5-21)

ಗೀತೆಯಲ್ಲಿ ಹೇಳಿರುವಂತೆ, ತನಗೆ ತಾನೆ ಶತ್ರು, ತನಗೆ ತಾನೆ ಮಿತ್ರ; ಆದುದರಿಂದ ಕಾಮ, ಕ್ರೋಧ ಮತ್ತು ರಾಗ ಇವುಗಳಿಗೆ ಒಳಗಾಗಿ ಅಧಃಪತನ ವಾಗದಂತೆ ಎಚ್ಚರಿಕೆಯಿಂದಿರುತ್ತಾನೆ. ಈ ಬಂಧನದಿಂದ ತನ್ನನ್ನು ತಾನೆ ಬಿಡಿಸಿ ಕೊಳ್ಳುತ್ತಾನೆ. ಯಾರು ತಮ್ಮ ಕೀಳುಸ್ವಭಾವವನ್ನು ವಶಪಡಿಸಿಕೊಂಡಿದ್ದಾರೆಯೊ ಅವರಿಗೆ ತಮ್ಮ ಅಂತರಾತ್ಮನೆ ಅತ್ಯಂತ ಹಿತನಾದ ಮಿತ್ರ ಮತ್ತು ಬಂಧು. ಅವನು ಜ್ಞಾನದಲ್ಲಿ ತೃಪ್ತಿಯನ್ನು ಹೊಂದಿರುತ್ತಾನೆ; ತನ್ನ ಇಂದ್ರಿಯಗಳನ್ನು ಸಂಪೂರ್ಣ ವಾಗಿ ಜಯಿಸಿರುತ್ತಾನೆ; ಸಾತ್ವಿಕ ಸಮತ್ವವುಳ್ಳ ಯೋಗಿಯಾಗಿರುತ್ತಾನೆ—ಸಮ ತ್ವವೆ ಯೋಗವೆಂದು ಗೀತೆಯಲ್ಲಿ ಹೇಳಿದೆ. ಮಣ್ಣು, ಕಲ್ಲು, ಚಿನ್ನ ಎಲ್ಲವನ್ನೂ ಒಂದೆ ಸಮನಾಗಿ ನೋಡುತ್ತಾನೆ. ಶೀತ-ಉಷ್ಣಗಳಲ್ಲಿ, ಸುಖ-ದುಃಖಗಳಲ್ಲಿ, ಮಾನಾ ಪಮಾನಗಳಲ್ಲಿ ಸ್ವಸ್ಥಚಿತ್ತನಾಗಿಯೂ ಶಾಂತನಾಗಿಯೂ ಇರುತ್ತಾನೆ. ಮಿತ್ರರು, ಶತ್ರುಗಳು, ಮಧ್ಯಸ್ಥರು ಮತ್ತು ಉದಾಸೀನರು ಇವರೆಲ್ಲರಲ್ಲಿಯೂ ಒಂದೆಸಮನಾಗಿ ವರ್ತಿಸುತ್ತಾನೆ; ಈ ಸಂಬಂಧಗಳು ಬದಲಾಗುತ್ತಿರುವ ಜೀವನದ ಸನ್ನಿವೇಶಗಳಿಂದ ಉಂಟಾಗಿದೆಯೆಂದೂ, ಕ್ಷಣಿಕವೆಂದೂ ಇವನು ಅರಿತಿದ್ದಾನೆ. ಜ್ಞಾನ, ಶುಚಿತ್ವ ಅಥವಾ ಸತ್ಸ್ವಭಾವ ಇವುಗಳ ತೋರಿಕೆಯಿಂದಾಗಲಿ ಅಥವಾ ಇದರ ಆಧಾರದ ಮೇಲೆ ಜನರು ಆರೋಪಿಸುವ ಶ್ರೇಷ್ಠತ್ವದಿಂದಾಗಲಿ ಇವನ ಮನಸ್ಸು ಕದಲು ವುದಿಲ್ಲ. ಇವನು ಎಲ್ಲರನ್ನೂ ಒಂದೆ ಸಮನಾಗಿ ಕಾಣುತ್ತಾನೆ; ಸಾಧುವನ್ನೂ, ಪಾಪಿಯನ್ನೂ, ವಿದ್ಯಾವಿನಯಸಂಪನ್ನನಾದ ಬ್ರಾಹ್ಮಣನನ್ನೂ ಮತ್ತು ಚಂಡಾಲ ನನ್ನೂ ಸಮದೃಷ್ಟಿಯಿಂದ ನೋಡುತ್ತಾನೆ. ಇವೆಲ್ಲವೂ ಸಾತ್ವಿಕ ಸಮಸ್ಥಿತಿಯಲ್ಲಿರು ವವನ ವಿಷಯದಲ್ಲಿ ಗೀತೆಯು ಹೇಳುವ ವಿಷಯಗಳು. ಜ್ಞಾನಿಯ ಶಾಂತವಾದ ಮತ್ತು ತತ್ವದೃಷ್ಟಿಯಿಂದ ಕೂಡಿದ ಸಮತ್ವವೆಂದು ಜನರು ಭಾವಿಸಿರುವುದನ್ನೆ ಗೀತೆಯು ಮೇಲಿನ ಮಾತುಗಳಲ್ಲಿ ಸ್ಪಷ್ಟವಾಗಿ ಹೇಳಿದೆ.

ಈ ಸಮಸ್ಥಿತಿಗೂ ಗೀತೆಯಲ್ಲಿ ಹೇಳುವ ಇದಕ್ಕಿಂತಲೂ ಮೇಲ್ಮಟ್ಟದ ಸಮಸ್ಥಿತಿಗೂ ಇರುವ ವ್ಯತ್ಯಾಸವೇನು? ಮೊದಲನೆಯದು ಮಾನಸಿಕವಾದ, ಶಾಸ್ತ್ರದೃಷ್ಟಿಯಿಂದ ಉಂಟಾದ ಸಮಸ್ಥಿತಿ; ಗೀತೆಯಲ್ಲಿ ಹೇಳಿರುವ ಸಮತ್ವಕ್ಕೆ ಆಧ್ಯಾತ್ಮಿಕಜ್ಞಾನವೂ, ವೇದಾಂತದಲ್ಲಿ ಹೇಳಿರುವ ಏಕತ್ವವೂ ಆಧಾರವಾಗಿವೆ. ತತ್ವಜ್ಞಾನಿಯ ಸಮದೃಷ್ಟಿಗೆ ವಿವೇಕಯುಕ್ತವಾದ ಬುದ್ಧಿಯು ಆಧಾರವಾಗಿದೆ; ಆದರೆ ಇದೊಂದು ಮಾತ್ರವೆ ಭದ್ರವಾದ ಆಧಾರವಲ್ಲ. ಸದಾ ಜಾಗರೂಕನಾಗಿರು ವುದರಿಂದಲೊ ಅಥವಾ ಅಭ್ಯಾಸಬಲದಿಂದಲೊ ಅವನು ತನ್ನ ದೇಹವನ್ನು ಮತ್ತು

ಮನಸ್ಸನ್ನು ತನ್ನ ಅಧೀನದಲ್ಲಿಟ್ಟುಕೊಂಡಿದ್ದರೂ ಕೂಡ, ವಾಸ್ತವವಾಗಿ ಅವನು ತನ್ನ ಕೀಳುಸ್ವಭಾವದಿಂದ ಸಂಪೂರ್ಣವಾಗಿ ಬಿಡುಗಡೆಹೊಂದಿಲ್ಲ. ನಾನಾ ವಿಧಗಳಲ್ಲಿ ಅದು ಅವನಮೇಲೆ ಪ್ರಭಾವವನ್ನು ಬೀರುತ್ತದೆ; ತನ್ನನ್ನು ಕೆಳಕ್ಕೆ ತುಳಿದು ದೂರಮಾಡಿರುವುದಕ್ಕಾಗಿ ಯಾವ ಕ್ಷಣದಲ್ಲಿ ಬೇಕಾದರೂ ಅವನ ಮೇಲೆ ತೀವ್ರವಾದ ಪ್ರತಿಕ್ರಿಯೆಯನ್ನುಂಟುಮಾಡಬಹುದು. ಕೀಳುಮಟ್ಟದ ಪ್ರಕೃತಿಯ ವ್ಯಾಪಾರವು ಮೂರು ವಿಧವಾದುದು. ರಾಜಸ ಮತ್ತು ತಾಮಸಸ್ವಭಾವಗಳು ಸಾತ್ವಿಕ ಪುರುಷನನ್ನು ಆಕ್ರಮಿಸಲು ಯಾವಾಗಲೂ ಹೊಂಚುಹಾಕುತ್ತಿರುತ್ತವೆ. ಮುಕ್ತಿಗಾಗಿ ಯತ್ನಿಸುತ್ತಿರುವ ವಿದ್ವಾಂಸನ ಮನಸ್ಸೂ ಕೂಡ "ಇಂದ್ರಿಯಗಳ ಪ್ರಬಲವಾದ ಆಕರ್ಷಣೆಗೆ ಒಳಗಾಗುತ್ತದೆ" ಇದರಿಂದ ಸಂಪೂರ್ಣವಾಗಿ ಬಿಡುಗಡೆ ಹೊಂದಬೇಕಾದರೆ ಸಾತ್ವಿಕ ಸಮತ್ವಕ್ಕಿಂತ ಮೇಲ್ಮಟ್ಟದಲ್ಲಿರುವ, ವಿವೇಕಯುಕ್ತವಾದ ಬುದ್ಧಿಗಿಂತ ಹೆಚ್ಚಿನದಾದ ಆತ್ಮಶಕ್ತಿಯನ್ನು ಆಸರೆಯನ್ನಾಗಿ ಮಾಡಿಕೊಳ್ಳಬೇಕು. ಇಲ್ಲಿ ಆತ್ಮನೆಂದರೆ ದಾರ್ಶನಿಕನ ಮನೋಮಯನಾದ ಆತ್ಮನಲ್ಲ; ಋಷಿಗಳು ಉಪಾಸಿಸುವ ತ್ರಿಗುಣಾತೀತನಾದ ಆತ್ಮ. ಮೇಲ್ಮಟ್ಟದ ಆಧ್ಯಾತ್ಮಿಕ ಸ್ವಭಾವದಲ್ಲಿ ಜನ್ಮತಾಳುವುದರ ಮೂಲಕ ಈ ಸಮತ್ವಗಳೆಲ್ಲವೂ ಪೂರ್ಣತೆಯನ್ನು ಹೊಂದಬೇಕು.

ದಾರ್ಶನಿಕನ ಸಮತ್ವವು ನಾವು ಹಿಂದೆ ಹೇಳಿದ ಸ್ಟಾಯಿಕ್ ಸಮತ್ವದಂತೆ; ಪ್ರಪಂಚವನ್ನು ಬಿಟ್ಟು ಓಡುವ ಯತಿಯ ಸಮತ್ವದಂತೆ; ಎಂದರೆ, ಎಲ್ಲ ಮನುಷ್ಯರನ್ನು ಬಿಟ್ಟು ಏಕಾಂಗಿಯಾಗಿದ್ದುಕೊಂಡು ಸ್ವತಂತ್ರನಾಗಿರುವುದು. ಆಧ್ಯಾತ್ಮಿಕ ಸ್ವಭಾವದಲ್ಲಿ ಪುನರ್ಜನ್ಮತಾಳಿದವನು ತನ್ನಲ್ಲಿ ಮಾತ್ರವಲ್ಲದೆ ಇತರರಲ್ಲಿಯೂ ಪರಮಾತ್ಮನನ್ನು ಕಾಣುತ್ತಾನೆ. ಎಲ್ಲರೂ ತಾನೂ ಒಂದೇ ಎಂಬುದನ್ನು ಸಾಕ್ಷಾತ್ಕರಿಸಿಕೊಂಡಿದ್ದಾನೆ. ಆದುದರಿಂದ ಇವನ ಸಮತ್ವವು ಅನುಕಂಪದಿಂದಲೂ ತುಂಬಿದೆ. ಇವನು ಎಲ್ಲರನ್ನೂ ತನ್ನಂತೆಯೆ ಕಾಣುತ್ತಾನೆ. ತನ್ನ ಒಬ್ಬನ ಮುಕ್ತಿಯಲ್ಲಿ ಮಾತ್ರ ಆಸಕ್ತನಾಗಿರುವುದಿಲ್ಲ. ಇತರರ ಸುಖದುಃಖಗಳು ತನಗೆ ಸಂಬಂಧಿಸಿಲ್ಲದಿದ್ದರೂ ಅವುಗಳ ಹೊಣೆಯನ್ನು ತಾನು ವಹಿಸುತ್ತಾನೆ. ನಿಜವಾದ ಬ್ರಹ್ಮಜ್ಞಾನಿಯು ವ್ಯಾಪಕವಾದ ಸಮದೃಷ್ಟಿಯಿಂದ ಸದಾ ಎಲ್ಲ ಜೀವಿಗಳಿಗೂ ಒಳ್ಳೆಯದನ್ನು ಮಾಡುವುದನ್ನೆ ತನ್ನ ಉದ್ಯೋಗವನ್ನಾಗಿ ಮಾಡಿಕೊಂಡು ಅದರಿಂದಲೆ ಸಂತೋಷವನ್ನು ಪಡೆಯುತ್ತಾನೆಂದು ಗೀತೆಯು ಅನೇಕಬಾರಿ ಹೇಳಿದೆ. ನಿಜವಾದ ಯೋಗಿಯೆಂದರೆ ಆಧ್ಯಾತ್ಮಿಕ ವಿಚಾರವನ್ನೆ ಚಿಂತಿಸುತ್ತಾ ಸದಾ ಏಕಾಂಗಿಯಾಗಿರುವವನಲ್ಲ; ಪ್ರಪಂಚದಲ್ಲಿ ಎಲ್ಲ ವಸ್ತುಗಳಲ್ಲಿಯೂ ಇರುವ ಈಶ್ವರನಿಗಾಗಿ, ಲೋಕ

ಹಿತಕ್ಕಾಗಿ, ನಾನಾ ಕ್ಷೇತ್ರಗಳಲ್ಲಿ ಕೆಲಸಮಾಡುವವನು. ಏತಕ್ಕೆಂದರೆ ಅವನು ಭಕ್ತ. ದೇವರನ್ನು ಎಲ್ಲೆಲ್ಲಿ ಕಂಡರೂ ಪ್ರೇಮದಿಂದ ಭಜಿಸುತ್ತಾನೆ ಮತ್ತು ಎಲ್ಲ ಕಡೆಗಳಲ್ಲಿಯೂ ದೇವರನ್ನು ಕಾಣುತ್ತಾನೆ. ತಾನು ಯಾರನ್ನು ಪ್ರೀತಿಸುತ್ತಾನೆಯೋ ಅವರ ಸೇವೆಮಾಡುವುದು ನಿಕೃಷ್ಟವೆಂದು ಭಾವಿಸುವುದಿಲ್ಲ. ಈ ಸೇವಾಕಾರ್ಯವು ಅವನ ಏಕತ್ವಭಾವಕ್ಕೆ ಭಂಗತರುವುದಿಲ್ಲ. ಏತಕ್ಕೆಂದರೆ ಅವನ ಎಲ್ಲ ಕರ್ಮಗಳೂ ಅವನಲ್ಲಿರುವ ಏಕಮಾತ್ರನಾದ ಭಗವಂತನಿಂದಲೆ ಹೊರಡುತ್ತವೆ; ಮತ್ತು ಅವನು ಸೇವಿಸುವ ಜೀವಿಗಳಲ್ಲಿರುವ ಭಗವಂತನನ್ನೆ ಗುರಿಯನ್ನಾಗಿ ಹೊಂದಿವೆ. ಗೀತೆಯು ಹೇಳುವ ಸಮತ್ವವು ವ್ಯಾಪಕವಾದುದು ಮತ್ತು ಎಲ್ಲವನ್ನೂ ಒಳಗೊಂಡಿರುವಂತಹದು. ಏಕನಾದ ಈಶ್ವರನ ಮತ್ತು ಈಶ್ವರಸ್ವಭಾವದ ಮಟ್ಟಕ್ಕೆ ಎಲ್ಲವೂ ಏರಿಸಲ್ಪಡುತ್ತವೆ.



# ಇಪ್ಪತ್ತನೆಯ ಪ್ರಕರಣ



## ಸಮತ್ವ ಮತ್ತು ಜ್ಞಾನ

ಗೀತೆಯ ಮೊದಲನೆಯ ಅಧ್ಯಾಯಗಳಲ್ಲಿ ಜೀವನು ಬ್ರಾಹ್ಮೀಸ್ಥಿತಿಯ ಮಟ್ಟಕ್ಕೇರಲು ಜ್ಞಾನ ಮತ್ತು ಯೋಗಗಳು ಅವನಿಗಿರುವ ಎರಡು ರೆಕ್ಕೆಗಳಂತೆ ಸಾಧನಗಳಾಗಿರುವುವೆಂದು ಹೇಳಿದೆ ಯೋಗವೆಂದರೆ ಫಲಾಪೇಕ್ಷೆಯಿಲ್ಲದೆ ನಿಷ್ಕಾಮ ಕರ್ಮಗಳನ್ನು ಪರಮಾತ್ಮನಲ್ಲಿ ಅರ್ಪಣರೂಪದಿಂದಮಾಡಿ, ಎಲ್ಲ ವಸ್ತುಗಳೊಂದಿಗೂ ಮತ್ತು ಎಲ್ಲ ಜೀವಿಗಳೊಂದಿಗೂ ಸಮದೃಷ್ಟಿಯಿಂದ ವರ್ತಿಸುತ್ತಾ ಅದರ ಮೂಲಕ ಭಗವಂತನಲ್ಲಿ ಐಕ್ಯವನ್ನು ಹೊಂದುವುದೆಂದರ್ಥ. ವೈರಾಗ್ಯ, ಸಮತ್ವ ಮತ್ತು ಯಜ್ಞದರೂಪದಲ್ಲಿ ಅರ್ಪಿಸುವ ಶಕ್ತಿ, ಇವೆಲ್ಲಕ್ಕು ಆಧಾರವಾಗಿರುವುದೆ ಜ್ಞಾನ. ಎರಡು ರೆಕ್ಕೆಗಳೂ ಪರಸ್ಪರ ಸಹಾಯಮಾಡುವಂತೆ ಇವೆರಡೂ ಒಂದಕ್ಕೊಂದು ಸಹಾಯಮಾಡುವುವು. ನಮ್ಮ ಎರಡು ಕಣ್ಣುಗಳು ಒಂದಾದಮೇಲೆ ಒಂದು ಕೆಲಸಮಾಡಿದರೂ ಪರಸ್ಪರ ಒತ್ತಾಸೆಯಿಂದ ಒಟ್ಟಿಗೆ ಕೆಲಸಮಾಡುವಂತೆ ಕೆಲವು ವೇಳೆ ಜ್ಞಾನ ಮತ್ತು ಕೆಲವುಸಲ ಯೋಗವು ಮುಂದಿದ್ದರೂ ಪರಸ್ಪರ ಒತ್ತಾಸೆಯಿಂದ ಅವೆರಡೂ ಒಟ್ಟಿಗೆ ಕೆಲಸಮಾಡುವುವು; ಮತ್ತು ಒಂದನ್ನೊಂದು ಪುಷ್ಟೀ

ಕರಿಸುವುವು. ಕರ್ಮಗಳನ್ನು ಫಲಗಳಲ್ಲಿ ಆಸೆಯನ್ನು ಬಿಟ್ಟು, ಸಮತ್ವದೃಷ್ಟಿಯಿಂದ ಮತ್ತು ಅರ್ಪಣಾಮನೋಭಾವದಿಂದ ಮಾಡಿದಂತೆಲ್ಲ ಜ್ಞಾನವು ಹೆಚ್ಚಾಗುತ್ತದೆ. ಜ್ಞಾನವು ಹೆಚ್ಚಾದಂತೆ ಮನುಷ್ಯನಿಗೆ ಕರ್ಮಗಳಲ್ಲಿ ಫಲಾಪೇಕ್ಷೆಯು ಹೋಗಿ ಸಮತ್ವ ಮತ್ತು ಅರ್ಪಣೆಯ ಮನೋಭಾವವು ಹೆಚ್ಚುತ್ತದೆ. ಆದುದರಿಂದಲೆ ದ್ರವ್ಯಯಜ್ಞಕ್ಕಿಂತ ಜ್ಞಾನಯಜ್ಞವೆ ಶ್ರೇಷ್ಠವೆಂದು ಗೀತೆಯು ಹೇಳುತ್ತದೆ.

ಆಸೆಯೂ, ಆಸೆಯಿಂದ ಹುಟ್ಟಿದ ಬಂಧನವೂ ಜ್ಞಾನದಿಂದ ನಾಶವಾಗುತ್ತವೆ. ತನ್ನ ಮನಸ್ಸು ಮತ್ತು ಚೈತನ್ಯವು ಆತ್ಮಜ್ಞಾನದಲ್ಲಿ ಚೆನ್ನಾಗಿ ಬೇರೂರಿರುವುದರಿಂದ ಮುಕ್ತನಾದವನು ಸಂಗರಹಿತನಾಗಿ ಕರ್ಮಗಳನ್ನು ಯಜ್ಞರೂಪವಾಗಿ ಮಾಡಬಲ್ಲನು. ಅವನು ಮಾಡುವ ಕರ್ಮಗಳೆಲ್ಲವೂ ಆ ಕ್ಷಣದಲ್ಲಿಯೆ ಬ್ರಹ್ಮನಲ್ಲಿ ಲಯವಾಗುತ್ತವೆ. ನಿಮಿತ್ತಮಾತ್ರಕ್ಕೆ ಕರ್ತೃವಾದ ಅವನಿಗೆ ಈ ಕರ್ಮದಿಂದ ಯಾವ ಬಂಧನವೂ, ಪ್ರತಿಕ್ರಿಯೆಯೂ ಉಂಟಾಗುವುದಿಲ್ಲ. ಇವನ ಪ್ರಕೃತಿಯ ಮೂಲಕ ಭಗವಂತನೆ ಆ ಕರ್ಮಗಳನ್ನು ಮಾಡುವುದರಿಂದ ನಿಮಿತ್ತಮಾತ್ರನಾದ ಇವನಿಗೂ ಆ ಕರ್ಮಗಳಿಗೂ ವೈಯಕ್ತಿಕ ಸಂಬಂಧವಿಲ್ಲ. ಈ ಕರ್ಮಗಳು ಭಗವಂತನ ಪ್ರಕೃತಿಯ ಶಕ್ತಿಯಲ್ಲಿ ಸೇರಿಹೋಗುತ್ತವೆ.

ಗೀತೆಯು ಹೇಳುವ "ಎಲ್ಲ ಕರ್ಮಗಳೂ ಜ್ಞಾನದಲ್ಲಿ ಪರಿಸಮಾಪ್ತಿಹೊಂದುತ್ತವೆ" ಎಂಬ ವಾಕ್ಯಕ್ಕೆ ತಾತ್ಪರ್ಯವು ಇದೇಯೆ. "ಉರಿಯುತ್ತಿರುವ ಬೆಂಕಿಯು ಸೌದೆಯನ್ನು ಬೂದಿಮಾಡುವಂತೆ ಜ್ಞಾನಾಗ್ನಿಯು ಕರ್ಮಗಳೆಲ್ಲವನ್ನೂ ಭಸ್ಮ ಮಾಡುತ್ತದೆ" (ಗೀತೆ 4–30) ಹಾಗೆಂದ ಮಾತ್ರಕ್ಕೆ ಜ್ಞಾನವು ಪೂರ್ಣವಾದಾಗ ಕರ್ಮಗಳನ್ನು ಪೂರ್ಣವಾಗಿ ನಿಲ್ಲಿಸಬೇಕೆಂದು ಅರ್ಥವಲ್ಲ. ಇದರ ಅರ್ಥವನ್ನು ಗೀತೆಯು ಹೀಗೆ ಸ್ಪಷ್ಟಪಡಿಸಿದೆ: ಜ್ಞಾನದಿಂದ ಎಲ್ಲ ಸಂಶಯಗಳನ್ನೂ ಪರಿಹರಿಸಿಕೊಂಡು, ಯೋಗದಿಂದ ಕರ್ಮಗಳಲ್ಲಿ ಆಸೆಯನ್ನು ಬಿಟ್ಟು ಆತ್ಮನಲ್ಲಿ ಒಂದಾಗಿರುವನನ್ನು ಯಾವ ಕರ್ಮಗಳೂ ಬಂಧಿಸುವುದಿಲ್ಲ; ಸಮಸ್ತ ಭೂತಗಳ ಆತ್ಮನಲ್ಲಿ ಒಂದಾಗಿರುವವನು ಕರ್ಮಗಳನ್ನು ಮಾಡಿದರೂ ಅದರಿಂದ ಅವನ ಮೇಲೆ ಯಾವ ಪರಿಣಾಮವೂ ಆಗುವುದಿಲ್ಲ; ಅವು ಅವನನ್ನು ಬಂಧಿಸುವುದಿಲ್ಲ. ಆದುದರಿಂದ ಕರ್ಮಯೋಗವು ಕರ್ಮಗಳನ್ನು ಬಿಡುವುದಕ್ಕಿಂತ ಶ್ರೇಷ್ಠವೆಂದು ಗೀತೆಯು ಹೇಳುತ್ತದೆ; ಏತಕ್ಕೆಂದರೆ ದೇಹವನ್ನು ಧರಿಸಿರುವ ನಮಗೆ ಕರ್ಮಗಳನ್ನು ಸಂಪೂರ್ಣವಾಗಿ ಬಿಡುವುದು ಸಾಧ್ಯವಲ್ಲ. ಸುಲಭವಾಗಿಯೂ ಕ್ಷಿಪ್ರವಾಗಿಯೂ ನಮ್ಮನ್ನು ಬ್ರಹ್ಮನಿಗೆ ಒಯ್ಯಲು ಕರ್ಮಯೋಗವು ಸಾಕು. ಕರ್ಮಯೋಗವೆಂದರೆ ಎಲ್ಲ

ಕರ್ಮಗಳನ್ನೂ ಭಗವಂತನಿಗೆ ಅರ್ಪಿಸುವುದು. ಇದರ ಪರಿಣಾಮವಾಗಿ ಮನುಷ್ಯನು ಕರ್ಮಗಳನ್ನು ಬಿಡುತ್ತಾನೆ—ಬಾಹ್ಯವಾಗಲ್ಲ, ಆಂತರವಾಗಿ ; ಶರೀರದಿಂದಲ್ಲ, ಮನಸ್ಸಿನಲ್ಲಿ. ಕರ್ಮಗಳನ್ನು ಬ್ರಹ್ಮನಲ್ಲಿ ಇಡುತ್ತಾನೆ. ಆದುದರಿಂದ ನಿಮಿತ್ತ ಮಾತ್ರವಾಗಿ ಕರ್ಮಗಳನ್ನು ಮಾಡುವ ಮನುಷ್ಯನಿಗೆ ಕರ್ಮಗಳ ಸಂಬಂಧವಿರುವುದಿಲ್ಲ. ಅವನ ಶರೀರವೂ, ಇಂದ್ರಿಯಗಳೂ ಕರ್ಮಮಾಡುತ್ತಿದ್ದರೂ ಅವನು ಏನನ್ನೂ ಮಾಡುವುದಿಲ್ಲ. ಕರ್ಮಗಳ ಫಲವನ್ನು ಮಾತ್ರವಲ್ಲದೆ ಕರ್ಮಗಳ ಮಾಡುವಿಕೆಯನ್ನೂ ಸಹ ಭಗವಂತನಿಗೆ ಬಿಟ್ಟಿದ್ದಾನೆ. ಆದುದರಿಂದ ಈ ಕರ್ಮಗಳ ಹೊಣೆಯನ್ನು ಭಗವಂತನೆ ವಹಿಸುತ್ತಾನೆ. ಭಗವಂತನೆ ಕರ್ತೃವೂ, ಕರ್ಮವೂ ಮತ್ತು ಫಲವೂ ಆಗುತ್ತಾನೆ.

ಗೀತೆಯು ಹೇಳುವ ಜ್ಞಾನವೆಂಬುದು ಕೇವಲ ಮನಸ್ಸಿನ ವ್ಯಾಪಾರವಲ್ಲ ; ನಮ್ಮ ಅಜ್ಞಾನವೆಂಬ ಕತ್ತಲೆಯಲ್ಲಿ ಅಡಗಿರುವ ಜ್ಯೋತಿರ್ಮಯವಾದ ಸತ್ಯದ ಬೆಳಕಿನಲ್ಲಿ ಸ್ವಪ್ರಕಾಶದಿಂದ ಹೊಳೆಯುತ್ತ ಅತ್ಯಂತ ಮೇಲಿನ ಮಟ್ಟಕ್ಕೆ ಏರುವಿಕೆ. ಈ ಬೆಳಕನ್ನು ಕುರಿತು ಋಗ್ವೇದದಲ್ಲಿ **ತತ್ :ಸತ್ಯಂ ಸೂರ್ಯಂ ತಮಸಿ ಕ್ಷಿಯಂತಂ** ಎಂದು ಹೇಳಿದೆ.

ಕೂಟಸ್ಥನಾದ ಬ್ರಹ್ಮನು ದ್ವಂದಗಳ ಎಳೆತಕ್ಕೆ ಒಳಪಟ್ಟಿರುವ ಅಪರಾಪ್ರಕೃತಿಗಿಂತ ಮೇಲಿನ ಮಟ್ಟದಲ್ಲಿದ್ದಾನೆ. ಅವನಿಗೆ ಈ ಪ್ರಕೃತಿಯ ಪುಣ್ಯಾಪಾಪಗಳ ಮತು ಸುಖದುಃಖಗಳ ಸಂಪರ್ಕವಿಲ್ಲ. ನಮ್ಮ ಪುಣ್ಯಪಾಪಗಳನ್ನು ಅವನು ಸ್ವೀಕರಿಸುವುದಿಲ್ಲ. ಜಯಾಪಜಯಗಳಿಂದ ನಮಗೆ ಉಂಟಾಗುವ ಹರ್ಷಶೋಕಗಳು ಅವನನ್ನು ಕೆದಕಲಾರವು. ಅವನು ಎಲ್ಲಕ್ಕೂ ಪ್ರಭು, ವಿಭು, ಸರ್ವವ್ಯಾಪಿ, ಶಾಂತ, ಸರ್ವಶಕ್ತ, ನಿತ್ಯಶುದ್ಧ, ಎಲ್ಲದರಲ್ಲಿಯೂ ಸಮತ್ವವುಳ್ಳವನು ಮತ್ತು ಪ್ರಕೃತಿಗೆ ಮೂಲಭೂತನು. ನಮ್ಮ ಕರ್ಮಗಳ ಸಾಕ್ಷಾತ್ ಕರ್ತೃವಲ್ಲ ; ಆದರೆ ಪ್ರಕೃತಿಗೆ ಮತ್ತು ಪ್ರಕೃತಿಯ ಎಲ್ಲ ಕರ್ಮಗಳಿಗೆ ಸಾಕ್ಷೀಭೂತನಾಗಿದ್ದಾನೆ. ನಾವೆ ಕರ್ತೃಗಳೆಂಬ ಭಾವನೆಯನ್ನು ನಮ್ಮಲ್ಲಿ ಅವನು ಉಂಟುಮಾಡುವುದಿಲ್ಲ; ಈ ಭ್ರಾಂತಿಯು ಅಪರಾಪ್ರಕೃತಿಯ ಅಜ್ಞಾನದಿಂದ ಉಂಟಾಗುತ್ತದೆ ನಿಜವಾದ ಈ ಸ್ವಾತಂತ್ರ್ಯ, ಈಶ್ವರತ್ವ ಮತ್ತು ಪರಿಶುದ್ಧತೆ ಇವನ್ನು ನಾವು ಕಾಣಲಾರೆವು. ನಮಗೆ ಸಹಜವಾಗಿರುವ ಭ್ರಾಂತಿಯಲ್ಲಿ ಮುಳುಗಿ ಅಜ್ಞಾನದಿಂದ ಮೋಹಗೊಂಡ ನಮಗೆ ನಮ್ಮೊಳಗೆ ಗೂಢವಾಗಿರುವ ಬ್ರಹ್ಮನು ಮರೆಯಾಗಿದ್ದಾನೆ. ಪ್ರಯತ್ನಪಟ್ಟು ಹುಡುಕುವವನಿಗೆ ಜ್ಞಾನವು ಬಂದು ಅಜ್ಞಾನವನ್ನು ತೊಲಗಿಸುತ್ತದೆ. ಬಹುಕಾಲ ಮೋಡಗಳಿಂದ

ಆವರಿಸಲ್ಪಟ್ಟ ಸೂರ್ಯನಂತೆ ಅಜ್ಞಾನದ ತೆರೆಯಿಂದ ಆಚೆಗೆ ಜ್ಞಾನವು ಬಂದು ಕೆಳಗಿನ ಪ್ರಕೃತಿಯ ದ್ವಂದ್ವಗಳಿಗೆ ಅತೀತನಾದ ಬ್ರಹ್ಮನು ನಮಗೆ ಕಾಣುವಂತೆ ಪ್ರಕಾಶಮಾಡುತ್ತದೆ. ದೀರ್ಘವಾದ ಮತ್ತು ದೃಢವಾದ ಪ್ರಯತ್ನದಿಂದ, ನಮ್ಮ ಮನಸ್ಸನ್ನು ಮತ್ತು ಬುದ್ಧಿಯನ್ನು ಬ್ರಹ್ಮನಲ್ಲಿಯೆ ಕೇಂದ್ರೀಕರಿಸುವುದರಿಂದ, ಅವನನ್ನೆ ನಮ್ಮ ಪರಮ ಗುರಿಯನ್ನಾಗಿ ಮಾಡಿಕೊಳ್ಳುವುದರಿಂದ ಮತ್ತು ನಮ್ಮಲ್ಲಲ್ಲದೆ ಎಲ್ಲೆಲ್ಲಿಯೂ ಅವನನ್ನೆ ನೋಡುವುದರಿಂದ ನಾವು ಬ್ರಹ್ಮನಲ್ಲಿ ಒಂದಾಗುತ್ತೇವೆ; ನಮ್ಮ ಅಪರಾಪ್ರಕೃತಿಯ ಅಜ್ಞಾನ, ಕ್ಲೇಶಗಳೆಲ್ಲವೂ ಜ್ಞಾನಜಲದಿಂದ* ಕೊಚ್ಚಿ ಹೋಗುತ್ತವೆ.

ಇದರ ಪರಿಣಾಮವಾಗಿ ಎಲ್ಲ ಮನುಷ್ಯರ ಮತ್ತು ವಸ್ತುಗಳ ವಿಷಯದಲ್ಲಿಯೂ ಪೂರ್ಣವಾದ ಸಮತ್ವವು ಉಂಟಾಗುತ್ತದೆಂದು ಗೀತೆಯು ಹೇಳುತ್ತದೆ. ಆಗ ಮಾತ್ರ ನಾವು ಎಲ್ಲ ಕರ್ಮಗಳನ್ನೂ ಬ್ರಹ್ಮನಲ್ಲಿ ಇಡಬಹುದು. ಬ್ರಹ್ಮನು ಸಮತ್ವವುಳ್ಳವನು; **ನಿರ್ದೋಷಂ ಹಿ ಸಮಂ ಬ್ರಹ್ಮ.** ನಮ್ಮಲ್ಲಿಯೂ ನಿರ್ದೋಷವಾದ ಸಮತ್ವವುಂಟಾದಾಗ, ಎಂದರೆ "ಜ್ಞಾನಿಯಾದ ಬ್ರಾಹ್ಮಣ, ಹಸು, ಆನೆ, ನಾಯಿ, ಚಂಡಾಲ, ಎಲ್ಲರನ್ನೂ ಒಂದೆ ಸಮನಾದ ದೃಷ್ಟಿಯಿಂದ ನೋಡಿ," ಎಲ್ಲರಲ್ಲಿಯೂ ಒಂದೆ ಬ್ರಹ್ಮನಿದ್ದಾನೆಂದು ತಿಳಿದಾಗ, ಆ ಐಕ್ಯ ಸ್ಥಿತಿಯಲ್ಲಿದ್ದುಕೊಂಡು ಬ್ರಹ್ಮನಂತೆ ನಾವೂ ಸಹ ಎಲ್ಲ ಕರ್ಮಗಳೂ ಪ್ರಕೃತಿಯಲ್ಲಿ ಹುಟ್ಟುವುದನ್ನು ನೋಡಬಹುದು. ಆಗ ನಮಗೆ ಅವುಗಳ ಸಂಗವಾಗಲಿ, ಬಂಧನವಾಗಲಿ, ಅವುಗಳಿಂದ ಪಾಪವಾಗಲಿ, ಪುಣ್ಯವಾಗಲಿ ತಟ್ಟುವುದಿಲ್ಲ. ಆಗ ಪಾಪವೂ ಕಲ್ಮಷವೂ ಇರುವುದು ಅಸಾಧ್ಯ; ಅಜ್ಞಾನದಿಂದ ಉಂಟಾದ ಮತ್ತು ಕಾಮದಿಂದ ಕೂಡಿರುವ ಸೃಷ್ಟಿಯನ್ನೂ, ಅದರ ಕರ್ಮಗಳನ್ನೂ ಮತ್ತು ಪ್ರತಿಕ್ರಿಯೆಗಳನ್ನೂ ದಾಟಿರುತ್ತೇವೆ. ಪರಾಪ್ರಕೃತಿಯಲ್ಲಿ, ಬ್ರಹ್ಮನಲ್ಲಿ ನಾವು ನೆಲೆಸಿರುವುದರಿಂದ ನಮ್ಮ ಕರ್ಮಗಳಲ್ಲಿ ಲೋಪದೋಷಗಳು ಇರುವುದಿಲ್ಲ. ಸಮತ್ವವಿಲ್ಲದಿರುವುದೆ ಈ ಲೋಪದೋಷಗಳಿಗೆ ಕಾರಣವು. ಸಮತ್ವವಿಲ್ಲದಿರುವುದಕ್ಕೆ ಅಜ್ಞಾನ ಕಾರಣ. ಬ್ರಹ್ಮನು ನಿರ್ದೋಷನು, ಸಮತ್ವಸ್ವರೂಪನು, ಪಾಪಪುಣ್ಯಗಳಿಗೆ ಅತೀತನಾದವನು. ಅವನಲ್ಲಿ ನೆಲೆಸಿದರೆ

---

* ಋಗ್ವೇದದಲ್ಲಿ **ಋತಸ್ಯ ಧಾರಾಃ** ಸತ್ಯದ ಝರಿಗಳು, **ಆಪೋ ವಿಚೇತಸಃ** ಜ್ಞಾನಯುಕ್ತವಾದ ಜಲಗಳು, **ಸ್ವರ್ವತೀರಾಪಃ** ಜ್ಯೋತಿಯಿಂದ ಕೂಡಿದ ನೀರು, ಎಂಬ ಮಾತುಗಳು ಉಪಯೋಗಿಸಲ್ಪಟ್ಟಿವೆ. ಇಲ್ಲಿ ಈ ಮಾತುಗಳು ಅಲಂಕಾರ ಮಾತ್ರವಲ್ಲ.

ನಾವೂ ಪಾಪಪುಣ್ಯಗಳಿಗೆ ಅತೀತರಾಗಿರುತ್ತೇವೆ. ಶುದ್ಧವಾಗಿ, ನಿಷ್ಕಲ್ಮಷವಾಗಿ, ಸರ್ವಭೂತಗಳ ಹಿತದಲ್ಲಿ ಆಸಕ್ತಿಯುಳ್ಳವರಾಗಿ ಕೆಲಸಮಾಡುತ್ತೇವೆ. ನಾವು ಅಜ್ಞಾನದಿಂದ ಕರ್ಮಗಳನ್ನು ಮಾಡುವಾಗಲೂ ಕೂಡ ನಮ್ಮ ಹೃದಯದಲ್ಲಿರುವ ಪರಮಾತ್ಮನೇ ಅದಕ್ಕೆ ಕಾರಣ; ಆದರೆ ಅವನು ಕೆಲಸಮಾಡುವುದು ಅವನ ಮಾಯೆಯ ಮೂಲಕ, ನಮ್ಮ ಕೀಳುಸ್ವಭಾವಕ್ಕೆ ಸಹಜವಾದ ಅಹಂಕಾರದ ಮೂಲಕ. ಇದರಿಂದಲೆ ಕರ್ಮಬಂಧಗಳನ್ನು ಉಂಟುಮಾಡಿಕೊಳ್ಳುತ್ತೇವೆ. ಈ ಕರ್ಮಗಳ ಬಹುಮುಖವಾದ ಪ್ರತಿಕ್ರಿಯೆಗಳು ನಮಗೆ ಅಂಟಿಕೊಳ್ಳುತ್ತವೆ. ಈ ಫಲಗಳು ಆಂತರವಾಗಿ ಪಾಪಪುಣ್ಯಗಳಾಗಿಯೂ, ಬಾಹ್ಯವಾಗಿ ಸುಖದುಃಖಗಳಾಗಿಯೂ ಮತ್ತು ಒಳ್ಳೆಯ ಅದೃಷ್ಟ-ದುರದೃಷ್ಟಗಳಾಗಿಯೂ ರೂಪುಗೊಳ್ಳುತ್ತವೆ. ಇದೇ ಕರ್ಮಪಾಶದ ಪರಂಪರೆ. ಜ್ಞಾನವನ್ನು ಹೊಂದಿ ಅಜ್ಞಾನದಿಂದ ಬಿಡುಗಡೆ ಹೊಂದಿದಮೇಲೆ, ನಮ್ಮ ಹೃದಯದಲ್ಲಿ ಗೂಢವಾಗಿರುವ ಈಶ್ವರನು ವ್ಯಕ್ತನಾಗುತ್ತಾನೆ. ತನ್ನ ಕೆಲಸಕ್ಕಾಗಿ, ಎಂದರೆ ಲೋಕಕಲ್ಯಾಣಕ್ಕಾಗಿ, ಲೋಪವಿಲ್ಲದ (ನಿಮಿತ್ತಮಾತ್ರಂ) ಉಪಕರಣಗಳನ್ನಾಗಿ ನಮ್ಮನ್ನು ಉಪಯೋಗಿಸುತ್ತಾನೆ. ಜ್ಞಾನಕ್ಕೂ ಸಮತ್ವಕ್ಕೂ ಇರುವ ಸಂಬಂಧವು ಇಷ್ಟು ಒತ್ತಾಗಿದೆ. ಬುದ್ಧಿಯ ಮಟ್ಟದಲ್ಲಿರುವ ಜ್ಞಾನವು ಇಲ್ಲಿ ಸಮತ್ವ ಮನೋಭಾವದ ರೂಪದಲ್ಲಿ ವ್ಯಕ್ತವಾಗುತ್ತದೆ; ಇನ್ನೂ ಮೇಲಿನ ಮಟ್ಟದಲ್ಲಿ ಜ್ಞಾನವು ಆತ್ಮನ ಜ್ಯೋತಿಯಾಗಿಯೂ, ಸಮತ್ವವು ಪ್ರಕೃತಿಯ ಲಕ್ಷಣವಾಗಿಯೂ ಕಂಡುಬರುತ್ತವೆ.

ಹಿಂದೂ ತತ್ತ್ವಶಾಸ್ತ್ರದಲ್ಲಿ ಮತ್ತು ಯೋಗದಲ್ಲಿ **ಜ್ಞಾನ** ಎಂಬ ಪದವು ಶ್ರೇಷ್ಠವಾದ ಆತ್ಮಜ್ಞಾನವೆಂಬ ಅರ್ಥದಲ್ಲಿಯೇ ಬಳಸಲ್ಪಟ್ಟಿದೆ. ನಮ್ಮ ನಿಜಸ್ವರೂಪವನ್ನು ನಾವು ಅರಿಯಲು ಒಂದು ಜ್ಯೋತಿಯಂತಿದೆ; ನಮ್ಮ ವಿದ್ವತ್ತನ್ನೂ ತಿಳಿವಳಿಕೆಯನ್ನೂ ಹೆಚ್ಚಿಸುವ ಪುಸ್ತಕ ಪಾಂಡಿತ್ಯವಲ್ಲ. ಜ್ಞಾನವೆಂದರೆ ವಿಜ್ಞಾನ, ಮನಶ್ಶಾಸ್ತ್ರ, ದರ್ಶನ, ನೀತಿಶಾಸ್ತ್ರ, ಸೌಂದರ್ಯಮೀಮಾಂಸೆಗೆ ಸಂಬಂಧಿಸಿದ ಅಥವಾ ವ್ಯಾವಹಾರಿಕವಾದ ತಿಳಿವಳಿಕೆಯಾಗಲಿ ಪಾಂಡಿತ್ಯವಾಗಲಿ ಅಲ್ಲ. ಈ ಪಾಂಡಿತ್ಯದಿಂದ ನಮ್ಮ ಬೆಳವಳಿಕೆಗೆ ಸಹಾಯವಾಗುತ್ತದೆಂಬುದರಲ್ಲಿ ಸಂಶಯವಿಲ್ಲ. ಆದರೆ ಪುರುಷೋತ್ತಮನನ್ನು, ಪರಮಾತ್ಮನನ್ನು ಸಾಕ್ಷಾತ್ಕಾರಮಾಡಿಕೊಳ್ಳಲು ಇವುಗಳನ್ನು ಸಾಧನವನ್ನಾಗಿ ಮಾಡಿಕೊಂಡಾಗ ಮಾತ್ರ ಇವುಗಳನ್ನು ನಿಜವಾದ ಜ್ಞಾನವೆಂದು ಎಣಿಸಬಹುದು. ಪ್ರಕೃತಿವ್ಯಾಪಾರಗಳನ್ನು ಒಳಹೊಕ್ಕು ಅವುಗಳ ಹಿಂದೆ ಇರುವ ಒಂದೇ ಆದ ಮೂಲತತ್ತ್ವವನ್ನು ತಿಳಿದುಕೊಳ್ಳಲು ಸಾಧನವಾದಾಗ

ವಿಜ್ಞಾನವು ನಿಜವಾದ ಜ್ಞಾನವಾಗುತ್ತದೆ; ನಮ್ಮನ್ನು ನಾವು ತಿಳಿದುಕೊಂಡು, ನಮ್ಮ ಉತ್ತಮ ಮತ್ತು ನೀಚಸ್ವಭಾವಗಳಿಗಿರುವ ಭೇದಗಳನ್ನು ಅರಿತು, ನೀಚ ಸ್ವಭಾವವನ್ನು ತೊರೆದು ಉತ್ತಮ ಸ್ವಭಾವವನ್ನು ಬೆಳೆಸಿಕೊಳ್ಳಲು ಸಾಧನವಾದಾಗ ಮನಶ್ಶಾಸ್ತ್ರವೂ ನಿಜವಾದ ಜ್ಞಾನವೆನಿಸಿಕೊಳ್ಳುತ್ತದೆ. ಜೀವನದ ಮೂಲತತ್ವಗಳನ್ನು ತಿಳಿಯಲು ಮತ್ತು ಶಾಶ್ವತವಾದುದನ್ನು ಅರಿಯಲು ಸಾಧನವಾದಾಗ ದರ್ಶನಗಳ ಪಾಂಡಿತ್ಯವು ನಿಜವಾದ ಜ್ಞಾನವಾಗುತ್ತದೆ. ಇದು ಪಾಪ, ಇದು ಪುಣ್ಯ ಎಂದು ತಿಳಿದು, ಪಾಪವನ್ನು ತ್ಯಜಿಸಿ, ಪಾಪಪುಣ್ಯಗಳೆರಡಕ್ಕೂ ಅತೀತವಾದ ಬ್ರಹ್ಮನ ಶುದ್ಧ ಸ್ವಭಾವವನ್ನು ಅರಿಯಲು ಸಾಧಕವಾದಾಗ ನೀತಿಶಾಸ್ತ್ರವು ನಿಜವಾದ ಜ್ಞಾನವಾಗುತ್ತದೆ.

ಪರಮಾತ್ಮನು ಸೌಂದರ್ಯಸ್ವರೂಪನೆಂಬುದನ್ನು ಅರಿಯಲು ಸಹಾಯಕವಾದಾಗ ಸೌಂದರ್ಯಮೀಮಾಂಸೆಯೂ ನಿಜವಾದ ಜ್ಞಾನವಾಗುತ್ತದೆ. ಪರಮಾತ್ಮನು ತಾನು ಸೃಷ್ಟಿಸಿರುವ ಜೀವಿಗಳೊಡನೆ ಹೇಗೆ ವರ್ತಿಸುತ್ತಾನೆಂದು ತಿಳಿದು, ಅದನ್ನು ಮನುಷ್ಯರೆಲ್ಲರಲ್ಲಿ ಅಂತರ್ಗತವಾಗಿರುವ ಪರಮಾತ್ಮನ ಸೇವೆಗಾಗಿ ಉಪಯೋಗಿಸುವಾಗ ವ್ಯವಹಾರಜ್ಞಾನವೂ ನಿಜವಾದ ಜ್ಞಾನವಾಗುತ್ತದೆ. ಹೀಗಿದ್ದರೂ ಇವು ನಿಜವಾದ ಜ್ಞಾನಕ್ಕೆ ಸಾಧನಗಳು ಮಾತ್ರ; ನಿಜವಾದ ಜ್ಞಾನವು ಆತ್ಮನ ಮಟ್ಟದಲ್ಲಿದೆ; ಇದು ಮನಸ್ಸಿನ ನೇರವಾಗಿ ಗೋಚರವಾಗುವುದಿಲ್ಲ; ಇದರ ಪ್ರತಿಬಿಂಬವು ಮನಸ್ಸಿಗೆ ಗೋಚರವಾಗುತ್ತದೆ.

ಈ ನಿಜವಾದ ಜ್ಞಾನವನ್ನು ಪಡೆಯುವುದು ಹೇಗೆಂಬುದನ್ನು ಗೀತೆಯು ವಿವರಿಸುತ್ತದೆ. ಮೊಟ್ಟಮೊದಲು ನಿಜವಾದ ತತ್ವಗಳನ್ನು ನೋಡಿರುವವರು (ತತ್ವದರ್ಶಿ)—ಕೇಳಿಕೆಯಿಂದ, ಓದುವುದರಿಂದಲ್ಲ--ನಮಗೆ ನಿಜವಾದ ಜ್ಞಾನವನ್ನು ಉಪದೇಶಿಸುತ್ತಾರೆ. ಆದರೆ ನಿಜವಾಗಿ ಅದು ನಮ್ಮಲ್ಲಿಯೆ ಉದಯಿಸಬೇಕು. "ಯೋಗದಲ್ಲಿ ಸಿದ್ಧಿಯನ್ನು ಪಡೆದಿರುವವನು ಕಾಲಕ್ರಮದಲ್ಲಿ ಸ್ವಯಂ ತನ್ನಲ್ಲಿಯೇ ಜ್ಞಾನವನ್ನು ಹೊಂದುತ್ತಾನೆ" (ಗೀತೆ: 4-38) ಅವನಲ್ಲಿ ವೈರಾಗ್ಯವೂ, ಸಮತ್ವಬುದ್ಧಿಯೂ ಮತ್ತು ಭಕ್ತಿಯೂ ಹೆಚ್ಚಾದಂತೆ ಅವನು ಹೆಚ್ಚುಹೆಚ್ಚಾಗಿ ಜ್ಞಾನವನ್ನು ಪಡೆಯುತ್ತಾನೆ. ಈ ಮಾತುಗಳು ಅನ್ವಯಿಸುವುದು ಬ್ರಹ್ಮಜ್ಞಾನಕ್ಕೆ ಮಾತ್ರ; ಸಾಮಾನ್ಯವಾದ ಅರಿವಾದರೊ ಇಂದ್ರಿಯಗಳ ಮತ್ತು ತರ್ಕದ ಸಹಾಯದಿಂದ ಪ್ರಯತ್ನಪೂರ್ವಕವಾಗಿ ಮನಸ್ಸಿಗೆ ಉಂಟಾಗುತ್ತದೆ.

ಹಿಂದೆ ಹೇಳಿದ ಬ್ರಹ್ಮಜ್ಞಾನವು ಸ್ವತಸ್ಸಿದ್ಧವಾದುದು. ಇದು ಬುದ್ಧಿಗೆ ಅಂತರವಾಗಿ ಗೋಚರವಾಗುವುದು ; ಸ್ವಯಂ ಅನುಭವರೂಪವಾದುದು ಮತ್ತು ಸ್ವಯಂ ಪ್ರಕಾಶವುಳ್ಳದ್ದು. ಇದನ್ನು ಪಡೆಯಲು ನಮ್ಮ ಇಂದ್ರಿಯಗಳನ್ನೂ ಮನಸ್ಸನ್ನೂ ಸಂಪೂರ್ಣವಾಗಿ ವಶಮಾಡಿಕೊಂಡಿರಬೇಕು ; ಅವುಗಳಿಂದುಂಟಾಗುವ ಭ್ರಾಂತಿಗಳಿಗೆ ನಾವು ಒಳಗಾಗಕೂಡದು ; ಆಗ ಇಂದ್ರಿಯಗಳು ಮತ್ತು ಮನಸ್ಸು ಈ ಜ್ಞಾನವನ್ನು ನಿರ್ಮಲವಾದ ಕನ್ನಡಿಯಂತೆ ಪ್ರತಿಬಿಂಬಿಸುವುವು. ಎಲ್ಲವನ್ನೂ ಒಳಗೊಂಡಿರುವ ಪರವಸ್ತುವಾದ ಈಶ್ವರನಲ್ಲಿ ನಮ್ಮ ಮನೋಬುದ್ಧಿಗಳು ಸಂಪೂರ್ಣವಾಗಿ ನೆಲೆಗೊಳ್ಳಬೇಕು ; ಆಗ ಅವನು ನಮ್ಮ ಮೂಲಕ ಪ್ರಕಾಶಿಸುತ್ತಾನೆ.

ಕೊನೆಯದಾಗಿ ನಾವು ಮಾನಸಿಕವಾದ ಸಂಶಯಗಳಿಂದ ಚಲಿಸದಿರುವ ದೃಢವಾದ ಶ್ರದ್ಧೆಯನ್ನು ಹೊಂದಿರಬೇಕು. "ಶ್ರದ್ಧೆಯಿಲ್ಲದ ಅಜ್ಞನು, ಸಂಶಯದಿಂದ ತುಂಬಿರುವವನು ನಾಶಹೊಂದುತ್ತಾನೆ; ಸಂಶಯಾತ್ಮನಿಗೆ ಈ ಲೋಕದಲ್ಲಾದಲಿ, ಪರಲೋಕದಲ್ಲಾದಲಿ ಸುಖವಿಲ್ಲ." (ಗೀತೆ 4-40) ಇದು ನಿಜವಾದ ಮಾತು. ಸ್ಥಿರವಾದ ನಂಬಿಕೆಯಿಲ್ಲದಿದ್ದರೆ ಈ ಲೋಕದಲ್ಲಾಗಲಿ, ಮೇಲಿನ ಲೋಕದಲ್ಲಾಗಲಿ ಉತ್ತಮ ಸ್ಥಾನವನ್ನು ಪಡೆಯುವುದಕ್ಕೆ ಯಾವ ವಿಧವಾದ ದೃಢಪ್ರಯತ್ನವನ್ನೂ ಮಾಡಿದಂತಾಗುವುದಿಲ್ಲ. ಭದ್ರವಾದ ಶ್ರದ್ಧೆಯ ಆಧಾರ ಮತ್ತು ಒತ್ತಾಸೆಗಳಿದ್ದರೆ ಮಾತ್ರ ಮನುಷ್ಯನು ಇಹಲೋಕ ಅಥವಾ ಪರಲೋಕದಲ್ಲಿ ಸುಖ, ಸಂತೋಷ ಮತ್ತು ಜಯಗಳನ್ನು ಪಡೆಯಬಹುದು. ಎಲ್ಲದರಲ್ಲಿಯೂ ಅಪನಂಬಿಕೆಯಿರುವವನು ಶೂನ್ಯದಲ್ಲಿ ತೊಳಲುತ್ತಾನೆ. ಕೀಳ್ಮಟ್ಟದ ಜ್ಞಾನದಲ್ಲಿ ಸಂಶಯ ಮತ್ತು ಅಪನಂಬಿಕೆಗಳಿಂದಲೂ ಉಪಯೋಗವಿದೆ; ಆದರೆ ಶ್ರೇಷ್ಠವಾದ ಅಧ್ಯಾತ್ಮಜ್ಞಾನದಲ್ಲಾದರೊ ಇವು ತೊಡಕುಗಳೆ ಆಗುತ್ತವೆ. ಏತಕ್ಕೆಂದರೆ ಇಲ್ಲಿ ಸತ್ಯದ ಮತ್ತು ಅಸತ್ಯದ ಸಮತೋಲನೆಯಿಂದ ಜ್ಞಾನದ ಅಭಿವೃದ್ಧಿಯಾಗುವುದಿಲ್ಲ ; ಅಧ್ಯಾತ್ಮಜ್ಞಾನವು ಕ್ರಮಕ್ರಮವಾಗಿ ಸತ್ಯದ ಅನುಭವದಿಂದ ಅಭಿವೃದ್ಧಿಯಾಗುತ್ತದೆ. ಮಾನಸಿಕವಾಗಿ ಬರುವ ಜ್ಞಾನದಲ್ಲಿ ಸತ್ಯಾಂಶದ ಜೊತೆಗೆ ಅಪೂರ್ಣತೆಯೂ, ಅಸತ್ಯವೂ ಬೆರೆತಿವೆ; ಅಪನಂಬಿಕೆಯಿಂದ ಇದನ್ನು ವಿಚಾರಮಾಡಿ, ಅಸತ್ಯಗಳನ್ನು ದೂರಮಾಡಿ ಸತ್ಯವನ್ನು ತಿಳಿಯಬಹುದು. ಅಧ್ಯಾತ್ಮಜ್ಞಾನದಲ್ಲಾದರೊ ಅಸತ್ಯಕ್ಕೆ ಎಡೆಯೆ ಇಲ್ಲ. ಯಾವುದೊ ಒಂದು ಅಭಿಪ್ರಾಯಕ್ಕೆ ಮನಸ್ಸು ಕಟ್ಟುಬೀಳುವುದರಿಂದ ಉಂಟಾಗುವ ದೋಷವು ಅಪನಂಬಿಕೆಯಿಂದ ತೊಲಗುವುದಿಲ್ಲ; ಸತ್ಯದ ಅನುಭವವು ಮುಂದುವರಿದ

ಹಾಗೆಲ್ಲ ಈ ದೋಷವು ತಾನಾಗಿಯೆ ಬಿಟ್ಟುಹೋಗುತ್ತದೆ. ಇಲ್ಲಿಯವರೆಗೆ ನಾವು ಪಡೆದಿರುವ ಜ್ಞಾನದಲ್ಲಿ ಅಪೂರ್ಣತೆಗಳು ಯಾವುವಿದ್ದರೂ, ಇನ್ನೂ ಹೆಚ್ಚಾದ, ಆಳವಾದ ಮತ್ತು ವ್ಯಾಪಕವಾದ ಆಧ್ಯಾತ್ಮಿಕ ಅನುಭವದಿಂದ ಅವನ್ನು ಹೋಗಲಾಡಿಸಬೇಕೆ ಹೊರತು ಈಗಾಗಲೆ ನಾವು ಹೊಂದಿರುವ ಅನುಭವಗಳಲ್ಲಿ ಸಂಶಯಪಟ್ಟು ಪ್ರಶ್ನಿಸುವುದರಿಂದಲ್ಲ. ನಾವು ಇನ್ನೂ ಹೊಂದದಿರುವ ಅನುಭವವನ್ನೂ, ಸತ್ಯವನ್ನೂ, ಪಡೆಯಲು ಶ್ರದ್ಧೆಯು ಸಾಧನ; ಅಪನಂಬಿಕೆಯಲ್ಲ; ಏತಕ್ಕೆಂದರೆ ಈ ಸತ್ಯವನ್ನು ಮನಸ್ಸು ಗ್ರಹಿಸಲಾರದು. ತರ್ಕಬದ್ಧವಾಗಿ ಕೆಲಸಮಾಡುವ ಮನಸ್ಸು ಕೆಲವು ಅಭಿಪ್ರಾಯಗಳಿಗೆ ಸಿಕ್ಕಿಕೊಂಡಿದೆ; ಅನೇಕ ವೇಳೆ ಈ ಅಭಿಪ್ರಾಯಗಳು ಸತ್ಯಕ್ಕೆ ದೂರವಾಗಿರುತ್ತವೆ. ಈ ಸತ್ಯವು ತರ್ಕದಿಂದ ಸಾಧಿಸಲ್ಪಡತಕ್ಕದ್ದಲ್ಲ; ಅನುಭವದಿಂದ ಆಂತರವಾಗಿ ತಿಳಿದುಕೊಳ್ಳತಕ್ಕದ್ದು. ನಾವು ಆಧ್ಯಾತ್ಮಿಕವಾಗಿ ಬೆಳೆಯುತ್ತ ಕ್ರಮಕ್ರಮವಾಗಿ ಆ ಸತ್ಯದ ಸ್ವರೂಪವನ್ನು ತಾಳಬೇಕು. ಈ ಸತ್ಯವು ಸ್ವಯಂಪ್ರಕಾಶವಾದದ್ದು, ಸ್ವತಸ್ಸಿದ್ಧವಾದುದು. ನಮ್ಮ ಅಜ್ಞಾನದ ಮಾಯಾವರಣವಿರದಿದ್ದರೆ ಸ್ಪಷ್ಟವಾಗಿ ವ್ಯಕ್ತವಾಗುತ್ತದೆ. ಈ ಅಜ್ಞಾನದಿಂದ ಹುಟ್ಟಿದ ಸಂಶಯ ಮತ್ತು ಭ್ರಾಂತಿಗಳೆ ನಾವು ಸತ್ಯವನ್ನು ತಿಳಿದು ಅನುಸರಿಸಲು ಪ್ರತಿಬಂಧಕಗಳಾಗಿವೆ. ಕೆಳಗಿನ ಮಟ್ಟದ ಮತ್ತು ಅಸ್ಥಿರವಾದ ಸತ್ಯವನ್ನು ಮಾತ್ರ ಗ್ರಹಿಸಿ ಇಂದ್ರಿಯಗಳ ಭ್ರಾಂತಿಗೂ ಭಿನ್ನಾಭಿಪ್ರಾಯಗಳ ಮೋಹಕ್ಕೂ ಒಳಗಾದ ನಮ್ಮ ಹೃದಯವೂ ಮತ್ತು ಮನಸ್ಸೂ ಶ್ರೇಷ್ಠವಾದ ಮತ್ತು ಶಾಶ್ವತವಾದ ಸತ್ಯವನ್ನು ಕುರಿತು ಸಂಶಯವನ್ನು ತಾಳುವುವು. ಈ ಸಂಶಯಗಳನ್ನು ಜ್ಞಾನಖಡ್ಗದಿಂದ ಛೇದಿಸಬೇಕೆಂದು ಗೀತೆಯು ಹೇಳುತ್ತದೆ. ಇಲ್ಲಿ ಜ್ಞಾನವೆಂದರೆ ಅನುಭವದಿಂದ, ಯೋಗದಿಂದ ಉಂಟಾಗುವ ಜ್ಞಾನ; ಯಾವ ಸತ್ಯವಸ್ತುವಿನಲ್ಲಿ ಒಂದಾಗುವುದರಿಂದ ಅದರ ಸ್ವರೂಪವೂ ಮತ್ತು ಎಲ್ಲವೂ ತಿಳಿಯಲ್ಪಡುವುದೊ ಅಂತಹ ಯೋಗದಿಂದ ಉಂಟಾದ ಜ್ಞಾನ.

ಈ ಜ್ಞಾನವೆ ಬ್ರಹ್ಮಜ್ಞಾನ; ಎಂದರೆ, ನಾವು ಎಲ್ಲ ಕಾಲಗಳಲ್ಲಿಯೂ ಬ್ರಹ್ಮನಲ್ಲಿ ನೆಲೆಸಿದಾಗ ಉಂಟಾಗುವ ಜ್ಞಾನ. ಉಳಿದುದೆಲ್ಲವನ್ನು ಬಿಟ್ಟು, ಬ್ರಹ್ಮವೊಂದರ ಜ್ಞಾನ ಅಥವಾ ಸಾಕ್ಷಾತ್ಕಾರವಲ್ಲ; ಎಲ್ಲವನ್ನೂ ಬ್ರಹ್ಮವಾಗಿ, ಆತ್ಮನಾಗಿ ನೋಡುವ ಜ್ಞಾನ. "ಯಾವುದನ್ನೂ ಬಿಡದೆ ಸಮಸ್ತ ಭೂತಗಳನ್ನೂ ಆತ್ಮನಲ್ಲಿ ಅನಂತರ ನನ್ನಲ್ಲಿ ನೋಡುವಂತಹ ಜ್ಞಾನವೆ." ಪುನಃ ನಮ್ಮ ಮನೋವ್ಯಾಪಾರದ ಮೋಹಕ್ಕೆ, ಗೊಂದಲಕ್ಕೆ ಸಿಲುಕದಂತೆ ಮಾಡುವ ಜ್ಞಾನ. ಇದನ್ನೆ ೬ನೆಯ

ಅಧ್ಯಾಯದಲ್ಲಿ ಹೀಗೆ ಹೇಳಿದೆ: "ಎಲ್ಲ ಕಡೆಯಲ್ಲಿಯೂ ಸಮಾನ ದೃಷ್ಟಿಯುಳ್ಳ ಯೋಗಿಯು ಸಮಸ್ತ ಭೂತಗಳಲ್ಲಿರತಕ್ಕ ಆತ್ಮನನ್ನೂ ಸಮಸ್ತ ಪ್ರಾಣಿಗಳನ್ನೂ ತನ್ನಲ್ಲಿ ನೋಡುತ್ತಾನೆ. ಯಾರು ಎಲ್ಲ ಕಡೆಗಳಲ್ಲಿಯೂ ನನ್ನನ್ನು ನೋಡುತ್ತಾನೆಯೊ ಮತ್ತು ಎಲ್ಲವನ್ನೂ ನನ್ನಲ್ಲಿ ನೋಡುತ್ತಾನೆಯೊ ಅವನ ಭಾಗಕ್ಕೆ ನಾನು ನಾಶಹೊಂದುವುದಿಲ್ಲ; ನನ್ನ ಭಾಗಕ್ಕೆ ಅವನೂ ನಾಶಹೊಂದುವುದಿಲ್ಲ. ಏಕತ್ವವನ್ನು ಸುಸ್ಥಿರವಾಗಿ ಹೊಂದಿ, ಸಮಸ್ತ ಭೂತಗಳಲ್ಲಿಯೂ ಇರುವ ನನ್ನನ್ನು ಯಾವನು ನೆನೆಸುತ್ತಾನೆಯೊ ಆ ಯೋಗಿಯು ಎಲ್ಲಿದ್ದಾಗ್ಯೂ ನನ್ನಲ್ಲಿಯೆ ಇದ್ದಾನೆ. ಎಲೈ ಅರ್ಜುನನೆ, ಯಾರು ಸುಖವನ್ನಾಗಲಿ ದುಃಖವನ್ನಾಗಲಿ ಆತ್ಮ ಸಾದೃಶ್ಯ ದಿಂದ ಎಲ್ಲೆಲ್ಲಿಯೂ ಸಮನಾಗಿ ನೋಡುತ್ತಾನೆಯೊ ಆ ಯೋಗಿಯೆ ಸರ್ವ ಶ್ರೇಷ್ಠನಾದವನು" (ಗೀತೆ 6—29,30,31,32)

ಇದೇ ಉಪನಿಷತ್ತುಗಳು ಹೇಳುವ ಪ್ರಾಚೀನವಾದ ವೇದಾಂತದ ಉಪದೇಶ. ಇದನ್ನು ಗೀತೆಯು ಆಗಿಂದಾಗ್ಗೆ ನಮ್ಮ ಮುಂದೆ ಇಡುತ್ತದೆ. ಈ ಉಪದೇಶವನ್ನು ಗೀತೆಯಿಂದೀಚಿನಕಾಲದ ದಾರ್ಶನಿಕರೂ ಕೂಡ ಬೇರೆ ಬೇರೆ ವಿಧಗಳಲ್ಲಿ ಹೇಳಿರುವು ದೇನೊ ಉಂಟು; ಆದರೆ ಗೀತೆಯ ವೈಶಿಷ್ಟ್ಯವೇನೆಂದರೆ ಈ ಜ್ಞಾನವು ದಿವ್ಯ ಜೀವನಕ್ಕೆ ತಳಹದಿಯಾಗುವ ಅನುಷ್ಠಾನಕ್ಕೆ ಅನುಕೂಲವಾಗುವಂತೆ ಉಪದೇಶ ಮಾಡಿದೆ. ಕರ್ಮಯೋಗಕ್ಕೂ ಏಕತ್ವದ ಜ್ಞಾನಕ್ಕೂ ಒತ್ತಾದ ಸಂಬಂಧವಿದೆ ಯೆಂಬುದನ್ನು ಗೀತೆಯು ಯಾವಾಗಲೂ ಒತ್ತಿಹೇಳುತ್ತದೆ. ಎಂದರೆ, ಬಂಧವಿಲ್ಲದೆ ಕರ್ಮಗಳನ್ನು ಮಾಡಲು ಈ ಜ್ಞಾನದ ಅವಶ್ಯಕತೆಯನ್ನು ಒತ್ತಿಹೇಳುತ್ತದೆ. ಜ್ಞಾನದ ವಿಷಯವನ್ನು ಹೇಳುವಾಗಲೆಲ್ಲ ಅದರ ಪರಿಣಾಮವಾದ ಸಮತ್ವದ ವಿಷಯವನ್ನೂ ಪ್ರಸ್ತಾಪಿಸುತ್ತದೆ; ಹಾಗೆಯೆ ಸಮತ್ವದ ವಿಚಾರವನ್ನು ಹೇಳು ವಾಗಲೆಲ್ಲಾ ಇದಕ್ಕೆ ಕಾರಣವಾದ ಜ್ಞಾನವನ್ನು ಕುರಿತು ಪ್ರಸ್ತಾಪ ಮಾಡುತ್ತದೆ. ಗೀತೆಯು ಹೇಳುವ ಸಮತ್ವವು ಮನುಷ್ಯನು ತನ್ನ ಮುಕ್ತಿಯನ್ನು ಮಾತ್ರ ಪಡೆ ಯಲು ಸಹಾಯಕವಾಗುವ ತಾಟಸ್ಥ್ಯರೂಪವಾದ ಸಮತ್ವವಲ್ಲ; ಕರ್ಮಗಳನ್ನು ಮಾಡಲು ಪ್ರೋತ್ಸಾಹಿಸುವ, ಆಧಾರವಾಗಿರುವ ಸಮತ್ವ. ಮುಕ್ತನಾದವನಲ್ಲಿ ಇರುವ ಬ್ರಹ್ಮಸದೃಶವಾದ ಶಾಂತಿಯನ್ನು ಆಧಾರವನ್ನಾಗಿ ಹೊಂದಿರುತ್ತದೆ. ಮುಕ್ತಾವಸ್ಥೆಯಲ್ಲಿರುವ ಪರಮಾತ್ಮನ ಕರ್ಮವು ವಿಶ್ವವ್ಯಾಪಕವಾದುದು. ಬಂಧ ವಿಲ್ಲದುದು ಮತ್ತು ಸಮತ್ವದಿಂದ ಕೂಡಿರುವುದು; ಅವನ ಶಾಂತಿಯಿಂದ ಉಂಟಾ ಗುವ ಶಕ್ತಿಯನ್ನು ಈ ಕರ್ಮವು ಪ್ರಸರಿಸುತ್ತದೆ. ಈ ರೀತಿಯಲ್ಲಿ ದಿವ್ಯಜ್ಞಾನ ಮತ್ತು ಕರ್ಮ, ಇವು ಒಂದಾಗುತ್ತವೆ.

ಈ ವಿಧವಾದ ಅಭಿಪ್ರಾಯಗಳು ಇತರ ದರ್ಶನಗಳಲ್ಲಿ ಕಂಡುಬಂದರೂ ಗೀತೆಯಲ್ಲಿ ಅವುಗಳಿಗೆ ಎಷ್ಟು ಆಳವಾದ ಮತ್ತು ವ್ಯಾಪಕವಾದ ಅರ್ಥವಿದೆ ಯೆಂಬುದು ಇಲ್ಲಿ ವ್ಯಕ್ತವಾಗುತ್ತದೆ. ನಾವು ಹಿಂದೆ ಹೇಳಿದಂತೆ ಸಹಿಷ್ಣುತೆ, ವಿಚಾರ ದಿಂದ ಉಂಟಾದ ಔದಾಸೀನ್ಯ ಮತ್ತು ಭಗವಂತ ಇಚ್ಛೆಯಿದ್ದಂತಾಗಲಿ ಎಂಬ ಮನೋಭಾವ ಈ ಮೂರು ಒಂದೊಂದೂ ಒಂದು ವಿಧವಾದ ಸಮತ್ವಕ್ಕೆ ಆಧಾರ ಭೂತವಾಗಿವೆ. ಗೀತೆಯಲ್ಲಿ ಹೇಳಿರುವ ಬ್ರಹ್ಮಜ್ಞಾನವು ಇವು ಮೂರನ್ನು ಸಮನ್ವಯ ಮಾಡುವುದಲ್ಲದೆ ಅವೆಲ್ಲಕ್ಕೂ ಇನ್ನೂ ಬಹಳ ಆಳವಾದ ಮತ್ತು ವ್ಯಾಪಕವಾದ ಅರ್ಥವನ್ನು ಕೊಡುತ್ತದೆ. ಸಹಿಷ್ಣುತೆಯಿಂದ ಬರುವ ಸಮತ್ವವೆಂದರೆ ಎಲ್ಲವನ್ನೂ ಎದೆಗುಂದದೆ ಸಹಿಸುವುದರಿಂದ ನಮ್ಮ ಇಂದ್ರಿಯಗಳನ್ನೂ, ಮನಸ್ಸನ್ನೂ ಸ್ವಾಧೀನದಲ್ಲಿಟ್ಟುಕೊಳ್ಳುವ ಶಕ್ತಿ; ನಮ್ಮ ಸ್ವಭಾವದೊಡನೆ ಹೋರಾಡುವುದರಿಂದ ಬಂದ ಸಮತ್ವ; ಈ ಸಮಸ್ಥಿತಿಯನ್ನು ಉಳಿಸಿಕೊಳ್ಳಲು ನಮ್ಮ ನಿಜವಾದ ಉದ್ದೇಶಕ್ಕೆ ವಿರೋಧವಾದ ನಮ್ಮ ನೀಚ ಸ್ವಭಾವದ ಪ್ರಯತ್ನಗಳನ್ನು ಸದಾ ಜಾಗರೂಕತೆಯಿಂದ ತಡೆಗಟ್ಟಬೇಕು. ಹೀಗೆ ಮಾಡುವುದರಿಂದ ಶ್ರೇಷ್ಠವಾದ ಶಾಂತಿಯೂ ತೀವ್ರನಿಷ್ಠೆಯಿಂದ ಕೂಡಿದ ಸುಖವೂ ಉಂಟಾಗುವುದೇನೊ ನಿಜ; ಆದರೆ ಈ ಸುಖವು ಯಾವ ನಿಯಮಕ್ಕೂ ಒಳಪಡದ, ಶುದ್ಧವಾದ, ಅಮಿಶ್ರವಾದ ಮತ್ತು ಆತ್ಮಸ್ವಭಾವಕ್ಕೆ ಸಹಜವಾದ ಆನಂದವಲ್ಲ. "ಇಂತಹ ಯೋಗಿಯು ಯಾವ ರೀತಿ ವರ್ತಿಸಿದರೂ ನನ್ನಲ್ಲಿಯೆ ಇರುತ್ತಾನೆ" ಎಂದು ಗೀತೆಯು ಹೇಳುವ ಸ್ಥಿತಿಯಲ್ಲಿ ಪೂರ್ಣತೆ ಮತ್ತು ಸಮತ್ವ ಇವು ಕಷ್ಟಪಟ್ಟು ಸಾಧಿಸಿದುವುಗಳಲ್ಲ, ಸಹಜವಾಗಿ ಬಂದವು; ಇವನ್ನು ಉಳಿಸಿಕೊಳ್ಳಲು ಯಾವವಿಧವಾದ ಪ್ರಯತ್ನವೂ ಬೇಕಿಲ್ಲ; ಅದು ಅವನ ಸ್ವಭಾವವೆ ಆಗಿದೆ. ನಮ್ಮ ಕೀಳುಸ್ವಭಾವದೊಡನೆ ಹೋರಾಟ ಮತ್ತು ಸಹಿಷ್ಣುತೆಗಳು ಸಾಧನೆಯ ಮೊದಲ ಹೆಜ್ಜೆಗಳಾಗಬಹುದೆಂಬುದನ್ನು ಗೀತೆಯು ಒಪ್ಪುತ್ತದೆ. ಇಂತಹ ಸಾಧನೆಯಿಂದ ನಮ್ಮ ಪ್ರಕೃತಿಯನ್ನು ಸ್ವಲ್ಪಮಟ್ಟಿಗೆ ವಶಪಡಿಸಕೊಳ್ಳ ಬಹುದಾದದರೂ ನಾವು ಈಶ್ವರನೊಂದಿಗೆ ಒಂದಾದಾಗ ಮಾತ್ರ ಇದರ ಮೇಲೆ ನಮಗೆ ಸಂಪೂರ್ಣವಾದ ಒಡೆತನವು ಬರುತ್ತದೆ; ಹೀಗಾಗಬೇಕಾದರೆ ನಮ್ಮ ಪ್ರತ್ಯೇಕವಾದ ಜೀವಾತ್ಮನು ಪರಮಾತ್ಮನಲ್ಲಿ ಲೀನವಾಗಬೇಕು; ನಮ್ಮ ಸಂಕಲ್ಪವು ಈಶ್ವರ ಸಂಕಲ್ಪದೊಡನೆ ಒಂದಾಗಬೇಕು. ಪ್ರಕೃತಿ ಮತ್ತು ಪ್ರಕೃತಿವ್ಯಾಪಾರಗಳಿಗೆ ಒಬ್ಬ ಒಡೆಯನಿದ್ದಾನೆ; ಪ್ರಕೃತಿಯಲ್ಲಿದ್ದರೂ ಇವನು ಪ್ರಕೃತಿಗೆ ಅತೀತನಾಗಿದ್ದಾನೆ. ಇವನೆ ವಿಶ್ವಾಂತರ್ಯಾಮಿಯಾದ ಪರಮಾತ್ಮ. ಇವನಲ್ಲಿ ಒಂದಾದರೆ ನಾವೂ ದೈವೀ

ಸ್ಥಿತಿಯನ್ನು, ಬ್ರಾಹ್ಮೀಸ್ಥಿತಿಯನ್ನು ಪಡೆಯುತ್ತೇವೆ. ಪರಮಾತ್ಮನೊಡನೆ ಐಕ್ಯ ವಾಗುವುದರಿಂದ ನಿರತಿಶಯವಾದ ಸ್ವಾತಂತ್ರ್ಯವನ್ನೂ ಪ್ರಭುತ್ವವನ್ನೂ ಪಡೆಯು ತ್ತೇವೆ. ಸಹಿಷ್ಣುತೆಯಿಂದ ಸಮತ್ವವನ್ನು ಪಡೆಯಬೇಕೆನ್ನುವ ಸ್ಟಾಯಿಕ್ ದಾರ್ಶ ನಿಕರ ಆದರ್ಶಪುರುಷನು ತನ್ನ ಇಂದ್ರಿಯಾದಿಗಳನ್ನು ವಶಮಾಡಿಕೊಳ್ಳುವುದರ ಮೂಲಕ ಬಾಹ್ಯಪ್ರಪಂಚವನ್ನೆ ವಶಮಾಡಿಕೊಂಡಿರುವ ರಾಜರ್ಷಿ. ಮೇಲು ನೋಟಕ್ಕೆ ಈ ಆದರ್ಶಪುರುಷನು ವೇದಾಂತದ ಸ್ವರಾಟ್ (ಆತ್ಮನನ್ನು ವಶಮಾಡಿ ಕೊಂಡಿರುವವನು) ಮತ್ತು ಸಾಮ್ರಾಟ್ (ಎಲ್ಲವನ್ನೂ ವಶಮಾಡಿಕೊಂಡಿರುವವನು) ಎಂಬ ಆದರ್ಶಪುರುಷನನ್ನು ಹೋಲುತ್ತಾನಾದಾಗ್ಯೂ ಆ ಮಟ್ಟಕ್ಕಿಂತ ಕೆಳಗಿನ ಮಟ್ಟದಲ್ಲಿದ್ದಾನೆ. ಸ್ಟಾಯಿಕ್ ಆದರ್ಶಪುರುಷನ ಪ್ರಭುತ್ವವು ಅವನು ತನ್ನ ಮೇಲೂ ಬಾಹ್ಯಸನ್ನಿವೇಶದ ಮೇಲೂ ಪ್ರಯೋಗಿಸಿದ ಬಲಾತ್ಕಾರದಿಂದ ನಿಂತಿದೆ. ಯೋಗಿಯ ಸರ್ವಸ್ವತಂತ್ರವಾದ ಪ್ರಭುತ್ವವಾದರೊ ಸ್ವಾಭಾವಿಕವಾದುದು; ಅವನ ದೈವೀಸ್ವಭಾವಕ್ಕೆ ಸಹಜವಾದ ಸಾಮರ್ಥ್ಯದಿಂದಲೂ, ಭೇದರಹಿತವಾದ ಮತ್ತು ವಿಶ್ವವ್ಯಾಪಕವಾದ ದೈವೀಸ್ವಭಾವದೊಡನೆ ಒಂದಾಗಿರುವುದರಿಂದಲೂ, ಪ್ರಕೃತಿಯ ಮೂಲಕ ಕೆಲಸ ಮಾಡುತ್ತಿದ್ದರೂ ಅದಕ್ಕೆ ಅತೀತವಾಗಿರುವುದ ರಿಂದಲೂ ಇವನ ಪ್ರಭುತ್ವವು ನಿಂತಿದೆ. ಎಲ್ಲ ವಸ್ತುಗಳೊಡನೆ ಇವನ ಆತ್ಮವು ಒಂದಾಗಿರುವುದರಿಂದ (**ಸರ್ವ ಭೂತಾತ್ಮ ಭೂತಾತ್ಮಾ**) ಅವನು ಎಲ್ಲಕ್ಕೂ ಪ್ರಭು. ಒಂದು ರೂಪಕವನ್ನು ಕೊಡುವುದಾದರೆ, (ಸ್ಟಾಯಿಕ್) ಸಹಿಷ್ಣುತೆಯಿಂದ ಹೊಂದಿದ ಸ್ವಾತಂತ್ರ್ಯವು ಗುಲಾಮಗಿರಿಯಿಂದ ಬಿಡುಗಡೆ ಹೊಂದಿದವನ ಸ್ವಾತಂತ್ರ್ಯಕ್ಕೆ ಸದೃಶವಾಗಿದೆ. ಹಿಂದೆ ಯಾರ ಅಧೀನದಲ್ಲಿ ಇವನಿದ್ದನೊ ಅವರ ಒಡೆತನವು ಈಗಲೂ ಇದೆ. ಇವನ ಕಷ್ಟಕ್ಕೆ ಪ್ರತಿಫಲ ವಾಗಿ ಪ್ರಕೃತಿಯಿಂದಲೆ ಇವನಿಗೆ ಸ್ವಲ್ಪಮಟ್ಟಿನ ಸ್ವಾತಂತ್ರ್ಯವು ಕೊಡಲ್ಪಟ್ಟಿದೆ. ಗೀತೆಯಲ್ಲಿ ಹೇಳಿರುವ ನಿಜವಾದ ಯೋಗಿಯ ಸ್ವಾತಂತ್ರ್ಯವು ಜನ್ಮದಿಂದಲೆ ಸ್ವತಂತ್ರನಾದ (ಗುಲಾಮನಲ್ಲದ) ಮನುಷ್ಯನ ಸ್ವಾತಂತ್ರ್ಯದಂತೆ; ದೈವೀಸ್ವಭಾವ ದಲ್ಲಿ ಜನ್ಮ ತಾಳಿರುವುದರಿಂದ ಬಂದಿರುವ ಸ್ವಾತಂತ್ರ್ಯ; ಇದು ಸ್ವತಃಸಿದ್ಧವಾದುದು; ಇದಕ್ಕೆ ಬೇರೆ ಯಾವ ಆಸರೆಯೂ ಬೇಕಿಲ್ಲ. ಮುಕ್ತನಾದವನು ಏನನ್ನಾದರೂ ಮಾಡಲಿ, ಹೇಗಾದರೂ ಜೀವಿಸಲಿ, ಅವನು ಈಶ್ವರನಲ್ಲಿಯೆ ಇರುತ್ತಾನೆ. ಇವನು ಮನೆಯಲ್ಲಿರುವ ಮುದ್ದುಮಗನಂತೆ; ಅವನು ಏನು ಮಾಡಿದರೂ ತಪ್ಪಲ್ಲ, ಅಪರಾಧವಲ್ಲ; ಅವನು ಮಾಡುವುದೆಲ್ಲವೂ ಪರಿಪೂರ್ಣ; ಸೌಂದರ್ಯಮಯ;

ಆನಂದಮಯ ಮತ್ತು ಪ್ರೇಮಮಯ ಅವನು ಅನುಭವಿಸುವ ರಾಜ್ಯವು ಸುಖ ಸಂತೋಷಮಯವಾದುದು ; ಒಬ್ಬ ದಾರ್ಶನಿಕನು ಹೇಳಿರುವಂತೆ ಇದು ಶಿಶುವಿನ ಪ್ರಪಂಚಕ್ಕೆ ಸದೃಶವಾಗಿದೆ.

ಈ ಲೋಕದ ಜೀವನದ ನಿಜವಾದ ಸ್ವರೂಪ, ಬಾಹ್ಯವಿಷಯಗಳ ಅನಿತ್ಯತೆ, ನಮಗೆ ಕಂಡುಬರುವ ಭೇದಗಳು ಮತ್ತು ವ್ಯತ್ಯಾಸಗಳು ನಿಸ್ಸಾರವಾದುದೆಂಬ ತಿಳಿವಳಿಕೆ, ಆಂತರವಾದ ಪ್ರಸನ್ನತೆ, ಶಾಂತಿ, ಜ್ಞಾನ ಮತ್ತು ಸ್ವಾವಲಂಬನಗಳೆ ಶ್ರೇಷ್ಠವೆಂಬ ಅರಿವು, ಇವೆಲ್ಲವನ್ನೂ ದಾರ್ಶನಿಕನ ಜ್ಞಾನವು ಒಳಗೊಂಡಿದೆ. ಆದರೆ ಇದು ತಾಟಸ್ಥ್ಯದಿಂದ, ಔದಾಸೀನ್ಯದಿಂದ ಉಂಟಾದ ಸಮತ್ವ. ಇದರಿಂದ ಉತ್ತಮವಾದ ಶಾಂತಿಯುಂಟಾದರೂ ಆಧ್ಯಾತ್ಮಿಕ ಆನಂದವುಂಟಾಗುವುದಿಲ್ಲ. ಇದು ಸ್ವಾತಂತ್ರ್ಯವಾದರೂ ಪ್ರಪಂಚದ ಸಂಪರ್ಕದಿಂದ ದೂರವಾಗಿರುವ ಸ್ವಾತಂತ್ರ್ಯ; ಸಾಗರದಿಂದ ತಪ್ಪಿಸಿಕೊಂಡು ಬೆಟ್ಟದ ತುದಿಯಲ್ಲಿದ್ದುಕೊಂಡು ಇತರರು ಸಾಗರದಲ್ಲಿ ತೊಳಲುತ್ತಿರುವುದನ್ನು ಉದಾಸೀನನಾಗಿ ನೋಡುತ್ತಿರುವಂತೆ ಈ ದಾರ್ಶನಿಕನು ಸಂಸಾರದಿಂದ ದೂರವಾಗಿ ಅದರಲ್ಲಿ ತೊಳಲುವವರ ಕಷ್ಟಸುಖಗಳನ್ನು ಉದಾಸೀನತೆಯಿಂದ ನೋಡುತ್ತಾನೆ ಈ ಸಮತ್ವವು ವಾಸ್ತವವಾಗಿ ನಿಷ್ಪ್ರಯೋಜನವಾದುದೆನ್ನಬಹುದು. ಪ್ರಪಂಚವು ಅಸಾರವೆಂಬ ಜ್ಞಾನದಿಂದ ಹುಟ್ಟಿದ ಉದಾಸೀನತೆಯಿಂದ ಪ್ರಾರಂಭದಲ್ಲಿ ಸ್ವಲ್ಪ ಪ್ರಯೋಜನವುಂಟೆಂದು ಗೀತೆಯು ಒಪ್ಪಿಕೊಳ್ಳುತ್ತದೆ. ಆದರೆ ಈ ಔದಾಸೀನ್ಯಕ್ಕೂ, ತತ್ವಜ್ಞಾನಿಯ ನಿರ್ಲಿಪ್ತತೆಗೂ ಬಹಳ ದೂರವಿದೆ. (ಉತ್ + ಆಸೀನ) ಉದಾಸೀನನೆಂದರೆ ವಾಸ್ತವವಾಗಿ ಮೇಲೆ ಕುಳಿತಿರುವವನೆಂದರ್ಥ; ಭಗವಂತನು ಮೇಲಿನ ಲೋಕದಲ್ಲಿದ್ದು ಈ ಪ್ರಪಂಚದ ಆವಶ್ಯಕತೆಯಿಲ್ಲದಿದ್ದರೂ ಹೇಗೆ ಎಲ್ಲರಿಗೂ ಆಧಾರಭೂತನಾಗಿದ್ದಾನೆಯೊ ಹಾಗೆಯೆ ತತ್ವಜ್ಞಾನಿಯೂ ಕೂಡ ಸಂಗವಿಲ್ಲದೆಯೆ ಎಲ್ಲ ಜೀವಿಗಳಿಗೂ ಆಧಾರನಾಗಿ ಸಹಾಯಮಾಡುತ್ತಾನೆ. ಎಲ್ಲ ಭೂತಗಳೊಡನೆ ಐಕ್ಯಭಾವವಿರುವುದೆ ಈ ಸಮತ್ವಕ್ಕೆ ಆಧಾರ. ದಾರ್ಶನಿಕನ ಸಮತ್ವದಲ್ಲಿರುವ ಕೊರತೆಗಳನ್ನು ಇದು ನಿವಾರಿಸುತ್ತದೆ ; ಇದರ ಹೃದಯವು ಶಾಂತಿಮಾತ್ರವಲ್ಲದೆ ಪ್ರೇಮವೂ ಆಗಿದೆ. ಸಮಸ್ತ ಭೂತಗಳನ್ನೂ ಪರಮಾತ್ಮನಲ್ಲಿಯೆ ನೋಡುತ್ತಾನೆ ; ಎಲ್ಲ ಜೀವಿಗಳ ಆತ್ಮನೊಡನೆ ಒಂದಾಗಿದ್ದಾನೆ ; ಆದುದರಿಂದಲೆ ಇವನಿಗೆ ಎಲ್ಲರೊಡನೆಯೂ ಸಂಪೂರ್ಣವಾದ ಸಹೃದಯತೆ ಅನುಕಂಪಗಳಿವೆ ; ಯಾರನ್ನೂ ಬಿಡದೆ, ಎಂದರೆ ತನಗೆ ಪ್ರಿಯರಾದವರನ್ನು, ಒಳ್ಳೆಯವರನ್ನು ಕುರಿತು ಮಾತ್ರವಲ್ಲದೆ, ಎಲ್ಲರಲ್ಲಿಯೂ ಸಹೃದಯತೆ ಇದೆ. ಎಷ್ಟೇ ಕೆಟ್ಟವನಾಗಲಿ, ಪತಿತನಾಗಲಿ,

ಪಾಪಿಯಾಗಲಿ ಅಥವಾ ಕುರೂಪಿಯಾಗಲಿ, ಅವರೆಲ್ಲರೂ ಇವನ ಸರ್ವವ್ಯಾಪಿಯಾದ ಪೂರ್ಣವಾದ ಅನುಕಂಪ ಮತ್ತು ಏಕತ್ವಭಾವನೆಗಳಿಂದ ಹೊರಗೆ ಇಲ್ಲ. ಇದು ಎಲ್ಲರನ್ನೂ ಒಳಗೊಂಡಿದೆ. ದ್ವೇಷ, ಕೋಪ ಮತ್ತು ಇತರರಲ್ಲಿ ದೋಷಗಳನ್ನೆ ಕಾಣುವ ಮನೋಭಾವಕ್ಕೆ ಇಲ್ಲಿ ಎಡೆಯೆ ಇಲ್ಲ. ಹಾಗೆಯೆ ಎಲ್ಲರಿಂದಲೂ ದೂರ ವಾಗಿರುವುದು, ತಾತ್ಸಾರ, ಗರ್ವ ಮತ್ತು ತಾನೆ ಶ್ರೇಷ್ಠನೆಂಬ ಮನೋಭಾವ, ಇವುಗಳಿಗೂ ಕೂಡ ಅವಕಾಶವಿಲ್ಲ. ಅಜ್ಞಾನದಲ್ಲಿ ಮುಳುಗಿರುವ ಮನುಷ್ಯನ ಮೇಲೆ ದಿವ್ಯವಾದ ದಯೆಯೂ, ಅವನಿಗೆ ಸುಖ, ಶಕ್ತಿ ಮತ್ತು ಜ್ಞಾನವನ್ನು ಕೊಡಬೇಕೆಂಬ ದಿವ್ಯವಾದ ಸಂಕಲ್ಪವೂ ಇವೆ; ಆ ಮನುಷ್ಯರಲ್ಲಿರುವ ಆತ್ಮನ ವಿಷಯದಲ್ಲಿ ಭಕ್ತಿ ಭಾವನೆಯೂ, ಪ್ರೇಮವೂ ಇವೆ; ಸಾಧುಸಂತರಲ್ಲಿ ಹೇಗೋ ಹಾಗೆ ಕಳ್ಳ, ವೇಶ್ಯೆ ಅಥವಾ ಚಂಡಾಲರಲ್ಲಿಯೂ ಪ್ರಿಯನಾದ ಆತ್ಮನು ಇದ್ದುಕೊಂಡು “ಇದೂ ನಾನೆ” ಎನ್ನುತ್ತಾನೆ. “ಸರ್ವಭೂತಗಳಲ್ಲಿಯೂ ನನ್ನನ್ನೆ ಕಂಡುಕೊಂಡು ಪ್ರೀತಿಸುವವನು ಯಾವಾಗಲೂ ನನ್ನಲ್ಲಿಯೇ ಇರುತ್ತಾನೆ” ಎಂದು ಗೀತೆಯಲ್ಲಿ ಹೇಳಿದೆ. ವಿಶ್ವ ಪ್ರೇಮವನ್ನು ಹೊರಸೂಸುವ ಇದಕ್ಕಿಂತ ಶಕ್ತಿಯುತವಾದ ಮಾತನ್ನು ಯಾರು ಹೇಳಲು ಸಾಧ್ಯ?

ಎಲ್ಲ ಕಷ್ಟಗಳನ್ನೂ ಶಾಂತವಾಗಿ ಸಹಿಸುವುದು, ಎಲ್ಲವನ್ನೂ ಈಶ್ವರೇಚ್ಛೆ ಯೆಂದು ಸ್ವಾಗತಿಸುವ ಸಹಿಷ್ಣುತೆಯೂ ಕೂಡ ಒಂದು ವಿಧವಾದ ಸಮತ್ವ. ಗೀತೆಯಲ್ಲಿ ಈ ಭಾವವು ಪರಿಪೂರ್ಣತೆಯನ್ನು ಹೊಂದಿ ನಮ್ಮ ಸರ್ವಸ್ವವನ್ನೂ ಪರಮಾತ್ಮನಿಗೆ ಅರ್ಪಣೆಮಾಡುವ ರೂಪವನ್ನು ತಾಳಿದೆ. ಇದು ಕೈಯಲ್ಲಾಗದೆ ಶರಣುಹೊಂದುವುದಲ್ಲ; ಸ್ವೇಚ್ಛೆಯಿಂದ, ಪ್ರಯತ್ನಪೂರ್ವಕವಾಗಿ ಆತ್ಮಾರ್ಪಣೆ ಮಾಡಿಕೊಳ್ಳುವುದು. ಎಲ್ಲದರಲ್ಲಿಯೂ ಭಗವತ್ಸಂಕಲ್ಪವಿದೆ ಎಂದು ಅರಿತು, ಒಪ್ಪಿ ಕೊಳ್ಳುವುದು ಮಾತ್ರವಲ್ಲ; ಕರ್ಮಗಳ ಅಧ್ಯಕ್ಷನಾದ ಭಗವಂತನ ಸಂಕಲ್ಪವನ್ನು ನಡೆಸುವುದಕ್ಕಾಗಿ ನಮ್ಮ ಇಚ್ಛೆಯನ್ನು ಒಂದು ಸಾಧನವನ್ನಾಗಿ ಮಾಡುವುದು. ನಾವು ಪರಮಾತ್ಮನ ಅಡಿಯಾಳುಗಳೆಂಬ ಭಾವನೆಯಿಂದಲ್ಲ; ನಮ್ಮ ಮನಸ್ಸು, ಕರ್ಮಗಳು ಮತ್ತು ಮಮಕಾರವನ್ನು ಅವನಲ್ಲಿ ಸಂಪೂರ್ಣವಾಗಿ ಅರ್ಪಿಸಿ, ನಾವು ಅವನಲ್ಲಿ ಒಂದಾಗುವುದು. ಅಹಂಕಾರರಹಿತವಾದ ನಮ್ಮ ಪ್ರಕೃತಿಯು ಕೇವಲ ಒಂದು ಸಾಧನವಾಗಬೇಕು. ಒಳ್ಳೆಯದು, ಕೆಟ್ಟದ್ದು; ಹಿತಾಹಿತಗಳು; ಶುಭಾಶುಭ ಗಳು ಈ ಎಲ್ಲ ಫಲಗಳನ್ನೂ ಕರ್ಮಗಳ ಪ್ರಭುವಾದ ಪರಮಾತ್ಮನಿಗೆ ಅರ್ಪಿಸುವುದ ರಿಂದ, ಕಷ್ಟದುಃಖಗಳನ್ನು ಸಹಿಸುವುದಕ್ಕೆ ಸಹಾಯವಾಗುವುದು ಮಾತ್ರವಲ್ಲ,

ಕಷ್ಟದುಃಖಗಳೆ ನಿರ್ನಾಮವಾಗುತ್ತವೆ. ನಮ್ಮ ಮನಸ್ಸಿನಲ್ಲಿ ಮತ್ತು ಹೃದಯದಲ್ಲಿ ಸಮತ್ವವು ನೆಲೆಸುತ್ತದೆ. ಸಾಧನಭೂತನಾದ ಈತನಲ್ಲಿ ವೈಯಕ್ತಿಕವಾದ ಇಚ್ಛೆಯೂ, ಸಂಕಲ್ಪವೂ ಇರುವುದಿಲ್ಲ. ಸರ್ವವ್ಯಾಪಿಯಾದ, ಸರ್ವಜ್ಞನಾದ ಮತ್ತು ಸರ್ವಶಕ್ತನಾದ ಭಗವಂತನ ಸಂಕಲ್ಪದಲ್ಲಿ ಎಲ್ಲವೂ ಮುಂಚೆಯೆ ನಿಯಾಮಕವಾಗಿದೆಯೆಂಬುದೂ, ಈ ಸಂಕಲ್ಪದ ನೆರವೇರುವಿಕೆಯನ್ನು ಮನುಷ್ಯನ ವೈಯಕ್ತಿಕ ಇಚ್ಛೆಯು ಬದಲಾಯಿಸಲಾರದೆಂಬುದೂ ಇವನಿಗೆ ತಿಳಿದಿದೆ. ಇಂತಹವನಲ್ಲಿ ಉಂಟಾಗುವ ಅಂತಿಮ ಮನೋಭಾವವನ್ನು ಗೀತೆಯ ಕೊನೆಯ ಅಧ್ಯಾಯದಲ್ಲಿ ಶ್ರೀಕೃಷ್ಣನು ಹೀಗೆ ನಿರೂಪಿಸಿದ್ದಾನೆ: “ ನನ್ನ ದಿವ್ಯದೃಷ್ಟಿಯಲ್ಲಿ, ನನ್ನ ಸಂಕಲ್ಪದ ಪ್ರಕಾರ ಎಲ್ಲವೂ ಮೊದಲೆ ಆಗಿಹೋಗಿದೆ; ಎಲೈ ಅರ್ಜುನನೆ, ನೀನು ನಿಮಿತ್ತ ಮಾತ್ರನಾಗು ” ಇಂತಹ ವರ್ತನೆಯಿಂದ ಅವನ ವೈಯಕ್ತಿಕ ಇಚ್ಛೆಯು ಈಶ್ವರ ಸಂಕಲ್ಪದೊಡನೆ ಒಂದಾಗುತ್ತದೆ; ಜ್ಞಾನವು ಬೆಳೆದಂತೆ, ಅವನು ಈಶ್ವರನ ಸಂಕಲ್ಪವೂ ಮತ್ತು ಶಕ್ತಿಯೂ ಕೆಲಸಮಾಡಲು ನಿರ್ದುಷ್ಟವಾದ ಸಾಧನವಾಗುತ್ತಾನೆ ಪರಿಪೂರ್ಣವಾದ, ನಿಶ್ಶೇಷವಾದ ಆತ್ಮಾರ್ಪಣದಿಂದ ಬರುವ ಸಮತ್ವ, ಪರಮಾತ್ಮನ ಶಕ್ತಿ ಜ್ಞಾನಗಳು ಯಾವ ತಡೆಯೂ ಇಲ್ಲದಂತೆ ಹರಿಯುತ್ತಿರುವ ಮನೋಭಾವ, ಈಶ್ವರಸಂಕಲ್ಪವು ಪ್ರಪಂಚದಲ್ಲಿ ನೆರವೇರುವಂತೆ ವಿಶೇಷವಾಗಿ ಸಹಕರಿಸುವ ಬಾಹ್ಯ ವರ್ತನೆ, ಇವೆಲ್ಲವೂ ಸರ್ವವ್ಯಾಪಿಯಾದ ಭಗವಂತನೊಡನೆ ಒಂದಾಗಿರುವ ವ್ಯಕ್ತಿಯ ಲಕ್ಷಣಗಳು.

ನಮ್ಮನ್ನು ಕುರಿತು ಇತರರು ಮಾಡುವ ವ್ಯವಹಾರಗಳಲ್ಲಿಯೂ ಸಮತ್ವವೆ ಕಾಣುವುದು. ಎಲ್ಲರಲ್ಲಿಯೂ ಆತ್ಮನು ಅಂತರ್ಯಾಮಿಯಾಗಿದ್ದಾನೆಂಬ ಜ್ಞಾನದಿಂದ ಬರುವ ಏಕತ್ವಕ್ಕೆ, ಪ್ರೇಮ ಮತ್ತು ಅನುಕಂಪಗಳಿಗೆ, ಇತರರು ಮಾಡುವ ಯಾವ ಕಾರ್ಯದಿಂದಲೂ ಭಂಗಬರುವುದಿಲ್ಲ. ಹಾಗೆಂದಮಾತ್ರಕ್ಕೆ ಎಲ್ಲವನ್ನೂ ಶಾಂತರೀತಿಯಿಂದ ಸಹಿಸುವುದು, ಎಲ್ಲಕ್ಕೂ ತಲೆಬಾಗುವುದು, ಯಾವುದನ್ನೂ ಎದುರಿಸದೆ ಇರುವುದು, ಇವು ಆವಶ್ಯಕವಾಗಿ ಇರಬೇಕೆಂದಲ್ಲ. ಇದು ಸಾಧ್ಯವೂ ಅಲ್ಲ; ಏತಕ್ಕೆಂದರೆ ನಾವು ಯಾವಾಗಲೂ ಈಶ್ವರಸಂಕಲ್ಪವು ನೆರವೇರಲು ಉಪಾಧಿಗಳಾಗಿದ್ದರೆ, ಪ್ರಪಂಚದಲ್ಲಿ ಈಶ್ವರಸಂಕಲ್ಪಕ್ಕೆ ಮತ್ತು ಅಹಂಭಾವದಿಂದ ಕೂಡಿದ ವ್ಯಕ್ತಿಗಳ ಸಂಕಲ್ಪಕ್ಕೆ, ಇವೆರಡಕ್ಕೂ ಉಂಟಾಗುವ ಹೋರಾಟದಲ್ಲಿ ಭಾಗವಹಿಸಬೇಕಾಗುತ್ತದೆ. ಆದುದರಿಂದಲೆ “ ಎದುರಿಸು, ಯುದ್ಧಮಾಡು, ಗೆಲ್ಲು ” ಎಂದು ಭಗವಂತನು ಅರ್ಜುನನಿಗೆ ಉಪದೇಶಿಸಿದ್ದಾನೆ.

ಆದರೆ ವೈಯಕ್ತಿಕವಾದ ಆಸೆ, ದ್ವೇಷ, ವೈರ ಅಥವಾ ಜಿದ್ದು ಇವು ಯಾವುವೂ ಇಲ್ಲದೆ ಯುದ್ಧಮಾಡಬೇಕು ; ಏತಕ್ಕೆಂದರೆ ಮುಕ್ತನಾದವನಿಗೆ ಈ ಭಾವನೆಗಳಿರಲು ಸಾಧ್ಯವಿಲ್ಲ. ಇವನು ಸರ್ವವ್ಯಾಪಿಯಾದ ಪರಮಾತ್ಮನಲ್ಲಿ ಒಂದಾಗಿರುವುದರಿಂದ ಲೋಕಸಂಗ್ರಹಕ್ಕಾಗಿ ಕೆಲಸಮಾಡಬೇಕೆಂದು ಸಿದ್ಧವಾಗುತ್ತದೆ. ಲೋಕಸಂಗ್ರಹ ವೆಂದರೆ ಲೋಕದ ಕಾರ್ಯವೆಂದು ಅರ್ಥವಷ್ಟೆ ; ಪರಮಾತ್ಮನನ್ನು ಸೇರುವ ದಾರಿ ಯಲ್ಲಿಯೆ ಜನರು ಇರುವಂತೆ ಮತ್ತು ಮುಂದೆ ಹೋಗುವಂತೆ ಮಾರ್ಗದರ್ಶಕ ನಾಗಿರಬೇಕು. ಹೀಗೆ ಹೋರಾಡುವಾಗಲೂ, ಎಲ್ಲರೊಡನೆ–ಈಗ ನಮಗೆ ವಿರೋಧ ವಾಗಿರುವವರೊಡನೆಯೂ ಕೂಡ–ನಮಗಿರುವ ಐಕ್ಯಭಾವಕ್ಕೆ ಲೋಪಬರುವುದಿಲ್ಲ. ಪರಮಾತ್ಮನೊಡನೆ ಒಂದಾಗುವುದೆ ಎಲ್ಲರ ಗುರಿಯೂ ಆಗಿದೆ; ಅಜ್ಞಾನ ಮತ್ತು ಅಹಂಕಾರಗಳಿಂದ ಕೂಡಿ, ಈಶ್ವರಸಂಕಲ್ಪವನ್ನು ಬಾಹ್ಯವಾಗಿ ಪ್ರತಿಭಟಿಸುವವರೂ ಕೂಡ* ತಮಗೆ ತಿಳಿಯದೆಯೆ ಪರಮಾತ್ಮನೊಡನೆ ಒಂದಾಗಬೇಕೆಂಬ ಗುರಿಯನ್ನೆ ಹೊಂದಿದ್ದಾರೆ. ಇಂತಹವರಿಗೆ ನಾವು ಮಾಡಬಹುದಾದ ಉತ್ತಮಸಹಾಯವೆಂದರೆ ಇವರನ್ನು ಪ್ರತಿಭಟಿಸುವುದು ಮತ್ತು ಸೋಲಿಸುವುದು. ಈ ದೃಷ್ಟಿಯಿಲ್ಲದೆ ಕಣ್ಣು ಮುಚ್ಚಿಕೊಂಡು ಸಮತ್ವವನ್ನು ಸರ್ವತ್ರ ಅನುಷ್ಠಾನಮಾಡಲು ಯತ್ನಿಸಿದರೆ ಇತರ ರೊಡನೆ ವ್ಯವಹಾರಮಾಡುವುದು ಕಷ್ಟವಾಗುತ್ತದೆ ; ಜ್ಞಾನವು ಉಂಟಾಗುವುದಿಲ್ಲ ; ಇತರರೊಡನೆ ಪ್ರೀತಿವಿಶ್ವಾಸಗಳು ಕುಗ್ಗುತ್ತವೆ. ಈ ಕುಂದನ್ನು ನಿವಾರಣೆಮಾಡು ವುದಕ್ಕಾಗಿಯೆ ಗೀತೆಯು ಸಮತ್ವದ ಸಾರವನ್ನು ಉಳಿಸಿಕೊಂಡು ಈ ದೃಷ್ಟಿಯನ್ನು ಮುಂದಿಡುತ್ತದೆ. ಈ ಸಾರವೇನೆಂದರೆ: ಆತ್ಮನ ಮಟ್ಟದಲ್ಲಿ ಎಲ್ಲರೊಡನೆಯೂ ಒಂದಾಗುವುದು ; ಹೃದಯದ ಮಟ್ಟದಲ್ಲಿ ಸಾರ್ವತ್ರಿಕವಾದ ಮೈತ್ರಿ, ಸ್ನೇಹಭಾವ, ಕರುಣೆ; ಅವರು ಇವರು ಎನ್ನದೆ ಲೋಕಕಲ್ಯಾಣಕ್ಕಾಗಿ, ಇಡೀ ಮಾನವವರ್ಗದ ಹಿತಕ್ಕಾಗಿ, ಈಶ್ವರಸಂಕಲ್ಪಕ್ಕನುಸಾರವಾಗಿ ಕರ್ಮಗಳನ್ನು ಮಾಡಲು ಸ್ವಾತಂತ್ರ್ಯ

ಈಶ್ವರನೊಡನೆ ಒಂದಾಗುವುದು, ಎಲ್ಲ ಭೂತಗಳೊಡನೆಯೂ ಒಂದಾಗು ವುದು, ಎಲ್ಲದರಲ್ಲಿಯೂ ಈಶ್ವರನು ಅಂತರ್ಯಾಮಿಯಾಗಿದ್ದಾನೆಂದು ಅರಿಯುವುದು ಮತ್ತು ಈ ಏಕತ್ವದ ಕಡೆಗೆ ಎಲ್ಲರನ್ನೂ ಒಯ್ಯುವುದು, ಇವೆ ಗೀತೆಯ ಉಪದೇಶ

*ವೈಕುಂಠವಾಸಿಗಳಾಗಿದ್ದ ಜಯವಿಜಯರಿಗೆ ಪರಮಾತ್ಮನು ಆರಿಸಿಕೊಳ್ಳಲು ಅವಕಾಶಕೊಟ್ಟು ಅವರು ಅವನನ್ನು ಎದುರಿಸುವವರಂತೆ ಕಾಣಿಸಿಕೊಂಡು ಅವನ ಸಂಕಲ್ಪವನ್ನು ನೆರವೇರಿಸಿದರು. ಭಾರತಯುದ್ಧದಲ್ಲಿ ಭೀಷ್ಮನೂ ಕೂಡ ಹಾಗೆಯೆ.

ವಾಸುದೇವಯ್ಯ

ದಲ್ಲಿ ಕಂಡುಬರುವ ಜೀವನಸೂತ್ರಗಳು. ಯಾವ ಉಪದೇಶವೂ ಇದಕ್ಕಿಂತ ವ್ಯಾಪಕವಾಗಿ, ವಿಶಾಲವಾಗಿ ಮತ್ತು ಶ್ರೇಷ್ಠವಾಗಿ ಇರಲಾರದು. ತಾನು ಸ್ವಯಂ ಮುಕ್ತನಾದರೂ, ಆ ಒಂದು ವಸ್ತುವಿನಲ್ಲಿದ್ದುಕೊಂಡೆ ಮಾನವಕೋಟಿಯೂ ಆ ಲಕ್ಷ್ಯವನ್ನು ಮುಟ್ಟುವಂತೆ ಸಹಾಯಮಾಡುತ್ತ ಎಲ್ಲ ಕರ್ಮಗಳನ್ನೂ ಈಶ್ವರನಿಗಾಗಿ ಮಾಡುತ್ತ, ಇತರರೂ ಕೂಡ ಹಾಗೆಯೆ ಹರ್ಷದಿಂದ ಈ ಲಕ್ಷ್ಯವನ್ನು ಒಪ್ಪಿಕೊಂಡು ಕರ್ಮಗಳನ್ನು ಮಾಡುವಂತೆ ಪ್ರೇರಿಸಬೇಕೆಂಬುದಕ್ಕಿಂತಲೂ ಉತ್ತಮವಾದ ದಿವ್ಯ ಕರ್ಮಗಳನ್ನು ಮಾಡುವ ವಿಧಾನವು ಯಾವುದಿದೆ! ಈರೀತಿ ಕರ್ಮಗಳನ್ನು ಮಾಡಲು ಸ್ವಾತಂತ್ರ್ಯ ಮತ್ತು ಏಕತ್ವ, ನಮಗೆ ಗೋಚರವಾಗದಿದ್ದರೂ, ಇವೆ ಮನುಷ್ಯನ ಗುರಿ. ಮಾನವವರ್ಗವು ಈ ಗುರಿಯನ್ನು ಮುಟ್ಟಬೇಕೆಂಬುದೆ ಸೃಷ್ಟಿಯ ಸಂಕಲ್ಪ. ಮಾನವಕೋಟಿಯು ಹುಡುಕುತ್ತಿದ್ದರೂ ಲಭಿಸದಿರುವ ಸುಖ ಶಾಂತಿಗಳು ಲಭಿಸಬೇಕಾದರೆ ಈ ಗುರಿಯನ್ನೆ ಅನುಸರಿಸಬೇಕು. ಮಾನವರು ತಮ್ಮ ಕಣ್ಣನ್ನೂ ಹೃದಯವನ್ನೂ ತೆರೆದು, ತಮ್ಮಲ್ಲಿಯೂ, ಸುತ್ತಮುತ್ತಲಿರುವ ಎಲ್ಲರಲ್ಲಿಯೂ, ಎಲ್ಲೆಲ್ಲಿಯೂ ಪರಮಾತ್ಮನು ಇದ್ದಾನೆಂಬುದನ್ನು ನೋಡಿ, ನಾವೆಲ್ಲರೂ ಅವನಲ್ಲಿಯೆ ವಾಸಮಾಡುತ್ತಿದ್ದೇವೆಂದು ಅರಿತುಕೊಳ್ಳಬೇಕು. ಪೃಥಕ್‌ಭಾವದಿಂದ ಕೂಡಿದ ಈ ಕೆಳಗಿನ ಪ್ರಕೃತಿಯು ಸೆರೆಮನೆಯಂತೆ; ಅದರ ಗೋಡೆಯನ್ನು ನಾವು ಒಡೆಯಬೇಕು. ಅಥವಾ ಇದು ಒಂದು ಬಾಲಪಾಠಶಾಲೆಯಂತೆ; ನಾವು ಇದನ್ನು ದಾಟಿ ಮುಂದಕ್ಕೆ ಹೋಗಬೇಕು. ಆಗ ಪ್ರವೃದ್ಧರಾಗಿ ಮುಕ್ತಾತ್ಮರಾಗಬಹುದು. ಎಲ್ಲ ಮನುಷ್ಯರಲ್ಲಿರುವ, ಪ್ರಪಂಚದಲ್ಲೆಲ್ಲ ಅಂತರ್ಯಾಮಿಯಾಗಿರುವ ಆತ್ಮನೊಡನೆ, ಪರಮಾತ್ಮನೊಡನೆ ನಾವು ಒಂದಾಗುವುದೆ ಮುಕ್ತಿಯ, ಪರಿಪೂರ್ಣತೆಯ ರಹಸ್ಯ.

# ಇಪ್ಪತ್ತೊಂದನೆಯ ಪ್ರಕರಣ

## ಪ್ರಕೃತಿಯಲ್ಲಿ ನಿಯತಿ

ನಾವು ಆತ್ಮಜ್ಞಾನವನ್ನು ಪಡೆದು ಭಗವಂತನ ಕೆಲಸಗಳಲ್ಲಿ ಭಾಗಿಗಳಾದಾಗ ಪ್ರಕೃತಿಯ ಕೀಳ್ಮಟ್ಟದ ವ್ಯಾಪಾರಗಳಿಗೆ ಅತೀತರಾಗುತ್ತೇವೆ; ಪ್ರಕೃತಿಗಾಗಲಿ ಅದರ ಗುಣಗಳಿಗಾಗಲಿ ದಾಸರಾಗಿರುವುದಿಲ್ಲ. ಪ್ರಕೃತಿಗೆ ಪ್ರಭುವಾದ ಈಶ್ವರನಲ್ಲಿ ಒಂದಾಗಿರುವುದರಿಂದ ನಾವು ಈಶ್ವರಸಂಕಲ್ಪಕ್ಕಾಗಿ ಪ್ರಕೃತಿಯಲ್ಲಿ ವ್ಯವಹರಿಸಿ

ಕರ್ಮಗಳನ್ನು ಮಾಡಿದರೂ ಕರ್ಮಬಂಧಕ್ಕೆ ಒಳಗಾಗುವುದಿಲ್ಲ. ನಮ್ಮಲ್ಲಿರುವ ಅಂತರಾತ್ಮನ ಲಕ್ಷಣವು ಇದೇಯೆ; ಪ್ರಕೃತಿಯು ಕರ್ಮಗಳಿಗೆ ಅವನು ಪ್ರಭು ವಾಗಿದ್ದು ಈ ಕರ್ಮಗಳ ಪರಿಣಾಮವೆಂಬ ಕೋಟಲೆಗೆ ಒಳಗಾಗುವುದಿಲ್ಲ. ಪ್ರಕೃತಿ ಯಲ್ಲಿ ಮುಳುಗಿರುವ ಜೀವನು ಅಜ್ಞಾನಕ್ಕೊಳಗಾಗಿ ಪ್ರಕೃತಿಯು ಗುಣಗಳಿಂದ ಬದ್ಧನಾಗಿರುತ್ತಾನೆ. ಇದಕ್ಕೆ ಕಾರಣವೇನೆಂದರೆ ಈ ಪ್ರಕೃತಿಯೆ ತಾನೆಂದು ಭಾವಿ ವಿಸಿರುತ್ತಾನೆ; ಅದೂ ಎಂತಹ ಪ್ರಕೃತಿ? ಅಂತರಾತ್ಮನ ಅಥವಾ ಪರಮಾತ್ಮನ ಪ್ರಕೃತಿಯಲ್ಲ; ಹಾಗಿದ್ದರೆ ಲೇಸಾಗಿರುತ್ತಿತ್ತು; ಪ್ರಕೃತಿವ್ಯಾಪಾರದಲ್ಲಿ ನಿಕೃಷ್ಟವಾದ ಪಾತ್ರವನ್ನು ವಹಿಸುವ ಅಹಂಭಾವದಿಂದಕೂಡಿದ ಮನಸ್ಸಿನಪ್ರಕೃತಿಯನ್ನು ತಾನೆಂದು ಭಾವಿಸುತ್ತಾನೆ. ಇಲ್ಲದ ದೊಡ್ಡಸ್ತಿಕೆಯನ್ನು ತನ್ನಲ್ಲಿ ಆರೋಪಿಸಿ ಕೊಂಡಿದ್ದರೂ ಕೂಡ ನಿಜವಾಗಿ ಇದು ಅಲ್ಪವಾದದ್ದು; ಪ್ರಕೃತಿಯು ಕೆಲಸ ಮಾಡಲು ಉಪಯೋಗಿಸುವ ಒಂದು ಉಪಕರಣ ಅಥವಾ ಹಿಡಿ ಮಾತ್ರ; ಈ ಪ್ರಕೃತಿಯೆ ತಾನೆಂದು ಮೌಢ್ಯದಿಂದ ಜೀವನು ಭಾವಿಸುವುದು ಇವನ ದುರದೃಷ್ಟ. ಈ ಮೌಢ್ಯದಿಂದ ದೂರವಾಗಿ ಕರ್ಮಗಳ ಕರ್ತೃವು ತಾನಲ್ಲವೆಂದೂ, ಕರ್ಮ ಫಲಗಳು ತನಗಲ್ಲವೆಂದೂ ತಿಳಿಯಬೇಕು. ಎಲ್ಲವೂ ಪರಮಾತ್ಮನಿಂದಲೆ ಬರುವು ದೆಂದೂ, ಎಲ್ಲ ಕರ್ಮಗಳ ಫಲವೂ ಅವನಿಗೆ ಸಲ್ಲತಕ್ಕದ್ದೆಂದೂ ತಿಳಿಯಬೇಕು. ಪ್ರಕೃತಿವ್ಯಾಪಾರದ ಕ್ಷೋಭೆಯಿಂದ ಪಾರಾಗಲು ಇದೇ ಮಾರ್ಗ. ಆಗ ನಾವು ಚಿದ್ರೂಪನಾದ ಪರಮಾತ್ಮನಲ್ಲಿ ವಾಸಿಸುತ್ತೇವೆ; ಅಹಂಭಾವದಿಂದ ಕೂಡಿದ ಜೀವನ ಮನಸ್ಸಾದರೊ ಈ ಚಿತ್ಸ್ವರೂಪದ ನಿಕೃಷ್ಟ ಪ್ರತಿಬಿಂಬ. ಅಲ್ಲದೆ ಆಗ ನಮ್ಮ ಸಂಕಲ್ಪ ಮತ್ತು ಶಕ್ತಿಗಳು ಪರಮಾತ್ಮನ ಶಕ್ತಿಸಂಕಲ್ಪಗಳೊಡನೆ ಒಂದಾಗಿ ಕೆಲಸ ಮಾಡುತ್ತವೆ. ಸಮತ್ವವಿಲ್ಲದ ಪ್ರಕೃತಿಗುಣಗಳ ವ್ಯಾಪಾರಗಳಲ್ಲಿ ಸಿಲುಕಿರುವುದಿಲ್ಲ; ಈ ವ್ಯಾಪಾರಗಳು ಕ್ಷಣಿಕವಾದುವು; ಸಮತ್ವಕ್ಕೆ ಭಂಗ ತರುವಂತಹವು; ಕೀಳು ಮಟ್ಟದ ಮಾಯಾರೂಪವಾದುವು.

ಜೀವಾತ್ಮನು ಪ್ರಕೃತಿ ನಿಯಮಗಳಿಗೆ ಒಳಪಟ್ಟಿದ್ದಾನೆಂದು ಗೀತೆಯಲ್ಲಿ ಹೇಳಿರುವ ವಾಕ್ಯಗಳಿಗೆ ಕೆಲವರು ಹೀಗೆ ಅರ್ಥಮಾಡುತ್ತಾರೆ: ಸೃಷ್ಟಿಯ ಎಲ್ಲ ವ್ಯಾಪಾರಗಳೂ ಪ್ರಕೃತಿಯ ನಿಯಮಗಳಂತೆಯೆ ಚಾಚೂ ತಪ್ಪದೆ ನಡೆಯುತ್ತವೆ ಮತ್ತು ವ್ಯಕ್ತಿಗೆ ಸ್ವಾತಂತ್ರ್ಯವೆ ಇಲ್ಲ. ಎಂದರೆ ಪುರುಷಪ್ರಯತ್ನಕ್ಕೆ ಅವಕಾಶವಿಲ್ಲ. ಆ ವಾಕ್ಯಗಳೇನೊ ಖಂಡಿತವಾಗಿರುವಂತೆಯೂ ಈ ಅರ್ಥವನ್ನು ಕೊಡುವಂತೆಯೂ ತೋರುತ್ತವೆ. ಆದರೆ ಇತರ ಕಡೆಗಳಂತೆ ಇಲ್ಲಿಯೂ ಸಹ ನಾವು ಗೀತೆಯ ಸಮಗ್ರ

ಉಪದೇಶದ ಸರಣಿಯನ್ನು ನೆನಪಿನಲ್ಲಿಟ್ಟುಕೊಂಡು ಈ ವಾಕ್ಯಗಳಿಗೆ ಅರ್ಥಮಾಡಬೇಕು. ಇತರ ಉಪದೇಶಗಳನ್ನು ಎಣಿಸದೆ ಬಿಡಿಯಾದ ಯಾವುದೊ ಒಂದು ವಾಕ್ಯವನ್ನು ಮಾತ್ರ ಪರಿಗಣಿಸಿ ಸಿದ್ಧಾಂತವನ್ನು ಸ್ಥಾಪಿಸಲು ಯತ್ನಿಸುವುದು ತಪ್ಪು. ವಾಸ್ತವವಾಗಿ ಯಾವ ತತ್ವವನ್ನೆ ಆಗಲಿ, ಅದು ಎಷ್ಟೆ ಸತ್ಯವಾದರೂ ಕೂಡ ಅದಕ್ಕೆ ಸಂಬಂಧಿಸಿದ ಮತ್ತು ಪೂರಕವಾದ ಇತರ ತತ್ವಗಳಿಂದ ಬೇರ್ಪಡಿಸಿದರೆ ನಮ್ಮ ಬುದ್ಧಿಗೆ ಅದು ಸಂಕೋಲೆಯಂತಾಗುತ್ತದೆ; ನಮ್ಮನ್ನು ತಪ್ಪುದಾರಿಗೆ ಎಳೆಯುತ್ತದೆ. ಎಲ್ಲ ತತ್ವಗಳೂ ಕೂಡ ಹಾಸುಹೊಕ್ಕಾಗಿ ಹೆಣೆದಿರುವ ಒಂದು ಬಟ್ಟೆಯ ದಾರಗಳಂತೆ; ಆ ಬಟ್ಟೆಯಿಂದ ಯಾವ ದಾರವನ್ನೂ ಬಿಡಿಯಾಗಿ ತೆಗೆದು ಕೊಳ್ಳಕೂಡದು. ಗೀತೆಯಲ್ಲಿಯೂ ಕೂಡ ಎಲ್ಲವೂ ಈ ರೀತಿ ಪರಸ್ಪರ ಹೆಣೆದುಕೊಂಡಿವೆ. ಎಲ್ಲವನ್ನೂ ದೃಷ್ಟಿಯಲ್ಲಿಟ್ಟುಕೊಂಡೆ ಪ್ರತಿವಾಕ್ಯಕ್ಕೂ ಅರ್ಥಮಾಡಬೇಕು. ಎಲ್ಲವನ್ನೂ ತಿಳಿದಿರುವ ಸಮಗ್ರಜ್ಞಾನವುಳ್ಳ ಯೋಗಿಗೂ (ಕೃತ್ಸ್ನವಿತ್), ಸಂಪೂರ್ಣ ಜ್ಞಾನವಿಲ್ಲದ, ತಾನು ತಿಳಿದಿರುವ ಅಲ್ಪವೆ ಸಂಪೂರ್ಣಜ್ಞಾನವೆಂದು ಭ್ರಮಿಸಿ ತಪ್ಪುದಾರಿಯಲ್ಲಿ ಹೋಗುತ್ತಿರುವವರಿಗೂ (ಅಕೃತ್ಸ್ನವಿದಃ ಮಂದಾಃ) ಇರುವ ಭೇದವನ್ನು ಕುರಿತು ಗೀತೆಯೆ ಇನ್ನೊಂದು ಕಡೆ ಪ್ರಸ್ತಾಪ ಮಾಡುತ್ತದೆ. ಯೋಗಿಯ ಲಕ್ಷ್ಯವು ನಿರುದ್ವೇಗವಾದ ಮತ್ತು ಪೂರ್ಣವಾದ ಜ್ಞಾನ. ಅದನ್ನು ನಾವು ಪಡೆಯಬೇಕಾದರೆ ಮೊದಲು ಅಚಲವಾದ ಮತ್ತು ಸಮಗ್ರವಾದ ದೃಷ್ಟಿಯಿಂದ ಇಡೀ ಪ್ರಪಂಚವನ್ನು ನೋಡಬೇಕು; ತೋರಿಕೆಯ ವಿರೋಧಗಳಿಂದ ಭ್ರಾಂತಿಗೊಳ್ಳದೆ ಇರಬೇಕು. ಪ್ರಕೃತಿಯೊಡನೆ ಆತ್ಮನಿಗಿರುವ ಸಂಬಂಧವು ದ್ವಿಮುಖವಾದುದು; ಒಂದು ಕಡೆ ಆತ್ಮನಿಗೆ ಪೂರ್ಣ ಸ್ವಾತಂತ್ರ್ಯವಿದೆ; ಎಲ್ಲವೂ ಪ್ರಕೃತಿ ನಿಯಮಗಳಿಗನುಸಾರವಾಗಿ ನಡೆಯುವುದು ಇನ್ನೊಂದು ಮುಖ. ಬೆಳೆಯುತ್ತಿರುವ ಜೀವನ ಮನಸ್ಸಿನಲ್ಲಿ ಇವೆರಡೂ ಒಟ್ಟಿಗೆ ಪ್ರತಿಫಲಿಸುವುದರಿಂದ ಸ್ವಾತಂತ್ರ್ಯದ ಒಂದು ವಿಕೃತವಾದ ಪ್ರತಿಬಿಂಬವು ಉಂಟಾಗುತ್ತದೆ; ಪ್ರತಿಬಿಂಬರೂಪವಾದ ಈ ಸ್ವಾತಂತ್ರ್ಯವು ಅಪೂರ್ಣವಾದುದು; ಕೇವಲ ತೋರಿಕೆಯದು. ನಿಜವಾದುದಲ್ಲ. ವ್ಯಕ್ತಿಸ್ವಾತಂತ್ರ್ಯ 'ಅಥವಾ ಪುರುಷಪ್ರಯತ್ನ ಎಂದು ಜನರು ಸಾಮಾನ್ಯವಾಗಿ ಹೇಳುವುದು ಇದನ್ನೇಯೆ; ಆದರೆ ಗೀತೆಯ ಪ್ರಕಾರ ಸ್ವಾತಂತ್ರ್ಯವೆಂಬ ಹೆಸರು ಇದಕ್ಕೆ ಸಲ್ಲುವುದಿಲ್ಲ. ಸ್ವಾತಂತ್ರ್ಯವೆಂದರೆ ಪೂರ್ಣವಾದ ಮುಕ್ತಿ. ಪ್ರಕೃತಿವ್ಯಾಪಾರಗಳ ಬಂಧನದಿಂದ ಬಿಡುಗಡೆ ಮತ್ತು ಅವುಗಳ ಮೇಲೆ ಸಂಪೂರ್ಣವಾದ ಪ್ರಭುತ್ವ. ಅವುಗಳನ್ನು ನಿಯಂತ್ರಿಸುವ ಸಾಮರ್ಥ್ಯ.

ಪ್ರಕೃತಿ ಮತ್ತು ಪುರುಷರ ವಿಷಯದಲ್ಲಿ ಗೀತೆಯ ಉಪದೇಶಕ್ಕೆ ಸಾಂಖ್ಯ ಮತ್ತು ವೇದಾಂತದ ಸಿದ್ಧಾಂತಗಳು ಯಾವಾಗಲೂ ಹಿನ್ನೆಲೆಯಲ್ಲಿವೆಯೆಂಬುದನ್ನು ನಾವು ಗಮನದಲ್ಲಿಟ್ಟಿರಬೇಕು. ಸಾಂಖ್ಯಸಿದ್ಧಾಂತವು ವೇದಾಂತದ ದೃಷ್ಟಿಯಿಂದ ಗೀತೆಯಲ್ಲಿ ಮಾರ್ಪಡಿಸಲ್ಪಟ್ಟಿದೆಯೆಂಬುದನ್ನು ಹಿಂದೆಯೆ ಹೇಳಿದೆ. ಎಂದರೆ ಗೀತೆಯ ಉಪದೇಶದ ಪ್ರಕಾರ ಪಕೃತಿ ಎರಡು ವಿಧವಾದುದು—ಪರಾಪ್ರಕೃತಿ ಮತ್ತು ಅಪರಾಪ್ರಕೃತಿ. ದಯಾರೂಪವಾದ ಅಪರಾ ಪ್ರಕೃತಿಯು ಸತ್ವ, ರಜಸ್ ಮತ್ತು ತಮೋಗುಣಗಳನ್ನೊಳಗೊಂಡಿದೆ. ಪರಾ ಪ್ರಕೃತಿಯೆ ದೈವೀಪ್ರಕೃತಿ. ಮೂರು ಪುರುಷರಿದ್ದಾರೆ—ಕ್ಷರ, ಅಕ್ಷರ ಮತ್ತು ಪುರುಷೋತ್ತಮ. ಅಸಂಗತವೆಂದೂ, ಪರಸ್ಪರ ವಿರೋಧವೆಂದೂ ತೋರುವ ಉಪದೇಶಗಳನ್ನು ಸಮನ್ವಯಗೊಳಿಸುವುದು ಈ ತತ್ವವೇ. ವಾಸ್ತವವಾಗಿ ನಮ್ಮ ಪ್ರಜ್ಞೆಯು ಅನೇಕ ಮಟ್ಟಗಳಲ್ಲಿ ಕೆಲಸಮಾಡುತ್ತದೆ. ಯಾವುದೊ ಒಂದು ಮಟ್ಟದಲ್ಲಿ ಒಂದು ವಿಷಯವು ಸತ್ಯವೆಂದು ಕಂಡುಬರಬಹುದು. ಇದಕ್ಕಿಂತ ಮೇಲಿನ ಮಟ್ಟಕ್ಕೆ ಹೋದಾಗ ಅಲ್ಲಿನ ದೃಷ್ಟಿಯು ಹೆಚ್ಚು ಸಮಗ್ರವಾಗಿಯೂ ವ್ಯಾಪಕವಾಗಿಯೂ ಇರುವುದು. ಈ ದೃಷ್ಟಿಗೆ ಅದೆ ವಿಷಯವು ಬೇರೆ ರೀತಿಯಾಗಿಯೂ, ಸಂಪೂರ್ಣವಾದ ಸತ್ಯವಲ್ಲವೆಂದೂ ಕಾಣುತ್ತದೆ. ಈಚೆಗೆ ವಿಜ್ಞಾನಿಗಳು ತೋರಿಸಿರುವಂತೆ ಮನುಷ್ಯನಲ್ಲಿ, ಪ್ರಾಣಿಗಳಲ್ಲಿ, ಸಸ್ಯಗಳಲ್ಲಿ ಮತ್ತು ಲೋಹಗಳಲ್ಲಿ ಕೂಡ, ಒಂದೆ ವಿಧವಾದ ಜೀವವ್ಯಾಪಾರಗಳು ನಡೆಯುತ್ತಿವೆ. ಅವುಗಳಿಗೆ ಭಾವನೆಯ ಮತ್ತು ಮನಸ್ಸಿನ ವ್ಯಾಪಾರಗಳಿಲ್ಲವೆಂದು ನಾವು ವಾದಿಸಿದರೂ, ನಮ್ಮ ಸ್ಥೂಲ ದೇಹದಲ್ಲಿ ನರಮಂಡಲವು ಯಾವರೀತಿ ಯಾಂತ್ರಿಕವಾಗಿ ಕೆಲಸಗಳನ್ನು ಮಾಡುವುದೊ ಅಂತಹ ಯಾಂತ್ರಿಕ ವ್ಯಾಪಾರಗಳು ಇವುಗಳಲ್ಲಿಯೂ ನಡೆಯುತ್ತಿವೆಯೆಂಬುದನ್ನಾದರೂ ಒಪ್ಪಿಕೊಳ್ಳಲೇಬೇಕು. ಖನಿಜ, ಸಸ್ಯ, ಮೃಗ ಮತ್ತು ಮನುಷ್ಯರು ಯಾವುದಾದರೂ ಒಂದೆ ಘಟನೆಯನ್ನು ಕುರಿತು ತಮ್ಮ ತಮ್ಮ ಅನುಭವವನ್ನು ವರ್ಣಿಸುತ್ತಾರೆನ್ನೋಣ. ಒಂದೆ ಅನುಭವ ಅಥವಾ ಒಂದೆ ಪ್ರಕೃತಿವ್ಯಾಪಾರವನ್ನು ಕುರಿತ ಇವರ ವರ್ಣನೆಗಳು ತೀರ ಭಿನ್ನವಾಗಿರುತ್ತವೆ ಮತ್ತು ಅನೇಕವೇಳೆ ಪರಸ್ಪರ ವಿರುದ್ಧವಾಗಿರುತ್ತವೆ. ನಮ್ಮ ಪ್ರಜ್ಞೆಯು ವಿಕಾಸವಾಗಿ ಮೇಲಿನ ಮಟ್ಟಗಳಿಗೆ ಏರಿದಂತೆಲ್ಲ ಈ ಪ್ರಕೃತಿನಿಯಮಗಳು ಮತ್ತು ಅನುಭವಗಳು ನಮ್ಮ ಮೇಲೆ ಉಂಟುಮಾಡುವ ಪರಿಣಾಮ ಬೇರೆ ಬೇರೆಯಾಗುತ್ತದೆ. ಒಂದೆ ಅನುಭವಕ್ಕೆ ನಾವು ಕಟ್ಟುವ ಬೆಲೆ ವ್ಯತ್ಯಾಸವಾಗುತ್ತದೆ. ಮನುಷ್ಯರಲ್ಲಿಯೂ ಕೂಡ ಪ್ರಜ್ಞೆಯ

ವಿಕಾಸವು ಬೇರೆ ಬೇರೆ ಮಟ್ಟಗಳಲ್ಲಿದೆ. ಆದುದರಿಂದ ಅವರ ಪ್ರತಿಕ್ರಿಯೆಗಳ ಲ್ಲಿಯೂ ಮನೋದೃಷ್ಟಿಯಲ್ಲಿಯೂ ಇಂತಹ ವ್ಯತ್ಯಾಸಗಳು ಕಂಡುಬರುತ್ತವೆ. ಪುರುಷಪ್ರಯತ್ನ ಅಥವಾ ವ್ಯಕ್ತಿಸ್ವಾತಂತ್ರ್ಯವಿದೆಯೆಂದು ಭಾವಿಸಿ ನಾವು ಕೆಲಸ ಮಾಡುತ್ತೇವಷ್ಟೆ; ಹೀಗೆ ನಾವು ತಿಳಿದಿರುವುದು ಒಂದು ದೃಷ್ಟಿಯಿಂದ ಸ್ವಲ್ಪಮಟ್ಟಿಗೆ ನ್ಯಾಯವೆ ಆಗಿದೆ. ಆದರೆ ಮೇಲಿನ ಮಟ್ಟಕ್ಕೇರಿರುವ ಯೋಗಿಯ ದೃಷ್ಟಿಗಾದರೊ ನಾವು ಈಗಲೂ ಕೂಡ ಪ್ರಕೃತಿಯ ಗುಣಗಳಿಂದ ಸೆಳೆಯಲ್ಪಟ್ಟು ಕರ್ಮವನ್ನು ಮಾಡುತ್ತೇವೆಂದೂ, ಇದು ನಿಜವಾದ ಸ್ವಾತಂತ್ರ್ಯವಲ್ಲವೆಂದೂ ಗೋಚರವಾಗು ತ್ತದೆ. ಯೋಗಿಯು ಎಲ್ಲವನ್ನೂ ತಿಳಿದಿರುವವನಾದ್ದರಿಂದ (ಕೃತ್ಸ್ನವಿತ್) ಒಂದೊಂದು ವಿಷಯವನ್ನೂ ಸಮಗ್ರದೃಷ್ಟಿಯಿಂದ ನೋಡುತ್ತಾನೆ. ನಾವಾದರೊ (ಅಕೃತ್ಸ್ನವಿತ್) ಅದೆ ವಿಷಯಗಳನ್ನು ಸಂಕುಚಿತದೃಷ್ಟಿಯಿಂದ ನೋಡುವುದರಿಂದ ನಮಗೆ ಸಂಪೂರ್ಣವಾದ ಮತ್ತು ಸರಿಯಾದ ಜ್ಞಾನವುಂಟಾಗುವುದಿಲ್ಲ. ನಾವು ಹೆಮ್ಮೆಪಡುವ ಸ್ವಾತಂತ್ರ್ಯವೂ ಕೂಡ ಅವನ ದೃಷ್ಟಿಗೆ ಬಂಧನವಾಗಿ ಕಾಣುತ್ತದೆ. ಅಪರಾಪ್ರಕೃತಿಗೆ ನಾವು ಅಧೀನರಾಗಿದ್ದುಕೊಂಡೂ ಕೂಡ ಸ್ವತಂತ್ರರೆಂದು ಭಾವಿಸು ವುದು ಅಜ್ಞಾನವೆಂದು ಗೀತೆಯು ಹೇಳುತ್ತದೆ. ಇದನ್ನು ಸ್ಪಷ್ಟಪಡಿಸುವುದಕ್ಕಾಗಿಯೆ ಅಹಂಭಾವಯುಕ್ತನಾದ ಜೀವಾತ್ಮನು ಪ್ರಕೃತಿಯ ಗುಣಗಳಿಗೆ ಸಂಪೂರ್ಣನಾಗಿ ಅಧೀನನಾಗಿದ್ದಾನೆಂದು ಗೀತೆಯು ಒತ್ತಿ ಹೇಳುತ್ತದೆ. "ಎಲ್ಲ ಕಡೆಗಳಲ್ಲಿಯೂ ಕರ್ಮಗಳು ಪ್ರಕೃತಿಯ ಗುಣಗಳಿಂದ ಮಾಡಲ್ಪಡುತ್ತವೆ. ಅಹಂಕಾರದಿಂದ ಮೋಹಿ ತನಾದ ಮನುಷ್ಯನು ತಾನೆ ಮಾಡತಕ್ಕವನೆಂದು ತಿಳಿದುಕೊಳ್ಳುತ್ತಾನೆ. ಗುಣ ಕರ್ಮಗಳ ಲಕ್ಷ್ಯವನ್ನು ಯಥಾರ್ಥವಾಗಿ ತಿಳಿದಿರುವ ಮನುಷ್ಯನು ಕಾರ್ಯಗಳು ನಡೆಯುವಾಗಲೆಲ್ಲ ಒಂದು ಜಾತಿಯ ಗುಣಗಳು ಇನ್ನೊಂದು ಜಾತಿಯ ಗುಣಗಳಲ್ಲಿ ಪ್ರವರ್ತಿಸುತ್ತವೆ ಎಂದು ತಿಳಿದುಕೊಂಡು ಸಂಗರಹಿತನಾಗಿರುತ್ತಾನೆ. ಪ್ರಕೃತಿಯ ಗುಣಗಳಿಂದ ಮೋಹಗೊಂಡ ಜನರು ಅದರ ಗುಣಗಳಲ್ಲಿ ಮತ್ತು ಈ ಗುಣಗಳಿಂದ ನಡೆಯುವ ಕಾರ್ಯಗಳಲ್ಲಿ ಮೋಹಗೊಳ್ಳುತ್ತಾರೆ; ತಾವೆ ಅದನ್ನು ಮಾಡುವಂತೆ ಭಾವಿಸುತ್ತಾರೆ. ಎಲ್ಲವನ್ನೂ ತಿಳಿದಿರುವವನು (ಕೃತ್ಸ್ನವಿತ್) ತಿಳಿಯದಿರುವ ಆ ಮೂಢಮತಿಗಳಿಗೆ ಚಿತ್ತಭ್ರಮೆಯನ್ನುಂಟುಮಾಡಕೂಡದು. ಸಮಸ್ತಕರ್ಮ ಗಳನ್ನೂ ಆತ್ಮಬುದ್ಧಿಯಿಂದ ನನ್ನಲ್ಲಿ ಬಿಟ್ಟು, ಆಶೆಯೂ ಮಮಕಾರವೂ ಉದ್ವೇ ಗವೂ ಇಲ್ಲದವನಾಗಿ ಯುದ್ಧಮಾಡು." (ಗೀತೆ ೩-೨೭, ೨೮, ೨೯, ೩೦). ಈ ಶ್ಲೋಕಗಳಲ್ಲಿ ಸೂಚಿಸಿರುವ ಪ್ರಕಾರ ನಾವು ಕರ್ಮಗಳನ್ನು ಮಾಡುವಾಗ ಎರಡು

ಮಟ್ಟಗಳಿವೆ ; ಎರಡು ದೃಷ್ಟಿಕೋನಗಳಿವೆ. ಅಹಂಕಾರದ ಬಂಧನಕ್ಕೆ ಸಿಕ್ಕಿಕೊಂಡಿರುವವನು ತಾನು ಸ್ವತಂತ್ರನಾಗಿ ಕರ್ಮಗಳನ್ನು ಮಾಡುತ್ತಿರುವೆನೆಂದು ಭಾವಿಸಿದ್ದರೂ ಕೂಡ ಪ್ರಕೃತಿಯ ಗುಣಗಳ ಪ್ರೇರಣೆಯಿಂದ ಕರ್ಮಗಳನ್ನು ಮಾಡುವುದು ಒಂದು ವಿಧ. ಅಹಂಕಾರದಿಂದ ಬಿಡುಗಡೆ ಹೊಂದಿ, ಪ್ರಕೃತಿಯ ಗುಣಗಳಿಗೆ ಅತೀತನಾಗಿದ್ದುಕೊಂಡು, ಪ್ರಕೃತಿಯ ಕರ್ಮಗಳನ್ನು ನೋಡುತ್ತಾ, ಅನುಮತಿ ಕೊಡುತ್ತಾ ಈ ಕರ್ಮಗಳನ್ನು ನಿಯಂತ್ರಿಸುವುದು ಇನ್ನೊಂದು ವಿಧ.

ಪುರುಷನು ಪ್ರಕೃತಿಗೆ ವಶನಾಗುತ್ತಾನೆಂದು ಹೇಳುವುದುಂಟಷ್ಟೆ. ಗೀತೆಯು ಪ್ರಕೃತಿ–ಪುರುಷರ ಲಕ್ಷಣಗಳನ್ನು ಸ್ಪಷ್ಟಪಡಿಸುತ್ತಾ ಕರ್ಮಗಳನ್ನು ಮಾಡುವುದು ಪ್ರಕೃತಿಯಾದರೂ, ಪುರುಷನು ಪ್ರಕೃತಿಗೆ ಒಡೆಯನೆಂದೂ, ಈಶ್ವರನೆಂದೂ ಹೇಳುತ್ತದೆ. ಗೀತೆಯಲ್ಲಿ ಆತ್ಮನು ಅಹಂಕಾರದಿಂದ ಮೂಢನಾಗುವ ಪ್ರಸ್ತಾಪವು ಬರುತ್ತದೆ. ವೇದಾಂತಿಗಳ ಪ್ರಕಾರ ಆತ್ಮನು ದಿವ್ಯಸ್ವಭಾವದವನು, ಸದಾ ಮುಕ್ತನು ಮತ್ತು ಸ್ವಸ್ವರೂಪಜ್ಞಾನವುಳ್ಳವನು (ನಿತ್ಯ ಶುದ್ಧ ಬುದ್ಧ ಮುಕ್ತ ಸ್ವಭಾವದವನು). ಹಾಗಾದರೆ ಪ್ರಕೃತಿಯ ಗುಣಗಳಿಂದ ಮೂಢನಾಗುವ, ಅವುಗಳಿಗೆ ಅಧೀನನಾಗುವ ಆತ್ಮನು ಯಾರು? ಈ ಪ್ರಶ್ನೆಗೆ ಉತ್ತರವು ಹೀಗಿರುವುದು: ಇಲ್ಲಿ **ಆತ್ಮ** ಎಂದು ಹೇಳಿರುವುದು ಸಾಮಾನ್ಯವಾಗಿ **ನಾನು** ಎಂದು ನಾವು ಹೇಳುವ ಅರ್ಥದಲ್ಲಿ; ಎಂದರೆ ಅಹಂಭಾವದಿಂದ ಕೂಡಿದ, ದೇಹ ಮತ್ತು ಮನಸ್ಸುಗಳಿಂದ ಯುಕ್ತನಾದ ದೇಹಾತ್ಮನನ್ನು ಕುರಿತು. ನಿಜವಾದ ಆತ್ಮ ಅಥವಾ ಪುರುಷನನ್ನು ಕುರಿತಲ್ಲ. ವಾಸ್ತವವಾಗಿ ಈ ದೇಹಾತ್ಮನೆ ಪ್ರಕೃತಿಗೆ ವಶನಾಗಿರುವವನು ; ಏತಕ್ಕೆಂದರೆ ಇವನು ಪ್ರಕೃತಿಯ ಒಂದು ಅಂಗವೆ ಆಗಿದ್ದಾನೆ. ಪ್ರಕೃತಿವ್ಯಾಪಾರದ ಒಂದು ಅಂಶವೆ ಆಗಿದ್ದಾನೆ. ಆತ್ಮನು ಮನಸ್ಸಿನ ಮಟ್ಟಕ್ಕೆ ಇಳಿದು ತನ್ನ ಸ್ವರೂಪವನ್ನು ಅರಿಯಲು ಯತ್ನಿಸಿದಾಗ ಈ ಕೆಳಗಿನ ಮಟ್ಟದಲ್ಲಿ ಪ್ರಕೃತಿಯಲ್ಲಿ ಆತ್ಮನ ಪ್ರತಿಬಿಂಬವುಂಟಾಗುತ್ತದೆ. ನಾವು ಸಾಮಾನ್ಯವಾಗಿ ಆತ್ಮನೆಂದು ತಿಳಿಯುವುದು ಕಾಮಸ್ವರೂಪವಾದ ಈ ಪ್ರತಿಬಿಂಬವನ್ನೇ ಹೊರತು ನಿಜವಾದ ಆತ್ಮ ಅಥವಾ ಪುರುಷನನ್ನಲ್ಲ. ವಾಸ್ತವವಾಗಿ ಈ ಕಾಮಮಯನಾದ ಪ್ರತಿಬಿಂಬವು ಪ್ರಕೃತಿಯ ಗುಣಗಳಿಂದ ಹುಟ್ಟಿ ಪ್ರಕೃತಿಯ ಒಂದು ಅಂಶವೆ ಆಗಿದೆ. ಈ ರೀತಿಯಾಗಿ ಆತ್ಮನು ಎರಡು ವಿಧವೆಂದು ಹೇಳಬಹುದು. ಪ್ರಕೃತಿಯ ಗುಣಗಳಿಂದ ರಚಿತವಾಗಿ ಪ್ರಕೃತಿಗೆ ಅಧೀನವಾದ ಪ್ರತಿಬಿಂಬಸ್ವರೂಪವಾದ ಕಾಮಮಯವಾದ ಆತ್ಮನು ಒಂದು; ಪ್ರಕೃತಿಯ ಗುಣಗಳಿಗೆ ಒಳಪಡದೆ ಇರುವ ಸ್ವತಂತ್ರನಾದ,

ಮುಕ್ತನಾದ, ನಿತ್ಯನಾದ ಆತ್ಮನು ಇನ್ನೊಂದು. ಈ ಕಾಮುಮಯನಾದ ಆತ್ಮನು ಪ್ರತಿಕ್ಷಣವೂ ಬದಲಾಯಿಸುತ್ತಿರುವ ಪ್ರಕೃತಿವ್ಯಾಪಾರಗಳಲ್ಲಿ ಸಿಕ್ಕಿ "ಈ ಕ್ರಿಯೆಗಳನ್ನು ಮಾಡುತ್ತಿರುವವನು ನಾನೆ" ಎಂದುಕೊಳ್ಳುತ್ತಾನೆ. ವಾಸ್ತವವಾಗಿ ಈ ಕ್ರಿಯೆಗಳನ್ನು ಮಾಡುತ್ತಿರುವುದು ತ್ರಿಗುಣಾತ್ಮಕವಾದ ಪ್ರಕೃತಿಯೇ. ನಿಜವಾದ ಆತ್ಮನಾದರೊ ಪ್ರಕೃತಿಯನ್ನು ಭರಿಸಿದ್ದಾನೆ; ಪ್ರಕೃತಿಗೆ ಒಡೆಯನೂ, ಭೋಕ್ತೃವೂ ಆಗಿದ್ದಾನೆ. ಇವನು ನಾವು ಮುಂಚೆ ಹೇಳಿದ ಕಾಮುಮಯನಾದ ಆತ್ಮನಲ್ಲ. ಮುಕ್ತಿಹೊಂದಲು ದಾರಿಯೇನೆಂದರೆ, ಈ ಕಾಮುಮಯನಾದ ಆತ್ಮನು ಕಾಮಗಳನ್ನು ಬಿಡಬೇಕು ಮತ್ತು ಅಹಂಭಾವವಿಶಿಷ್ಟನಾದ ಇವನ ಭ್ರಾಂತಿ ಮತ್ತು ತಪ್ಪುತಿಳುವಳಿಕೆಗಳು ತೊಲಗಬೇಕು—"ಆಸೆಯೂ ಮಮಕಾರವೂ, ಉದ್ವೇಗವೂ ಇಲ್ಲದವನಾಗಿ ಯುದ್ಧಮಾಡು". (ಗೀತೆ. ೩–೧೦)

ಹೀಗೆ ನಮ್ಮಲ್ಲಿ ಎರಡು ವಿಧವಾದ ಆತ್ಮಗಳಿವೆಯೆಂಬ ಅಭಿಪ್ರಾಯಕೆ ಪುರುಷ ಮತ್ತು ಪ್ರಕೃತಿ ಎಂಬ ಎರಡು ತತ್ವಗಳನ್ನು ಪ್ರತಿಪಾದಿಸುವ ಸಾಂಖ್ಯ ಸಿದ್ಧಾಂತವೆ ಮೂಲವಾಗಿದೆ. ಇದರ ಪ್ರಕಾರ ಪ್ರಕೃತಿಯೆ ಕರ್ತೃ, ಪುರುಷನು ಕರ್ತೃವಲ್ಲ. ಪುರುಷನು ಚೈತನ್ಯದ ಬೆಳಕಿನಿಂದ ತುಂಬಿರುವವನು. ಪ್ರಕೃತಿಯು ಯಂತ್ರದಂತೆ. ಇದಕ್ಕೆ ಚೈತನ್ಯವಿಲ್ಲ. ಇದರ ವ್ಯಾಪಾರಗಳೆಲ್ಲ ಸಾಕ್ಷಿಯಾದ ಪುರುಷನ ಚೈತನ್ಯದಲ್ಲಿ ಪ್ರತಿಬಿಂಬಿತವಾಗುತ್ತವೆ. ಪ್ರಕೃತಿವ್ಯಾಪಾರಗಳಿಗೆ ಕಾರಣವೇನೆಂದರೆ ಅದರ ಮೂರು ಗುಣಗಳು ಸಮಸ್ಥಿತಿಯಲ್ಲಿಲ್ಲದೆ ಸದಾ ಪರಸ್ಪರ ಘರ್ಷಣೆ ಮಾಡುತ್ತಾ ಮಾರ್ಪಾಟನ್ನು ಹೊಂದುತ್ತಿರುವುದು. ಪ್ರಕೃತಿಯು ಕಾಮುಮಯನಾದ ಆತ್ಮನ ಮನಸ್ಸಿನ ಮೂಲಕ ಮಾಡುವ ವ್ಯಾಪಾರದ ಪರಿಣಾಮವಾಗಿ ಪ್ರಕೃತಿಯ ಕ್ರಿಯೆಗಳಿಗೆ ತಾನೆ ಕರ್ತೃವೆಂದು ಪುರುಷನು ಭಾವಿಸುತ್ತಾನೆ. ಹೀಗೆ ನಿಷ್ಕ್ರಿಯನೂ, ಶಾಂತನೂ, ಶಾಶ್ವತನೂ ಆದ ಆತ್ಮನಲ್ಲಿ ತಾನು ಕರ್ತೃವೆಂಬ, ಕಾಲಪರಿಚ್ಛಿನ್ನನೆಂಬ, ಬದಲಾವಣೆಗೆ ಒಳಗಾಗುವವನೆಂಬ ಭಾವನೆಯನ್ನುಂಟುಮಾಡುತ್ತದೆ. ಪ್ರಕೃತಿಯ ಅಶುದ್ಧವಾದ ಜ್ಞಾನವು ಆತ್ಮನ ಶುದ್ಧವಾದ ಜ್ಞಾನವನ್ನು ಮರೆಮಾಚುತ್ತದೆ. ಮನಸ್ಸು ಆತ್ಮನನ್ನು ಮರೆತು ಕಾಮುಮಯನಾದ ಆತ್ಮನಲ್ಲಿ ದೃಷ್ಟಿಯನ್ನು ನೆಡುತ್ತದೆ. ನಮ್ಮ ಬುದ್ಧಿ ವಿವೇಕಗಳು ಕಾಮುಮನಸ್ಸಿನ ಬಹಿರ್ಮುಖವಾದ ವ್ಯಾಪಾರಗಳ ಮತ್ತು ದೇಹದ ಆಸೆಗಳ ಪ್ರಭಾವಕ್ಕೆ ಒಳಗಾಗುತ್ತವೆ. ಇದನ್ನು ಪುರುಷನು ಎಲ್ಲಿಯವರೆಗೆ ಒಪ್ಪಿಕೊಂಡಿರುತ್ತಾನೆಯೊ ಅಲ್ಲಿಯವರೆಗೆ ನಾವು ಅಜ್ಞಾನ, ಆಸೆ ಮತ್ತು ಅಹಂಕಾರಗಳಿಗೆ ವಶರಾಗಿರುತ್ತೇವೆ.

ಪರಿಸ್ಥಿತಿಯು ಇಷ್ಟೆ ಆಗಿದ್ದ ಪಕ್ಷದಲ್ಲಿ ಇದರಿಂದ ತಪ್ಪಿಸಿಕೊಳ್ಳಲು ಇರುವ ಉಪಾಯವೇನೆಂದರೆ ಪುರುಷನು ಪ್ರಕೃತಿಯ ವ್ಯಾಪಾರಗಳಿಗೆ ತನ್ನ ಅನುಮತಿಯನ್ನು ಕೊಡದೆ ಇರುವುದು ; ಎಂದರೆ ಯಾವ ವಿಧವಾದ ಕರ್ಮವನ್ನೂ ಮಾಡದೆ ಇರುವುದು. ಆಗ ಪ್ರಕೃತಿಯ ಮೂರು ಗುಣಗಳೂ ಸಮಸ್ಥಿತಿಯನ್ನು ಹೊಂದಬೇಕು. ಈ ಪರಿಸ್ಥಿತಿಯಿಂದ ಪಾರಾಗಲು ಇದು ಒಂದು ತಕ್ಕ ಉಪಾಯವೇನೊ ಹೌದು; ಆದರೆ ಇದನ್ನು ಅನುಸರಿಸಿದರೆ ನೆಗಡಿ ಬಂದರೆ ಮೂಗನ್ನೆ ಕತ್ತರಿಸಿದಂತೆ; ಈ ಮಾರ್ಗವನ್ನು ಗೀತೆಯು ಮೊದಲಿನಿಂದಲೂ ನಿರೋಧಿಸುತ್ತಲೆ ಇದೆ. ಈ ಉಪದೇಶವನ್ನು ಸಾಮಾನ್ಯಜನರ ಮುಂದಿಟ್ಟರೆ ಅವರಿಗೆ ಜಡತ್ವವನ್ನು ಹೆಚ್ಚಿಸಿ ತಾಮಸಗುಣಕ್ಕೆ ಪ್ರೋತ್ಸಾಹಕೊಟ್ಟಂತಾಗುತ್ತದೆ. ಅವರ ಬುದ್ಧಿಯು ಭ್ರಾಂತಿಗೊಂಡು ಭೇದವನ್ನು ಕಲ್ಪಿಸುತ್ತದೆ. ಕೆಲಸವನ್ನು ಮಾಡಬೇಕೆಂಬ ಅವರ ರಾಜಸ ಸ್ವಭಾವಕ್ಕೂ, ಕರ್ಮಗಳನ್ನು ತ್ಯಜಿಸಬೇಕೆಂಬ ಈ ತಿಳಿವಳಿಕೆಗೂ ಪರಸ್ಪರ ವಿರೋಧವುಂಟಾಗುತ್ತದೆ. ಇದರಿಂದ ಗೊಂದಲವೂ ತೊಡಕೂ ಉಂಟಾಗುವುದೆ ವಿನಾ ಸರಿಯಾದ ಮಾರ್ಗವು ಗೋಚರವಾಗುವುದಿಲ್ಲ. ಇದರಿಂದ ಕಂಡುಬರುವ ಎರಡು ಮಾರ್ಗಗಳು ಇವೇಯೆ: (೧) ತಪ್ಪಾದ ಮತ್ತು ನಮ್ಮನ್ನು ನಾವೆ ಮೋಸಗೊಳಿಸುವ ಕರ್ಮಾಚರಣೆ, (೨) ತಾಮಸವಾದ ಜಡತ್ವ, ಯಾವ ಕರ್ಮಗಳನ್ನೂ ಮಾಡದೆ ಇರುವಿಕೆ, ಜೀವಿಸಲು ಮತ್ತು ಕೆಲಸಮಾಡಲು ನಿರುತ್ಸಾಹ. ಹೀಗೆ ಮಾಡುವುದು ಪ್ರಕೃತಿಯ ಗುಣಗಳಿಂದ ಬಿಡುಗಡೆ ಹೊಂದಿದಂತಲ್ಲ; ಅವುಗಳಲ್ಲಿ ಅತ್ಯಂತ ಕೀಳಾದ ತಮೋಗುಣಕ್ಕೆ ಅಧೀನವಾಗುವಿಕೆ. ಒಟ್ಟಿನಲ್ಲಿ ಈ ಎರಡು ಮಾರ್ಗಗಳಲ್ಲಿ ಯಾವುದೂ ಸರಿಯಾದುದಲ್ಲ. ಸಾಮಾನ್ಯ ಮನುಷ್ಯರು ಇದನ್ನು ತಿಳಿದುಕೊಳ್ಳಲಾರರು. ಗಹನವಾದ ಈ ಉಪದೇಶವು ಅವರಿಗೆ ಅಸಂಗತವಾಗಿ ತೋರುತ್ತದೆ. ವ್ಯಕ್ತಿಸ್ವಾತಂತ್ರ್ಯ (ಪುರುಷಪ್ರಯತ್ನ)ದ ವಿಷಯವಾಗಿ ಅವರಿಗಿರುವ ಅಲ್ಪವಾದ ತಿಳಿವಳಿಕೆಯೂ, ಅವರಿಗಿರುವ ಪರಿಮಿತವಾದ ಅನುಭವವೂ ಈ ಉಪದೇಶಕ್ಕೆ ವಿರುದ್ಧವಾಗಿಯೆಂದು ಅವರು ವಾದಿಸುತ್ತಾರೆ. ಕಾಮ ಮತ್ತು ಅಹಂಕಾರಗಳಿಂದ ಭ್ರಾಂತರಾಗಿ ತಮ್ಮ ವಾದವೆ ಸರಿಯೆಂದು ಭಾವಿಸುತ್ತಾ ಈ ಬಂಧನದಿಂದ ಬಿಡುಗಡೆ ಹೊಂದುವ ಅವಕಾಶವನ್ನು ಉಪಯೋಗಿಸಿಕೊಳ್ಳದೆ, ತಮ್ಮ ಅಜ್ಞಾನವನ್ನೆ ಇನ್ನೂ ಭದ್ರವಾಗಿ ಅಪ್ಪಿಕೊಳ್ಳುತ್ತಾರೆ.

ವ್ಯಾಪಕವಾದ ಮತ್ತು ಸೂಕ್ಷ್ಮವಾದ ಮೇಲಿನ ಮಟ್ಟಗಳಲ್ಲಿ ಮಾತ್ರ ಈ ಪ್ರೌಢವಾದ ವಿಷಯಗಳು ಪ್ರಯೋಜನಕಾರಿಯಾಗುತ್ತವೆ. ಏತಕ್ಕೆಂದರೆ ಅಲ್ಲಿ

ಮಾತ್ರ ಅವು ಸತ್ಯವೆಂಬುದು ಗೋಚರವಾಗುತ್ತದೆ ಮತ್ತು ಅನುಭವಕ್ಕೆ ಬರುತ್ತದೆ. ಈ ಉಪದೇಶಗಳನ್ನು ಕೆಳಗಿನ ಮಟ್ಟದಿಂದ ಅವಲೋಕಿಸಿದರೆ ಅದನ್ನು ತಪ್ಪಾಗಿ ನೋಡಿದಂತೆಯೂ, ತಪ್ಪು ಅರ್ಥ ಮಾಡಿದಂತೆಯೂ ಆಗುತ್ತದೆ; ಅನೇಕವೇಳೆ ಅವುಗಳನ್ನು ತಪ್ಪಾಗಿಯೂ ಉಪಯೋಗಿಸಬಹುದು. ಒಳ್ಳೆಯದು ಮತ್ತು ಕೆಟ್ಟದ್ದು ಎಂಬ ಭೇದವು ಕೆಳಗಿನ ಮಟ್ಟದಲ್ಲಿ ವಾಸ್ತವವಾಗಿದೆ. ದೇವತ್ವದ ಮಟ್ಟಕ್ಕೆ ಏರುವುದಕ್ಕೆ ಮುಂಚೆ ಅಹಂಕಾರವಿಶಿಷ್ಟನಾದ ಮನುಷ್ಯನಿಗೆ ಈ ಭೇದವು ಅವಶ್ಯಕವೆ ಆಗಿದೆ. ನಾವು ಮೇಲಿನ ಮಟ್ಟಕ್ಕೆ ಹೋದಾಗ ದ್ವಂದ್ವಾತೀತನಾದ ಈಶ್ವರನಂತೆ ಒಳ್ಳೆಯದು ಮತ್ತು ಕೆಟ್ಟದ್ದು ಮುಂತಾದ ಭೇದಗಳಿಂದ ನಾವೂ ಅತೀತರಾಗುತ್ತೇವೆ. ಅಪಕ್ವವಾದ ಬುದ್ಧಿಯುಳ್ಳವರು ಮೇಲಿನ ತತ್ವವು ಅನ್ವಯಿಸದೆ ಇರುವ ಕೆಳಗಿನ ಮಟ್ಟದಲ್ಲಿದ್ದುಕೊಂಡೆ ಈ ತತ್ವವನ್ನು ಹಿಡಿದುಕೊಂಡು ತಮ್ಮ ಅನುಕೂಲಕ್ಕಾಗಿ ಉಪಯೋಗಿಸಿಕೊಳ್ಳುತ್ತಾರೆ. ಅವರ ಆಸುರೀಪ್ರವರ್ತನೆಗೆ ಇದು ಅವಕಾಶಕೊಟ್ಟಂತಾಗುತ್ತದೆ. ಆದ್ದರಿಂದ ಅವರು ಕೆಟ್ಟದ್ದಕ್ಕೂ ಒಳ್ಳೆಯದಕ್ಕೂ ಭೇದವನ್ನೆ ತೊರೆದು, ವಿಷಯಸುಖದಲ್ಲೆ ಮಗ್ನರಾಗಿ, ವಿನಾಶದ ಮಾರ್ಗದಲ್ಲಿ ಮುಂದೆ ಮುಂದೆ ಹೋಗುತ್ತಾರೆ. 'ಸರ್ವಜ್ಞಾನ ವಿಮೂಢಾನ್ ತಾನ್ ವಿದ್ಧಿ ನಷ್ಟಾನ್ ಅಚೇತಸಃ' ಎಲ್ಲವೂ ಪ್ರಕೃತಿ ನಿಯಮಗಳಿಗನುಸಾರವಾಗಿಯೆ ನಡೆಯುತ್ತವೆ ಎಂಬ (ನಿಯತಿ) ತತ್ವದ ವಿಷಯದಲ್ಲಿಯೂ ಹೀಗೆಯೆ. ಇದಕ್ಕೂ ಕೂಡ ತಪ್ಪು ಅರ್ಥಮಾಡಿ, ತಪ್ಪುದಾರಿಯಲ್ಲಿ ಹೋಗಬಹುದು. "ಮನುಷ್ಯನು ತನ್ನ ಸ್ವಭಾವಕ್ಕನುಸಾರವಾಗಿ ವರ್ತಿಸುತ್ತಾನೆ. ಈ ಪ್ರಕೃತಿನಿಯಮವನ್ನು ಮೀರಲು ಸಾಧ್ಯವಿಲ್ಲ" ಎಂದು ವಾದಿಸುತ್ತಾರೆ. ಇದು ಒಂದು ದೃಷ್ಟಿಯಿಂದ ನಿಜ; ಆದರೆ ಸಾಮಾನ್ಯವಾಗಿ ಅರ್ಥಮಾಡುವ ದೃಷ್ಟಿಯಿಂದಲ್ಲ. ಜೀವಾತ್ಮನು ತಾನು ಮಾಡುವ ಕರ್ಮಗಳಿಗೆ ತಾನು ಹೊಣೆಗಾರನಲ್ಲವೆಂದೂ,ಅದಕ್ಕೂ ತನಗೂ ಸಂಬಂಧವಿಲ್ಲವೆಂದೂ ಹೇಳಲು ಸಾಧ್ಯವಿಲ್ಲ. ಜೀವಾತ್ಮನಿಗೆ ಇಚ್ಛೆ ಮತ್ತು ಆಸೆಗಳುಂಟು; ಈ ಇಚ್ಛೆ ಮತ್ತು ಆಸೆಗಳಿಗನುಸಾರವಾಗಿ ಕರ್ಮಗಳನ್ನು ಮಾಡುತ್ತಿರುವವರೆಗೆ, ಕರ್ಮವನ್ನು ಮಾಡುವುದು ಪ್ರಕೃತಿಯೆ ಆದರೂ ಸಹ, ಅದರ ಬಂಧನವು ಜೀವಾತ್ಮನಿಗೆ ತಪ್ಪಿದ್ದಲ್ಲ. ಅವನು ಒಂದು ಪಾಶದಲ್ಲಿ, ಬಲೆಯಲ್ಲಿ ಸಿಕ್ಕಿಕೊಂಡಿದ್ದಾನೆ. ಅವನ ಪರಿಮಿತವಾದ ಅನುಭವದ ಮತ್ತು ತಿಳಿವಳಿಕೆಯ ದೃಷ್ಟಿಯಿಂದ ಈ ಬಂಧನವು ಜಟಿಲವಾಗಿಯೂ, ನಿಷ್ಕಾರಣವಾಗಿಯೂ, ಅನ್ಯಾಯವಾಗಿಯೂ ಮತ್ತು ಕ್ರೂರವಾಗಿಯೂ ಕಾಣಬಹುದು. ಆದರೆ ಈ ಬಂಧನವು ಸ್ವಯಂಕೃತವಾದುದು; ಈ ಬಲೆಯನ್ನು ತನ್ನ ಸುತ್ತಲೂ ಅವನೆ ಹೆಣೆದುಕೊಂಡಿದ್ದಾನೆ.

"ಸಮಸ್ತ ಭೂತಗಳೂ ತಮ್ಮ ಪ್ರಕೃತಿಗನುಸಾರವಾಗಿ ವರ್ತಿಸುತ್ತವೆ. ಇದನ್ನು ನಿಗ್ರಹಿಸುವುದು ಹೇಗೆ ಸಾಧ್ಯ?" ಎಂದು ಗೀತೆಯಲ್ಲಿ ಹೇಳಿರುವುದೇನೊ ನಿಜ. ಈ ವಾಕ್ಯವನ್ನು ಮಾತ್ರ ತೆಗೆದುಕೊಂಡರೆ ಪುರುಷನ ಮೇಲೆ ಪ್ರಕೃತಿಗೆ ಸರ್ವಾಧಿಕಾರವಿರುವಂತೆ ಭಾಸವಾಗುತ್ತದೆ. "ಜ್ಞಾನಿಯಾದವನೂ ಸಹ ತನ್ನ ಪ್ರಕೃತಿಗನುಸಾರವಾಗಿ ಕೆಲಸಮಾಡುತ್ತಾನೆ" ಎಂದು ಗೀತೆಯಲ್ಲಿ ಹೇಳಿದೆ. ಇದರ ಆಧಾರದ ಮೇಲೆ ನಮ್ಮ ಪ್ರಕೃತಿಧರ್ಮಕ್ಕನುಸಾರವಾಗಿಯೆ ಕೆಲಸಮಾಡಬೇಕೆಂದು ಉಪದೇಶಿಸುತ್ತದೆ. "ಚೆನ್ನಾಗಿ ಮಾಡಲ್ಪಡುವ ಇನ್ನೊಬ್ಬನ ಧರ್ಮಕ್ಕಿಂತಲೂ ಗುಣವಿಲ್ಲದ ನಮ್ಮ ಧರ್ಮವನ್ನೇ ಆಚರಿಸುವುದು ಒಳ್ಳೆಯದು. ನಮ್ಮ ಧರ್ಮವನ್ನು ಮಾಡುವುದರಲ್ಲಿ ಮರಣವು ಸಹ ಒಳ್ಳೆಯದು; ಬೇರೆಯವರ ಧರ್ಮವನ್ನು ಆಚರಿಸುವುದು ಭಯಕ್ಕೆ ಕಾರಣವಾದುದು." (ಗೀತೆ ೩-೩೫) **ಸ್ವಧರ್ಮ** ಎಂದರೆ ಏನು? ಈ ಪ್ರಶ್ನೆಗೆ ಮುಂದೆ ಬರುವ ಅಧ್ಯಾಯಗಳಲ್ಲಿ ಪುರುಷ, ಪ್ರಕೃತಿ ಮತ್ತು ಗುಣಗಳ ವಿಚಾರಮಾಡುವಾಗ, ಸರಿಯಾದ ಉತ್ತರವು ದೊರೆಯುತ್ತದೆ. ಸ್ವಧರ್ಮವನ್ನು ಅನುಸರಿಸಬೇಕು ಎಂದಮಾತ್ರಕ್ಕೆ ಯಾವುದಾದರೂ ಕೆಟ್ಟದ್ದನ್ನು ಮಾಡಬೇಕೆಂಬ ಇಚ್ಛೆ ನಮಗಾದರೆ, ಅದರಂತೆ ವರ್ತಿಸಬೇಕೆಂದು ಅರ್ಥವಲ್ಲ. ಮೇಲೆ ಹೇಳಿದ ಎರಡು ಉಪದೇಶವಾಕ್ಯಗಳ ನಡುವೆ ಗೀತೆಯು ಈ ಮುಂದಿನ ವಾಕ್ಯವನ್ನು ಹೇಳುತ್ತದೆ. "ಒಂದೊಂದು ಇಂದ್ರಿಯದ ವಿಷಯಗಳಲ್ಲಿಯೂ, ಆ ಇಂದ್ರಿಯಕ್ಕೆ ರಾಗದ್ವೇಷಗಳಿವೆ. ಅವುಗಳಿಗೆ ವಶವಾಗಕೂಡದು. ಅವು ಮನುಷ್ಯನ ದಾರಿಯನ್ನು ಅಡ್ಡಗಟ್ಟುತ್ತವೆ." (ಗೀತೆ ೪-೩೪) ಇದಕ್ಕೆ ಅರ್ಜುನನು ಈ ರೀತಿ ಕೇಳುತ್ತಾನೆ: "ನಮ್ಮ ಪ್ರಕೃತಿ ಸ್ವಭಾವಕ್ಕನುಸಾರವಾಗಿ ನಡೆಯುವುದರಲ್ಲಿ ದೋಷವಿಲ್ಲವೆಂದಾದರೆ, ನಮ್ಮ ಇಷ್ಟಕ್ಕೆ ವಿರೋಧವಾಗಿ, ಬಲಾತ್ಕಾರದಿಂದ, ನಮ್ಮನ್ನು ಪಾಪದ ಕಡೆಗೆ ಎಳೆಯುವ ನಮ್ಮ ಸ್ವಭಾವಕ್ಕೆ ಏನೆಂದು ಹೇಳಬೇಕು?" ಇದಕ್ಕೆ ಶ್ರೀಕೃಷ್ಣನು ಈ ರೀತಿ ಉತ್ತರ ಕೊಡುತ್ತಾ: "ಇದು ಕಾಮ; ಕ್ರೋಧ; ರಜೋಗುಣದಿಂದ ಉಂಟಾಗಿರುವುದು. ಈ ಕಾಮವು ಆತ್ಮನ ಪರಮ ವೈರಿ; ಇದನ್ನು ಕೊಲ್ಲಬೇಕು." ಮುಕ್ತಿಯನ್ನು ಪಡೆಯಲು ಮೊದಲನೆಯ ಹೆಜ್ಜೆಯೇನೆಂದರೆ ಕೆಟ್ಟ ನಡತೆಯನ್ನು ಬಿಡುವುದು (ದುಶ್ಚರಿತಾತ್ ನಿವೃತ್ತಿಃ); ಆದುದರಿಂದ ಆತ್ಮಸಂಯಮವನ್ನು, ನಮ್ಮ ಇಂದ್ರಿಯ ದೇಹ ಮತ್ತು ಮನಸ್ಸುಗಳನ್ನು ಅಧೀನದಲ್ಲಿಟ್ಟುಕೊಂಡು ಅವುಗಳ ಮೇಲೆ ನಾವು ಪೂರ್ಣವಾದ ಒಡೆಯತನವನ್ನು ಪಡೆಯಬೇಕೆಂದು ಗೀತೆಯು ಉಪದೇಶಿಸುತ್ತದೆ.

ನಮ್ಮ ಪ್ರಕೃತಿಯಲ್ಲಿ, ಸ್ವಭಾವದಲ್ಲಿ ನೈಜವಾದುದು—ಎಂದರೆ ಅದಕ್ಕೆ ಸಹಜವಾದ ಮತ್ತು ಆವಶ್ಯಕವಾದ ಗುಣ ಯಾವುದು? ಮತ್ತು ಗೌಣವಾದುದು-ಎಂದರೆ ತಾತ್ಕಾಲಿಕವಾದುದು ಯಾವುದು? ಇದನ್ನು ನಾವು ವಿವೇಚಿಸಿ ತಿಳಿದು ಕೊಳ್ಳಬೇಕು. ನೈಜವಾದ ಸ್ವಭಾವವನ್ನು ಮುಚ್ಚುವುದಕ್ಕಾಗಲಿ, ಅಡಗಿಸುವುದ ಕ್ಕಾಗಲಿ ಸಾಧ್ಯವಿಲ್ಲ; ಅದು ಒಳ್ಳೆಯದೂ ಅಲ್ಲ. ಗೌಣವಾದ ಸ್ವಭಾವಗಳು ನಮ್ಮ ಪ್ರಕೃತಿಯು ಅಡ್ಡದಾರಿ ಹಿಡಿದಾಗ ಉಂಟಾಗುವ ಭ್ರಾಂತಿಗಳು, ವೈಪರೀತ್ಯಗಳು; ಇವನ್ನು ನಾವು ಖಂಡಿತವಾಗಿಯೂ ನಿಯಂತ್ರಿಸಬೇಕು, ನಮ್ಮ ಸ್ವಾಧೀನದಲ್ಲಿಟ್ಟು ಕೊಳ್ಳಬೇಕು. ನಿಗ್ರಹಕ್ಕೂ ಮತ್ತು ಸರಿಯಾದ ಉಪಯೋಗ, ನಿಯಂತ್ರಣೆ ಅಥವಾ ಸಂಯಮಗಳಿಗೂ ವ್ಯತ್ಯಾಸವಿದೆಯೆಂಬುದನ್ನು ನಾವು ಗಮನಿಸಬೇಕು. ನಿಗ್ರಹವೆಂದರೆ ನಮ್ಮ ಪ್ರಕೃತಿಯ ಮೇಲೆ ನಮ್ಮ ಇಚ್ಛಾಶಕ್ತಿಯು ಮಾಡುವ ದಬ್ಬಾಳಿಕೆ. ಇದು ನಮ್ಮ ಪ್ರಕೃತಿಗೆ ಸಹಜವಾದ ಶಕ್ತಿಗಳನ್ನು ಕುಗ್ಗಿಸುತ್ತದೆ. ಸಂಯಮವೆಂದರೆ ಆತ್ಮನು ತನ್ನ ಕೆಳಗಿನ ಉಪಾಧಿಗಳನ್ನು ವಶದಲ್ಲಿಟ್ಟುಕೊಂಡು ತನಗೆ ಸೂಕ್ತವೆಂದು ಕಂಡ ರೀತಿಯಲ್ಲಿ ಅವುಗಳಿಂದ ಕೆಲಸಮಾಡಿಸುವುದು. ಹೀಗೆ ಮಾಡುವುದರಿಂದ ನಮ್ಮ ಸ್ವಭಾವಸಹಜವಾದ ಶಕ್ತಿಗಳನ್ನು ಅಭಿವೃದ್ಧಿಗೆ ತಂದು ಆದಷ್ಟು ಚೆನ್ನಾಗಿ ಕೆಲಸಮಾಡುವಂತಾಗುತ್ತದೆ. ಇದೇ ಅರ್ಥದಲ್ಲಿ ಭಗವಂತನು **ನ ಆತ್ಮಾನಂ ಅವಸಾದಯೇತ್** ಎಂದೂ, **ಯೋಗಃ ಕರ್ಮಸು ಕೌಶಲಂ** ಎಂದೂ ಹೇಳಿದ್ದಾನೆ. ೬ನೆಯ ಅಧ್ಯಾಯದ ಪ್ರಾರಂಭದಲ್ಲಿ ಗೀತೆಯು ಸಂಯಮದ ಸ್ವರೂಪವನ್ನು ಸ್ಪಷ್ಟವಾಗಿ ವಿವರಿಸಿದೆ. 'ಆತ್ಮನಿಂದ ಆತ್ಮನನ್ನು ಮೇಲಕ್ಕೆತ್ತ ಬೇಕು. ವಿಷಯಲೋಲುಪ್ತಿಯಿಂದಾಗಲಿ, ನಿಗ್ರಹದಿಂದಾಗಲಿ ಆತ್ಮನನ್ನು ಕೆಳಕ್ಕೆ ತಳ್ಳಕೂಡದು. ಆತ್ಮನಿಗೆ ಆತ್ಮನೆ ನೆಂಟ, ಆತ್ಮನಿಗೆ ಆತ್ಮನೆ ಶತ್ರು. ಯಾವನ (ಕೆಳಗಿನ ಮಟ್ಟದ) ಆತ್ಮವು (ಮೇಲಿನ ಮಟ್ಟದ) ಆತ್ಮನಿಂದ ಜಯಿಸಲ್ಪಟ್ಟಿದೆಯೊ ಅಂತಹವನಿಗೆ ಆತ್ಮನು ಬಂಧು. ಯಾವನ (ಕೆಳಗಿನ ಮಟ್ಟದ) ಆತ್ಮವು ಜಯಿಸ ಲ್ಪಟ್ಟಿಲ್ಲವೊ ಅವನಿಗೆ ಆತ್ಮನೆ ಶತ್ರುವು." (ಗೀತೆ: ೬, ೫-೬) ಮನುಷ್ಯನು ತನ್ನ (ಕೆಳಗಿನ ಮಟ್ಟದ) ಆತ್ಮವನ್ನು ಜಯಿಸಿ, ಆತ್ಮಸಂಯಮದ ಮತ್ತು ಪ್ರಭುತ್ವದ ಶಾಂತಿಯನ್ನು ಪಡೆದಾಗ ಪರಮಾತ್ಮನು ಅವನ ಎಲ್ಲ ಉಪಾಧಿಗಳಲ್ಲಿಯೂ ಸಮವಾಗಿ ನೆಲೆಸಿ ಕೆಲಸಮಾಡುತ್ತಾನೆ. ಎಂದರೆ ಕೆಳಗಿನ ಮಟ್ಟದ ಆತ್ಮವನ್ನು, ಪ್ರಕೃತಿಯನ್ನು, ಮೇಲಿನ ಮಟ್ಟದ ಆತ್ಮನು ಗೆಲ್ಲುವುದೆ ಮುಕ್ತಿಯ ಮತ್ತು ಪೂರ್ಣತೆಯ ಮಾರ್ಗ.

ಮೇಲೆ ಹೇಳಿರುವುದು (ಪ್ರಕೃತಿಯ) ನಿಯತಿಯ ವ್ಯಾಪ್ತಿಯು ಎಷ್ಟೆಂಬು ದನ್ನು ನಿರೂಪಿಸುತ್ತದೆ. ನಿಯತಿಯೆಂಬ ಪದದ ಅರ್ಥವನ್ನೂ ಪರಿಮಿತಿಯನ್ನೂ ಸ್ಪಷ್ಟಪಡಿಸುತ್ತದೆ. ಕೆಳಗಿನಿಂದ ಮೇಲಿನ ಮಟ್ಟದ ವರೆಗೆ ಪ್ರಕೃತಿಯ ಗುಣಗಳು ಕೆಲಸಮಾಡುವ ಕ್ರಮವನ್ನು ನೋಡಿದರೆ ಪ್ರಕೃತಿಯ ದಾಸರಾಗಿರುವ ಸ್ಥಿತಿಯಿಂದ ಸ್ವಾಮಿಯಾಗುವ ಸ್ಥಿತಿಗೆ ಬೆಳೆಯುವ ವಿಧಾನವು ಚೆನ್ನಾಗಿ ವ್ಯಕ್ತವಾಗುತ್ತದೆ. ಸಂಸರಣ ಸೋಪಾನದ ಬುಡದಲ್ಲಿರುವ ಜೀವಿಗಳಲ್ಲಿ ತಮಸ್ಸು ಪ್ರಧಾನವಾಗಿದೆ. ನಾನು ಎಂಬ ಭಾವನೆ ಇವರಲ್ಲಿ ಬೆಳೆದಿಲ್ಲ. ಆತ್ಮನ ವಿಚಾರದಲ್ಲಿ ಇವರಿಗೆ ಆಸಕ್ತಿ ಯಿಲ್ಲ. ಪ್ರಕೃತಿಯ ಸೆಳೆತಕ್ಕೆ ಸಿಕ್ಕಿ ಅದು ಒಯ್ಯುವ ಕಡೆಗೆ ಹೋಗುತ್ತಾರೆ. ಪರಮಾಣುವಿನಲ್ಲಿಯೂ ಕೂಡ ಇಚ್ಛಾಶಕ್ತಿ ಇದೆ. ಆದರೆ ತನ್ನ ಇಷ್ಟಾನುಸಾರ ಪರಮಾಣು ವರ್ತಿಸಲು ಅದಕ್ಕೆ ಸ್ವಾತಂತ್ರ್ಯವಿಲ್ಲ. ಈ ಇಚ್ಛಾಶಕ್ತಿ ಯಾಂತ್ರಿಕವಾಗಿ ಕೆಲಸಮಾಡುತ್ತದೆ; ಪರಮಾಣುವಿನ ವಶದಲ್ಲಿಲ್ಲ. ಪರಮಾಣುವಿನಲ್ಲಿ ಪ್ರಕೃತಿಯು ವ್ಯಕ್ತಪಡಿಸುವ ಬುದ್ಧಿ ಮತ್ತು ಸಂಕಲ್ಪಗಳು ಸಾಂಖ್ಯವು ಹೇಳುವಂತೆ ಜಡವಾದವು, ಯಾಂತ್ರಿಕವಾದವು, ಚೇತನವಿಲ್ಲದುವು. ಚೈತನ್ಯವಿಶಿಷ್ಟನಾದ ಆತ್ಮನ ಬೆಳಕು ಇನ್ನೂ ಪ್ರಕಾಶಕ್ಕೆ ಬಂದಿಲ್ಲ. ತಾನು ಒಂದು ಸಂಕಲ್ಪಕ್ಕನುಸಾರವಾಗಿ ಕೆಲಸ ಮಾಡುತ್ತಿದ್ದೇನೆಂಬ ಪರಿಜ್ಞಾನವು ಪರಮಾಣುವಿಗಿಲ್ಲ. ಇದು ಜಡತ್ವದ ಮತ್ತು ಅಜ್ಞಾನ ಸ್ವರೂಪವಾದ ತಮೋಗುಣದ ಹಿಡಿತದಲ್ಲಿದೆ. ಆದರೆ ಇದು ರಜೋಗುಣ ಯುಕ್ತವಾಗಿಯೂ ಇದೆ ಮತ್ತು ಸತ್ವಗುಣವೂ ಇದರಲ್ಲಿ ಅಡಗಿದೆ. ಆದರೆ ಸದ್ಯಕ್ಕೆ ತಮೋಗುಣವೇ ಪ್ರಧಾನವಾಗಿದೆ. ಪ್ರಕೃತಿಯು ಇಂತಹ ಅಚೇತನ ವಸ್ತುಗಳನ್ನು ಅದ್ಭುತವಾದ ಶಕ್ತಿಯಿಂದ ಕೆಲಸಮಾಡುವಂತೆ ನಿಯೋಜಿಸಿದ್ದರೂ, ಇವು ಯಾಂತ್ರಿಕ ವಾಗಿ ಕೆಲಸಮಾಡುತ್ತವೆ. ಮುಂದಿನ ಮೆಟ್ಟಲಾದ ಸಸ್ಯಗಳಲ್ಲಿ ರಜೋಗುಣವು ಪ್ರಕಾಶವಾಗಿದೆ. ಇವಕ್ಕೆ ಜೀವವಿದೆ; ನಮ್ಮ ದೇಹಕ್ಕೆ ಉಂಟಾಗುವ ಹರ್ಷ, ಶೋಕಗಳಿಗೆ ಕಾರಣವಾದ ಸ್ಪಂದಗಳು ಸಸ್ಯಗಳಲ್ಲಿಯೂ ಆಗುತ್ತವೆ. ಸತ್ವಗುಣವು ಮಾತ್ರ ಇನ್ನೂ ಗುಪ್ತವಾಗಿಯೆ ಇದೆ. "ನಾನು ಅನುಭವಿಸುತ್ತೇನೆ, ತಿಳಿಯುತ್ತೇನೆ, ಇಚ್ಛಿಸುತ್ತೇನೆ" ಎನ್ನುವಷ್ಟು ಸತ್ವಗುಣವು ಎಚ್ಚರಗೊಂಡಿಲ್ಲ. ಇನ್ನೂ ಎಲ್ಲ ಕ್ರಿಯೆ ಗಳೂ ಯಾಂತ್ರಿಕವಾಗಿಯೆ ಅರ್ಧ ತಿಳಿದು, ಅರ್ಧ ತಿಳಿಯದೆಯೆ ಆಗುತ್ತವೆ. ತಮೋಗುಣವು ರಜೋಗುಣಕ್ಕಿಂತ ಪ್ರಬಲವಾಗಿದೆ. ಇವೆರಡೂ ಸತ್ವಗುಣವನ್ನು ಮರೆಮಾಡಿವೆ.

ಸಸ್ಯಕ್ಕಿಂತ ಮುಂದಿನ ಮೆಟ್ಟಲಲ್ಲಿರುವ ಪ್ರಾಣಿಗಳಲ್ಲಿ ತಮೋಗುಣವು

ಪ್ರಧಾನವಾಗಿದ್ದರೂ, ಪ್ರಾಣಿಗಳೂ ತಾಮಸವರ್ಗಕ್ಕೆ ಸೇರಿವೆಯೆಂದು ಹೇಳಬಹು ದಾದರೂ ರಜೋಗುಣವೂ ಚೆನ್ನಾಗಿ ಬೆಳೆದು ತಮೋಗುಣವನ್ನು ತಕ್ಕಮಟ್ಟಿಗೆ ಹಿಂದೆ ಹಾಕಿ ತಾನು ಪ್ರಕಾಶವಾಗುತ್ತದೆ. ಪ್ರಾಣಿಗಳಲ್ಲಿ ಸಸ್ಯಗಳಿಗಿಂತ ಮೇಲ್ಮಟ್ಟದ ಜೀವನದ ರೀತಿಯನ್ನೂ ರಾಗ, ದ್ವೇಷ, ಕಾಮ ಕ್ರೋಧ, ಸುಖ, ದುಃಖ ಮುಂತಾದ ಭಾವನೆಗಳನ್ನೂ ನಾವು ಕಾಣಬಹುದು. ಸತ್ವವು ಸ್ವಲ್ಪಮಟ್ಟಿಗೆ ತಲೆ ಯೆತ್ತಿ ಕೀಳ್ಮಟ್ಟದಲ್ಲಿ ಕೆಲಸಮಾಡಲು ತೊಡಗಿದೆ. ಇದರಿಂದ ನಾನು ಎಂಬ ಜ್ಞಾನ, ಅಹಂಕಾರ, ಜ್ಞಾಪಕಶಕ್ತಿ, ಹಿತಾಹಿತಗಳನ್ನು ತಕ್ಷಣವೆ ತಿಳಿಯಬಲ್ಲ ಪ್ರಾಣಿಸಹಜ ವಾದ ಚಾತುರ್ಯ (instinct) ಇವುಗಳೆಲ್ಲವೂ ಕಂಡುಬರುತ್ತವೆ. ಆದರೆ ಇಚ್ಛಾ ಶಕ್ತಿ ಮತ್ತು ಬುದ್ಧಿಗಳು ಸಾಕಷ್ಟು ಬೆಳೆದಿಲ್ಲ. ಆದುದರಿಂದ ಪ್ರಾಣಿಗಳು ಮಾಡುವ ಕೆಲಸಗಳಿಗೆ ಜವಾಬ್ದಾರಿಯನ್ನು ಅವುಗಳ ಮೇಲೆ ಹೊರಿಸಲಾಗುವುದಿಲ್ಲ. ಬಿರುಗಾಳಿ ನಾಶಮಾಡುತ್ತದೆ, ಬೆಂಕಿ ಎಲ್ಲವನ್ನೂ ಸುಡುತ್ತದೆ, ಅಥವಾ ಪರಮಾಣುವು ಚಲಿಸು ತ್ತದೆ ಎಂಬುದಾಗಿ ಆಕ್ಷೇಪಿಸಲು ಹೇಗೆ ಸಾಧ್ಯವಿಲ್ಲವೊ ಹಾಗೆಯೆ ಹುಲಿಯು ಕೊಲ್ಲು ತ್ತದೆ ಎಂಬುದಾಗಿ ಅದರ ಮೇಲೆ ಅಪರಾಧವನ್ನು ಹೊರಿಸುವುದು ನ್ಯಾಯವಲ್ಲ. ನಮ್ಮ ಪ್ರಶ್ನೆಗಳಿಗೆ ಹುಲಿಯು ಉತ್ತರಕೊಡುವಂತಿದ್ದರೆ ಪ್ರಾಯಶಃ ಅದೂ ಕೂಡ ಮನುಷ್ಯರಂತೆ "ಕೆಲಸಗಳನ್ನು ಮಾಡಲು ನನಗೆ ಪೂರ್ಣಸ್ವಾತಂತ್ರ್ಯವಿದೆ. ಕೊಲ್ಲು ವವನು, ತಿನ್ನುವವನು ನಾನೇಯೇ" ಎಂದು ಹೇಳುತ್ತಿತ್ತು. ಆದರೆ ನಮಗೆ ಸ್ಪಷ್ಟ ವಾಗಿ ಗೋಚರವಾಗುವಂತೆ, ಕೊಲ್ಲುವುದು ಮತ್ತು ತಿನ್ನುವುದು ಹುಲಿಯಲ್ಲ; ಹುಲಿಯನ್ನು ನಿಮಿತ್ತವನ್ನಾಗಿ ಮಾಡಿಕೊಂಡಿರುವ ಪ್ರಕೃತಿ. ಒಂದುವೇಳೆ ಹುಲಿಯು ಕೊಲ್ಲುವುದಕ್ಕೂ, ತಿನ್ನುವುದಕ್ಕೂ ಹಿಂತೆಗೆದರೆ, ಅದಕ್ಕೆ ಕಾರಣವು ಹೊಟ್ಟೆ ತುಂಬಿರುವುದು, ತೃಪ್ತಿ ಅಥವಾ ಭಯ ಅಥವಾ ನೋವಾರಿತನ; ಪ್ರಕೃತಿಯ ಗುಣಗಳಲ್ಲಿ ಒಂದಾದ ತಮೋಗುಣದ ಪ್ರಭಾವ. ಕೊಲ್ಲುವುದಕ್ಕೆ ಪ್ರಾಣಿಯ ಪ್ರಕೃತಿಯು ಹೇಗೆ ಕಾರಣವೊ ಕೊಲ್ಲುವುದರಿಂದ ಹಿಂತೆಗೆಯುವುದಕ್ಕೂ ಈ ಪ್ರಕೃತಿಯೆ ಕಾರಣ. ಪ್ರಾಣಿಯಲ್ಲಿರುವ ಆತ್ಮಾಂಶವು ನಿಷ್ಕ್ರಿಯವಾಗಿ, ಉದಾಸೀನ ವಾಗಿದ್ದುಕೊಂಡು ಪ್ರಕೃತಿಯ ಕೆಲಸಕ್ಕೆ ಅನುಮತಿಯನ್ನೀಯುತ್ತದೆ. ಪ್ರಕೃತಿಯು ರಾಗಭಾವಗಳಿಗೊಳಗಾಗಿ ಕೆಲಸಮಾಡುವಾಗಲೂ, ಗುಣಗಳಿಂದ ಹಿಮ್ಮೆಟ್ಟಿ ಜಡ ವಾಗಿರುವಾಗಲೂ ಕೂಡ ಈ ಆತ್ಮಾಂಶವು ಒಂದೇ ರೀತಿಯಾಗಿ ಉದಾಸೀನವಾಗಿ, ಏನನ್ನೂ ಮಾಡದೆ ಇರುತ್ತದೆ. ಪರಮಾಣುವಿನಂತೆ ಪ್ರಾಣಿಯೂ ಸಹ ತನ್ನ ಪ್ರಕೃತಿಗನುಸಾರವಾಗಿ ಯಾಂತ್ರಿಕವಾಗಿ ಕೆಲಸಮಾಡುತ್ತದೆಯೆ ವಿನಾ ಬೇರೆ ರೀತಿ

ಯಲ್ಲಲ್ಲ. **ಸದೃಶಂ ಚೇಷ್ಟತೇ ಸ್ವಸ್ಯಾಃ ಪ್ರಕೃತೇಃ । ಯಂತ್ರಾರೂಢಾನಿ ಮಾಯಯಾ ॥**

ಹೋಗಲಿ, ಮನುಷ್ಯನಲ್ಲಾದರೂ ಸ್ವತಂತ್ರನಾದ ಆತ್ಮ, ತನ್ನ ಸ್ವಂತ ಇಷ್ಟದಂತೆ ವರ್ತಿಸುವ ಸ್ವಾತಂತ್ರ್ಯ, ತಾನು ಮಾಡುವ ಕರ್ಮಗಳಿಗೆ ಜವಾಬ್ದಾರಿ, ಇವೆಲ್ಲವೂ ಇದ್ದು ಮಾಯೆ ಮತ್ತು ಪ್ರಕೃತಿಗಳಲ್ಲದೆ ಅವನು ತಾನೆ ಕರ್ತೃವಾಗಿರುತ್ತಾನೆಯೆ? ಹಾಗಿರುವಂತೆ ಕಾಣಿಸುತ್ತದೆ. ಏತಕ್ಕೆಂದರೆ ಮನುಷ್ಯನಿಗೆ "ನಾನು" ಎಂಬ ಜ್ಞಾನವೂ; ಇದನ್ನು ಮಾಡಬೇಕು, ಇದನ್ನು ಮಾಡಬಾರದು ಎಂಬ ಇಚ್ಛೆಯೂ; ವಿವೇಕಬುದ್ಧಿಯೂ ಇವೆ. ಇವನ ಬುದ್ಧಿಯ ಮೂಲಕ ಸಾಕ್ಷಿಯಾದ ಆತ್ಮನ ಪ್ರಕಾಶವು ಹೊರಹೊಮ್ಮುತ್ತದೆ. ಈ ಬುದ್ಧಿಯ ಮೂಲಕ ಆತ್ಮನು ಎಲ್ಲವನ್ನೂ ನೋಡುತ್ತಾನೆ; ತಿಳಿಯುತ್ತಾನೆ; ಒಪ್ಪುತ್ತಾನೆ ಅಥವಾ ಒಪ್ಪುವುದಿಲ್ಲ; ಅನುಮತಿಯನ್ನು ಕೊಡುತ್ತಾನೆ ಅಥವಾ ನಿರಾಕರಿಸುತ್ತಾನೆ. ತನ್ನ ಪ್ರಕೃತಿಯ ಮೇಲೆ ಒಡೆಯತನವನ್ನು ಪ್ರಕಟಿಸಲು ತೊಡಗುತ್ತಾನೆ. ಮನುಷ್ಯನು ಹುಲಿ, ಬಿರುಗಾಳಿ ಅಥವಾ ಬೆಂಕಿಯಂತಲ್ಲ. ಅವನು ಕೊಲೆಮಾಡಿ "ನನ್ನ ಪ್ರಕೃತಿ ಸ್ವಭಾವಕ್ಕನುಸಾರವಾಗಿ ವರ್ತಿಸುತ್ತೇನೆ" ಎಂದು ಹೇಳಲಾಗುವುದಿಲ್ಲ. ಏತಕ್ಕಾಗುವುದಿಲ್ಲವೆಂದರೆ: ಹುಲಿ ಅಥವಾ ಬೆಂಕಿಯ ಪ್ರಕೃತಿ ಮತ್ತು ಧರ್ಮಗಳೆ ಬೇರೆ, ಮನುಷ್ಯನ ಪ್ರಕೃತಿ ಮತ್ತು ಧರ್ಮಗಳೆ ಬೇರೆ. ಇವನಿಗೆ ತಾನೆ ಸ್ವಂತವಾಗಿ ವಿವೇಚನೆ ಮಾಡುವ, ಸರಿ-ತಪ್ಪೆಂದು ಹೇಳುವ, ಬುದ್ಧಿಯಿದೆ; ಅವಕ್ಕನುಸಾರವಾಗಿ ಅವನು ವರ್ತಿಸಬೇಕು ಹೀಗೆ ಮಾಡದೆ, ಮನುಷ್ಯನು ತನ್ನ ರಾಗ, ದ್ವೇಷಗಳಿಗೊಳಗಾಗಿ ವಿವೇಚನೆಯಿಲ್ಲದೆ ಕರ್ಮಗಳನ್ನು ಮಾಡಿದರೆ ಅವನು ತನ್ನ ಸ್ವಧರ್ಮವನ್ನು ಅನುಸರಿಸಿದಂತಾಗುವುದಿಲ್ಲ; ಕೇವಲ ಪ್ರಾಣಿಯಂತೆ ವರ್ತಿಸಿದಂತಾಗುತ್ತದೆಯೆ ಹೊರತು ತನ್ನ ಮನುಷ್ಯತ್ವವನ್ನು ವ್ಯಕ್ತಪಡಿಸಿದಂತಾಗುವುದಿಲ್ಲ. ಮನುಷ್ಯನ ಪ್ರಕೃತಿಯಲ್ಲಿರುವ ತಮೋಗುಣ ಮತ್ತು ರಜೋಗುಣಗಳು ಅವನ ಬುದ್ಧಿಯ ಮೇಲೆ ಪ್ರಭಾವವನ್ನು ಬೀರಿ ಅವನು ಕರ್ಮಗಳನ್ನು ಮಾಡುವಂತೆ ಮತ್ತು ಕೆಲವು ಕರ್ಮಗಳಿಂದ ಹಿಂತೆಗೆಯುವಂತೆ ಮಾಡುವುದಲ್ಲದೆ, ತಾನು ತನ್ನ ಸ್ವಂತ ಸಂಕಲ್ಪದಿಂದ ಸಕಾರಣವಾಗಿಯೆ ಈರೀತಿ ವರ್ತಿಸುತ್ತಿದ್ದೇನೆಂಬ ಅಭಿಪ್ರಾಯವನ್ನು ಅವನಲ್ಲಿ ಮೂಡಿಸುತ್ತವೆ. ಅಂತೂ ಅವನು ಕರ್ಮವನ್ನು ಮಾಡುವುದಕ್ಕೆ ಮುಂಚಿಯಾಗಲಿ, ಅನಂತರವಾಗಲಿ ಅವನ ಬುದ್ಧಿಯು ಒಂದು ಕಾರಣವನ್ನು ಕಲ್ಪಿಸುತ್ತದೆ. ಇಷ್ಟೆ ಅಲ್ಲದೆ, ಮನುಷ್ಯನಲ್ಲಿ ಸಾತ್ವಿಕಗುಣವು ಎಚ್ಚರಗೊಂಡಿದೆ. ಅದು

ಬುದ್ಧಿಯು ಮತ್ತು ಸಂಕಲ್ಪದ್ವಿ ರೂಪಗಳಲ್ಲಿ ಕೆಲಸಮಾಡುತ್ತದ್ಯೆ ಮತ್ತು ಆಧ್ಯಾತ್ಮಿಕ ಬೆಳಕಿಗಾಗಿ, ಸಮ್ಯಕ್ ಜ್ಞಾನಕ್ಕಾಗಿ ಮತ್ತು ಈ ಜ್ಞಾನಕ್ಕನುಸಾರವಾಗಿ ಕೆಲಸಮಾಡು ವುದಕ್ಕಾಗಿ ಯತ್ನಿಸುತ್ತದೆ. ನಮ್ಮಂತೆಯೆ ಇತರರಿಗೂ ಕಷ್ಟಸುಖಗಳಿವೆ ಎಂಬ ತಿಳಿ ವಳಿಕೆಯನ್ನೂ, ಇತರರ ಕಷ್ಟಗಳಲ್ಲಿ ಅನುಕಂಪವನ್ನೂ ಉಂಟುಮಾಡುತ್ತದೆ. ಈ ಸತ್ವಗುಣವು ಮನುಷ್ಯನು ತನ್ನ ಅಂತರಾತ್ಮನ ಸಂಕಲ್ಪವನ್ನು ತಿಳಿದು ಅದರಂತೆ ವರ್ತಿಸುವಂತೆ ಪ್ರೇರಿಸುತ್ತದೆ. ಸದಾಚಾರ, ಜ್ಞಾನ ಮತ್ತು ಅನುಕಂಪಗಳಿಂದ ಬರುವಂತಹ ನಿತ್ಯವಾದ ಶಾಂತಿಯನ್ನೂ ಸುಖವನ್ನೂ ಪಡೆಯಬೇಕೆಂಬ ಲಕ್ಷ್ಯ ವನ್ನು ನಮ್ಮ ಮುಂದೆ ಇಡುತ್ತದೆ. ತನ್ನ ರಾಜಸ ಮತ್ತು ತಾಮಸ ಗುಣಗಳನ್ನು ಸತ್ವಗುಣದಿಂದ ಜಯಿಸಬೇಕೆಂದೂ, ಇದೇ ಮನುಷ್ಯರ ಬೆಳವಳಿಕೆಯ ದಾರಿ ಯೆಂದೂ ಎಲ್ಲ ಮನುಷ್ಯರೂ ತಕ್ಕಮಟ್ಟಿಗೆ ತಿಳಿದುಕೊಂಡಿದ್ದಾರೆ.

ಆದರೆ ಸತ್ವಗುಣವೆ ಪ್ರಧಾನವಾಗಿರುವ ಮನುಷ್ಯನು ನಿಜವಾಗಿಯೂ ಸ್ವತಂತ್ರನೆ? ತನ್ನದೆಂದು ಅವನು ಭಾವಿಸುವ ಸಂಕಲ್ಪವು ನಿಜವಾಗಿಯೂ ಅವನದೇಯೆ? ಈ ಪ್ರಶ್ನೆಗೆ ಗೀತೆಯು 'ಅಲ್ಲ' ಎಂದು ಉತ್ತರಕೊಡುತ್ತದೆ. ಹೀಗೆ ಹೇಳುವಾಗ ಗೀತೆಯ ದೃಷ್ಟಿಯು ಮೇಲ್ಮಟ್ಟದ ಆತ್ಮನ ದೃಷ್ಟಿ. ನಮ್ಮ ಬುದ್ಧಿಯೂ ಕೂಡ ಪ್ರಕೃತಿಯ ಒಂದು ಅಂಶವೇಯೆ. ಸತ್ವಗುಣವು ಪ್ರಧಾನ ವಾಗಿರುವಾಗ ಕೂಡ ಬುದ್ಧಿಯು ಕೆಲಸಮಾಡುವಾಗಲೂ ಕೆಲಸಮಾಡುತ್ತಿರುವುದು ಪ್ರಕೃತಿಯೆ; ಆತ್ಮನು ಮಾಯೆಯ ಚಕ್ರದಲ್ಲಿ ಸಿಕ್ಕಿಕೊಂಡು ಇನ್ನು ತಿರುಗುತ್ತಲೆ ಇದ್ದಾನೆ. ನಮಗೆ ಸ್ವಾತಂತ್ರ್ಯ ವಿದೆಯೆಂದು ನಾವು ತಿಳಿದಿರುವುದು ಬಹುಮಟ್ಟಿಗೆ ಭ್ರಾಂತಿಯೆನ್ನುವುದು ಸ್ಪಷ್ಟ. ನಾವು ಯಾವುದಾದರೊಂದು ಕೆಲಸವನ್ನು ಮಾಡು ವಾಗ ನಮ್ಮಲ್ಲಿರುವ ಸಂಕಲ್ಪವು, ನಮ್ಮ ಸ್ವಯಂಪ್ರೇರಿತವಾದ ಸಂಕಲ್ಪವಲ್ಲ. ನಮ್ಮ ಪೂರ್ವ ಜೀವನ, ಅನುವಂಶೀಯಗುಣಗಳು, ವಿದ್ಯಾಭ್ಯಾಸವೆ ಮೊದಲಾದ ಸಂಸ್ಕಾರಗಳು, ನಮ್ಮ ಸನ್ನಿವೇಶ, ಮುಂತಾದುವುಗಳಿಂದ ನಮ್ಮ ಸಂಕಲ್ಪವು ರೂಪುಗೊಂಡಿದೆ. 'ಕರ್ಮ'ವೆಂಬ ಪದದಲ್ಲಡಕವಾಗಿರುವ ನಮ್ಮ ಇಡೀ ಪೂರ್ವಾನು ಭವಗಳೆಲ್ಲ ನಮ್ಮ ಸಂಕಲ್ಪಕ್ಕೆ ಆಧಾರವಾಗಿವೆ. ಪ್ರಕೃತಿಯು ಇದುವರೆಗೆ ವ್ಯಕ್ತಿಯ ಮೇಲೆ ಮತ್ತು ಪ್ರಪಂಚದ ಮೇಲೆ ಬೀರಿರುವ ಪ್ರಭಾವವೆಲ್ಲವೂ ಆ ವ್ಯಕ್ತಿಯಲ್ಲಿ ಕೇಂದ್ರೀಕೃತವಾಗಿ, ಅವನ ಸ್ವಭಾವವನ್ನೂ, ತತ್ಕಾಲಕ್ಕೆ ಅವನ ಸಂಕಲ್ಪವನ್ನೂ ರೂಪಿಸಿ ಅವನು ಮಾಡುವ ಕರ್ಮಗಳನ್ನೂ ಸಹ ಬಹುಮಟ್ಟಿಗೆ ನಿರ್ಣಯಿಸುತ್ತದೆ. ವ್ಯಕ್ತಿಯು ಅಹಂಕಾರ ವಿಶಿಷ್ಟನಾಗಿ ತಾನೇ ಕರ್ತೃವೆಂದು ಭಾವಿಸುತ್ತಾನೆ.

ಅಹಂಕಾರವಿಶಿಷ್ಟನಾದವನು 'ನಾನು ಮಾಡಿದೆನು' 'ನಾನು ಮಾಡುತ್ತೇನೆ' ಎಂಬುದಾಗಿ ಹೇಳುತ್ತಾನೆ. ಆದರೆ ಮನುಷ್ಯನು ಇತರರ ವ್ಯಾಪಾರಗಳನ್ನು ಅಹಂ ಭಾವವನ್ನು ಬಿಟ್ಟು ನೋಡುವಂತೆ ತನ್ನ ವ್ಯಾಪಾರಗಳನ್ನೂ ಜಾಗರೂಕತೆಯಿಂದ ಪರಿಶೀಲಿಸಿದರೆ 'ನನ್ನ ಮೂಲಕ ಪ್ರಕೃತಿಯು ಮಾಡಿತು' 'ನನ್ನಲ್ಲಿ ಪ್ರಕೃತಿಯು ಸಂಕಲ್ಪಮಾಡಿತು' ಎಂಬುದಾಗಿ ಹೇಳಬೇಕಾಗುತ್ತದೆ. 'ನನ್ನ ಪ್ರಕೃತಿ' ಎಂದರೆ ಆ ಮನುಷ್ಯನಲ್ಲಿ ಪ್ರತ್ಯೇಕವಾಗಿರುವ ಪ್ರಕೃತಿ ಎಂದರ್ಥ. ಈ ವಿಷಯವನ್ನು ಗಮನಿಸಿ ಅದಕ್ಕೆ ಹೆಚ್ಚು ಪ್ರಾಧಾನ್ಯಕೊಟ್ಟಿದ್ದುದರಿಂದಲೆ ಬೌದ್ಧರು "ಎಲ್ಲವೂ ಕರ್ಮ; ಆತ್ಮನಿಲ್ಲ; ಆತ್ಮನೆಂಬುದು ಅಹಂಕಾರಕ್ಕೊಳಗಾದ ಮನಸ್ಸಿನ ಭ್ರಾಂತಿ ಮಾತ್ರ" ಎಂದು ಸಿದ್ಧಾಂತ ಮಾಡಿದರು. ಮನುಷ್ಯನು "ನಾನು ಒಳ್ಳೆಯ ಕೆಲಸವನ್ನು ಮಾಡುತ್ತೇನೆ, ಕೆಟ್ಟ ಕೆಲಸವನ್ನು ಮಾಡುವುದಿಲ್ಲ" ಎಂದು ಸಂಕಲ್ಪ ಮಾಡುವುದು ತಿರುಗುತ್ತಿರುವ ಚಕ್ರದ ಮೇಲಿರುವ ಒಂದು ನೊಣ ಅಥವಾ ಚಕ್ರದ ಒಂದು ಭಾಗವು "ನಾನು ನನ್ನ ಸ್ವಂತ ಇಚ್ಛೆಯಿಂದ ತಿರುಗುತ್ತಿದ್ದೇನೆ" ಎಂದು ಕೊಳ್ಳುವಂತೆ ಇದೆ. ಈ ಸಂಕಲ್ಪವನ್ನು ಮಾಡಿರುವುದು ಪ್ರಕೃತಿ; ಮನುಷ್ಯನಲ್ಲ. ಸತ್ವಗುಣವನ್ನು ವ್ಯಕ್ತಪಡಿಸುವ ಪ್ರಕೃತಿಯು ಆ ಮನುಷ್ಯನ ಬುದ್ಧಿಯ ಮೂಲಕ ಕೆಲಸ ಮಾಡುತ್ತ ಕೆಟ್ಟಕರ್ಮಗಳನ್ನೂ, ಒಳ್ಳೆಯ ಕರ್ಮಗಳನ್ನೂ ಮಾಡುತ್ತದೆ. ಈ ಸಂಕಲ್ಪವು ತನ್ನದೆಂದು ಆ ಮನುಷ್ಯನು ಭಾವಿಸುತ್ತಾನೆ. ತಟಸ್ಥನೂ ಸಾಕ್ಷಿಯೂ ಆದ ಪುರುಷನ ಪ್ರೀತ್ಯರ್ಥವಾಗಿ ಪ್ರಕೃತಿಯು ಮನುಷ್ಯನಲ್ಲಿದ್ದುಕೊಂಡು ಸಂಕಲ್ಪಮಾಡುತ್ತದೆ ಎಂದು ಸಾಂಖ್ಯಸಿದ್ಧಾಂತದ ಅನುಯಾಯಿಗಳು ಹೇಳಬಹುದು. ಹೀಗೆ ಹೇಳುವುದು ಅತಿಶಯೋಕ್ತಿಯೇಯೆ. ಇದರಲ್ಲಿ ಸತ್ಯಾಂಶವೆಷ್ಟು, ಅತಿಶಯೋಕ್ತಿಯೆಷ್ಟು ಎಂಬುದನ್ನು ಮುಂದೆ ವಿಚಾರಮಾಡೋಣ.

ಮನುಷ್ಯನಿಗೆ ಸ್ವಾತಂತ್ರ್ಯವಿದೆಯೆಂದು ನಾವು ಒಪ್ಪಿಕೊಂಡರೂ ಕೂಡ ಈ ಸ್ವಾತಂತ್ರ್ಯವು ಅತ್ಯಲ್ಪವಾದುದು ಮತ್ತು ಅನೇಕ ಹೊರಗಿನ ಅಂಶಗಳೊಂದಿಗೆ ಕೂಡ ಸೇರಿಕೊಂಡಿದೆ. ಈ ಸ್ವಾತಂತ್ರ್ಯವು ಅತ್ಯಂತ ಪ್ರಭಾವಯುತವಾಗಿದ್ದಾಗಲೂ ಪ್ರಕೃತಿವ್ಯಾಪಾರವ್ಯಾಪಾರಗಳ ಮೇಲೆ ಸಂಪೂರ್ಣ ಸ್ವಾಮ್ಯವಿರುವುದಿಲ್ಲ; ಪೂರ್ಣ ವಾಗಿ ಈ ವ್ಯಾಪಾರಗಳನ್ನು ನಿಯಂತ್ರಿಸಲಾರದು. ತತ್ಕಾಲದ ಸನ್ನಿವೇಶವನ್ನು ಮತ್ತು ಪ್ರಕೃತಿಯ ಇತರ ವ್ಯಾಪಾರಗಳ ಪ್ರಭಾವವನ್ನು ವ್ಯಕ್ತಿಯ ಸಂಕಲ್ಪವು ಎದುರಿಸಬಲ್ಲದೆಂದು ಖಂಡಿತವಾಗಿ ಹೇಳಲಾಗುವುದಿಲ್ಲ. ಈ ಶಕ್ತಿಗಳು ವ್ಯಕ್ತಿಯ ಸಂಕಲ್ಪವನ್ನು ಮೂಲೆಗೊತ್ತಬಹುದು; ಬದಲಾವಣೆ ಮಾಡಬಹುದು; ಅದರೊಡನೆ

ಬೆರೆತುಬಿಡಬಹುದು; ಅಥವಾ ಆ ಮನುಷ್ಯನ ಅರಿವಿಲ್ಲದೆಯೆ ಅವನನ್ನು ಭ್ರಾಂತಿಗೊಳಿಸಿ ಈ ಸಂಕಲ್ಪವನ್ನು ನಿಷ್ಫಲವನ್ನಾಗಿ ಮಾಡಬಹುದು. ವ್ಯಕ್ತಿಯ ಅತ್ಯಂತ ಸಾತ್ವಿಕ ಸಂಕಲ್ಪವೂ ಕೂಡ ರಾಜಸ, ತಾಮಸಗುಣಗಳ ಪ್ರಭಾವಕ್ಕೆ ಒಳಗಾಗುತ್ತದೆ; ಅದು ಶುದ್ಧವಾಗಿ ಉಳಿಯುವುದಿಲ್ಲ. ಅದರೊಡನೆ ರಜೋಗುಣ, ತಮೋಗುಣಗಳು ಬೆರೆಯುತ್ತವೆ. ಇವುಗಳ ಪ್ರಭಾವದಿಂದ ನಾವು ನಮ್ಮನ್ನೆ, ತಿಳಿಯದೆಯೆ ಮೋಸಪಡಿಸಿಕೊಳ್ಳುತ್ತೇವೆ. ಪರಿಶುದ್ಧವಾದ ಉದ್ದೇಶದಿಂದ ಕೆಲಸಮಾಡುತ್ತಿದ್ದೇವೆಂದು ನಾವು ಭಾವಿಸಿರುವಾಗಲು ಆ ಉದ್ದೇಶದಲ್ಲಿ ಸ್ವಲ್ಪ ಅಶುದ್ಧತೆಯು ನಮಗೆ ತಿಳಿಯದೆ ಸೇರುತ್ತದೆ. ಇದು ಮನಶ್ಶಾಸ್ತ್ರಜ್ಞರಿಗೆ ತಿಳಿದ ವಿಷಯ; ಅವರು ಪ್ರಯೋಗಗಳ ಮೂಲಕ ಇದನ್ನು ತೋರಿಸಬಲ್ಲರು. ಸಂಪೂರ್ಣವಾದ ಸ್ವಾತಂತ್ರ್ಯದಿಂದ ವರ್ತಿಸದ್ದೇವೆಂದು ನಾವು ತಿಳಿದಿರುವಾಗಲೂ ಕೂಡ ನಮ್ಮ ಕೆಲಸಗಳ ಹಿಂದೆ ಕೆಲವು ಅಗೋಚರವಾದ ಶಕ್ತಿಗಳಿರುತ್ತವೆ. ಬಹಳ ಜಾಗರೂಕತೆಯಿಂದ ನಮ್ಮ ಮನಸ್ಸನ್ನು ಪರೀಕ್ಷೆಮಾಡಿಕೊಂಡರೂ ಕೂಡ ನಮ್ಮಿಂದ ಕೆಲಸ ಮಾಡಿಸುವ ಈ ಶಕ್ತಿಗಳು ಗೋಚರವಾಗುವುದಿಲ್ಲ. ನಮಗೆ ಅಹಂಭಾವವಿಲ್ಲವೆಂದು ತಿಳಿದಿರುವಾಗಲೂ ಅದು ಗುಪ್ತವಾಗಿ ನಮ್ಮಲ್ಲಿ ಅಡಗಿರುತ್ತದೆ. ಪಾಪಿಯ ಮನಸ್ಸಿನಲ್ಲಾಗಲಿ ಯತಿಯ ಮನಸ್ಸಿನಲ್ಲಾಗಲಿ ಅಹಂಭಾವವಿರುತ್ತದೆ. ನಮ್ಮ ಕೆಲಸಗಳ ಸ್ವರೂಪವನ್ನೂ, ಅವುಗಳು ಹುಟ್ಟುವ ಮೂಲವನ್ನೂ ಸೂಕ್ಷ್ಮವಾಗಿ ಪರಿಶೀಲಿಸಿದರೆ ಗೀತೆಯಲ್ಲಿ ಹೇಳುವಂತೆ "ಪ್ರಕೃತಿಯ ಗುಣಗಳು ಗುಣಗಳ ಮೇಲೆ ವರ್ತಿಸುತ್ತವೆ" ಎಂಬುದು ಗೋಚರವಾಗುತ್ತದೆ.

ಆದುದರಿಂದ ಮನುಷ್ಯನಲ್ಲಿ ಸತ್ವಗುಣ ಮಾತ್ರ ಪ್ರಧಾನವಾಗಿದ್ದರೆ ಅವನಿಗೆ ಸ್ವಾತಂತ್ರ್ಯವಿದೆಯೆಂದು ಹೇಳಲಾಗುವುದಿಲ್ಲ. ಗೀತೆಯಲ್ಲಿ ಹೇಳುವಂತೆ ಸತ್ವಗುಣವೂ ಕೂಡ ಉಳಿದೆರಡು ಗುಣಗಳಂತೆ ಬಂಧನವನ್ನುಂಟುಮಾಡುತ್ತದೆ; ಆಸೆ ಮತ್ತು ಅಹಂಭಾವಗಳನ್ನುಂಟುಮಾಡಿ ಬಂಧಿಸುತ್ತದೆ. ಸತ್ವಗುಣದಿಂದ ಉಂಟಾಗುವ ಆಸೆಯು ಮೇಲ್ಮಟ್ಟದ್ದಾಗಿರಬಹುದು; ಅಹಂಭಾವವು ಹೆಚ್ಚು ಸ್ವಾರ್ಥರಹಿತವಾಗಿರಬಹುದು, ಆದರೆ ಇವೆರಡೂ ಇರುವವರೆಗೆ ಮನುಷ್ಯನಿಗೆ ಸ್ವಾತಂತ್ರ್ಯವೆಂಬುದು ಇಲ್ಲ. ಸದ್ಗುಣಸಂಪನ್ನನಿಗೆ ತನಗೆ ಸದ್ಗುಣಗಳಿವೆಯೆಂಬ ಅಹಂಭಾವವಿರುತ್ತದೆ; ಜ್ಞಾನಿಯಾದವನಿಗೆ ತಾನು ಜ್ಞಾನಿಯೆಂಬ ಅಹಂಭಾವವಿರುತ್ತದೆ. ತಮ್ಮ ದೊಡ್ಡಸ್ತಿಕೆಗಾಗಿ, ಹಿರಿಮೆಗಾಗಿ, ಅಹಂಗಾಗಿ ಇವರು ಸದ್ಗುಣವನ್ನೂ ಜ್ಞಾನವನ್ನೂ ಹೊಂದಲು ಯತ್ನಿಸುತ್ತಾರೆ. ಈ ಅಹಂಭಾವವನ್ನು ತೃಪ್ತಿಪಡಿಸುವುದನ್ನು ನಿಲ್ಲಿಸಿ

ದಾಗ, ಸಂಕುಚಿತವಾದ, ಪ್ರತ್ಯೇಕವಾದ ಅಹಂಭಾವವಿಶಿಷ್ಟವಾದ ಮನಸ್ಸಿನಿಂದ ಯೋಚಿಸುವುದನ್ನು, ಸಂಕಲ್ಪಮಾಡುವುದನ್ನು ನಿಲ್ಲಿಸಿದಾಗಲೆ ನಿಜವಾದ ಸ್ವಾತಂತ್ರ್ಯ ವನ್ನು ಪಡೆಯುವುದು ಸಾಧ್ಯವಾಗುತ್ತದೆ.

ಅಹಂಭಾವವು ನಾವು ಪರಮಾತ್ಮನನ್ನು ನೋಡಲು ಅಡ್ಡಿಯಾಗಿರುವ ಒಂದು ತೆರೆ ; ಪರಮಾತ್ಮನನ್ನು ಮರೆಮಾಡುವ ಅಂಧಕಾರವಿದ್ದಂತೆ. ಇದನ್ನು ಭೇದಿಸಿ ಪರಮಾತ್ಮನನ್ನು ನೋಡಿದಾಗಲೆ ನಿಜವಾದ ಸ್ವಾತಂತ್ರ್ಯವು ಮನುಷ್ಯನಿಗೆ ಲಭಿಸುತ್ತದೆ. ಹೀಗಾಗಬೇಕಾದರೆ ನಮ್ಮಲ್ಲಿ ಗೂಢನಾಗಿರುವ, ಪ್ರಕೃತಿಗೆ ಅತೀತ ನಾಗಿರುವ, ಒಬ್ಬನೇ ಆದ ಪರಮಾತ್ಮನನ್ನು ನಾವು ಸಾಕ್ಷಾತ್ಕಾರ ಮಾಡಿಕೊಳ್ಳ ಬೇಕು. ನಮ್ಮ ವ್ಯಕ್ತಿತ್ವವನ್ನು ಅವನ ಪ್ರಜ್ಞೆಯಲ್ಲಿ ಐಕ್ಯಮಾಡಬೇಕು. ನಾವು ಮಾಡುವ ಕರ್ಮಗಳು ಅವನ ಸಂಕಲ್ಪಕ್ಕನುಸಾರವಾಗಿರಬೇಕು. ನಾವು ಅವನ ಸಂಕಲ್ಪವನ್ನು ನಡೆಸುವ ಉಪಕರಣಗಳಾಗಬೇಕು. ನಿಜವಾಗಿಯೂ ಸ್ವತಂತ್ರವಾದ ಇಚ್ಛೆ ಅಥವಾ ಸಂಕಲ್ಪವೆಂದರೆ ಆ ಪರಮಾತ್ಮನೊಬ್ಬನದೇಯೆ. ಈ ಸ್ಥಿತಿಯನ್ನು ಪಡೆಯಲು ನಾವು ಪ್ರಕೃತಿಯ ಮೂರು ಗುಣಗಳಿಗೂ ಅತೀತರಾಗಬೇಕು. ; ಏಕೆ ಕ್ಕೆಂದರೆ ಪರಮಾತ್ಮನು ಸತ್ವಗುಣಕ್ಕೂ ಅತೀತನಾಗಿದ್ದಾನೆ. ಈ ಸ್ಥಿತಿಯನ್ನು ಪಡೆ ಯಲು ನಾವು ಸಾತ್ವಿಕಸ್ಥಿತಿಯ ಮೂಲಕ ಬೆಳೆಯಬೇಕು. ಅನಂತರ ನಮ್ಮ ಗುರಿ ಯನ್ನು ಮುಟ್ಟಲು ಸತ್ವಗುಣಕ್ಕೂ ಅತೀತರಾಗಬೇಕು. ಅಹಂಭಾವವನ್ನು ಪೋಷಿಸುವುದರ ಮೂಲಕ ನಾವು ಬೆಳೆಯುತ್ತೇವೆ ; ಆದರೆ ಅಹಂಭಾವದ ಸ್ಥಿತಿ ಯನ್ನು ಮೀರಿದಮೇಲೆ ನಮ್ಮ ಗುರಿಯನ್ನು ಮುಟ್ಟುವುದು ಸಾಧ್ಯವಾಗುತ್ತದೆ. ಅತ್ಯಂತ ಶ್ರೇಷ್ಠವಾದ, ಉತ್ಕಟವಾದ ಮತ್ತು ಅಲೌಕಿಕವಾದ ಆಸೆಯಿಂದ, ಇಚ್ಛೆ ಯಿಂದ ನಾವು ಈ ಗುರಿಯಕಡೆ ಆಕರ್ಷಿಸಲ್ಪಡುತ್ತೇವೆ. ಆದರೆ ಎಲ್ಲ ವಿಧವಾದ ಆಸೆಗಳೂ ನಮ್ಮಿಂದ ಉದುರಿಹೋದಾಗ ಮಾತ್ರ ನಾವು ಈ ಸ್ಥಿತಿಯಲ್ಲಿ ನಿಲ್ಲಲು ಸಾಧ್ಯ. ನಾವು ಒಂದು ಮಟ್ಟಕ್ಕೆ ಬೆಳೆದಮೇಲೆ ಮುಕ್ತಿಯನ್ನು ಪಡೆಯಬೇಕೆಂಬ ಆಸೆಯನ್ನೂ ಬಿಡಬೇಕು.



# ಮೂವತ್ತುಮೂರನೆಯ ಪ್ರಕರಣ

## ಪ್ರಕೃತಿಯ ಗುಣಗಳಿಗೆ ಅತೀತವಾಗಿರುವ ಸ್ಥಿತಿ

ಇಲ್ಲಿಯವರೆಗೆ ನಾವು ಪ್ರಕೃತಿಯ ನಿಯತಿಯನ್ನು ಕುರಿತು ವಿಚಾರಮಾಡಿದೆವು. ಇದರಿಂದ ಒಂದು ವಿಷಯವು ಸ್ಪಷ್ಟವಾಯಿತು. ನಾನು ಎಂದು ಸಾಮಾನ್ಯವಾಗಿ ವ್ಯವಹರಿಸುವ ಅಹಂಭಾವವಿಶಿಷ್ಟವಾದ ಆತ್ಮನು ನಿಜವಾದ ಆತ್ಮನಲ್ಲ, ಅವನೂ ಸಹ ಪ್ರಕೃತಿಯ ಒಂದು ಅಂಶವೇಯೆ. ಆದುದರಿಂದ ಈ ನಾನು ಎಂಬುದು ನಮಗೆ ಪ್ರಕೃತಿಯ ಪ್ರಭಾವದಿಂದ ಬಿಡುಗಡೆ ಕೊಡಿಸಲಾರದು. ಇದರ ಸಂಕಲ್ಪವು ಪ್ರಕೃತಿಯಿಂದ ನಿಯಂತ್ರಿಸಲ್ಪಟ್ಟಿದೆ. ಇದು ಪ್ರಕೃತಿಯ ಒಂದು ಅಂಶ; ನಮ್ಮ ಹಿಂದಿನ ಕರ್ಮಗಳಿಂದ ಮತ್ತು ಅದರ ಪರಿಣಾಮಗಳಿಂದ ರೂಪಿಸಲ್ಪಟ್ಟಿದೆ. ಈ ರೀತಿ ನಮ್ಮಲ್ಲಿ ಉಂಟಾಗಿರುವ ಪ್ರಕೃತಿಯಿಂದಲೂ, ಹಿಂದಿನ ಕರ್ಮಗಳಿಂದ ರೂಪಿಸಲ್ಪಟ್ಟ ಸಂಕಲ್ಪದಿಂದಲೂ ನಾವು ಈಗ ಮಾಡುವ ಕರ್ಮಗಳು ನಿರ್ಧರಿಸಲ್ಪಡುತ್ತವೆ.

ಕೆಲವರು ಈರೀತಿ ವಾದಿಸುತ್ತಾರೆ: ನಮ್ಮ ಈಗಿನ ಕರ್ಮಗಳೇನೊ ಹಿಂದಿನ ಕರ್ಮಗಳಿಂದ ನಿರ್ಧರಿಸಲ್ಪಡುತ್ತವೆ. ಆದರೆ ಇವೆಲ್ಲಕ್ಕೂ ಮೂಲಕಾರಣವಾಗಿ ನಾವು ಮಾಡಿದ ಮೊದಲನೆಯ ಕರ್ಮವಿದೆ. ಈ ಮೊದಲನೆಯ ಕರ್ಮವನ್ನು ಮಾಡುವುದರಲ್ಲಿ ನಮಗೆ ಪೂರ್ಣವಾದ ಸ್ವಾತಂತ್ರ್ಯವಿದೆ ಎಂದು. ಆದರೆ ಪ್ರಕೃತಿಯಲ್ಲಿ ಹಿಂದಿನ ಕರ್ಮಗಳ ಹಿನ್ನೆಲೆಯೆ ಇಲ್ಲದ ಕರ್ಮವು ಯಾವುದಿದೆ? ಪ್ರಕೃತಿಯ ಹಿಂದಿನ ಸ್ವಭಾವದಿಂದ ರೂಪುಗೊಳ್ಳದಿರುವ ವ್ಯಾಪಾರವು ಯಾವುದಿದೆ? ಇಂತಹ ಒಂದು ಮೊದಲನೆಯ ಕರ್ಮವಿದೆಯೆಂದು ನಾವು ಭಾವಿಸಲು ಕಾರಣವೇನೆಂದರೆ ನಮ್ಮ ಮನಸ್ಸು ವರ್ತಮಾನ ಮತ್ತು ಭವಿಷ್ಯತ್ತುಗಳಲ್ಲಿ ಆಸಕ್ತವಾಗಿದೆ. ವರ್ತಮಾನದಿಂದ ಭೂತಕಾಲಕ್ಕೆ ಹೆಚ್ಚಾಗಿ ಓಡುವುದಿಲ್ಲ. ನಾವು ಮಾಡುವ ಕರ್ಮಗಳಿಂದ ಮುಂದೆ ನಮ್ಮ ಮೇಲೆ ಯಾವ ಪರಿಣಾಮವಾಗಬಹುದೆಂದು ನಾವು ಯೋಚಿಸುತ್ತೇವೆಯೇ ಹೊರತು ಈಗ ನಾವು ಮಾಡುವ ಕರ್ಮಗಳು ಎಷ್ಟರ ಮಟ್ಟಿಗೆ ಹಿಂದಿನ ಕರ್ಮಗಳ ಪರಿಣಾಮವೆಂಬುದನ್ನು ನಾವು ಅಷ್ಟಾಗಿ ಆಲೋಚಿಸುವುದಿಲ್ಲ. ಹಿಂದಿನ ಕರ್ಮಗಳು ಸತ್ತುಹೋಗಿವೆ; ಅವುಗಳ ಪರಿಣಾಮ ಈಗೇನೂ ಇಲ್ಲವೆಂಬುದಾಗಿ ನಾವು ಸಾಮಾನ್ಯವಾಗಿ ಭಾವಿಸುತ್ತೇವೆ. ಮಾತನಾಡುವಾಗಲೂ,

ಕರ್ಮಗಳನ್ನು ಮಾಡುವಾಗಲೂ, ಹಿಂದಿನ ಕರ್ಮಗಳ ವಾಸನೆಯು ಏನೂ ಇಲ್ಲ ವೆಂದೂ, ಆ ಕ್ಷಣದಲ್ಲಿ ನಾವು ಸಂಪೂರ್ಣಸ್ವಾತಂತ್ರ್ಯದಿಂದ ನಮ್ಮ ಇಷ್ಟಪ್ರಕಾರ ಕೆಲಸಮಾಡಬಹುದೆಂದೂ ತಿಳಿದಿರುವವರಂತೆ ವರ್ತಿಸುತ್ತೇವೆ. ವಾಸ್ತವವಾಗಿ ಅಂತಹ ಸಂಪೂರ್ಣ ಸ್ವಾತಂತ್ರ್ಯವಿಲ್ಲ; ಹೇಗೆ ಮಾಡಬೇಕೆಂಬುದನ್ನು ನಿರ್ಧರಿಸು ವುದಕ್ಕೆ ನಮಗೆ ಅಷ್ಟೇನೂ ಸ್ವಾತಂತ್ರ್ಯವಿಲ್ಲ.

ನಮ್ಮ ಇಚ್ಛಾಶಕ್ತಿಗೆ ಹಲವು ಮಾರ್ಗಗಳಲ್ಲಿ ಒಂದನ್ನು ಆರಿಸಲು ಸ್ವಾತಂತ್ರ್ಯ ವಿದೆ; ಇದೂ ಸಹ ಪ್ರಕೃತಿನಿಯಮ. ಕರ್ಮವನ್ನು ಮಾಡದೆ ತಟಸ್ಥವಾಗಿರುವುದು, ಯಾವ ನಿರ್ಧಾರಕ್ಕೂ ಬರದೆ ಇರುವುದು, ಇದೂ ಸಹ ನಾವು ಆರಿಸಿರುವ ಒಂದು ಮಾರ್ಗ: ನಮ್ಮಲ್ಲಿರುವ ಪ್ರಕೃತಿಯ ಇಚ್ಛಾಶಕ್ತಿಯ ಒಂದು ವ್ಯಾಪಾರ. ಪರಮಾಣು ವಿನಲ್ಲಿಯೂ ಸಹ ಒಂದು ಇಚ್ಛಾಶಕ್ತಿಯು ಜಾಗೃತವಾಗಿದೆ. ಅದಕ್ಕೂ ನಮಗೂ ಇರುವ ವ್ಯತ್ಯಾಸವಿಷ್ಟೆ; ಪ್ರಕೃತಿಯ ಇಚ್ಛಾಶಕ್ತಿಯ ವ್ಯಾಪಾರಗಳನ್ನು ನಾವು ನಮ್ಮ ವ್ಯಾಪಾರಗಳೆಂದು ತಿಳಿದು ಕೊಳ್ಳುತ್ತೇವೆ. ಪ್ರಕೃತಿಯ ಇಚ್ಛಾಶಕ್ತಿಯೆ ನಮ್ಮ ಇಚ್ಛೆ ಯೆಂದು ಭಾವಿಸುತ್ತೇವೆ. ಇದರಿಂದ ನಮ್ಮ ಸ್ವಂತ ಇಚ್ಛಾನುಸಾರ, ಸಂಪೂರ್ಣ ಸ್ವಾತಂತ್ರ್ಯದಿಂದ ವರ್ತಿಸುತ್ತೇವೆಂದು ತಿಳಿಯುತ್ತೇವೆ. ಇದು ತಪ್ಪೆ ಇರಬಹುದು, ಭ್ರಾಂತಿಯೆ ಇರಬಹುದು; ಆದರೂ ಕೂಡ "ನಾನು ಈ ಕರ್ಮವನ್ನು ಮಾಡಿದೆನು. ನನಗೆ ಸ್ವಂತ ಇಚ್ಛೆಯೂ, ಕರ್ಮವನ್ನು ಮಾಡಲು ಸ್ವಾತಂತ್ರ್ಯವೂ ಇವೆ." ಎಂಬ ಭಾವನೆಯಿಂದಲೂ ಉಪಯೋಗವುಂಟು. ಲೋಕದಲ್ಲಿ ಎಲ್ಲದರಿಂದಲೂ ಪ್ರಯೋ ಜನವಿದೆ, ಫಲವಿದೆ. ಈ ಭಾವನೆಯೇನೊ ಭ್ರಮೆಯಿರಬಹುದು; ಆದರೆ ತನ್ನೊಳಗೆ ಪುರುಷನು ಗುಪ್ತವಾಗಿದ್ದಾನೆ ಎಂಬುದನ್ನು ನಮ್ಮ ಪ್ರಕೃತಿಯು ಅರಿತು ಹೆಚ್ಚು ಹೆಚ್ಚಾಗಿ ಪುರುಷನ ಸಂಕಲ್ಪಕ್ಕೆ ಹೊಂದಿಕೊಂಡು ಕೆಲಸಮಾಡುವುದು ಈ ವಿಧಾನ ದಿಂದಲೆ. ಈ ಜ್ಞಾನವನ್ನು ಪಡೆಯುವುದರಿಂದ ಅದರ ಕರ್ಮಕ್ಷೇತ್ರವು ವಿಶಾಲ ವಾಗುತ್ತದೆ. ಅಹಂಭಾವವೂ ಮತ್ತು "ನನ್ನ ಸಂಕಲ್ಪದಿಂದ ನಾನೆ ಕರ್ಮವನ್ನು ಮಾಡುತ್ತೇನೆ" ಎಂಬ ಭಾವನೆಯೂ ನಾವು ಮೇಲಿನ ಮೆಟ್ಟಿಲಿಗೆ ಹೋಗಲು ಸಾಧನ ಗಳಾಗುತ್ತವೆ. ಈ ಭಾವನೆಗಳ ಮೂಲಕವೆ ನಾವು ತಮೋಗುಣ ಪ್ರಧಾನವಾದ ಆಲಸ್ಯಸ್ಥಿತಿಯಿಂದ ಕಾಮ, ಕ್ರೋಧ, ಕರ್ಮಪ್ರವೃತ್ತಿಮಯವಾದ ರಾಜಸಸ್ಥಿತಿಗೂ, ಅಲ್ಲಿಂದ, ಶಾಂತಿ, ಸುಖ, ಜ್ಞಾನಗಳಿಂದ ತುಂಬಿದ ಶುದ್ಧವಾದ ಸಾತ್ವಿಕಸ್ಥಿತಿಗೂ ಏರುತ್ತೇವೆ. ಮನುಷ್ಯನು ತನ್ನ ಇಂದ್ರಿಯ ಮತ್ತು ಮನಸ್ಸುಗಳನ್ನು "ನಾನು ಹತೋಟಿಯಲ್ಲಿಟ್ಟಿದ್ದೇನೆ" ಎಂದು ತಿಳಿದು ಕೊಳ್ಳುತ್ತಾನೆ. ವಾಸ್ತವವಾಗಿ ಇದು

ಪ್ರಕೃತಿಯ ಕೆಲಸವೇಯೆ; ಅವನಲ್ಲಿರುವ ಉತ್ತಮ ಪ್ರಕೃತಿಯು ಕೆಳಮಟ್ಟದ ಪ್ರಕೃತಿಯನ್ನು ಸ್ವಾಧೀನದಲ್ಲಿಟ್ಟುಕೊಂಡಿದೆ. ಹೀಗೆ ಕೆಳಗಿನ ಪ್ರಕೃತಿಯೊಡನೆ ಹೋರಾಟನಡೆಸುವ ಉತ್ತಮ ಪ್ರಕೃತಿಯೆ ತಾನೆಂದು ಮನುಷ್ಯನು ಭಾವಿಸಿದಾಗ ಮೇಲೆ ಹೇಳಿದ ಸ್ವಾಮ್ಯವು, ಜಯವು ಅವನಿಗುಂಟಾಗುತ್ತದೆ. “ನನ್ನ ಇಚ್ಛೆಯ ಪ್ರಕಾರ ವರ್ತಿಸಲು ನನಗೆ ಸ್ವಾತಂತ್ರ್ಯವಿದೆ” ಎಂಬ ಭಾವನೆಯು, ಅದು ಭ್ರಾಂತಿಯೇ ಆಗಿರಲಿ, ಮನುಷ್ಯನ ಬೆಳವಳಿಕೆಗೆ ಬಹಳ ಅವಶ್ಯಕವಾದುದು ಈ ಬೆಳವಳಿಕೆಯ ಮಟ್ಟವನ್ನು ದಾಟಿ ಮೇಲಿನ ಮಟ್ಟಕ್ಕೆ ಹೋಗಲು ಅರ್ಹನಾಗುವುದಕ್ಕೆ ಮುಂಚೆಯೆ ಮನುಷ್ಯನಿಗೆ ತನಗೆ ಸ್ವಾತಂತ್ರ್ಯವಿಲ್ಲ ಎಂಬುದರ ಅರಿವುಂಟಾಗುವುದು ಬಹಳ ಹಾನಿಕರ. ತನ್ನ ಉದ್ದೇಶಸಾಧನೆಗಾಗಿ ಪ್ರಕೃತಿಯು ಮನುಷ್ಯನಲ್ಲಿ ಉಂಟು ಮಾಡುವ ಭ್ರಾಂತಿಗಳಲ್ಲಿ ತನಗೆ ವ್ಯಕ್ತಿಸ್ವಾತಂತ್ರ್ಯವಿದೆಯೆಂಬ ಭಾವನೆಯೂ ಒಂದು ಭ್ರಾಂತಿಯೆಂದು ಕೆಲವರು ಹೇಳುತ್ತಾರೆ. ಆದರೆ ಅದರ ಜೊತೆಗೆ ಇದನ್ನೂ ಹೇಳ ಬೇಕು ; ಈ ಭ್ರಾಂತಿಯುಂಟಾಗುವುದು ಮನುಷ್ಯನ ಹಿತಕ್ಕಾಗಿಯೆ ; ಅದಿಲ್ಲದಿದ್ದರೆ ಮನುಷ್ಯನ ಬೆಳವಳಿಕೆ ಪೂರ್ಣವಾಗುವುದು ಸಾಧ್ಯವಿಲ್ಲ.

ಇದು ಸಂಪೂರ್ಣವಾದ ಭ್ರಾಂತಿಯೂ ಅಲ್ಲ. ಆದರೆ ಅದನ್ನು ನಾವು ನೋಡುವ ದೃಷ್ಟಿಕೋನದಲ್ಲಿ, ಅದಕ್ಕೆ ಕಟ್ಟುವ ಬೆಲೆಯಲ್ಲಿ ಸ್ವಲ್ಪ ತಪ್ಪಿದೆ. ಅಹಂ ಕಾರವಿಶಿಷ್ಟವಾದ ವ್ಯಕ್ತಿಯು ತಾನೆ ಆತ್ಮನೆಂದೂ, ಎಲ್ಲ ಕೆಲಸಗಳಿಗೂ ತಾನೆ ಕೇಂದ್ರವೆಂದೂ, ಎಲ್ಲವೂ ತನಗಾಗಿಯೆ ಇದೆಯೆಂದೂ ತಿಳಿಯುತ್ತಾನೆ. ದೃಷ್ಟಿಕೋನ ದಲ್ಲಿರುವ ತಪ್ಪು ಇದೇಯೆ. ನಮ್ಮೊಳಗೆ ನಮ್ಮ ಕೆಲಸಗಳಿಗೆಲ್ಲ ಮೂಲವಾಗಿ ಒಂದು ವಸ್ತು ಅಥವಾ ಪುರುಷನಿದ್ದಾನೆ ಎಂದು ಭಾವಿಸುವುದು ಸರಿಯಾದುದೇಯೆ. ಇದ ಕ್ಕಾಗಿಯೆ ಎಲ್ಲವೂ ಇದೆ. ಆದರೆ ಇದು ಅಹಂಕಾರವಿಶಿಷ್ಟವಾದ ವ್ಯಕ್ತಿಯಲ್ಲ. ಅವನೊಳಗಿರುವ ಪರಮಾತ್ಮ ಪ್ರಕೃತಿಯು ಯಾರ ಒಡೆತನದಲ್ಲಿ ಮತ್ತು ಯಾರಿ ಗಾಗಿ ಎಲ್ಲ ಕೆಲಸಗಳನ್ನೂ ಮಾಡುವುದೊ, ಅಂತಹ ಆತ್ಮನು ಒಬ್ಬನಿದ್ದಾನಷ್ಟೆ. ಈ ಆತ್ಮನು ನಮ್ಮಲ್ಲಿ ಅಂತರ್ಯಾಮಿಯಾಗಿದ್ದಾನೆ ಎಂಬ ಸತ್ಯದ ಅಪೂರ್ಣವಾದ ಮತ್ತು ವಿಕೃತವಾದ ಪ್ರತಿಬಿಂಬವೆ ನಮ್ಮ ಮನಸ್ಸಿನಲ್ಲಿ ಅಹಂಕಾರ ಅಥವಾ ಅಹಂ ಭಾವವೆನಿಸಿಕೊಳ್ಳುವುದು. ಹೀಗೆಯೆ ಅಹಂಭಾವವುಳ್ಳ ನಮಗೆ ವ್ಯಕ್ತಿಸ್ವಾತಂತ್ರ್ಯ ವಿದೆ ಎಂಬ ಭಾವನೆಯೂ ಕೂಡ ನಮ್ಮಲ್ಲಿರುವ ಆತ್ಮನು ಸಂಪೂರ್ಣವಾಗಿ ಸ್ವತಂತ್ರನು ಎಂಬ ಸತ್ಯದ ವಿಕೃತ ಪ್ರತಿಬಿಂಬ. ಪ್ರಕೃತಿಯ ಸಂಕಲ್ಪಶಕ್ತಿಯೂ ಈ ಆತ್ಮನ ಇಚ್ಛಾಶಕ್ತಿಯ ಅಪೂರ್ಣ ಪ್ರತಿಬಿಂಬ. ಅಪೂರ್ಣವೇಕೆಂದರೆ ಇದು

ಕ್ಷಣಿಕವಾದುದು, ಕಾಲಪರಿಚ್ಛಿನ್ನವಾದುದು; ಆಗಾಗ್ಗೆ ಮಾರ್ಪಾಟನ್ನು ಹೊಂದುತ್ತಾ, ಹಿಂದಿನ ಅನುಭವಗಳಿಂದ ಮತ್ತು ತನ್ನ ಕೆಲಸಗಳಿಂದ ಮುಂದೆ ಉಂಟಾಗುವ ಪರಿಣಾಮಗಳ ಪರಿಜ್ಞಾನವಿಲ್ಲದೆ, ತನ್ನ ಉದ್ದೇಶವನ್ನೆ ಮರೆಯುತ್ತದೆ. ಆತ್ಮನ ಇಚ್ಛಾಶಕ್ತಿಯಾದರೊ ಕಾಲಾತೀತವಾದುದು; ಅದಕ್ಕೆ ಭೂತಭವಿಷ್ಯತ್ತು ಗಳೆಲ್ಲ ಗೋಚರವಾಗುತ್ತವೆ. ಮನಸ್ಸಿಗೆ ಅತೀತವಾದ ಪ್ರಜ್ಞಾವಸ್ಥೆಯಲ್ಲಿ ಮಾತ್ರ ಗೋಚರವಾಗುವ ಆತ್ಮನ ಇಚ್ಛೆ ಮತ್ತು ಉದ್ದೇಶಗಳನ್ನು ಕಾರ್ಯರೂಪಕ್ಕೆ ತರಲು ಪ್ರಕೃತಿಯು ಯತ್ನಿಸುತ್ತಿದೆಯೆನ್ನಬಹುದು. ಆದರೆ ಅಹಂಕಾರ ಮತ್ತು ಅಜ್ಞಾನಗಳಿಂದ ಕೂಡಿರುವುದರಿಂದ ಇದು ಕಷ್ಟವಾಗಿದೆ.

ನಮ್ಮ ಬೆಳವಳಿಕೆಯು ಒಂದು ಮಟ್ಟವನ್ನು ಮುಟ್ಟಿದಾಗ ಸ್ವಸ್ವರೂಪ ಜ್ಞಾನವು ನಮಗೆ ಬಂದೇಬರುತ್ತದೆ. ಆಗ "ನಾನು ಪ್ರತ್ಯೇಕವಾದ ಒಂದು ವ್ಯಕ್ತಿ, ನನಗೆ ಸ್ವಾತಂತ್ರ್ಯವಿದೆ" ಎಂಬ ಭ್ರಾಂತಿಯು ತೊಲಗಿಹೋಗುತ್ತದೆ. ಹೀಗೆ ಪ್ರತ್ಯೇಕ ವ್ಯಕ್ತಿತ್ವದ ಭಾವನೆಯು ಹೋದಮಾತ್ರಕ್ಕೆ ಕರ್ಮಮಾಡುವುದು ನಿಲ್ಲುತ್ತದೆಯೆಂದು ತಿಳಿಯಬಾರದು. ಏತಕ್ಕೆಂದರೆ ಕರ್ಮಗಳ ನಿಜವಾದ ಕರ್ತೃವಾದ ಪ್ರಕೃತಿಯು ನಮ್ಮ ಬೆಳವಳಿಕೆಯು ಈ ಸ್ಥಿತಿಯನ್ನು ಮುಟ್ಟುವುದಕ್ಕೆ ಮುಂಚೆ ಯಾವ ರೀತಿ ಕರ್ಮ ಗಳನ್ನು ಮಾಡುತ್ತಿತ್ತೊ ಅನಂತರವೂ ಕೂಡ ಹಾಗೆಯೆ ಮಾಡುತ್ತದೆ. ಅಹಂಕಾರ ವನ್ನು ತ್ಯಜಿಸಿರುವ ವ್ಯಕ್ತಿಯ ಮೂಲಕ ಪ್ರಕೃತಿಯು ಇನ್ನೂ ಹೆಚ್ಚಾಗಿಯೆ ಕೆಲಸ ಮಾಡಬಹುದು. ಇದಕ್ಕೆ ಕಾರಣವೇನೆಂದರೆ ಹಿಂದಿನ ಅನುಭವಗಳ ಪರಿಣಾಮ ವಾಗಿ ತನ್ನ ಪ್ರಕೃತಿಯು ಯಾವ ರೂಪಾಂತರಗಳನ್ನು ಹೊಂದಿದೆಯೆಂಬುದು ಇವನಿಗೆ ಚೆನ್ನಾಗಿ ಗೊತ್ತಿರುತ್ತದೆ. ತನ್ನ ಬೆಳವಳಿಕೆಗೆ ಸನ್ನಿವೇಶಗಳ ಪ್ರಭಾವದಿಂದಾ ಗುವ ಸಾಧಕಬಾಧಕಗಳನ್ನು ಚೆನ್ನಾಗಿ ತಿಳಿದಿದ್ದಾನೆ. ತನ್ನಲ್ಲಿ ಸುಪ್ತವಾಗಿದ್ದು ಇನ್ನೂ ಅವ್ಯಕ್ತವಾಗಿರುವ ಶಕ್ತಿಗಳು ಪ್ರಕಟವಾದಾಗ ಎಷ್ಟರಮಟ್ಟಿಗೆ ಪ್ರಕಾಶಿಸ ಬಹುದೆಂಬುದನ್ನು ತಿಳಿದಿದ್ದಾನೆ. ಆದುದರಿಂದ ಪುರುಷನ ಚೈತನ್ಯಪ್ರವಾಹವು ಹರಿಯಲು ಇವನ ಮನಸ್ಸು ಇನ್ನೂ ಒಳ್ಳೆಯ ಕಾಲುವೆಯಾಗುತ್ತದೆ. ಪುರುಷನ ಸಂಕಲ್ಪಕ್ಕನುಸಾರವಾಗಿ ತನ್ನ ಪ್ರಕೃತಿಯು ಕೆಲಸಮಾಡಲು ಇವನ ಮನಸ್ಸು ಹೆಚ್ಚು ಹೆಚ್ಚಾಗಿ ಸಾಧಕವಾಗುತ್ತದೆ. ನಮಗೆ ವಾಸ್ತವವಾಗಿ ಸ್ವಾತಂತ್ರ್ಯವಿಲ್ಲವೆಂಬ ತಿಳುವಳಿಕೆಯು "ಎಲ್ಲವೂ ಅದೃಷ್ಟವಿದ್ದಂತೆ; ಪುರುಷಪ್ರಯತ್ನವು ವ್ಯರ್ಥ" ಎಂಬ ಮನೋಭಾವದಿಂದ ಉಂಟಾಗಬಾರದು; ಪ್ರಕೃತಿನಿಯಮಗಳಿಂದ ನಾವು ಪೂರ್ಣ ವಾಗಿ ಬದ್ಧರಾಗಿದ್ದೇವೆ ಎಂಬ ಭಾವನೆಯೂ ಆತ್ಮಜ್ಞಾನವಿಲ್ಲದೆ ಹಾಗೆಯೆ ಬಂದಿದ್ದಾ

ಗಿರಕೂಡದು. ಏತಕ್ಕೆಂದರೆ ಆಗ ಅಹಂಕಾರವಿಶಿಷ್ಟನಾದ ಪುರುಷನೆ ಆತ್ಮನೆಂದು ಭಾವಿಸುತ್ತೇವೆ. ವಾಸ್ತವವಾಗಿ ಇವನು ಪ್ರಕೃತಿಯ ಒಂದು ಅಂಶ. ಆದುದರಿಂದ ನಾವು ಕೆಲಸ ಮಾಡುವುದು ಪ್ರಕೃತಿಯ ಇಚ್ಛೆಗನುಸಾರವಾಗಿಯೆ. ನಮ್ಮಲ್ಲಿ ಮೂಲತಃ ಯಾವ ಬದಲಾವಣೆಯೂ ಆಗುವುದಿಲ್ಲ; ನಮ್ಮ ಮನಸ್ಸಿನ ದೃಷ್ಟಿ ಕೋನದಲ್ಲಿ ಸ್ವಲ್ಪ ಬದಲಾವಣೆಯಾಗಬಹುದು, ಅಷ್ಟೆ. ಅಹಂಕಾರವಿಶಿಷ್ಟನಾದ ಪುರುಷನು ಪ್ರಕೃತಿನಿಯಮಗಳಿಂದ ಬದ್ಧನಾಗಿದ್ದಾನೆ, ಸ್ವತಂತ್ರನಲ್ಲ ಎಂಬುದನ್ನು ಮನಗಾಣುತ್ತೇವೆ, ನಿಜ. ಆದರೆ ಪ್ರಕೃತಿಯ ಗುಣಗಳಿಗೆ ಅತೀತನಾಗಿರುವ, ನಮ್ಮ ಹೃದಯದಲ್ಲಿ ಗೂಢನಾಗಿರುವ, ಆತ್ಮನನ್ನು ಇನ್ನೂ ಕಂಡುಕೊಂಡಿಲ್ಲ. ನಿಜವಾದ ಸ್ವಾತಂತ್ರ್ಯದ ದಾರಿಯನ್ನು ನಾವಿನ್ನೂ ಅರಿತಿಲ್ಲ. ಮನುಷ್ಯನೆಂದರೆ ಪ್ರಕೃತಿ ಮತ್ತು ಅಹಂಕಾರಮಾತ್ರವಲ್ಲ; ಸ್ವತಂತ್ರನಾದ ಆತ್ಮನೂ ಇದ್ದಾನೆ.

ಈ ಆತ್ಮನ ಅಥವಾ ಪುರುಷನ ಸ್ವಾತಂತ್ರ್ಯವು ಯಾವ ರೀತಿಯದು ? ಸಾಂಖ್ಯ ದರ್ಶನದಪ್ರಕಾರ ಪುರುಷನು ತತ್ವತಃ ಸ್ವತಂತ್ರನು ; ಏತಕ್ಕೆಂದರೆ ಅವನು ಕರ್ತೃವೇ ಅಲ್ಲ. ಆದರೆ ಎಲ್ಲಿಯವರೆಗೆ ತಟಸ್ಥನಾದ ಆತ್ಮನಲ್ಲಿ ಪ್ರಕೃತಿಯ ವ್ಯಾಪಾರಗಳು ಪ್ರತಿ ಬಿಂಬಿತವಾಗುತ್ತವೆಯೊ ಅಲ್ಲಿಯವರೆಗೆ ತಾತ್ಕಾಲಿಕವಾಗಿ ಅವನು ಪ್ರಕೃತಿಯ ಗುಣ ಗಳಿಂದ ಬಂಧಿಸಲ್ಪಡುತ್ತಾನೆ. ಇದರಿಂದ ಅವನು ಮುಕ್ತನಾಗಬೇಕಾದರೆ ಪ್ರಕೃತಿ ಯೊಡನೆ ಸಂಬಂಧವನ್ನು ತ್ಯಜಿಸಬೇಕು. ಗೀತೆಯಲ್ಲಿ ಉಪದೇಶಿಸಿರುವಂತೆ ಮನು ಷ್ಯನು ತಾನೇ ಕರ್ತೃವೆಂಬ ಭಾವನೆಯನ್ನು ತ್ಯಜಿಸಿ, ಕರ್ತೃವಲ್ಲದ, ಸಾಕ್ಷಿಯಾದ ಪುರುಷನೆ ತಾನೆಂದು ಭಾವಿಸುತ್ತಾ ಎಲ್ಲ ಕರ್ಮಗಳೂ ಪ್ರಕೃತಿಯ ಮತ್ತು ಅದರ ಗುಣಗಳ ವ್ಯಾಪಾರಗಳೆಂದು ಎಣಿಸಿದರೆ, ಆಗಲೂ ಸಹ ಅವನು ಕರ್ಮ ಬಂಧನ ದಿಂದ ಮುಕ್ತನಾಗುವುದಿಲ್ಲವೆ ? ಸಾಂಖ್ಯಸಿದ್ಧಾಂತದ ಪುರುಷನು ಕೇವಲ ಅನುಮತಿ ಕೊಡುವವನು (ಅನುಮಂತಾ); ಎಲ್ಲ ಕರ್ಮಗಳನ್ನು ಮಾಡುವುದೂ ಪ್ರಕೃತಿ ; ತತ್ವತಃ ಅವನು ಸಾಕ್ಷಿ ಮತ್ತು ಭರಿಸುವವನು (ಆಧಾರನು) ; ಸರ್ವವ್ಯಾಪಿಯಾದ ಆತ್ಮನ ಕೆಲಸಮಾಡುವ ಮತ್ತು ಎಲ್ಲಕ್ಕೂ ಪ್ರಭುವಾಗಿ ನಿಯಂತ್ರಿಸುವ ಚೈತನ್ಯ ಸ್ವರೂಪನಲ್ಲ. ಒಬ್ಬ ಪ್ರೇಕ್ಷಕನು ನಾಟಕವನ್ನು ನೋಡುವಂತೆ ಇವನೂ ಸಹ ಪ್ರಕೃತಿಯ ಕರ್ಮಗಳನ್ನು ನೋಡುತ್ತಾನೆ ; ತಾನೆ ನಿಯೋಜಿಸಿರುವ, ತನ್ನೊಳಗೆ ಆಗುತ್ತಿರುವ ನಾಟಕವನ್ನು ನೋಡುವಂತೆ ಅಲ್ಲ. ಅವನು ತನ್ನ ಅನುಮತಿಯನ್ನು ಹಿಂದಕ್ಕೆ ತೆಗೆದುಕೊಂಡರೆ, ತಾನೆ ಕರ್ತೃವೆಂಬ ಭ್ರಾಂತಿಯನ್ನು ತ್ಯಜಿಸಿದರೆ, ಈ ಕರ್ಮಗಳಿಗೆ ಅವನು ಕೊಟ್ಟಿರುವ ಒತ್ತಾಸೆ ನಿಂತು ಹೋಗುತ್ತದೆ. ಎಂದರೆ ಈ ನಾಟಕವೇ ನಿಂತುಹೋಗುತ್ತದೆ.

ಪ್ರಕೃತಿಯು ಜೀವನ ನಾಟಕವನ್ನು ನಡೆಸುತ್ತಿರುವುದು ಸಾಕ್ಷಿಯಾದ ಪುರುಷನ ಸಂತೋಷಕ್ಕಾಗಿಯೆ ಮತ್ತು ಇವನ ಒಪ್ಪಿಗೆಯಿಂದಲೆ. ಪ್ರಕೃತಿ ಮತ್ತು ಪುರುಷನ ಸಂಬಂಧವನ್ನು ಕುರಿತು ಗೀತೆಯ ಅಭಿಪ್ರಾಯವು ಸಾಂಖ್ಯದ ಅಭಿಪ್ರಾಯ ವಲ್ಲವೆಂಬುದು ಸ್ಪಷ್ಟ. ಒಂದೇ ವಿಧವಾದ ವರ್ತನೆಯು ಸಾಂಖ್ಯದ ಪ್ರಕಾರ ಕರ್ಮ ಸನ್ಯಾಸಕ್ಕೂ, ಗೀತೆಯ ಪ್ರಕಾರ ಹೆಚ್ಚಾದ, ನಿಃಸ್ವಾರ್ಥವಾದ, ಕಾಮರಹಿತವಾದ ದಿವ್ಯ ಕರ್ಮಗಳನ್ನು ಮಾಡುವ ಸ್ಥಿತಿಗೂ ಒಯ್ಯುತ್ತದೆ. ಸಾಂಖ್ಯದಲ್ಲಿ ಪುರುಷ ಮತ್ತು ಪ್ರಕೃತಿಗಳು ಭಿನ್ನ ಭಿನ್ನವಾದ, ಪ್ರತ್ಯೇಕವಾದ ವಸ್ತುಗಳು; ಗೀತೆಯ ಲ್ಲಾದರೊ ಇವೆರಡೂ ಕೂಡ ಒಂದೆ ಆದ ಸತ್ಯವಸ್ತುವಿನ ಎರಡು ಮುಖಗಳು, ಎರಡು ಶಕ್ತಿಗಳು. ಗೀತೆಯಪ್ರಕಾರ ಪುರುಷನು ಪ್ರಕೃತಿಯ ವ್ಯಾಪಾರಗಳಿಗೆ ಅನುಮತಿ ಕೊಡುವವನು ಮಾತ್ರನಲ್ಲ; ಪ್ರಕೃತಿಯ ಒಡೆಯನೂ ಆಗಿದ್ದಾನೆ. ಪ್ರಕೃತಿಯು ಪ್ರಪಂಚದ ಲೀಲೆಯಲ್ಲಿ ಭಾಗ ವಹಿಸುತ್ತಾ ಆತ್ಮನ ಸಂಕಲ್ಪ ಮತ್ತು ಜ್ಞಾನಗಳನ್ನು ಕಾರ್ಯಗತಮಾಡುತ್ತದೆ. ಈ ಪ್ರಪಂಚವು ಆತ್ಮನ ಅನುಮತಿ ಯಿಂದಲೆ ನಿಂತಿದೆ, ಅವನು ಅಂತರ್ಯಾಮಿಯಾಗಿರುವುದರಿಂದಲೆ, ಅವನಲ್ಲೆ ಅಸ್ತಿತ್ವವನ್ನು ಹೊಂದಿದೆ. ಅವನ ಇಚ್ಛೆಗೆ, ಅವನಿಂದ ಮಾಡಲ್ಪಟ್ಟ ನಿಯಮಗಳಿಗೆ ಅನುಸಾರವಾಗಿಯೆ ಪ್ರಕೃತಿಯು ವರ್ತಿಸುತ್ತದೆ. ಈ ಆತ್ಮನನ್ನು ಅರಿತು ಅವನ ದಿವ್ಯಸ್ಥಿತಿಯಲ್ಲಿರುವುದು ಅಹಂಕಾರವನ್ನೂ ಅದರಿಂದ ಪ್ರೇರಿತವಾದ ಕಾರ್ಯ ಗಳನ್ನೂ ಬಿಡುವುದರ ಉದ್ದೇಶ. ಆಗ ಪ್ರಕೃತಿಯ ಗುಣಗಳಿಂದ ಬದ್ಧವಾದ ಕೆಳಗಿನ ಮಟ್ಟವನ್ನು ದಾಟಿ ತ್ರಿಗುಣಾತೀತವಾದ ದಿವ್ಯಸ್ಥಿತಿಯನ್ನು ಹೊಂದುತ್ತೇವೆ.

ಈ ಬಿಡುಗಡೆಯು ಯಾವರೀತಿಯಲ್ಲಾಗುತ್ತೆಂಬುದು ಪುರುಷನು ಪ್ರಕೃತಿ ಯೊಡನೆ ಹೊಂದಿರುವ ಸಂಬಂಧಕ್ಕೆ ಅನುಸಾರವಾಗಿದೆ; ಎಂದರೆ ಮೂರು ಬಗೆಯ ಪುರುಷರಿರುವರೆಂಬ ಗೀತೆಯ ನಿರೂಪಣೆಯು ಇದಕ್ಕೆ ಆಧಾರವಾಗಿದೆ. ಪ್ರಕೃತಿಯ ವ್ಯಾಪಾರಗಳಿಗೂ, ವಿಕಾರಗಳಿಗೂ, ಕ್ಷಣಕ್ಷಣಕ್ಕೂ ಆಗುವ ಬದಲಾವಣೆಗಳಿಗೂ ಕಾರಣನಾಗಿರುವವನೆ ಕ್ಷರಪುರುಷನು. ಇವನು ಪ್ರಕೃತಿಯೊಡನೆ ಚಲಿಸುತ್ತಾ, ಅದರ ಬದಲಾವಣೆಗಳಿಗನುಸಾರವಾಗಿ ತಾನೂ ಮಾರ್ಪಾಡು ಹೊಂದುತ್ತಾ ತನ್ನ ಸ್ವರೂಪಜ್ಞಾನದಲ್ಲಿಯು ಬದಲಾವಣೆ ಮಾಡುತ್ತಾ ಹೋಗುತ್ತಾನೆ. ಕ್ಷರವೆಂದರೆ ನಿರಂತರವಾದ ಚಲನೆ, ಹರಿಯುವಿಕೆ, ಬದಲಾವಣೆ ಎಂದರ್ಥ; ಇದು ಪ್ರಕೃತಿಯ ಲಕ್ಷಣ. ಪ್ರಕೃತಿಯು ಪುರುಷನ ಶಕ್ತಿಯೆ ಆಗಿದೆ. ಅವನ ಸ್ವರೂಪಕ್ಕನುಸಾರ ವಾಗಿಯೆ ಪ್ರಕೃತಿಯು ಬದಲಾವಣೆಗಳನ್ನು ಹೊಂದಬಲ್ಲದು; ಅವನಲ್ಲಿ ಆಗುವ ಬದ

ಲಾವಣೆಗಳಿಗನುಸಾರವಾಗಿಯೆ ಪ್ರಕೃತಿಯು ವರ್ತಿಸುತ್ತದೆ. ಅವನಲ್ಲಾಗಬೇಕಾದ ಮಾರ್ಪಾಟುಗಳನ್ನು ಪ್ರಕೃತಿಯು ಕಾರ್ಯಗತ ಮಾಡುತ್ತದೆ. ನಾವು ನಮ್ಮ ನಿಜಸ್ವರೂಪವನ್ನು ಪಡೆಯುವ ರೀತಿಗನುಸಾರವಾಗಿ ನಮ್ಮ ಪ್ರಕೃತಿಯ ಕರ್ಮಗಳು ಗೊತ್ತುಮಾಡಲ್ಪಡುತ್ತವೆ. ಆದಾಗ್ಯೂ ನಮಗೆ ಕರ್ಮಮಾಡಲು ಪ್ರಕೃತಿಯೇ ಸಾಧನವಾಗಿರುವುದರಿಂದ, ಪ್ರಕೃತಿಯ ಕರ್ಮಗಳೆ ನಮ್ಮ ಸ್ವಭಾವವನ್ನು ನಿರ್ಣಯಿ ಸುವಂತೆ ನಮಗೆ ಭಾಸವಾಗುತ್ತದೆ. ನಮ್ಮ ಸ್ವಭಾವಕ್ಕೆ, ಸ್ವರೂಪಕ್ಕೆ ಅನುಸಾರ ವಾಗಿ ನಾವು ಕರ್ಮಗಳನ್ನು ಮಾಡುತ್ತೇವೆ. ಹೀಗೆ ಕರ್ಮಗಳನ್ನು ಮಾಡುವುದೆ ನಮ್ಮ ನಿಜಸ್ವರೂಪವನ್ನು ಪೂರ್ಣವಾಗಿ ಪಡೆಯಲು ಸಾಧನ. ಕರ್ಮಮಾಡುವುದು, ರೂಪಾಂತರ ಮಾರ್ಪಾಡು ಹೊಂದುವುದು ಇವೆಲ್ಲವೂ ನಡೆಯುವುದು ಪ್ರಕೃತಿ ಯಲ್ಲಿಯೆ, ಪ್ರಕೃತಿಯಿಂದಲೆ. ಆದರೆ ಪ್ರಕೃತಿಗೆ ಈ ಶಕ್ತಿ ಬರುವುದು ಚೈತನ್ಯರೂಪ ನಾದ ಪುರುಷನಿಂದ. ಮಾರ್ಪಾಡಾಗಲು ಮತ್ತು ರೂಪಾಂತರಗಳನ್ನು ಹೊಂದಲು ಪ್ರಕೃತಿಯು ಇಚ್ಛಿಸುವುದೂ ಕೂಡ ಪುರುಷನ ಪ್ರಭಾವದಿಂದಲೇಯೆ. ಈ ಪುರುಷನು ಏಕನೂ ಹೌದು; ಅನೇಕನೂ ಹೌದು. ಎಲ್ಲ ಜೀವಿಗಳ ಉತ್ಪತ್ತಿಸ್ಥಾನವೂ ಇವನೇಯೆ; ಎಲ್ಲ ಜೀವಿಗಳೂ ಇವನೇಯೆ. ಇವನೇ ಪರಮಾತ್ಮನು; ಸರ್ವ ಭೂತಗಳೂ ಇವನೇಯೆ; ಏತಕ್ಕೆಂದರೆ ಎಲ್ಲ ಭೂತಗಳಲ್ಲಿರುವ ಚೈತನ್ಯವೂ ಇವನದು. ಎಲ್ಲ ಪುರುಷರೂ ಸಹ ಮೂಲತಃ ಈ ಏಕನಾದ ಪುರುಷನೇಯೆ. ಅಹಂಭಾವ ವಿಶಿಷ್ಟ ರಾದ ನಾವು ಪ್ರಕೃತಿಯ ಭಾಗವೆಂದು ಹೇಳಿದೆಯಷ್ಟೆ. ಈ ಅಹಂಕಾರವು ಕೆಲಸ ಮಾಡುವ ಕ್ರಮವೇನೆಂದರೆ ಆಯಾಕ್ಷಣದಲ್ಲಿಯೆ ಮನಸ್ಸಿನಲ್ಲಿ ಆಗುತ್ತಿರುವ ಮಾರ್ಪಾಡುಗಳೆ ಆತ್ಮನ ಚೈತನ್ಯವೆಂಬ ಭಾವನೆಯನ್ನು ಉಂಟುಮಾಡುತ್ತದೆ. ಎಂದರೆ ಒಂದು ಗೊತ್ತಾದ ದೇಶ ಮತ್ತು ಕಾಲಗಳಿಂದ ಪರಿಮಿತವಾದ ಮತ್ತು ಕ್ಷಣ ಕ್ಷಣಕ್ಕೂ ಹಿಂದಿನ ಕರ್ಮಗಳಿಂದ ಮಾರ್ಪಾಡಾಗುತ್ತಿರುವ ಚೈತನ್ಯವೆ ಆತ್ಮ ನೆಂಬ ಭಾವನೆಯನ್ನುಂಟುಮಾಡುತ್ತದೆ. ಮೇಲೆ ಹೇಳಿದ ಅನೇಕ ಪುರುಷರೆಲ್ಲರೂ ಒಂದೇ ಎಂಬುದನ್ನು ಪ್ರಕೃತಿಯಲ್ಲಿರುವಾಗಲೆ ತಿಳಿಯುವುದು ಸಾಧ್ಯ; ವಿಶ್ವಪ್ರಕೃತಿ ಯಲ್ಲಿ ವ್ಯಕ್ತವಾಗುತ್ತಿರುವ ವಿಶ್ವಪುರುಷನನ್ನು ಅರಿಯಲು ಸಾಧ್ಯ. ಪ್ರಕೃತಿಯಲ್ಲಿ ವಿಶ್ವಪುರುಷನು ವ್ಯಕ್ತವಾಗುತ್ತಿದ್ದಾನೆ. ಈ ವಿಶ್ವಪುರುಷನೆ ಪ್ರಕೃತಿಯು; ಹೀಗೆ ವಿಶ್ವಪುರುಷನನ್ನು ತಿಳಿಯುವುದನ್ನು ಮಾಯೆ ಅಥವಾ ತಪ್ಪುತಿಳಿವಳಿಕೆ ಎಂದು ಹೇಳಲಾಗುವುದಿಲ್ಲ. ಆದರೆ ಇದು ನಿಜವಾದ ಆತ್ಮಜ್ಞಾನವನ್ನು ಕೊಡುವುದಿಲ್ಲ. ಆತ್ಮನು ಈ ವಿಶ್ವಪುರುಷನಿಗಿಂತ ಮೇಲ್ಮಟ್ಟದಲ್ಲಿದ್ದಾನೆ, ಅತೀತನಾಗಿದ್ದಾನೆ.

ಪ್ರಕೃತಿಯಲ್ಲಿ ವ್ಯಕ್ತವಾಗಿ ಅದರ ವ್ಯಾಪಾರಗಳಲ್ಲಿ ಸಿಕ್ಕಿಕೊಂಡಿರುವ ಪುರುಷನಿಗಿಂತ ಮೇಲ್ಮಟ್ಟದ ಸ್ಥಿತಿಯೊಂದಿದೆ; ಈ ಸ್ಥಿತಿಯಲ್ಲಿ ಯಾವ ಕರ್ಮವೂ ಇಲ್ಲ. ಇವನೇ ಅಕ್ಷರಪುರುಷನು. ಇವನು ನಿಷ್ಕ್ರಿಯನು—ಕರ್ಮಗಳನ್ನು ಮಾಡದೆ ಅಚಲನಾಗಿದ್ದಾನೆ; ಯಾವ ಬದಲಾವಣೆಗೂ, ವಿಕಾರಕ್ಕೂ ಒಳಗಾಗುವುದಿಲ್ಲ; ಸರ್ವವ್ಯಾಪಿ; ತಾನೇ ತಾನಾಗಿದ್ದಾನೆ. ಕ್ಷರಪುರುಷನಾದರೊ ಪ್ರಕೃತಿವ್ಯಾಪಾರಗಳಲ್ಲಿ ಸಿಕ್ಕಿಕೊಂಡಿರುವಂತೆಯೂ, ಕಾಲದೇಶಗಳಿಂದ ಪರಿಮಿತನಾಗಿರುವಂತೆಯೂ, ರೂಪಾಂತರಗಳನ್ನು ಹೊಂದುವಂತೆಯೂ ತೋರುತ್ತಾನೆ. ಆದರೆ ಇದು ತೋರಿಕೆ ಮಾತ್ರವೆ ಹೊರತು ವಾಸ್ತವಾಂಶವಲ್ಲ. ಅಕ್ಷರನಲ್ಲಿ ಪ್ರಕೃತಿಯು ನಿಷ್ಕ್ರಿಯವಾಗಿ, ತಟಸ್ಥವಾಗುವುದರಿಂದ ಆ ಪುರುಷನಿಗೆ ತಾನು ಅಕ್ಷರನೆಂಬ, ನಿರ್ವಿಕಾರನೆಂಬ ಅರಿವು ಉಂಟಾಗುತ್ತದೆ. ಗೀತೆಯ ಕ್ಷರಪುರುಷನು ಪ್ರಕೃತಿಯ ಗುಣಗಳನ್ನು ಪ್ರತಿಬಿಂಬಿಸುತ್ತಾನೆ; ಇವನೆ ಸಾಂಖ್ಯದ ಸಗುಣಪುರುಷನು. ಗೀತೆಯ ಅಕ್ಷರಪುರುಷನಲ್ಲಿ ಪ್ರಕೃತಿಯ ಗುಣಗಳು ಸಮಸ್ಥಿತಿಗೆ ಬಂದು ವ್ಯಾಪಾರರಹಿತವಾಗಿವೆ; ಇವನೆ ಸಾಂಖ್ಯದ ನಿರ್ಗುಣಪುರುಷನು. ಕ್ಷರಪುರುಷನು ಪ್ರಕೃತಿಯೊಡನೆ ಸಂಬಂಧ ಹೊಂದಿರುವುದರಿಂದ ತಾನೆ ಕರ್ತೃವೆಂದು ಭಾವಿಸುತ್ತಾನೆ. ಅಕ್ಷರಪುರುಷನು ಪ್ರಕೃತಿಯ ಗುಣಗಳಿಗೆ ಅತೀತನಾಗಿರುವುದರಿಂದ ಕರ್ಮಗಳನ್ನು ಮಾಡದೆ ಕೇವಲ ಸಾಕ್ಷಿಯಾಗಿರುತ್ತಾನೆ. ಆತ್ಮನು ಕ್ಷರಪುರುಷನ ಸ್ಥಿತಿಯಲ್ಲಿದ್ದಾಗ ತನ್ನ ಸ್ವಸ್ವರೂಪಜ್ಞಾನವು ಪ್ರಕೃತಿಯ ಅಹಂಭಾವದಿಂದ ಆವರಿಸಲ್ಪಡಲು ಅವಕಾಶ ಕೊಡುತ್ತಾನೆ. ಆದುದರಿಂದ ತಾನೆ ಕರ್ತೃ ಎಂಬ ಭಾವನೆಯು ಅವನಲ್ಲಿ ಉಂಟಾಗುತ್ತದೆ. ಅಕ್ಷರಪುರುಷನ ಸ್ಥಿತಿಯಲ್ಲಿರುವಾಗ ಅಹಂಭಾವವನ್ನು ತ್ಯಜಿಸಿ ಪ್ರತ್ಯೇಕತ್ವ ಭಾವನೆಯಿಲ್ಲದವನಾಗುತ್ತಾನೆ; ಕರ್ಮಗಳನ್ನು ಮಾಡುತ್ತಿರುವುದು ಪ್ರಕೃತಿಯೆಂದೂ, ತಾನು ಕೇವಲ ಸಾಕ್ಷಿ ಎಂಬ ಅರಿವೂ ಅವನಿಗಿರುತ್ತವೆ. ಮನುಷ್ಯನ ಮನಸ್ಸು ಈ ಎರಡು ಸ್ಥಿತಿಗಳಲ್ಲಿ ಒಂದರ ಕಡೆ ವಾಲುತ್ತದೆ. ದೇಶಕಾಲಗಳ ಪರಿಮಿತಿಗಳಿಗೆ ಒಳಪಟ್ಟು ಪ್ರಕೃತಿವ್ಯಾಪಾರಗಳಿಂದ ಬಂಧಿಸಲ್ಪಡುತ್ತದೆ; ಅಥವಾ ಪ್ರಕೃತಿವ್ಯಾಪಾರಗಳಿಗೆ ಅತೀತವಾಗಿ ಅಹಂಭಾವ ಮತ್ತು ಪ್ರತ್ಯೇಕತೆಗಳಿಲ್ಲದೆ ಇರುತ್ತದೆ.

ವಾಸ್ತವವಾಗಿ ಇವೆರಡು ಸ್ಥಿತಿಗಳೂ ಏಕಕಾಲದಲ್ಲಿ, ಒಟ್ಟಿಗೆ ಇರುತ್ತವೆ. ಪರಸ್ಪರ ವಿರುದ್ಧವಾದ ಇವೆರಡು ಸ್ಥಿತಿಗಳನ್ನು ಸಮನ್ವಯಮಾಡಬೇಕಾದರೆ ಇರುವುದು ಎರಡೆ ರೀತಿಗಳು. ಮಾಯೆ ಅಥವಾ ದ್ವಿಮುಖವಾದ ಜೀವನವೆಂಬ ಸಿದ್ಧಾಂತಗಳಿಂದ ಇದನ್ನು ಸಮನ್ವಯಮಾಡಬಹುದು. ಆದರೆ ವಾಸ್ತವವಾಗಿ ಈ ಸಿದ್ಧಾಂತವು

ಬೇಕಾಗಿಲ್ಲ. ಏತಕ್ಕೆಂದರೆ ಇವೆರಡು ಸ್ಥಿತಿಗಳನ್ನು ಒಳಗೊಂಡ ಮತ್ತು ಇವೆರಡನ್ನೂ ಮೀರಿರುವ, ಆತ್ಮನು ಪುರುಷೋತ್ತಮನೆಂಬ ಬೇರೊಂದುಸ್ಥಿತಿಯಿದೆ. ಇವನೆ ಈಶ್ವರನು; ಸಮಸ್ತ ಭೂತಗಳಿಗೂ ಅಧಿಪತಿಯು. ಇವನು ಕ್ರಿಯಾಶೀಲವಾದ ತನ್ನ ಸ್ವಂತ ಪ್ರಕೃತಿಯನ್ನು ಜೀವಾತ್ಮನಲ್ಲಿ ತುಂಬುತ್ತಾನೆ. ಆ ಜೀವನಲ್ಲಿ ಅಡಗಿರುವ ಆತ್ಮನ ಸ್ವಭಾವಕ್ಕನುಸಾರವಾಗಿ ಈ ಪ್ರಕೃತಿಯು ಕೆಲಸಮಾಡುತ್ತದೆ. ಅಲ್ಲದೆ, ಈ ಜೀವನ ಅಹಂಭಾವದಿಂದ ಕೂಡಿದ ಪ್ರಕೃತಿಯಿಂದಲೂ, ಅದರ ಮೂರುಗುಣಗಳ ವ್ಯಾಪಾರದಿಂದಲೂ, ಇದರಲ್ಲಿ ಮಾರ್ಪಾಡುಗಳಾಗುತ್ತವೆ. ಇದೆ ತ್ರಿಗುಣಮಯವಾದ ಮಾಯೆ. ಇದನ್ನು ದಾಟುವುದು ಕಷ್ಟ. ಆದರೂ ಕೂಡ ತ್ರಿಗುಣಾತೀತರಾದರೆ, ನಾವು ಈ ಮಾಯೆಯನ್ನು ದಾಟಬಹುದು. ಏತಕ್ಕೆಂದರೆ ತನ್ನ ಕ್ಷರರೂಪದಲ್ಲಿ ಈ ಎಲ್ಲ ಕೆಲಸಗಳನ್ನೂ ಈಶ್ವರನು ಮಾಡುತ್ತಿದ್ದಾಗ್ಯೂ, ತನ್ನ ಅಕ್ಷರರೂಪದಲ್ಲಿ ಅವನು ನಿರ್ಲಿಪ್ತನಾಗಿಯೂ, ಉದಾಸೀನನಾಗಿಯೂ, ಸಮದೃಷ್ಟಿಯುಳ್ಳವನಾಗಿಯೂ ಸರ್ವವ್ಯಾಪಿಯಾದರೂ ಎಲ್ಲಕ್ಕೂ ಅತೀತನಾಗಿಯೂ ಇದ್ದಾನೆ. ಈ ಮೂರು ಸ್ಥಿತಿಗಳಲ್ಲಿಯೂ ಅವನೇ ಸ್ವಾಮಿಯು; ಕ್ಷರರೂಪದಲ್ಲಿ ಎಲ್ಲದರಲ್ಲಿಯೂ ಅಂತರ್ಗತನಾಗಿದ್ದುಕೊಂಡು ಸಂಕಲ್ಪ ಮಾಡುತ್ತಿರುವ ಮತ್ತು ಕೆಲಸ ಮಾಡುತ್ತಿರುವ ಪುರುಷನು; ಅಕ್ಷರ ರೂಪದಲ್ಲಿಯಾದರೊ ಎಲ್ಲವನ್ನು ಆವರಿಸಿರುವ ಆದರೆ ನಿರಾಕಾರನಾದ ಪ್ರಭುವು ಮತ್ತು ವಿಭುವು; ಎಲ್ಲದ್ದಕ್ಕೂ ಮೇಲಿನ ಸ್ಥಿತಿಯಲ್ಲಿ ಪರಾತ್ಪರನಾದ ಈಶ್ವರನು. ಕ್ಷರರೂಪದಲ್ಲಿ ಕೆಲಸಮಾಡುತ್ತಿರುವಾಗಲೂ ಕೂಡ, ತನ್ನ ಅಕ್ಷರಸ್ಥಿತಿಯಲ್ಲಿ ಸ್ವತಂತ್ರನಾಗಿಯೆ ಇದ್ದಾನೆ. ಅವನು ಕೇವಲ ನಿರ್ಗುಣ ಅಲ್ಲ; ಆದರೆ ಇವೆರಡು ಸ್ಥಿತಿಗತಿಗಳನ್ನೂ ಹೊಂದಬಲ್ಲ ಒಬ್ಬನೆ ಆದ ಈಶ್ವರನು; ಉಪನಿಷತ್ತಿನಲ್ಲಿ ಹೇಳುವ ಗುಣಿಯಾದ ನಿರ್ಗುಣಿಯು. ಕಾರ್ಯಗತವಾಗುವುದಕ್ಕೆ ಮುಂಚೆಯೆ ಎಲ್ಲವೂ ಹೀಗೆಯೆ ಆಗಬೇಕೆಂದು ಅವನು ಸಂಕಲ್ಪಮಾಡಿದ್ದಾನೆ. (ದುರ್ಯೋಧನ ಮುಂತಾದ ಕೌರವರು ಇನ್ನೂ ಬದುಕಿರುವಾಗಲೆ, ಅವರು ಆಗಲೆ ನನ್ನಿಂದ ಕೊಲ್ಲಲ್ಪಟ್ಟಿದ್ದಾರೆ ಎಂದು ಶ್ರೀ ಕೃಷ್ಣನು ಹೇಳಿದ್ದಾನೆ). ಪ್ರಕೃತಿಯ ಕಾರ್ಯಗಳು ಇವನು ಮಾಡಿರುವ ಸಂಕಲ್ಪಗಳನ್ನು ನೆರವೇರಿಸುವುದರಿಂದ ಈ ಕರ್ಮಗಳಿಂದ ಬದ್ಧನಾಗುವುದಿಲ್ಲ. ಪ್ರತ್ಯೇಕನಾದ ಜೀವಾತ್ಮನು ಕರ್ಮಗಳನ್ನು ಮಾಡುತ್ತಿರುವವನು ತಾನೆ ಎಂದೂ, ಈ ಕರ್ಮಗಳಿಂದ ತನ್ನಲ್ಲಿ ಮಾರ್ಪಾಡುಗಳಾಗುತ್ತಿವೆಯೆಂದೂ ತಿಳಿದುಕೊಳ್ಳುತ್ತಾನೆ. ಪ್ರಕೃತಿಯ ಶಕ್ತಿಗಳು ಆತ್ಮನಿಂದ ಹೊರಟವೆಯೆಂಬುದನ್ನು ತಿಳಿಯದೆ ಅದೇ ಆತ್ಮನೆಂದು ಭ್ರಮಿಸಿ ಅಹಂಕಾರಕ್ಕೆ

ವಶನಾಗುತ್ತಾನೆ. ತಾನೂ ಮತ್ತು ಇತರರೂ ಎಲ್ಲ ಕೆಲಸಗಳನ್ನೂ ಮಾಡುತ್ತಿರುವೆ ವೆಂದು ಭಾವಿಸುತ್ತಾನೆ. ಎಲ್ಲವನ್ನೂ ಮಾಡುತ್ತಿರುವುದು ಪ್ರಕೃತಿಯೆ ಎಂಬುದನ್ನು ಅವನು ಅರಿಯುವುದಿಲ್ಲ. ಅಜ್ಞಾನದಿಂದ ಈ ಕರ್ಮಗಳಲ್ಲಿ ಆಸಕ್ತನಾಗಿ, ಅವುಗಳ ನಿಜಸ್ವರೂಪವನ್ನು ತಿಳಿಯದೆ, ತನ್ನಲ್ಲಿ ಕರ್ತೃತ್ವವನ್ನು ಆರೋಪಿಸಿಕೊಳ್ಳುತ್ತಾನೆ. ಪ್ರಕೃತಿಯ ಗುಣಗಳಿಗೆ ದಾಸನಾಗುತ್ತಾನೆ. ಕೆಲವು ವೇಳೆ ತಮೋಗುಣಕ್ಕೆ ವಶವಾಗಿ ಜಡವಾಗುತ್ತಾನೆ, ಆಲಸನಾಗುತ್ತಾನೆ; ಕೆಲವು ವೇಳೆ ರಜೋಗುಣದ ಪ್ರವಾಹ ದಲ್ಲಿ ಕೊಚ್ಚಿಕೊಂಡು ಹೋಗುತ್ತಾನೆ; ಇನ್ನು ಕೆಲವು ವೇಳೆ ಸತ್ವದ ಮೊಬ್ಬಾದ ಬೆಳಕಿನಿಂದ ಕುಂಠಿತನಾಗುತ್ತಾನೆ. ಪ್ರಕೃತಿಯ ಗುಣಗಳ ವ್ಯಾಪಾರಗಳಿಂದ ರೂಪಾಂತರ ಹೊಂದುತ್ತಿರುವುದು ಮನಸ್ಸು ಮಾತ್ರ; ಈ ಮನಸ್ಸು ತಾನಲ್ಲವೆಂಬ ಅರಿವು ಇವನಿಗಿಲ್ಲ. ಆದಕಾರಣ ಅವನು ಹರ್ಷ ಶೋಕಗಳಿಗೂ, ರಾಗ ದ್ವೇಷಗಳಿಗೂ, ಸುಖ ದುಃಖಗಳಿಗೂ, ಕಾಮ ಕ್ರೋಧಗಳಿಗೂ ವಶನಾಗುತ್ತಾನೆ. ಅವನಿಗೆ ಸ್ವಾತಂತ್ರ್ಯವಿಲ್ಲ.

ಸ್ವತಂತ್ರನಾಗಬೇಕಾದರೆ ಅವನು ಪ್ರಕೃತಿಯ ಕರ್ಮಗಳನ್ನು ಹಿಂದೆ ಹಾಕಿ ಅಕ್ಷರ ಸ್ಥಿತಿಗೆ ಬರಬೇಕು; ಎಂದರೆ ಪ್ರಕೃತಿಯ ಗುಣಗಳಿಗೆ ಅತೀತನಾಗಬೇಕು. ಹೀಗೆ ತಾನು ಅಕ್ಷರಬ್ರಹ್ಮ, ನಿರ್ವಿಕಾರನಾದ, ಕೂಟಸ್ಥನಾದ ಪುರುಷನೆಂದು ಅರಿತು, ತಾನು ನಿರ್ಗುಣನಾದ ಆತ್ಮನೆಂದೂ, ಪ್ರಕೃತಿಯ ಕರ್ಮಗಳನ್ನು ಶಾಂತನಾಗಿ ನೋಡುತ್ತಾ ತಟಸ್ಥನಾಗಿದ್ದುಕೊಂಡು ಆಸರೆ, ಅನುಮತಿ ಕೊಡುವವನೆಂದೂ, ಆದರೆ ತಾನು ಮಾತ್ರ ಪ್ರಸನ್ನನಾಗಿ, ಉದಾಸೀನನಾಗಿ, ನಿರ್ಲಿಪ್ತನಾಗಿ, ನಿಶ್ಚಲ ನಾಗಿ, ಶುದ್ಧನಾಗಿರುವವನೆಂದೂ, ಆತ್ಮಸ್ವರೂಪದಲ್ಲಿ ಎಲ್ಲ ಜೀವಿಗಳಲ್ಲಿಯೂ ಒಂದಾಗಿರುವವನೆಂದೂ, ತಾನು ಪ್ರಕೃತಿ ಅಥವಾ ಅದರ ಕರ್ಮಗಳಲ್ಲವೆಂದೂ ಅರಿಯುತ್ತಾನೆ. ಆತ್ಮನು ಪ್ರಕೃತಿಯ ಕೆಲಸಗಳಿಗೆ ಅನುಮತಿಕೊಟ್ಟರೂ ತಾನು ಎಲ್ಲ ಭೂತಗಳಲ್ಲಿಯೂ ಇದ್ದುಕೊಂಡು ಈ ಕರ್ಮಗಳಿಗೆ ಆಸರೆಯಾಗಿದ್ದರೂ, ತಾನೇ ಸ್ವತಃ ಯಾವ ಕರ್ಮವನ್ನೂ ಸೃಷ್ಟಿಸುವುದಿಲ್ಲ; ಕರ್ತೃತ್ವವನ್ನಾಗಲಿ, ಕರ್ಮ ಗಳಿಗೂ ಅವುಗಳ ಫಲಗಳಿಗೂ ಇರುವ ಸಂಬಂಧವನ್ನಾಗಲಿ ಸೃಷ್ಟಿಸುವುದಿಲ್ಲ. ಕ್ಷರ ಸ್ಥಿತಿಯಲ್ಲಿ ಪ್ರಕೃತಿವ್ಯಾಪಾರಗಳಿಗೆ ಸಾಕ್ಷಿಯಾಗಿರುತ್ತಾನೆ ಮಾತ್ರ. ಯಾರ ಪಾಪ ಪುಣ್ಯಗಳನ್ನೂ ತನ್ನದೆಂದು ವಹಿಸಿಕೊಳ್ಳುವುದಿಲ್ಲ. ತನ್ನ ಶುದ್ಧ ಸ್ವರೂಪವನ್ನು ಉಳಿಸಿಕೊಳ್ಳುತ್ತಾನೆ. ಅಹಂಕಾರವಿಶಿಷ್ಟನಾದ ಜೀವಾತ್ಮನು ಅಜ್ಞಾನ ದಿಂದ ಆವರಿಸಲ್ಪಟ್ಟು ಈ ಗುಣಗಳು ತನ್ನದೆ ಎಂದು ಭಾವಿಸುತ್ತಾನೆ. ವಾಸ್ತವ

ವಾಗಿ ಇವನು ಆತ್ಮನು ಉಪಯೋಗಿಸುವ ಸಾಧನವಾದರೂ ಕೂಡ, ತಾನೆ ಕರ್ತೃ ವೆಂದು ಭ್ರಮಿಸುತ್ತಾನೆ. ನಿರ್ಗುಣವಾದ ಆತ್ಮನ ಸ್ಥಿತಿಯನ್ನು ಪಡೆದಾಗ, ಇವನು ಮೇಲ್ಪಟ್ಟದ ಜ್ಞಾನವನ್ನು ಹೊಂದುತ್ತಾನೆ. ಪ್ರಕೃತಿಯ ಕರ್ಮಗಳ ಬಂಧನದಿಂದ ಬಿಡುಗಡೆ ಹೊಂದುತ್ತಾನೆ. ಪ್ರಕೃತಿಯ ಗುಣಗಳಿಗೆ ಅಂಟಿಕೊಳ್ಳದೆ, ಸುಖ ದುಃಖ ಗಳಿಂದ ಮತ್ತು ಪಾಪ ಪುಣ್ಯಗಳಿಂದ ಮುಕ್ತಿ ಹೊಂದುತ್ತಾನೆ. ಅವನ ದೇಹಾತ್ಮವು, ಎಂದರೆ ಮನಸ್ಸು, ಪ್ರಾಣ ಮತ್ತು ದೇಹ, ಹಿಂದಿನಂತೆಯೆ ಇದೆ. ಪ್ರಕೃತಿವ್ಯಾಪಾರಗಳು ಎಂದಿನಂತೆ ನಡೆಯುತ್ತವೆ. ಆದರೆ ಅಂತರಾತ್ಮನು ಮಾತ್ರ ಈ ವ್ಯಾಪಾರಗಳಿಗೆ ಅಂಟಿಕೊಳ್ಳುವುದಿಲ್ಲ; ಅವು ತನ್ನವೆಂದು ತಿಳಿಯುವುದಿಲ್ಲ. ಪ್ರಕೃತಿಯ ಗುಣಗಳು ಕೆಲಸ ಮಾಡುತ್ತಿದ್ದಾಗ್ಯೂ ಇವನಿಗೆ ಹರ್ಷ ಶೋಕಗಳುಂಟಾ ಗುವುದಿಲ್ಲ. ಇವನು ಎಲ್ಲಕ್ಕೂ ಸಾಕ್ಷಿಯಾಗಿರುವ ಸ್ವತಂತ್ರನಾದ, ನಿರ್ವಿಕಾರನಾದ ನಿರ್ಗುಣನಾದ ಆತ್ಮನು.

ಈ ಸ್ಥಿತಿಯು ಎಲ್ಲಕ್ಕೂ ಮೇಲಿನ ಮಟ್ಟವೆ, ಬೆಳವಣಿಗೆಯ ಪರಮಾವಧಿಯೆ, ಪರಮರಹಸ್ಯವೆ? ಹಾಗಿರಲು ಸಾಧ್ಯವಿಲ್ಲ. ಏತಕ್ಕೆಂದರೆ ಇದು ಸಮರಸವಿರುವ ಸ್ಥಿತಿಯಲ್ಲ; ಬೇರೆ ಬೇರೆಯಾದ ಎರಡು ಸ್ಥಿತಿಗಳ ಬೆರಕೆ. ಏಕನಾದ ಪುರುಷನಲ್ಲ; ಎರಡು ಪುರುಷರು ಸೇರಿದ್ದಾರೆ. ಆತ್ಮನಿಗೆ ಸ್ವಾತಂತ್ರ್ಯವಿದೆ; ಆದರೆ ಪ್ರಕೃತಿಯಲ್ಲಿ ನ್ಯೂನತೆಯಿದೆ. ಆದುದರಿಂದ ಇದು ಕೊನೆಯ ಮಟ್ಟವಲ್ಲ; ಮಧ್ಯದ ಒಂದು ಹಂತ ಮಾತ್ರ. ಹಾಗಾದರೆ ಇದಕ್ಕಿಂತ ಆಚೆ ಏನಿದೆ ಎಂದು ಕೇಳಬಹುದು. ಇದಕ್ಕೆ ಸನ್ಯಾಸಿಯು ಕೊಡುವ ಉತ್ತರವೇನೆಂದರೆ: ಇವೆರಡರಲ್ಲಿ ಒಂದಾದ ಪ್ರಕೃತಿಯನ್ನೂ ಅದರ ಕರ್ಮಗಳನ್ನೂ ಸಂಪೂರ್ಣವಾಗಿ ಅಥವಾ ಸಾಧ್ಯವಾದಷ್ಟು ಮಟ್ಟಿಗೆ ತ್ಯಜಿಸು ವುದು; ಆಗ ಪ್ರಕೃತಿಯ ನ್ಯೂನತೆಗಳಿಂದ ಕಲುಷಿತವಾಗದ ಸ್ಥಿತಿಯೂ, ಪೂರ್ಣ ವಾದ ಸ್ವಾತಂತ್ರ್ಯವೂ ದೊರೆಯುವುದು ಸಾಧ್ಯ. ಇದೊಂದು ಮಾರ್ಗವೆಂಬುದನ್ನು ಗೀತೆಯು ಒಪ್ಪಿದರೂ ಅದರ ದೃಷ್ಟಿಯಲ್ಲಿ ಇದು ಉತ್ತಮವಲ್ಲ. ಕರ್ಮಗಳನ್ನು ತ್ಯಜಿಸಬೇಕೆಂದು ಗೀತೆಯು ಒತ್ತಿ ಹೇಳುತ್ತದೆ; ಆದರೆ ಗೀತೆಯ ದೃಷ್ಟಿಯಲ್ಲಿ ಕರ್ಮಸನ್ಯಾಸವೆಂದರೆ ಕರ್ಮಗಳನ್ನು ಬಿಡುವುದಲ್ಲ. "ನಾನು ಕರ್ತೃ" ಎಂಬ ಭಾವನೆಯನ್ನು ಬಿಟ್ಟು, ಎಲ್ಲವೂ ಬ್ರಹ್ಮನದು ಎಂದು ಅವನಲ್ಲಿ ಅರ್ಪಿಸುವುದು. ಕ್ಷರರೂಪದಲ್ಲಿ ಬ್ರಹ್ಮನು ಪ್ರಕೃತಿಯ ಕೆಲಸಗಳಿಗೆ ಪೂರ್ಣವಾಗಿ ಒತ್ತಾಸೆ ಕೊಡು ತ್ತಾನೆ. ಅಕ್ಷರ ರೂಪದಲ್ಲಾದರೊ ಬ್ರಹ್ಮನು ಈ ವ್ಯಾಪಾರಗಳಿಗೆ ಒತ್ತಾಸೆ ಕೊಡು ತ್ತಿದ್ದರೂ ಅವುಗಳೊಡನೆ ಸಂಗವನ್ನು ತೊರೆಯುತ್ತಾನೆ; ತಾನು ಸ್ವತಂತ್ರನಾಗಿಯೆ

ಇರುತ್ತಾನೆ. ಜೀವಾತ್ಮನು ಒಂದು ಕಡೆ ಕ್ಷರ ಬ್ರಹ್ಮನಲ್ಲಿ ಒಂದಾಗಿ ಪ್ರಕೃತಿವ್ಯಾಪಾರಗಳಿಗೆ ಆಶ್ರಯನಾಗಿರುತ್ತಾನೆ. ಕ್ಷರ ಮತ್ತು ಅಕ್ಷರ ಸ್ಥಿತಿಗಳೆರಡೂ ಒಂದೇ ಪುರುಷೋತ್ತಮನ ಎರಡು ರೂಪಗಳೆಂದು ತಿಳಿದುಕೊಂಡರೆ ಹೀಗೆ ಮಾಡುವುದು ಸುಲಭವಾಗುತ್ತದೆ. ಈಶ್ವರ ರೂಪದಲ್ಲಿ ಸರ್ವಭೂತಗಳಲ್ಲಿಯೂ ಗುಪ್ತವಾಗಿರುವ ಪುರುಷೋತ್ತಮನು ಪ್ರಕೃತಿಯನ್ನು ನಿಯಂತ್ರಿಸುತ್ತಾನೆ; ಅವನ ಇಚ್ಛೆಯು ಅಹಂಕಾರದಿಂದ ಯಾವ ವಿಧದಲ್ಲಿಯೂ ಮಾರ್ಪಾಟನ್ನು ಹೊಂದುವುದಿಲ್ಲ ಈ ಇಚ್ಛೆಗನುಸಾರವಾಗಿ ಪ್ರಕೃತಿಯು ತನ್ನ ಸ್ವಭಾವದಿಂದ ಕಾರ್ಯಗಳನ್ನು ನೆರವೇರಿಸುತ್ತದೆ. ಪುರುಷೋತ್ತಮನ ಇಚ್ಛೆಯನ್ನು ಕಾರ್ಯಗತಮಾಡಲು ಪ್ರತ್ಯೇಕವಾದ ಜೀವಾತ್ಮನು ನಿಮಿತ್ತಮಾತ್ರನಾಗುತ್ತಾನೆ. ಆಗ ಅವನು ಕರ್ಮಗಳನ್ನು ಮಾಡುತ್ತಿದ್ದರೂ ಪ್ರಕೃತಿಯ ಗುಣಗಳಿಗೆ ಅತೀತನಾಗಿರುತ್ತಾನೆ. ಗೀತೆಯಲ್ಲಿ ಉಪದೇಶಿಸಿರುವಂತೆ ತ್ರಿಗುಣಗಳ ವ್ಯಾಪಾರದಿಂದ ಬಿಡುಗಡೆ ಹೊಂದುತ್ತಾನೆ. **ನಿಸ್ತ್ರೈಗುಣ್ಯೋ ಭವ** । ಪ್ರಕೃತಿಯ ಗುಣಗಳನ್ನು ಅನುಭವಿಸುತ್ತಿದ್ದರೂ ಅವುಗಳಿಂದ ಬಂಧಿಸಲ್ಪಡುವುದಿಲ್ಲ; ಸಂಗರಹಿತನಾದರೂ ಎಲ್ಲಕ್ಕೂ ಆಶ್ರಯನಾಗಿದ್ದಾನೆ. ಆದರೆ ಅವನ ಪ್ರಕೃತಿಯ ವ್ಯಾಪಾರಗಳು ಬೇರೆ ವಿಧವಾದವು. ಅವು ಅಹಂಕಾರಕ್ಕೆ ಒಳಗಾಗಿಲ್ಲ, ಅತೀತವಾಗಿವೆ. ಆದುದರಿಂದ ಪ್ರತಿಕ್ರಿಯೆಯ ಬಂಧನವಿರುವುದಿಲ್ಲ. ಏತಕ್ಕೆಂದರೆ ಅವನು ಪುರುಷೋತ್ತಮನಲ್ಲಿ ಸಂಪೂರ್ಣವಾಗಿ ಐಕ್ಯಹೊಂದಿದ್ದಾನೆ. ಪುರುಷೋತ್ತಮನ ಭಾವವನ್ನು ಹೊಂದಿದ್ದಾನೆ. ತನ್ನ ಮನಸ್ಸು ಮತ್ತು ಚಿತ್ತಗಳನ್ನೂ ಕೂಡ ಪುರುಷೋತ್ತಮನಲ್ಲಿ ಒಂದು ಮಾಡಿದ್ದಾನೆ. ಈ ಸ್ಥಿತಿಯೆ ಬೆಳವಳಿಕೆಯ ಕೊನೆಯ ಮಟ್ಟ, ಉತ್ತಮ ರಹಸ್ಯ. ಈ ಸ್ಥಿತಿಯನ್ನು ಮುಟ್ಟಿದಾಗ ಪ್ರಕೃತಿಗೆ ತಾನೇ ಸ್ವಾಮಿಯೆಂಬ ಅರಿವು ಆತ್ಮನಿಗೆ ಉಂಟಾಗುತ್ತದೆ. ಇವನ ಜ್ಞಾನ ಮತ್ತು ಸಂಕಲ್ಪಗಳು ಪುರುಷೋತ್ತಮನ ದಿವ್ಯತೇಜಸ್ಸು ಮತ್ತು ಸಂಕಲ್ಪಗಳ ಅಂಶವಾಗುತ್ತವೆ. ಇವನ ಪ್ರಕೃತಿಯ ಕರ್ಮಗಳು ಈಶ್ವರನ ದಿವ್ಯ ಕರ್ಮಗಳಾಗುತ್ತವೆ.



# ಇಪ್ಪತ್ತನೂರನೆಯ ಪ್ರಕರಣ

## ನಿರ್ವಾಣ ಮತ್ತು ಇಹಲೋಕದ ಕರ್ಮಗಳು

ಜ್ಞಾನಮಾರ್ಗದ ಪ್ರಕಾರ ಯೋಗವೆಂದರೆ ಅಕ್ಷರ ಪುರುಷನಲ್ಲಿ ಒಂದಾಗುವುದು. ಗೀತೆಯು ಉಪದೇಶಿಸುವ ಸಮಗ್ರಯೋಗದ ಗುರಿಯಾದರೊ ನಾವು ಪೂರ್ಣವಾಗಿ ಪುರುಷೋತ್ತಮನಲ್ಲಿ ಐಕ್ಯವಾಗುವುದು. ಆದುದರಿಂದಲೆ ಗೀತೆಯು ಮೊದಲು ಜ್ಞಾನ ಮತ್ತು ಕರ್ಮಮಾರ್ಗಗಳನ್ನು ಸಮನ್ವಯ ಮಾಡುತ್ತದೆ; ಅನಂತರ ಪ್ರೇಮ ಮತ್ತು ಭಕ್ತಿಗಳನ್ನು ವಿಸ್ತಾರವಾಗಿ ನಿರೂಪಿಸಿ, ಭಕ್ತಿ, ಜ್ಞಾನ ಮತ್ತು ಕರ್ಮಗಳ ಸಮನ್ವಯದಿಂದಲೆ ಪರಮರಹಸ್ಯವನ್ನು ತಿಳಿಯಲು ಸಾಧ್ಯವೆಂದು ಹೇಳುತ್ತದೆ. ಅಕ್ಷರ ಪುರುಷನಲ್ಲಿ ಒಂದಾಗುವುದೆ ನಮ್ಮ ಕೊನೆಯ ಗುರಿಯಾಗಿ ಪರಮರಹಸ್ಯವಾಗಿರಲು ಸಾಧ್ಯವಿಲ್ಲ ಏತಕ್ಕೆಂದರೆ ಹಾಗಿದ್ದರೆ ಯಾವುದೊ ಒಂದು ಸ್ಥಿತಿಯಲ್ಲಿ ನಮ್ಮ ಭಕ್ತಿ, ಪ್ರೇಮ ಮತ್ತು ಕರ್ಮಗಳಿಗೆ ಆಂತರವಾದ ಆಧಾರ ಮತ್ತು ಪ್ರೇರಣೆಯೆ ಕುಸಿದುಹೋಗುತ್ತದೆ. ಕ್ಷರ ಪುರುಷನಲ್ಲಿ ಸಂಪೂರ್ಣವಾಗಿ ಐಕ್ಯವಾಗುವುದೆ ಪರಮೋದ್ದೇಶವಾದರೆ ಅಕ್ಷರ ಪುರುಷನ ಸಂಕಲ್ಪ ಕರ್ಮಾದಿಗಳು—ಅಷ್ಟೇಕೆ, ಅವನ ದೃಷ್ಟಿಕೋನವೆ ಅಳಿಯುತ್ತದೆ. ಅವನ ಸಾಮಾನ್ಯವಾದ ಕರ್ಮಗಳಿಗೆ ಮಾತ್ರವಲ್ಲ, ಅವನ ಅಸ್ತಿತ್ವಕ್ಕೇಯೆ, ಮೂಲಭೂತವಾದ ಕರ್ಮಗಳಿಗೂಕೂಡ ಭಂಗಬರುತ್ತದೆ. ಅಜ್ಞಾನದಿಂದ ಮಾಡುವ ಕರ್ಮಗಳಿಗೆ ಮಾತ್ರವಲ್ಲ, ಜ್ಞಾನಸಹಿತವಾಗಿ ಮಾಡುವ ಕರ್ಮಗಳಿಗೂ ಭಂಗಬರುತ್ತದೆ. ಕ್ಷರ ಪುರುಷನ ವ್ಯಾಪಾರಕ್ಕೆ ಆಧಾರವಾಗಿರುವ, ಜೀವಾತ್ಮ ಮತ್ತು ಪರಮಾತ್ಮರ ಸ್ಥಿತಿ ಮತ್ತು ಕರ್ಮಗಳಿಗಿರುವ ಭೇದಕ್ಕೆ ಧಕ್ಕೆಬರುತ್ತದೆ. ಏತಕ್ಕೆಂದರೆ ಈ ಅಭಿಪ್ರಾಯದ ಪ್ರಕಾರ ಕ್ಷರಪುರುಷನ ಕರ್ಮಗಳೆಲ್ಲ ಅಜ್ಞಾನದಿಂದ ಜನಿಸಿದಂತಹುವು. ಅವಕ್ಕೆ ಪರಮಾತ್ಮನ ಜ್ಞಾನ ಅಥವಾ ಕರ್ಮಗಳೆಂಬ ಹಿನ್ನೆಲೆಯಾಗಲಿ, ಆಧಾರವಾಗಲಿ ಇಲ್ಲ. ಯೋಗದ ಮೂಲಕ ಪುರುಷೋತ್ತಮನಲ್ಲಿ ಒಂದಾಗುವುದೆಂದರೆ ನಮ್ಮ ಪ್ರತ್ಯೇಕವಾದ ಸ್ಥಿತಿಯಲ್ಲಿಯೆ ಜೀವಾತ್ಮನು ಈ ಏಕತ್ವದಿಂದ ಬರುವ ಜ್ಞಾನ ಮತ್ತು ಆನಂದಗಳನ್ನು ಅನುಭವಿಸುವುದು. ಆದರೆ ಕೆಲಸಮಾಡುವಾಗ ಸ್ವಲ್ಪ ಪ್ರತ್ಯೇಕತೆ ಇರುತ್ತದೆ. ಮುಕ್ತನಾದವನಿಗೆ ಭಕ್ತಿ ಮತ್ತು ಕರ್ಮಗಳು ಸಾಧ್ಯ. ಅವನ ಜೀವನದಲ್ಲಿ ಅವು ಇಲ್ಲದಿರಲು ಸಾಧ್ಯವೇ ಇಲ್ಲ.

ಮುಕ್ತನಾದವನು ತನ್ನಲ್ಲಿ ಮಾತ್ರವಲ್ಲದೆ ಇಡೀ ಪ್ರಪಂಚದಲ್ಲಿ ಪುರುಷೋತ್ತಮನನ್ನು ಕಾಣುತ್ತಾನೆ. ಅವನಲ್ಲಿಟ್ಟಿರುವ ಭಕ್ತಿ ಮತ್ತು ಪ್ರೇಮಗಳಿಂದ ಪ್ರೇರಿತನಾಗಿರುವುದರಿಂದಲೆ ಮುಕ್ತನಾದವನು ತನ್ನ ವ್ಯಕ್ತಿಜೀವನ (ಪ್ರತ್ಯೇಕ ಜೀವನ) ದಲ್ಲಿಯೂ ದೈವೀಕರ್ಮಗಳನ್ನು ಮಾಡುತ್ತಾನೆ.

ಹೀಗೆ ಪುರುಷೋತ್ತಮನಲ್ಲಿ ಒಂದಾಗಲು ಅನುಸರಿಸಬೇಕಾದ ನೇರವಾದ ಮಾರ್ಗವು ಯಾವುದೆಂದರೆ ಮೊದಲು ಅಕ್ಷರಪುರುಷನಲ್ಲಿ ಐಕ್ಯವಾಗುವುದು. ಇದು ಬಹಳ ಅವಶ್ಯಕವೆಂದೂ, ಇದಾದಮೇಲೆಯೆ ಭಕ್ತಿ ಮತ್ತು ಕರ್ಮಗಳಿಗೆ ಪೂರ್ಣತೆ ಬರುವುದೆಂದೂ ಗೀತೆಯು ಒತ್ತಿ ಒತ್ತಿ ಹೇಳುತ್ತದೆ. ಈ ಕಾರಣದಿಂದಲೆ ಗೀತೋಪದೇಶದ ಸರಣಿಯನ್ನು ತಪ್ಪಾಗಿ ಗ್ರಹಿಸಲು ಅವಕಾಶವುಂಟು. ಏತಕ್ಕೆಂದರೆ "ಅಕ್ಷರಪುರುಷನಲ್ಲಿ ಒಂದಾಗುವುದು ಬಹಳ ಮುಖ್ಯ" ಎಂದು ಹೇಳುವ ಗೀತೆಯ ವಾಕ್ಯಗಳನ್ನು ಮಾತ್ರ ತೆಗೆದುಕೊಂಡು, ಗೀತೆಯ ಸಮಗ್ರ ಉಪದೇಶದ ಸರಣಿಯನ್ನು ಗಮನಿಸದೆ ಇದ್ದರೆ, ಆಗ ಅಕ್ಷರಬ್ರಹ್ಮನಲ್ಲಿ ಐಕ್ಯವಾಗಿ ಯಾವ ಕರ್ಮಗಳನ್ನೂ ಮಾಡದೆ ಇರುವ ನೈಷ್ಕರ್ಮ್ಯ ಸ್ಥಿತಿಯನ್ನೇ ಗೀತೆಯು ಉಪದೇಶಿಸುವುದೆಂದೂ, ಕರ್ಮಗಳನ್ನು ಮಾಡುವುದು ಈ ಗುರಿಯನ್ನು ಮುಟ್ಟಲು ಸಾಧನ ಮಾತ್ರವೆಂದೂ ಅರ್ಥಮಾಡಬಹುದು. ಹೀಗೆ ಅಕ್ಷರಬ್ರಹ್ಮನಲ್ಲಿ ಒಂದಾಗಬೇಕೆಂಬ ಉಪದೇಶವು ಗೀತೆಯ ಐದನೆಯ ಅಧ್ಯಾಯದ ಕೊನೆಯಲ್ಲಿ ಮತ್ತು ಆರನೆಯ ಅಧ್ಯಾಯದಲ್ಲಿ ಮತ್ತೆ ಮತ್ತೆ ಕಂಡುಬರುತ್ತದೆ. ಈ ಭಾಗಗಳಲ್ಲಿ ನಿರೂಪಿಸಿರುವ ಯೋಗದ ಲಕ್ಷಣವನ್ನು ನಾವು ಓದುವಾಗ ಈ ಯೋಗಕ್ಕೂ ಕರ್ಮಕ್ಕೂ ಹೊಂದಾಣಿಕೆ ಇಲ್ಲವೆಂಬ ಭಾವನೆಯು ನಮ್ಮಲ್ಲಿ ಮೊದಲು ಉಂಟಾಗುತ್ತದೆ. ಯೋಗಿಯು ಮುಟ್ಟಬೇಕಾದ ಸ್ಥಿತಿಯನ್ನು ನಿರ್ವಾಣವೆಂದು ಇಲ್ಲಿ ಅನೇಕ ವೇಳೆ ಹೇಳಿದೆ.

ನಮ್ಮ ಪ್ರತ್ಯೇಕತೆಯು ನಷ್ಟವಾಗುವುದರಿಂದ ಉಂಟಾಗುವ ಪರಮಶಾಂತಿಯೆ ನಿರ್ವಾಣದ ಲಕ್ಷಣ. ಆದರೆ ಇದು ಬೌದ್ಧರು ಹೇಳುವ, ಅಸ್ತಿತ್ವವೆ ಇಲ್ಲದ, ಶೂನ್ಯದಲ್ಲಿರುವ ಆನಂದವಲ್ಲ. ಇದನ್ನು ಸ್ಪಷ್ಟಪಡಿಸುವುದಕ್ಕಾಗಿಯೆ ಗೀತೆಯಲ್ಲಿ 'ಬ್ರಹ್ಮನಿರ್ವಾಣ' (ಬ್ರಹ್ಮನಲ್ಲಿ ನಿರ್ವಾಣ) ಎಂಬ ಮಾತನ್ನು ಉಪಯೋಗಿಸಿದೆ. ಇಲ್ಲಿ ಹೇಳಿರುವ ಬ್ರಹ್ಮನು ಅಕ್ಷರಬ್ರಹ್ಮನೆಂದೆ ಕಾಣುತ್ತದೆ. ಎಂದರೆ ಬಾಹ್ಯಪ್ರಕೃತಿಯಲ್ಲಿ ಗೂಢವಾಗಿದ್ದರೂ ಕೂಡ ಕರ್ಮಮಾಡುವುದನ್ನು ನಿಲ್ಲಿಸಿರುವ, ಕಾಲಾತೀತನಾದ ಪುರುಷನನ್ನು ಸೂಚಿಸುತ್ತದೆ. ಈ ಸಂದರ್ಭದಲ್ಲಿ ಗೀತೆಯ ಉಪದೇಶಸರಣಿ ಎತ್ತ ಸಾಗಿದೆಯೆಂಬುದನ್ನು ನಾವು ವಿವೇಚಿಸಬೇಕು. ಇಲ್ಲಿ ಹೇಳಿರುವ ಶಾಂತಿಯು

ಕರ್ಮಗಳನ್ನು ಸಂಪೂರ್ಣವಾಗಿ ತ್ಯಜಿಸುವುದರಿಂದ ಬರುವ ಶಾಂತಿಯೆ? ಅಕ್ಷರ ಪುರುಷನಲ್ಲಿ ನಿರ್ವಾಣಹೊಂದಿದರೆ ಕ್ಷರಪುರುಷನಿಗೆ ಸಂಬಂಧಿಸಿದ ಎಲ್ಲ ಜ್ಞಾನ ಮತ್ತು ಕರ್ಮಗಳು ಕಡಿದುಹೋಗುತ್ತವೆಯೆ? ನಿರ್ವಾಣಸ್ಥಿತಿಯನ್ನು ಮುಟ್ಟಿದವರು ಈ ಪ್ರಪಂಚದಲ್ಲಿ ಕರ್ಮಗಳನ್ನು ಮಾಡುವುದೇ ಇಲ್ಲವೆಂದು ನಮ್ಮ ಭಾವನೆ. ಇಲ್ಲಿ ನಿರ್ವಾಣವೆಂಬ ಪದವನ್ನು ಉಪಯೋಗಿಸಿರುವುದರಿಂದ ಕ್ಷರಪುರುಷನ ಸಂಪರ್ಕ ವನ್ನು ತೊರೆದಂತೆಯೇ ಎಂದೂ, ಆದುದರಿಂದ ಕರ್ಮಮಾಡುವ ಪ್ರಶ್ನೆಯೆ ಇಲ್ಲ ವೆಂದು ಅನೇಕರು ವಾದಿಸಬಹುದು. ಆದರೆ ಬೌದ್ಧಮತದ ತತ್ವಗಳನ್ನು ನಾವು ಸೂಕ್ಷ್ಮವಾಗಿ ವ್ಯಾಸಂಗಮಾಡಿದರೆ ನಿರ್ವಾಣಕ್ಕೂ ಕರ್ಮಕ್ಕೂ ಬಹುದೂರವೆನ್ನು ವುದು ನಿಜವಾಗಿಯೂ ಅಲ್ಲಿ ಸೂಚಿಸಲ್ಪಟ್ಟಿದೆಯೆ ಎಂಬ ಸಂಶಯವು ನಮ್ಮಲ್ಲುಂಟಾಗು ತ್ತದೆ. ವೇದಾಂತದ ಪರಮೋಪದೇಶವಾದ ಗೀತೆಯನ್ನು ಸಮಗ್ರವಾಗಿ ವ್ಯಾಸಂಗ ಮಾಡಿದರಂತೂ ಈ ವಿಧವಾದ ಅಭಿಪ್ರಾಯವು ಗೀತೆಯ ಉಪದೇಶವಲ್ಲವೆಂಬುದು ಸ್ಪಷ್ಟವಾಗುತ್ತದೆ.

ಬ್ರಾಹ್ಮೀಸ್ಥಿತಿಯನ್ನು ಹೊಂದಿರುವ ಬ್ರಹ್ಮವೇತ್ತನ (ಬ್ರಹ್ಮನನ್ನು ತಿಳಿದಿರು ವವನ) ಪರಿಪೂರ್ಣವಾದ ಸಮತ್ವದ ವಿಷಯವನ್ನು ಹೇಳಿದಮೇಲೆ ಗೀತೆಯು ಬ್ರಹ್ಮಯೋಗ ಮತ್ತು ಬ್ರಹ್ಮನಲ್ಲಿ ನಿರ್ವಾಣ ಎಂಬುವನ್ನು ವಿವರಿಸುತ್ತದೆ. "ವಿಷಯಸ್ಪರ್ಶವಿಲ್ಲದ ಮನುಷ್ಯನು ತನ್ನೊಳಗೆ ಅಂತರವಾಗಿ ಸುಖವನ್ನು ಹೊಂದು ತ್ತಾನೆ. ಅಂತಹವನು ಬ್ರಹ್ಮಯೋಗದಿಂದ ಬ್ರಹ್ಮನಲ್ಲಿ ಒಂದಾದಾಗ ಶಾಶ್ವತವಾದ ಸುಖವನ್ನು ಅನುಭವಿಸುತ್ತಾನೆ." (೫-೨೧) ನಿಜವಾದ ಸುಖಶಾಂತಿಗಳು ಲಭಿಸಲು ರಾಗದ್ವೇಷಗಳಿಂದಲೂ, ಆಸೆಯಿಂದಲೂ ಬಿಡುಗಡೆ ಹೊಂದಬೇಕು; ಇದಕ್ಕೆ ನಿಸ್ಸಂಗತ್ವವು ಅತ್ಯವಶ್ಯಕವೆಂದು ಗೀತೆಯು ಹೇಳುತ್ತದೆ. ಸ್ಥೂಲಶರೀರವನ್ನು ಹೊಂದಿರುವಾಗಲೆ ಮನುಷ್ಯನಿಗೆ ಈ ಸುಖ ಮತ್ತು ಸಮತ್ವಗಳು ಲಭಿಸುತ್ತವೆ. ಮೋಕ್ಷವು ಈ ಶರೀರವನ್ನು ಬಿಟ್ಟಮೇಲೆಯೆ ಲಭಿಸುವುದರಿಂದ ಈ ಶರೀರವನ್ನು ಧರಿಸಿರುವವರೆಗೂ ನಾವು ನಮ್ಮ ಕೆಳಮಟ್ಟದ ಪ್ರಕೃತಿಗೆ ಕೊಂಚಮಟ್ಟಿಗಾದರೂ ಅಡಿಯಾಳಾಗಿಯೆ ಇರಬೇಕೆಂಬ ಅಭಿಪ್ರಾಯವು ತಪ್ಪು. ಮೋಕ್ಷವನ್ನು ನಾವು ಈ ಲೋಕದಲ್ಲಿಯೆ ಪಡೆಯಬಹುದು; ಈ ಶರೀರವನ್ನು ಧರಿಸಿರುವಾಗಲೆ ಅನುಭವಿಸ ಬಹುದು. "ಯಾವ ಮನುಷ್ಯನು ತನ್ನೊಳಗೆ ಸುಖಿಯಾಗಿಯೂ, ಸಂತೋಷವುಳ್ಳವ ನಾಗಿಯೂ, ಬೆಳಕುಳ್ಳವನಾಗಿಯೂ ಇರುತ್ತಾನೆಯೊ ಅಂತಹ ಯೋಗಿಯು ಬ್ರಹ್ಮ ನಿರ್ವಾಣವನ್ನು ಹೊಂದುತ್ತಾನೆ." (೫-೨೪) ಇಲ್ಲಿ ನಿರ್ವಾಣವೆಂದರೆ ಜೀವನು

ತನ್ನ ಪ್ರತ್ಯೇಕತೆಯನ್ನು ಕಳೆದುಕೊಂಡು ಪರಮಾತ್ಮನಲ್ಲಿ ಲೀನವಾಗುವುದೆಂಬುದು ಸ್ಪಷ್ಟವಾಗಿದೆ. ಈ ಪರಮಾತ್ಮನಾದರೊ ದೇಶಕಾಲಾತೀತನು; ಪ್ರಕೃತಿಯಲ್ಲಾಗುವ ಬದಲಾವಣೆಗಳಿಗೂ, ಕಾರ್ಯಕಾರಣ ಸಂಬಂಧವಾದ ಸಂಸಾರಚಕ್ರಕ್ಕೂ ಸಿಲುಕದೆ ಇರುವವನು; ಸ್ವಯಂಪ್ರಕಾಶಸ್ವರೂಪನೂ, ಆನಂದಸ್ವರೂಪನೂ ಆಗಿದ್ದು ಸರ್ವದಾ ಶಾಂತಿಯನ್ನನುಭವಿಸುವವನು. ಈ ಪರಮಾತ್ಮನಲ್ಲಿ ಒಂದಾದ ಯೋಗಿಯು ತನ್ನ ಪ್ರತ್ಯೇಕತೆಯನ್ನು ಕಳೆದುಕೊಳ್ಳುತ್ತಾನೆ; ದೇಹ ಮತ್ತು ಮನಸ್ಸುಗಳ ಬಂಧನದಿಂದ ಬಿಡುಗಡೆ ಹೊಂದುತ್ತಾನೆ. ಅವನೆ ಬ್ರಹ್ಮನಾಗುತ್ತಾನೆ. ತನ್ನಲ್ಲಿ ಅಂತರ್ಯಾಮಿಯಾಗಿರುವ ಶಾಶ್ವತನಾದ ಮತ್ತು ನಿರ್ವಿಕಾರನಾದ ಬ್ರಹ್ಮನಲ್ಲಿ ತನ್ನ ಪ್ರಜ್ಞೆಯನ್ನು ಸೇರಿಸುತ್ತಾನೆ.

ಇದು ಪ್ರಾಪಂಚಿಕವಿಷಯಗಳಿಂದ ದೂರವಾಗಿರುವ ಸಮಾಧಿಯ ಅಥವಾ ಸುಷುಪ್ತಿಯ ಅವಸ್ಥೆಯೆ? ಅಥವಾ ಪ್ರಕೃತಿಯ ಮತ್ತು ಅದರ ವ್ಯಾಪಾರಗಳಿಗೆ ಅತೀತವಾದ ಒಂದು ಪರವಸ್ತುವಿನಲ್ಲಿ ವ್ಯಕ್ತಿಯು ಲೀನವಾಗಲು ಪೂರ್ವಭಾವಿಯಾದ ಅವಸ್ಥೆಯೆ? ನಿರ್ವಾಣವನ್ನು ಹೊಂದಬೇಕಾದರೆ ಪ್ರಾಪಂಚಿಕವ್ಯಾಪಾರಗಳಿಂದ ಹಿಂತೆಗೆಯಬೇಕೆ? ಅಥವಾ ಗೀತೆಯು ಸೂಚಿಸಿರುವಂತೆ ಪ್ರಪಂಚವ್ಯವಹಾರದಲ್ಲಿದ್ದುಕೊಂಡೆ ನಿರ್ವಾಣವನ್ನು ಹೊಂದಿರಲು ಸಾಧ್ಯವೆ? ಎಂದರೆ ನಿರ್ವಾಣಸ್ಥಿತಿಯು ಐಹಿಕಜೀವನವನ್ನೂ ಒಳಗೊಂಡಿದೆಯೆ? ಎರಡನೆಯ ಪಕ್ಷವೆ ಸರಿಯೆಂದು ತೋರುತ್ತದೆ. ಏತಕ್ಕೆಂದರೆ ಗೀತೆಯಲ್ಲಿ ಈ ರೀತಿಯಾಗಿ ಹೇಳಿದೆ: "ಪಾಪರಹಿತರೂ, ದ್ವಂದ್ವಾತೀತರೂ, ಆತ್ಮನನ್ನು ವಶಮಾಡಿಕೊಂಡಿರುವವರೂ, ಎಲ್ಲ ಭೂತಗಳಿಗೂ ಹಿತವನ್ನು ಮಾಡುವುದರಲ್ಲಿ ಆಸಕ್ತರೂ ಆದ ಋಷಿಗಳು ಬ್ರಹ್ಮನಿರ್ವಾಣವನ್ನು ಹೊಂದುತ್ತಾರೆ." (೫-೨೫) ಇದರಿಂದ ಈ ಸ್ಥಿತಿಯಲ್ಲಿರುವುದೆ ನಿರ್ವಾಣವೆಂದು ಭಾಸವಾಗುವಂತಿದೆ. ಮುಂದಿನ ಶ್ಲೋಕವು ಈ ವಿಷಯವನ್ನು ಸ್ಪಷ್ಟಪಡಿಸುತ್ತದೆ. "ಕಾಮಕ್ರೋಧಗಳನ್ನು ಬಿಟ್ಟಿರುವ, ಮನಸ್ಸನ್ನು ಜಯಿಸಿರುವ, ಆತ್ಮಜ್ಞಾನವುಳ್ಳ ಸನ್ಯಾಸಿಗಳ ಸುತ್ತ ಬ್ರಹ್ಮನಿರ್ವಾಣವಿದೆ; ಅವರು ಅದರಲ್ಲಿಯೆ ವಾಸಿಸುತ್ತಾರೆ" (೫-೨೬). ಎಂದರೆ ಆತ್ಮಜ್ಞಾನವನ್ನು ಪಡೆದರೆ ನಿರ್ವಾಣವನ್ನು ಹೊಂದಿದಂತೆ. ಇದು ನಿರ್ವಾಣ ಎಂಬ ಪದಕ್ಕೆ ಬಹಳ ವ್ಯಾಪಕವಾದ ಅರ್ಥವೆಂಬುದು ಸ್ಪಷ್ಟ. ಗೀತೆಯ ಪ್ರಕಾರ ನಿರ್ವಾಣದ ಲಕ್ಷಣಗಳು ಈ ರೀತಿ ಇವೆ: ರಾಗ-ದ್ವೇಷಗಳ ವಾಸನೆಯೂ ಕೂಡ ಇಲ್ಲದಿರುವುದು; ಈ ಸಮತ್ವದೃಷ್ಟಿಯನ್ನು ಹೊಂದಲು ಅವಶ್ಯಕವಾದ ನಮ್ಮ ಮನಸ್ಸಿನ ಮೇಲೆ ಸ್ವಾಮ್ಯ; ಸರ್ವಭೂತಗಳಲ್ಲಿಯೂ

ಸಮದೃಷ್ಟಿ ; ಸರ್ವ ಭೂತಗಳಿಗೂ ಹಿತವನ್ನು ಮಾಡುವುದು ; ಭೇದಭಾವವನ್ನುಂಟುಮಾಡಲು ಕಾರಣಗಳಾದ ಅಜ್ಞಾನ ಮತ್ತು ಸಂಶಯಗಳ ಮೂಲೋತ್ಪಾಟನೆ ಮತ್ತು ನಮ್ಮಲ್ಲಿಯೂ, ಎಲ್ಲರಲ್ಲಿಯೂ ಇರುವ ಪರಮಾತ್ಮನು ಒಬ್ಬನೆ ಎಂಬ ಜ್ಞಾನ. ಇವೆ ನಿರ್ವಾಣದ ಲಕ್ಷಣಗಳು.

ಆದುದರಿಂದ ಪ್ರಪಂಚ ವ್ಯವಹಾರ ಮತ್ತು ಕರ್ಮಗಳಿಗೂ ನಿರ್ವಾಣಕ್ಕೂ ಪರಸ್ಪರ ವಿರೋಧವಿಲ್ಲ. ಏತಕ್ಕೆಂದರೆ ನಶ್ವರವಾದ ಈ ಪ್ರಪಂಚದಲ್ಲಿಯೂ ಕೂಡ ಪರಮಾತ್ಮನಿದ್ದಾನೆ. ಕರ್ಮಗಳನ್ನು ಮಾಡುವುದರ ಮೂಲಕ ನಿರ್ವಾಣಸ್ಥಿತಿಯನ್ನು ಮುಟ್ಟಿರುವ ಮುನಿಗಳು ಇವನನ್ನು ತಿಳಿಯುತ್ತಾರೆ ಮತ್ತು ಹೊಂದುತ್ತಾರೆ. ಅವರು ಸರ್ವಭೂತಹಿತದಲ್ಲಿ ನಿರತರಾಗಿದ್ದಾರೆ. ಕ್ಷರಪುರುಷನಲ್ಲಿ ಒಂದಾಗುವಾಗ ತಾವು ಪಡೆದ ಅನುಭವಗಳನ್ನು ಅವರು ತ್ಯಜಿಸಿಲ್ಲ ; ಅವುಗಳಿಗೆ ದಿವ್ಯಾಂಶವನ್ನು ತುಂಬಿದ್ದಾರೆ. ಕ್ಷರಪುರುಷನೆಂದರೆ ಸರ್ವಭೂತಗಳೆಂದು ಗೀತೆಯು ಹೇಳುತ್ತದೆ. ಆದುದರಿಂದ ಎಲ್ಲ ಜೀವಿಗಳಿಗೂ ಒಳ್ಳೆಯದನ್ನು ಮಾಡುವುದು ಬದಲಾಗುತ್ತಿರುವ ಪ್ರಕೃತಿಯಲ್ಲಿ ಈಶ್ವರನ ದಿವ್ಯಕರ್ಮಗಳೆ ಆಗುತ್ತವೆ. ಬ್ರಾಹ್ಮೀಸ್ಥಿತಿಯಲ್ಲಿರುವುದಕ್ಕೂ ಇಹಲೋಕದಲ್ಲಿ ಕರ್ಮಗಳನ್ನು ಮಾಡುವುದಕ್ಕೂ ಪರಸ್ಪರ ವಿರೋಧವಿಲ್ಲ. ವಾಸ್ತವವಾಗಿ ಹೀಗೆ ಕರ್ಮಗಳನ್ನು ಮಾಡುವುದು ಬ್ರಾಹ್ಮೀಸ್ಥಿತಿಯ ಒಂದು ಮುಖ್ಯ ಲಕ್ಷಣ, ಅದರ ಬಾಹ್ಯಪರಿಣಾಮವೇ ಆಗಿದೆ. ಏತಕ್ಕೆಂದರೆ ನಾವು ಯಾವುದರಲ್ಲಿ ನಿರ್ವಾಣ ಹೊಂದುತ್ತೇವೆಯೊ ಆ ಬ್ರಹ್ಮನು—ನಮ್ಮ ಪ್ರತ್ಯೇಕವಾದ ವ್ಯಕ್ತಿತ್ವವು ಯಾವುದರಲ್ಲಿ ಲಯವಾಗುತ್ತದೆಯೋ ಆ ದಿವ್ಯಚೈತನ್ಯವು—ನಮ್ಮಲ್ಲಿ ಮಾತ್ರವೆ ಅಲ್ಲದೆ ಸಮಸ್ತ ಭೂತಗಳಲ್ಲಿಯೂ ಇದೆ. ಬ್ರಹ್ಮನು ಇಹಲೋಕ ವ್ಯಾಪಾರಗಳಿಂದ ಬೇರೆಯಾದವನಲ್ಲ. ಇಹಲೋಕದೊಳಗೆ, ಹೊರಗೆ, ಸುತ್ತಲೂ ಮತ್ತು ಮೀರಿಯೂ ಇದ್ದಾನೆ. ಎಲ್ಲವೂ ಅವನಲ್ಲಿಯೆ ಇವೆ. ಆದುದರಿಂದ ಸತ್ಯವನ್ನು ಮರೆಮಾಡುವ ಮತ್ತು ಭೇದವನ್ನುಂಟುಮಾಡುವ ಪರಿಮಿತವಾದ ಮತ್ತು ಪ್ರತ್ಯೇಕವಾದ ವ್ಯಕ್ತಿತ್ವವನ್ನು ನಾಶಮಾಡುವುದೆ ಬ್ರಹ್ಮನಿರ್ವಾಣವೆಂದು ಅರ್ಥಮಾಡಬೇಕು. ಈ ಪ್ರತ್ಯೇಕವಾದ ವ್ಯಕ್ತಿತ್ವವು ಸೃಷ್ಟಿಯಾಗಿ ನಮಗೆ ಕಂಡುಬರುವುದಕ್ಕೆ ಪ್ರಕೃತಿಯ ಮೂರು ಗುಣಗಳ ಮಾಯೆಯೆ ಕಾರಣ. ಜೀವನಕ್ಕೆಲ್ಲ ಆಧಾರಭೂತವಾಗಿರುವ, ಎಲ್ಲವನ್ನೂ ಒಳಗೊಂಡಿರುವ, ಸದ್ರೂಪವಾದ ದಿವ್ಯಚೈತನ್ಯದಲ್ಲಿ ಲೀನವಾಗುವುದೆ ನಿರ್ವಾಣ ಸ್ಥಿತಿಯ ಪ್ರವೇಶ. ಈ ಚೈತನ್ಯವು ಎಲ್ಲಕ್ಕೂ ಆಧಾರವಾಗಿದೆ ಮತ್ತು ಎಲ್ಲವನ್ನೂ ಒಳಗೊಂಡಿದೆ. ಇದೆ ಸೃಷ್ಟಿಯ ಅಂತಿಮರಹಸ್ಯ ಮತ್ತು ಶಾಶ್ವತವಾದ ಪರಮಸತ್ಯ.

ನಾವು ನಿರ್ವಾಣ ಸ್ಥಿತಿಯನ್ನು ಪ್ರವೇಶಿಸುವಾಗ ಅದು ನಮ್ಮೊಳಗೆ ಮಾತ್ರವೇ ಅಲ್ಲದೆ ಸುತ್ತಲೂ ಇರುತ್ತದೆ. **ಅಭಿತೋ ಬ್ರಹ್ಮನಿರ್ವಾಣಂ ವರ್ತತೇ।** ಬ್ರಾಹ್ಮೀ ಸ್ಥಿತಿಯು ನಮ್ಮೊಳಗೆ ಗೂಢವಾಗಿರುವುದಲ್ಲದೆ ನಾವೂ ಸಹ ಬ್ರಾಹ್ಮೀಸ್ಥಿತಿಯಲ್ಲಿ ವಾಸಮಾಡುತ್ತೇವೆ. ನಾವು ಪರಮಾತ್ಮನೊಳಗಿರುತ್ತೇವೆ; ಇತರ ಎಲ್ಲ ಜೀವಿಗಳಲ್ಲಿಯೂ, ಒಟ್ಟು ವಿಶ್ವದಲ್ಲಿಯೂ ಇರುವ ಪರಮಾತ್ಮನು ಇವನೇಯೆ; ನಮ್ಮಲ್ಲಿ ಮಾತ್ರವೆ ಅಲ್ಲದೆ ನಮ್ಮ ಹೊರಗೂ ಇದ್ದಾನೆ. ಆದುದರಿಂದ ನಾವು ಅವನಲ್ಲಿ ವಾಸಮಾಡಿದರೆ ಎಲ್ಲರೊಳಗೂ ವಾಸಮಾಡಿದಂತೆ. ನಮ್ಮ ಪ್ರತ್ಯೇಕವಾದ ಅಹಂಭಾವಯುಕ್ತವಾದ ವ್ಯಕ್ತಿತ್ವಮಾತ್ರದಲ್ಲಲ್ಲ. ನಾವು ಅವನಲ್ಲಿ ವಾಸಮಾಡುವುದರಿಂದ ಇಡಿ ವಿಶ್ವದೊಡನೆ ಐಕ್ಯಭಾವವು ನಮ್ಮಲ್ಲಿ ಸ್ಥಿರಗೊಳ್ಳುತ್ತದೆ; ಜಾಗ್ರದವಸ್ಥೆಯಲ್ಲಿಯೂ ಕೂಡ ನಮ್ಮ ಪ್ರಜ್ಞೆಯಲ್ಲಿ ಬೇರೂರಿರುತ್ತದೆ; ಮತ್ತು ನಮ್ಮ ಕರ್ಮಗಳನ್ನೆಲ್ಲ ಪ್ರೇರಿಸುತ್ತದೆ.

ಆದರೆ ಇದಾದಮೇಲೆ ಬರುವ ಎರಡು ಶ್ಲೋಕಗಳು ಇದುವರೆಗೆ ಹೇಳಿರುವುದಕ್ಕೆ ವ್ಯತಿರಿಕ್ತವಾದ ಅರ್ಥವನ್ನು ಬೋಧಿಸುವಂತೆ ಭಾಸವಾಗುತ್ತದೆ. “ಬಾಹ್ಯ ಸ್ಪರ್ಶಗಳನ್ನು ದೂರಮಾಡಿ, ದೃಷ್ಟಿಯನ್ನು ಭ್ರೂಮಧ್ಯದಲ್ಲಿಟ್ಟುಕೊಂಡು, ಪ್ರಾಣಾಪಾನವಾಯುಗಳನ್ನು ಒಂದೇಸಮನಾಗಿಮಾಡಿಕೊಂಡು, ಇಂದ್ರಿಯ, ಮನಸ್ಸು ಮತ್ತು ಬುದ್ಧಿ ಇವುಗಳನ್ನು ವಶಮಾಡಿಕೊಂಡು, ಆಸೆ, ಭಯ ಮತ್ತು ಕೋಪ ಇವುಗಳನ್ನು ಕಳೆದುಕೊಂಡು, ಮೋಕ್ಷವನ್ನೆ ಗುರಿಯನ್ನಾಗಿಟ್ಟುಕೊಂಡಿರುವ ಮುನಿಯು ಯಾವಾಗಲೂ ಮುಕ್ತನೆ ಸರಿ. (೫-೨೭, ೨೮). ವಿವೇಕ ಮತ್ತು ಧ್ಯಾನರೂಪವಾದ ಜ್ಞಾನಯೋಗದಿಂದಲೂ ಮತ್ತು ಕರ್ಮಯೋಗದಿಂದಲೂ ಬೇರೆಯಾದ ಮತ್ತೊಂದು ಯೋಗವನ್ನು ಇಲ್ಲಿ ಹೇಳಿದೆ. ಇದು ರಾಜಯೋಗದ ಲಕ್ಷಣಗಳನ್ನು ಹೊಂದಿದೆ ಮತ್ತು ರಾಜಯೋಗದಲ್ಲಿನಂತೆಯೆ ದೈಹಿಕ ಮತ್ತು ಮಾನಸಿಕ ಸಾಧನೆಯನ್ನು ವಿಧಿಸುತ್ತದೆ. ಮನಸ್ಸಿನ ಎಲ್ಲ ಚಲನೆಗಳನ್ನೂ (ವೃತ್ತಿಗಳನ್ನೂ) ನಿಲ್ಲಿಸಬೇಕು. ಪ್ರಾಣಾಯಾಮ ಅಥವಾ ಉಚ್ಛ್ವಾಸಗಳು ನಮ್ಮ ಅಧೀನದಲ್ಲಿರಬೇಕು. ಬಹಿರ್ಮುಖವಾಗಿರುವ ಇಂದ್ರಿಯಗಳನ್ನೂ ಮನಸ್ಸನ್ನೂ ಅಂತರ್ಮುಖವಾಗಿ ಮಾಡಬೇಕು. ಇವೆಲ್ಲವೂ ಸಮಾಧಿಸ್ಥಿತಿಯನ್ನು ಹೊಂದಲು ಸಾಧನಗಳು. ಇವೆಲ್ಲದರ ಗುರಿಯೂ ಮೋಕ್ಷವೇಯೆ. ಸಾಮಾನ್ಯವಾದ ತಿಳಿವಳಿಕೆಯ ಪ್ರಕಾರ ಮೋಕ್ಷವೆಂದರೆ ಅಹಂಭಾವಯುಕ್ತವಾದ ನಮ್ಮ ಪ್ರತ್ಯೇಕ ವ್ಯಕ್ತಿತ್ವವನ್ನು ಬಿಡುವುದು ಮಾತ್ರವಲ್ಲ; ನಮ್ಮ ಸಮಗ್ರಚೈತನ್ಯವು ಪರಬ್ರಹ್ಮನಲ್ಲಿ ಐಕ್ಯವಾಗುವುದು.

ಪರಬ್ರಹ್ಮನಲ್ಲಿ ಒಂದಾಗಲು ಇದೆ ಕೊನೆಯ ಹಂತವೆಂದು ಗೀತೆಯ ಉಪದೇಶದ ಅರ್ಥವಿರಬಹುದೆ? ಅಥವಾ ಬಹಿರ್ಮುಖವಾದ ಮನಸ್ಸನ್ನು ತಿರುಗಿಸಲು ಮೇಲಿನ ಯೋಗವು ಒಂದು ಸಾಧನೆ ಎಂದು ಗೀತೆಯು ಹೇಳುವುದಾಗಿ ತಿಳಿಯೋಣವೆ? ನಿಜವಾಗಿಯೂ ಇದೆ ಕೊನೆಯ ಹೆಜ್ಜೆಯೇ? ಇವೆರಡು ಅರ್ಥಗಳನ್ನೂ ಒಟ್ಟಿಗೆ ಮಾಡುವುದೆ ಸಾಧುವೆಂದು ಹೇಳಲು ಕಾರಣಗಳಿವೆ. ಮನಸ್ಸನ್ನು ತಿರುಗಿಸಲು ಈ ಯೋಗವು ಒಂದು ಪ್ರಬಲವಾದ ಸಾಧನವೂ ಹೌದು; ನಮ್ಮ ಕೊನೆಯ ಗುರಿಯಾದ ಬ್ರಹ್ಮನಿರ್ವಾಣಕ್ಕೆ ಒಂದು ದ್ವಾರವೂ ಹೌದು. ಆದರೆ ಇದರಿಂದ ನಮ್ಮ ಪ್ರತ್ಯೇಕ ವಾದ ವ್ಯಕ್ತಿತ್ವವನ್ನು ಕಳೆದುಕೊಂಡು ಪರಬ್ರಹ್ಮನಲ್ಲಿ ಲೀನವಾಗುವುದಿಲ್ಲ. ಸಂಸಾರ ಚಕ್ರಕ್ಕೆ ಅತೀತವಾಗಿರುವ ಈಶ್ವರತ್ವದ ಮಟ್ಟಕ್ಕೆ ಎತ್ತಲ್ಪಡುತ್ತೇವೆ. ಇದು ಕೊನೆಯ ಮಾತಲ್ಲವೆಂಬುದು ಸ್ಪಷ್ಟ. ಏತಕ್ಕೆಂದರೆ ಇದರ ಮುಂದಿನ ಶ್ಲೋಕ, ಐದನೆಯ ಅಧ್ಯಾಯದ ಕೊನೆಯ ಶ್ಲೋಕವು, ಈರೀತಿ ಇದೆ. "ಯಜ್ಞತಪಸ್ಸುಗಳಿಗೆ ಭೋಕ್ತೃವೆಂಬುದಾಗಿಯೂ, ಸಮಸ್ತ ಭೂತಗಳಿಗೂ ಸ್ನೇಹಿತನೆಂಬುದಾಗಿಯೂ, ಸಮಸ್ತ ಲೋಕಗಳಿಗೂ ಮಹೇಶ್ವರನನ್ನಾಗಿಯೂ ನನ್ನನ್ನು ತಿಳಿಯುವ ಮುನಿಯು ಶಾಂತಿಯನ್ನು ಹೊಂದುತ್ತಾನೆ". ನಿರ್ವಾಣದ ಶಾಂತಿಯನ್ನು ಹೊಂದಲು ಕರ್ಮ ಯೋಗದ ಮತ್ತು ಸಗುಣಬ್ರಹ್ಮನ ಜ್ಞಾನದ ಅವಶ್ಯಕತೆಯನ್ನು ಇಲ್ಲಿ ಸೂಚಿಸಿದೆ.

ಪುರುಷೋತ್ತಮತತ್ವವೆಂಬ ಗೀತೆಯ ಮುಖ್ಯೋಪದೇಶವನ್ನು ಕುರಿತು ಮತ್ತೊಮ್ಮೆ ವಿಚಾರ ಮಾಡೋಣ. ಪುರುಷೋತ್ತಮನೆಂಬ ಹೆಸರು ಗೀತೆಯ ಕೊನೆಯ ಅಧ್ಯಾಯಗಳಲ್ಲಿ (೧೫ ನೆ ಅಧ್ಯಾಯ) ಮಾತ್ರ ಬಂದರೂ ಸಹ ಪ್ರಾರಂಭದಿಂದಲೂ ಶ್ರೀಕೃಷ್ಣನು 'ನಾನು' 'ನನಗೆ' ಎಂದು ಹೇಳುವಾಗ ಅದು ಪುರುಷೋತ್ತಮನನ್ನು ಕುರಿತೆ ಎಂದು ತಿಳಿಯಬೇಕು. ಈ ಪುರುಷೋತ್ತಮನು ಕಾಲಾತೀತವಾದ, ನಿರ್ಗುಣವಾದ, ಕೂಟಸ್ಥವಾದ ಆತ್ಮನಲ್ಲಿಯೂ ಇದ್ದಾನೆ; ಹಾಗೆಯೇ ಸರ್ವಭೂತಗಳಲ್ಲಿಯೂ ಎಲ್ಲ ಕರ್ಮಗಳಲ್ಲಿಯೂ ಇದ್ದಾನೆ. ಶಾಂತಿ ಮತ್ತು ನಿಷ್ಕ್ರಿಯವಾದ ಮೌನಗಳಿಗೆ ಪ್ರಭು; ಹಾಗೆಯೆ ಎಲ್ಲ ವ್ಯಾಪಾರ ಗಳನ್ನು ಪ್ರೇರಿಸುವ ಶಕ್ತಿಗಳಿಗೂ ಅಧಿಪತಿ. ಒಂದುಕಡೆ ಮಹಾಯುದ್ಧದಲ್ಲಿ ಸಾರಥಿ ಯಾಗಿದ್ದಾನೆ; ಹಾಗೆಯೆ ಎಲ್ಲಕ್ಕೂ ಅತೀತವಾದ, ಸರ್ವಸ್ವರೂಪನೂ ಮತ್ತು ಪ್ರತಿ ಜೀವಿಗೂ ಈಶ್ವರನೂ ಆಗಿದ್ದಾನೆ. ಎಲ್ಲ ಯಜ್ಞ ಮತ್ತು ತಪಸ್ಸುಗಳ ಫಲವನ್ನು ಭುಜಿಸುವವನು ಇವನೇಯೆ; ಆದಕಾರಣ ಮುಮುಕ್ಷುವು ಯಜ್ಞವೆಂದು, ತಪಸ್ಸೆಂದು, ಕರ್ಮಗಳನ್ನು ಮಾಡಬೇಕು. ಅವನು ಪ್ರಕೃತಿಯಲ್ಲಿರುವ ಎಲ್ಲ ಜೀವಿಗಳಿಗೂ

ಈಶ್ವರನು ; ಆದಕಾರಣ ಮುಕ್ತನಾದವನೂ ಕೂಡ ಈ ಲೋಕ ವ್ಯಾಪಾರಗಳು ಸರಿಯಾಗಿ ನಡೆಯುವುದಕ್ಕೆ ಮತ್ತು ಇತರ ಮನುಷ್ಯರಿಗೆ ಸರಿಯಾದ ದಾರಿಯನ್ನು ತೋರಿಸುವುದಕ್ಕೆ (ಲೋಕಸಂಗ್ರಹ) ಕರ್ಮಗಳನ್ನು ಮಾಡುತ್ತಲೆ ಇರಬೇಕು. ಅವನು ಸಮಸ್ತ ಭೂತಗಳಿಗೂ ಮಿತ್ರನು **ಸುಹೃತ್.** ಆದುದರಿಂದ ಮುನಿಯು ತನ್ನೊಳಗೆ ಮತ್ತು ತನ್ನ ಸುತ್ತಲೂ ನಿರ್ವಾಣವನ್ನು ಕಂಡುಕೊಂಡನಂತರವೂ ಸಹ ಎಲ್ಲ ಜೀವಿಗಳಿಗೂ ಹಿತವನ್ನು ಮಾಡುವುದರಲ್ಲೆ ನಿರತನಾಗಿರುತ್ತಾನೆ. ಬೌದ್ಧಮತ ದಲ್ಲಿಯೂ ಕೂಡ ಮಹಾಯಾನ ಪಂಥದಲ್ಲಿ ನಿರ್ವಾಣದ ಮುಖ್ಯ ಲಕ್ಷಣವೇನೆಂದರೆ ಸರ್ವಭೂತಗಳ ವಿಷಯದಲ್ಲಿಯೂ ಕರುಣೆಯಿಂದ ಕೆಲಸಮಾಡುವುದು. ಆದುದ ರಿಂದಲೆ ಮುಕ್ತನಾದವನು ಕಾಲಾತೀತನೂ ನಿರ್ವಿಕಾರನೂ ಆದ ಪರಮಾತ್ಮನಲ್ಲಿ ಐಕ್ಯವನ್ನು ಹೊಂದಿದನಂತರವೂ ಸಹ ಪರಮಾತ್ಮನಿಗೆ ಪ್ರಕೃತಿ ವ್ಯಾಪಾರಗಳ ಸಂಬಂಧವಿರುವುದರಿಂದ, ಇವನಿಗೂ ಮನುಷ್ಯರಲ್ಲಿ ದಿವ್ಯವಾದ ಅನುಕಂಪವೂ ಪರಮಾತ್ಮನಲ್ಲಿ ಭಕ್ತಿಯೂ ಇರುವುದು ಸಾಧ್ಯ.

ಐದನೆಯ ಅಧ್ಯಾಯದ ಕೊನೆಯ ಶ್ಲೋಕಗಳಲ್ಲಿ ಸೂಚಿಸಿರುವ ವಿಷಯ ಗಳನ್ನೆ ಆರನೆಯ ಅಧ್ಯಾಯದಲ್ಲಿ ವಿಶದವಾಗಿ ವಿವರಿಸಿದೆ. ಇವನ್ನು ಪರಿಶೀಲಿಸಿದರೆ ನಾವು ಮೇಲೆ ಹೇಳಿರುವುದೆ ಗೀತೋಪದೇಶದ ಸರಣಿಯೆಂದೂ, ಇದು ಗೀತೆಯ ಉಪದೇಶದ ಮುಖ್ಯವಾದ ಒಂದು ಭಾಗವೆಂದೂ ಸ್ಪಷ್ಟವಾಗುತ್ತದೆ. ಆದುದರಿಂದ ಆರನೆಯ ಅಧ್ಯಾಯದ ಉಪದೇಶವನ್ನು ಸಂಕ್ಷೇಪವಾಗಿ ಇಲ್ಲಿ ನಿರೂಪಿಸುತ್ತೇವೆ. ಸನ್ಯಾಸವೆಂದರೆ ಬಾಹ್ಯವಾಗಿ ಕರ್ಮಗಳನ್ನು ಬಿಡುವುದಲ್ಲ; ಅಂತರವಾಗಿ, ಮನಸ್ಸಿನಲ್ಲಿ, ಕರ್ಮಗಳ ಫಲಗಳನ್ನು ತ್ಯಜಿಸುವುದು ಎಂಬುದಾಗಿ ಶ್ರೀಕೃಷ್ಣನು ಪ್ರಾರಂಭದಲ್ಲಿ ಒತ್ತಿ ಹೇಳಿದ್ದಾನೆ. "ಯಾರು ಕರ್ಮಫಲವನ್ನು ಕೋರದೆ ಮಾಡಬೇಕಾದ ಕರ್ಮವನ್ನು ಮಾಡುತ್ತಾನೆಯೊ, ಅವನೆ ನಿಜವಾದ ಸನ್ಯಾಸಿ ಮತ್ತು ಯೋಗಿ ; ಅಗ್ನಿಹೋತ್ರ ವನ್ನೂ, ನಿತ್ಯಕರ್ಮಗಳನ್ನೂ ಬಿಟ್ಟಿರುವವನಲ್ಲ. ಯಾವುದನ್ನು ಸನ್ಯಾಸವೆಂದು ಹೇಳು ತ್ತಾರೊ, ಅದನ್ನೆ ಯೋಗವೆಂದೂ ತಿಳಿ. ಮನಸ್ಸಿನಲ್ಲಿ ಕಾಮನೆಗಳನ್ನು ಬಿಡದೆ ಇರುವ ಯಾವ ಮನುಷ್ಯನೂ ಯೋಗಿಯಾಗುವುದಿಲ್ಲ." (೬—೧,೨) ಕರ್ಮಗಳ ನ್ನೇನೊ ಮಾಡಬೇಕು ; ಆದರೆ ಯಾವ ಉದ್ದೇಶದಿಂದ ಮತ್ತು ಯಾವ ಕ್ರಮ ದಲ್ಲಿ ? ಮೊದಲು ಯೋಗಮಾರ್ಗದ ಸೋಪಾನವನ್ನು ಹತ್ತಲು ಕರ್ಮ ಗಳನ್ನು ಮಾಡಬೇಕು ; ಆಗ ಕರ್ಮವೇ ಸಾಧನ. ಯಾವುದಕ್ಕಾಗಿ ? ಪರಿಪೂರ್ಣತೆಗೆ, ಮುಕ್ತಿಗೆ, ಬಹ್ಮನಿರ್ವಾಣಕ್ಕೆಸಾಧನ. ಮನಸ್ಸಿನಲ್ಲಿ ಕರ್ಮಫಲವನ್ನು ತ್ಯಾಗಮಾಡಿ

ಕರ್ಮಗಳನ್ನು ಮಾಡುವುದರಿಂದ ಪರಿಪೂರ್ಣತೆಯನ್ನೂ ಮುಕ್ತಿಯನ್ನೂ ಪಡೆಯ ಬಹುದು ; ನಮ್ಮ ಕಾಮುಮನಸ್ಸು, ಅಹಂಕಾರ ಮತ್ತು ಕೀಳ್ಮಟ್ಟದ ಪ್ರಕೃತಿಗಳನ್ನು ಗೆಲ್ಲಬಹುದು.

ಯೋಗಮಾರ್ಗದ ಸೋಪಾನಪಂಕ್ತಿಯ ಕೊನೆಯ ಮೆಟ್ಟಿಲನ್ನು ಹತ್ತಿದ ಮೇಲೆಯೊ ? ಆಗ ಕರ್ಮಗಳು ಸಾಧನವಲ್ಲ. ಈಗ ಸಾಧನಗಳು ಯಾವುವೆಂದರೆ ಕರ್ಮಗಳನ್ನು ಮಾಡುವುದರಿಂದ ನಮ್ಮ ಇಂದ್ರಿಯ, ಮನಸ್ಸುಗಳ ಮೇಲೆ ನಮಗೆ ಲಭಿಸಿರುವ ಒಡೆತನ ಮತ್ತು ಅದರಿಂದ ಬಂದಿರುವ ಶಾಂತಿ. ಇವು ಯಾವುದಕ್ಕಾಗಿ ಸಾಧನ ? ಆತ್ಮನಲ್ಲಿ ಸುಪ್ರತಿಷ್ಠಿತನಾಗುವುದಕ್ಕೆ ; ಬ್ರಾಹ್ಮೀಸ್ಥಿತಿಯಲ್ಲಿ ನೆಲೆಸುವುದಕ್ಕೆ ಮತ್ತು ಮುಕ್ತನಾದವನು ದಿವ್ಯಕರ್ಮಗಳನ್ನು ಮಾಡಲು ಬೇಕಾದ ಸಂಪೂರ್ಣವಾದ ಸಮತ್ವಸ್ಥಿತಿಯನ್ನು ಪಡೆಯುವುದಕ್ಕೆ. "ಸಮಸ್ತ ಸಂಕಲ್ಪಗಳನ್ನೂ ಬಿಟ್ಟಿರತಕ್ಕವನು ಯಾವಾಗ ಇಂದ್ರಿಯ ವಿಷಯಗಳಲ್ಲಿಯೂ, ಕರ್ಮಗಳಲ್ಲಿಯೂ ಸಂಗವಿಲ್ಲದೆ ಇರುತ್ತಾನೆಯೊ ಆಗ ಇವನು ಯೋಗಸೋಪಾನವನ್ನು ಹತ್ತಿದವನೆಂದು ಹೇಳಲ್ಪಡು ತ್ತಾನೆ." ಮುಕ್ತನಾದವನು ಕರ್ಮಗಳನ್ನು ಮಾಡುವುದು ಈ ರೀತಿಯಲ್ಲಿಯೆ ಎಂಬುದನ್ನು ನಾವು ಹಿಂದೆಯೆ ಹೇಳಿದ್ದೇವೆ. ಕಾಮವಿಲ್ಲದೆ, ಸಂಗವಿಲ್ಲದೆ, ತನಗೆ ಬೇಕು ಎಂಬ ಭಾವನೆಯಿಲ್ಲದೆ ಮತ್ತು ಆನೆಗೆ ಮೂಲವಾದ ಮನಸ್ಸಿನ ಸಂಕಲ್ಪ, ಸಂಗಗಳಿಲ್ಲದೆ ಕರ್ಮಗಳನ್ನು ಮಾಡುತ್ತಾನೆ. ತನ್ನ ನೀಚಸ್ವಭಾವವನ್ನು ಗೆದ್ದಿದ್ದಾನೆ. ತನ್ನಲ್ಲಿರುವ ಪರಮಾತ್ಮನು ವ್ಯಕ್ತವಾಗಲು ಬೇಕಾದ ಪರಮಶಾಂತಿಯನ್ನು ಹೊಂದಿದ್ದಾನೆ. ಅಂತರ್ಮುಖನಾಗಿರುವಾಗ ಮಾತ್ರವಲ್ಲದೆ ಬಹಿರ್ಮುಖವಾಗಿರು ವಾಗಲೂ ಸಹ ಅವನ ಮನಸ್ಸು ಪರಮಾತ್ಮನಲ್ಲಿಯೆ ನೆಲೆಸಿರುತ್ತದೆ. ರಾಗದ್ವೇಷಗಳು, ಸುಖದುಃಖಗಳು, ಶೀತೋಷ್ಣ ಮತ್ತು ಮಾನಾಪಮಾನಗಳು ಇವೆ ಮುಂತಾದ ದ್ವಂದ್ವಗಳಿಂದ ತುಂಬಿರುವ ಪ್ರಪಂಚದಲ್ಲಿ ವ್ಯವಹರಿಸುವಾಗಲೂ ಸಹ ಅವನ ಮನಸ್ಸು ಪರಮಾತ್ಮನಲ್ಲಿಯೆ ನೆಟ್ಟಿರುತ್ತದೆ. ಈ ಪರಮಾತ್ಮನು ಅಕ್ಷರಪುರುಷ ನೇಯೆ. ನಮ್ಮ ಕೆಳಗಿನ ಸ್ವಭಾವದಲ್ಲಿನ ವಿಕಾರ ಮತ್ತು ಕ್ಷೋಭೆಗಳಿಗೆ ಇವನು ಅತೀತನಾಗಿದ್ದಾನೆ. ಯೋಗಿಯೂ ಸಹ ಕೂಟಸ್ಥ (ನಿರ್ವಿಕಾರ) ನಾಗಿದ್ದರೆ ಆಗ ಅಕ್ಷರಪುರುಷನೊಡನೆ ಐಕ್ಯವನ್ನು ಹೊಂದಿದ್ದಾನೆಂದು ಹೇಳಬಹುದು. ಎಂದರೆ ಅವನು ಎಲ್ಲ ವಿಧವಾದ ತೋರಿಕೆಗಳಿಗೂ, ಮಾರ್ಪಾಟುಗಳಿಗೂ ಅತೀತನಾಗಿರಬೇಕು. ಆತ್ಮಜ್ಞಾನದಿಂದ ತೃಪ್ತನಾಗಿರಬೇಕು. ಎಲ್ಲ ವಿಷಯಗಳು, ಘಟನೆಗಳು ಮತ್ತು ವ್ಯಕ್ತಿಗಳು ಇವುಗಳ ವಿಷಯದಲ್ಲಿ ಸಮದೃಷ್ಟಿಯನ್ನು ಹೊಂದಿರಬೇಕು.

ಅರ್ಜುನನು ಹೇಳಿದಂತೆ ಈ ಯೋಗಸ್ಥಿತಿಯನ್ನು ಪಡೆಯುವುದು ಸುಲಭ ವಲ್ಲ. ಚಂಚಲವಾದ ನಮ್ಮ ಮನಸ್ಸು ಬಾಹ್ಯ ವಿಷಯಗಳ ಆಕರ್ಷಣೆಗೆ ಒಳಗಾಗಿ ಈ ಮೇಲಿನ ಮಟ್ಟದಿಂದ ಕೆಳಕ್ಕೆ ಸೆಳೆಯಲ್ಪಡುತ್ತದೆ. ರಾಗದ್ವೇಷಗಳಿಗೆ ಮತ್ತು ಕಾಮಕ್ಕೆ ಒಳಗಾಗಿ ತನ್ನ ಸಮದೃಷ್ಟಿಯನ್ನು ಕಳೆದುಕೊಳ್ಳುತ್ತದೆ. ಆದಕಾರಣ ಜ್ಞಾನಯೋಗ ಮತ್ತು ಕರ್ಮಯೋಗಗಳ ಜೊತೆಗೆ ರಾಜಯೋಗವೆಂಬ ಒಂದು ಧ್ಯಾನಕ್ರಮವನ್ನೂ ಸಹ ಗೀತೆಯು ಉಪದೇಶಿಸುವಂತೆ ಕಾಣುತ್ತದೆ. ಇದಾದರೊ ಯೋಗಾಭ್ಯಾಸಕ್ಕೆ ಬಹಳ ವೀರ್ಯವತ್ತಾದ ಮಾರ್ಗ; ಮನಸ್ಸು ಮತ್ತು ಅದರ ವ್ಯಾಪಾರಗಳನ್ನು ಸ್ವಾಧೀನಮಾಡಿಕೊಳ್ಳಲು ಫಲಕಾರಿಯಾದ ಮಾರ್ಗ. ಈ ಮಾರ್ಗದಲ್ಲಿ ಸಾಧಕನು ಆತ್ಮನಲ್ಲಿ ಒಂದಾಗುವುದನ್ನು ಸತತವಾಗಿ ಅಭ್ಯಾಸಮಾಡು ತ್ತಿರಬೇಕು; ಅದೆ ಅವನ ಸಹಜಸ್ಥಿತಿಯಾಗಬೇಕು. ಅವನು ಎಲ್ಲ ಆಸೆಗಳನ್ನೂ, ತಾನು, ತನ್ನದು ಎಂಬ ಭಾವನೆಯನ್ನೂ ಪೂರ್ಣವಾಗಿ ಬಿಟ್ಟು ಏಕಾಕಿಯಾಗಿ ಕುಳಿತು ಇಂದ್ರಿಯಗಳನ್ನೂ ಮನಸ್ಸನ್ನೂ ಸ್ವಾಧೀನದಲ್ಲಿಟ್ಟುಕೊಳ್ಳಬೇಕು. "ಅತಿ ಎತ್ತರವಲ್ಲದ ಮತ್ತು ಅತಿ ತಗ್ಗಿಲ್ಲದ, ಪರಿಶುದ್ಧವಾದ, ಸ್ಥಳದಲ್ಲಿ ಬಟ್ಟೆ, ಅದರ ಮೇಲೆ ಕೃಷ್ಣಾಜಿನ, ಅದರಮೇಲೆ ದರ್ಭೆಯನ್ನು ಹಾಕಿದ ಸ್ಥಿರವಾದ ಆಸನವನ್ನು ಕಲ್ಪಿಸಿ, ಮನಸ್ಸು ಮತ್ತು ಇಂದ್ರಿಯಗಳ ವ್ಯಾಪಾರಗಳನ್ನು ವಶಮಾಡಿಕೊಂಡು, ಏಕಾಗ್ರಚಿತ್ತನಾಗಿ, ಯೋಗಿಯು ಆತ್ಮಶುದ್ಧಿಗೋಸ್ಕರ ಯೋಗವನ್ನು ಅಭ್ಯಾಸ ಮಾಡಬೇಕು. (೬-೧೧, ೧೨) ಚಲಿಸದೆ, ನೇರವಾಗಿ, ರಾಜಯೋಗಕ್ಕೆ ಅನುಸಾರ ವಾದ ರೀತಿಯಲ್ಲಿ ಕುಳಿತುಕೊಳ್ಳಬೇಕು. ದೃಷ್ಟಿಯು ಯಾವಕಡೆಗೂ ನೋಡದೆ ಮೂಗಿನ ತುದಿಯಮೇಲೆ ನೆಲೆಸಿರಬೇಕು. ಮನಸ್ಸು ಶಾಂತವಾಗಿ, ಭಯರಹಿತ ವಾಗಿರಬೇಕು. ಯೋಗಿಯು ಬ್ರಹ್ಮಚರ್ಯವನ್ನು ಪಾಲಿಸಬೇಕು. ಮನಸ್ಸೆಲ್ಲವನ್ನೂ ಆತ್ಮನಲ್ಲಿ ಏಕಾಗ್ರಗೊಳಿಸಬೇಕು. ಮನಸ್ಸಿನ ವ್ಯಾಪಾರಗಳು ಬ್ರಾಹ್ಮೀಸ್ಥಿತಿಯ ಶಾಂತಿಯಲ್ಲಿ ಲಯವಾಗಬೇಕು. ನಿರ್ವಾಣದ ಪರಮಶಾಂತಿಯನ್ನು ಪಡೆಯುವುದೆ ಅವನ ಗುರಿಯಾಗಿರುತ್ತದೆ. "ಯೋಗಿಯು ಸ್ವಾಧೀನಚಿತ್ತನಾಗಿ ಈ ಪ್ರಕಾರ ಯಾವಾಗಲೂ ಆತ್ಮನನ್ನು ಯೋಗದಲ್ಲಿ ಸೇರಿಸಿ, ನನ್ನಲ್ಲಿ ನಿರ್ವಾಣದ ಪರಮ ಶಾಂತಿಯನ್ನು ಹೊಂದುತ್ತಾನೆ" (೬-೧೫).

ಮನಸ್ಸನ್ನು ಸಂಪೂರ್ಣವಾಗಿ ಸ್ವಾಧೀನದಲ್ಲಿಟ್ಟುಕೊಂಡು, ಎಲ್ಲ ವಿಧವಾದ ಕಾಮಗಳಿಂದಲೂ ಬಿಡುಗಡೆಹೊಂದಿ, ಆತ್ಮನಲ್ಲಿ ನಿಶ್ಚಲವಾಗಿ ನೆಲೆಸಿದಾಗ ಈ ಶಾಂತಿಯು ದೊರೆಯುತ್ತದೆ. ಗಾಳಿಯಿಲ್ಲದಿರುವ ಪ್ರದೇಶದಲ್ಲಿರುವ ದೀಪದಂತೆ

ಬಾಹ್ಯವ್ಯಾಪಾರಗಳಿಂದ ವಿಮುಖವಾದ ಮನಸ್ಸು ನಿಶ್ಚಲವಾಗುತ್ತದೆ. ಮನಸ್ಸು ಪ್ರಶಾಂತವಾಗಿಯೂ ನಿಶ್ಚಲವಾಗಿಯೂ ಇರುವಾಗ ಮನಸ್ಸಿನ ವ್ಯಾಪಾರಗಳಿಂದ ವಿಕಾರಹೊಂದದೆ, ಆತ್ಮನ ಪ್ರತಿಬಿಂಬವು ಗೋಚರವಾಗುತ್ತದೆ. ಇದು ನಮಗೆ ಸಾಮಾನ್ಯವಾಗಿ ಗೋಚರವಾಗುವ, ಮನಸ್ಸು ಮತ್ತು ಅಹಂಕಾರಗಳಿಂದ ವಿಕಾರ ಮಾಡಲ್ಪಟ್ಟ ಪ್ರತಿಬಿಂಬವಲ್ಲ. ಸ್ವಪ್ರಕಾಶನಾದ ಆತ್ಮನು ಆತ್ಮನಿಂದಲೆ ಯಾವ ಉಪಾಧಿಯೂ ಇಲ್ಲದೆ ನೋಡಲ್ಪಡುತ್ತಾನೆ. ಆಗ ಆತ್ಮನು ತನ್ನ ನೈಜವಾದ ಆನಂದಸ್ವರೂಪವನ್ನು ಅರಿತು ಸಂತುಷ್ಟನಾಗುತ್ತಾನೆ. ಈ ಆನಂದವು ಇಂದ್ರಿಯ ಮತ್ತು ಮನಸ್ಸುಗಳಿಂದ ಲಭಿಸುವ, ಅಶಾಂತಿಯಿಂದ ಕೂಡಿದ ಸುಖವಲ್ಲ; ಆದರೆ ಮನಸ್ಸಿನ ಚಲನೆಗಳಿಗೆ ಅತೀತವಾಗಿರುವ ಅಂತರವಾದ ಸುಖ, ಹೀಗೆ ಸ್ವಸ್ವರೂಪ ಜ್ಞಾನವನ್ನು ಪಡೆದಮೇಲೆ ಅದು ಪುನಃ ನಷ್ಟವಾಗುವುದಿಲ್ಲ. ದಾರುಣವಾದ ದುಃಖದ ಆಘಾತದಿಂದಲೂ ಕೂಡ ಅವನು ವಿಚಲಿತನಾಗುವುದಿಲ್ಲ; ಏಕೆಂದರೆ ಮಾನಸಿಕ ದುಃಖವು ಹೊರಗಿನಿಂದ ಬರುತ್ತದೆ; ಅದು ಬಾಹ್ಯಸ್ಪರ್ಶಗಳಿಂದಾಗುವ ಪರಿಣಾಮ. ನಿರ್ವಾಣಸ್ಥಿತಿಯಲ್ಲಿರುವವರ ಆನಂದವಾದರೊ ಅಂತರವಾದುದು; ಯಾವ ಬಾಹ್ಯವಿಷಯವನ್ನೂ ಅವಲಂಬಿಸದೆ ತಾನೇತಾನಾಗಿರುತ್ತದೆ. ಬಾಹ್ಯ ಸ್ಪರ್ಶಗಳಿಂದಾಗುವ ಚಂಚಲವಾದ ಮನಸ್ಸಿನ ವ್ಯಾಪಾರಗಳಿಗೆ ಇವರು ಅಧೀನ ರಾಗಿಲ್ಲ. ನೋವೆಂಬುದರ ಸೋಂಕೆ ಇವರಿಗಿಲ್ಲ. ನಿರ್ವಾಣವೆಂದರೆ ದುಃಖದೊಡನೆ ಮನಸ್ಸಿಗಿರುವ ಸಂಬಂಧದ ವಿಚ್ಛೇದ. ಕಳೆದುಕೊಳ್ಳಲಸಾಧ್ಯವಾದ ಈ ದಿವ್ಯವಾದ ಆನಂದವನ್ನು ಪಡೆಯುವುದೆ ಯೋಗ, ಬ್ರಹ್ಮನೊಡನೆ ಐಕ್ಯವನ್ನು ಹೊಂದುವುದು. ಎಲ್ಲ ಲಾಭಗಳಿಗಿಂತಲೂ ಶ್ರೇಷ್ಠವಾದುದು; ಇದನ್ನು ಪಡೆದವರಿಗೆ ಉಳಿದ ಎಲ್ಲ ಲಾಭಗಳೂ ನಿಸ್ಸಾರವಾಗಿ ಕಾಣುತ್ತವೆ. ಆದುದರಿಂದ ಮೋಕ್ಷ ಅಥವಾ ನಿರ್ವಾಣದ ಆನಂದವು ಶಾಶ್ವತವಾಗಿ ದೊರೆಯುವವರೆಗೆ, ಎಷ್ಟು ಕಷ್ಟಗಳು ಮತ್ತು ವಿಘ್ನಗಳು ಬಂದರೂ ಸಹ ನಿರುತ್ಸಾಹಗೊಳ್ಳದೆ ಈ ಯೋಗವನ್ನು ಸ್ಥೈರ್ಯದಿಂದ ಅಭ್ಯಾಸ ಮಾಡಬೇಕು.

ಹೊರಗಿನ ಪ್ರಪಂಚದಿಂದ ಬರುವ ಬಾಹ್ಯಸ್ಪರ್ಶಗಳಿಗೆ ನಮ್ಮ ಇಂದ್ರಿಯಗಳು ಆಶ್ರಯವಾಗಿದ್ದು, ಅವುಗಳಿಗೆ ಅನುಸಾರವಾದ ಪ್ರತಿಕ್ರಿಯೆಗಳನ್ನುಂಟುಮಾಡುವು ವಷ್ಟೆ. ಈ ಇಂದ್ರಿಯಗಳಿಂದ ಉಂಟಾಗುವ ಆಸೆಗಳನ್ನು ಅಡಗಿಸಿ ಮನಸ್ಸನ್ನು ನಿಶ್ಚಲವನ್ನಾಗಿ ಮಾಡಬೇಕೆಂದು ಗೀತೆಯು ಒತ್ತಿಹೇಳುತ್ತದೆ. ಅಷ್ಟುಮಾತ್ರವಲ್ಲದೆ ಸ್ವಯಂಭೂವಾದ (ತಾನೆ ತಾನಾಗಿರುವ) ಆತ್ಮನ ಶಾಂತಿಸ್ಥಿತಿಯಲ್ಲಿ ಮನಸ್ಸಿನ

ಎಲ್ಲ ಯೋಚನೆಗಳೂ, ವೃತ್ತಿಗಳೂ ನಿಲ್ಲಬೇಕು. "ಮನಸ್ಸಿನಲ್ಲಿ ಉದ್ದೇಶಪೂರ್ವಕವಾಗಿ ಹುಟ್ಟಿದ ಆಸೆಗಳನ್ನೆಲ್ಲ ನಿಶ್ಶೇಷವಾಗಿ ತ್ಯಾಗಮಾಡಿ, ಚಂಚಲವಾದ ಇಂದ್ರಿಯ ಮತ್ತು ಮನಸ್ಸುಗಳನ್ನು ಸಮಸ್ತ ದಿಕ್ಕುಗಳಿಗೂ ಹೋಗದಂತೆ ಮನಸ್ಸಿನಿಂದ ಬಿಗಿಹಿಡಿಯಬೇಕು. ಬುದ್ಧಿಯಿಂದ ನಿಯಂತ್ರಿತವಾದ ಮನಸ್ಸನ್ನು ಉಳ್ಳವನಾಗಿ ಯೋಗಿಯು ಅಂತರ್ಮುಖನಾಗಬೇಕು. ಮನಸ್ಸನ್ನು ಆತ್ಮನಲ್ಲಿ ನಿಲ್ಲಿಸಿ ಯಾವುದನ್ನೂ ಚಿಂತಿಸದೆ ಇರಬೇಕು. ಅಸ್ಥಿರವಾದ ಮನಸ್ಸು ಎಲ್ಲೆಲ್ಲಿ ಓಡಿ ಹೋಗುತ್ತದೆಯೋ ಅಲ್ಲಲ್ಲಿಂದ ಅದನ್ನು ವಶಮಾಡಿಕೊಂಡು ಆತ್ಮನಲ್ಲಿ ನೆಲೆಸುವಂತೆ ಮಾಡಬೇಕು. ಶಾಂತಮನಸ್ಕನಾದ, ರಜೋಗುಣರಹಿತನಾದ, ಕಲ್ಮಶವಿಲ್ಲದ ಯೋಗಿಯು ಅತ್ಯಂತ ಸೌಖ್ಯವನ್ನು ಅನುಭವಿಸುತ್ತಾನೆ. ಪಾಪವಿಮುಕ್ತನಾದ ಯೋಗಿಯು ಈ ಪ್ರಕಾರ ಯಾವಾಗಲೂ ಯೋಗದಲ್ಲಿರಲು ಯತ್ನಿಸುತ್ತಾ ಸುಖವಾಗಿ ಬ್ರಹ್ಮಸ್ಪರ್ಶವನ್ನೂ ಪರಮಾನಂದವನ್ನೂ ಅನುಭವಿಸುತ್ತಾನೆ." (6—24 ರಿಂದ 28)

ಇಂತಹ ನಿರ್ವಾಣವನ್ನು ನಾವು ಹೊಂದಿದಾಗಲೂ, ನಾವು ಶರೀರವನ್ನು ಧರಿಸಿರುವವರೆಗೆ ಪೂರ್ಣವಾಗಿ ಎಲ್ಲ ಕರ್ಮಗಳನ್ನೂ ತ್ಯಜಿಸುವುದಕ್ಕಾಗುವುದಿಲ್ಲ; ಇತರ ಜೀವಿಗಳೊಡನೆ ಸಂಬಂಧವಿಲ್ಲದೆ ಇರುವುದಕ್ಕಾಗುವುದಿಲ್ಲ. ಮೇಲುನೋಟಕ್ಕೆ ನಿರ್ವಾಣವನ್ನು ಪಡೆದವನು ಯಾವ ಕರ್ಮಗಳನ್ನೂ ಮಾಡದೆ ಇರಬೇಕೆಂದು ತೋರುತ್ತದೆ. ಎಲ್ಲ ವಿಧವಾದ ರಾಗದ್ವೇಷಗಳು ಮತ್ತು ಕಾಮನೆಗಳು ತೊರೆಯಲ್ಪಟ್ಟಾಗ ಮನಸ್ಸಿಗೆ ಯೋಚನೆಗಳಲ್ಲಿ ಪ್ರವರ್ತಿಸಲು ಅವಕಾಶವನ್ನು ತಪ್ಪಿಸಿದಾಗ ಮೌನವಾಗಿ, ಏಕಾಂಗಿಯಾಗಿ ಅಭ್ಯಾಸಮಾಡುವ ಈ ಯೋಗವು ಸಾಧಕನಿಗೆ ಸಹಜ ಸ್ಥಿತಿಯಾದಾಗ, ಅವನು ಯಾವ ವಿಧವಾದ ಕರ್ಮಗಳನ್ನು ಮಾಡಲು ಸಾಧ್ಯ? ಬಾಹ್ಯಸ್ಪರ್ಶಗಳಿಂದ ಕೂಡಿದ, ಪ್ರತಿಕ್ಷಣವೂ ವ್ಯತ್ಯಾಸವಾಗುತ್ತಿರುವ ಸ್ಥೂಲ ಪ್ರಪಂಚದಲ್ಲಿ ಯಾವ ವಿಧವಾದ ಸಂಬಂಧವನ್ನು ಹೊಂದಿರಲು ಸಾಧ್ಯ? ಇಂತಹ ಯೋಗಿಯು ಇನ್ನೂ ಕೆಲವು ಕಾಲ ದೇಹವನ್ನು ಧರಿಸಿರಬೇಕಾದುದರಿಂದ, ಸಮಾಧಿ ಸ್ಥಿತಿಯ ಆನಂದವನ್ನು ಪೂರ್ಣವಾಗಿ ಅನುಭವಿಸಲು ಅವನು ಯಾವುದಾದರೂ ಗುಹೆ ಅಥವಾ ಅರಣ್ಯ ಅಥವಾ ಪರ್ವತದಲ್ಲಿ ಏಕಾಂಗಿಯಾಗಿರುವುದು ಸಹಜವೆಂದು ನಮಗೆ ತೋರಬಹುದು. ಆದರೆ ಇದು ಗೀತೆಯ ಅಭಿಪ್ರಾಯವಲ್ಲ. ಏಕಾಂಗಿಯಾಗಿ ಯೋಗವನ್ನು ಅಭ್ಯಾಸ ಮಾಡುವಾಗಲೂ ಉಳಿದ ಎಲ್ಲ ಕರ್ಮಗಳನ್ನೂ ತ್ಯಜಿಸಬೇಕೆಂದು ಗೀತೆಯು ಉಪದೇಶಮಾಡಿಲ್ಲ. ಗೀತೆಯು ಹೇಳುವ ಪ್ರಕಾರ ಈ ಯೋಗವು ನಿದ್ರೆ, ಆಹಾರ, ವಿಹಾರಾದಿಗಳನ್ನು ಪೂರ್ಣವಾಗಿ ಬಿಡುವವರಿಗೂ ಅಲ್ಲ,

ಅಥವಾ ಇವುಗಳಲ್ಲಿ ಅಧಿಕವಾಗಿ ಪ್ರವರ್ತಿಸುವವರಿಗೂ ಅಲ್ಲ. ಆಹಾರ, ನಿದ್ರೆ, ವಿಹಾರ, ಉಳಿದ ಕರ್ಮಗಳು ಎಲ್ಲವೂ ಯೋಗ್ಯ (ಯುಕ್ತ) ಪ್ರಮಾಣದಲ್ಲಿರಬೇಕು. ಹೀಗೆಂದರೆ, ಎಲ್ಲವೂ ಮಿತವಾಗಿರಬೇಕೆಂದೂ, ಕ್ಲ್ಪಪ್ತವಾಗಿಯೂ, ಎಷ್ಟು ಬೇಕೊ ಅಷ್ಟು ಪ್ರಮಾಣದಲ್ಲಿರಬೇಕೆಂದೂ ಸಾಮಾನ್ಯವಾಗಿ ಅರ್ಥಮಾಡುತ್ತಾರೆ. ಪ್ರಾಯಶಃ ಇದೆ ಆ ವಾಕ್ಯದ ಅರ್ಥವಿರಬಹುದು. ಆದರೆ ಯೋಗವು ಸಿದ್ಧಿಯಾದಮೇಲೆ "ಯುಕ್ತ" ಎಂಬ ಪದಕ್ಕೆ ಬೇರೆ ಅರ್ಥವನ್ನು—ಎಂದರೆ ಗೀತೆಯ ಉಳಿದ ಶ್ಲೋಕಗಳಲ್ಲಿ ಹೇಳುವ ಅರ್ಥವನ್ನು—ಹೇಳಬೇಕು. ಎಂದರೆ ನಡೆಯುವಾಗ, ಮಲಗುವಾಗ, ಆಹಾರ ಸೇವಿಸುವಾಗ, ಆಡುವಾಗ, ಎಲ್ಲ ಕರ್ಮಗಳನ್ನು ಮಾಡುವಾಗಲೂ ಯೋಗಿಯು ಆತ್ಮನಲ್ಲಿ ಒಂದಾಗಿರಬೇಕು. ತಾನೂ ಪರಮಾತ್ಮನೂ ಒಂದೆ ಎಂಬ ಪ್ರಜ್ಞೆಯಿಂದ, ತನಗೂ ಎಲ್ಲರಿಗೂ ಆಧಾರವಾದ, ಎಲ್ಲರನ್ನೂ ಒಳಗೊಂಡಿರುವ ಪರಮಾತ್ಮನೆ ತಾನೆಂಬ ಜ್ಞಾನದಿಂದ, ಅವನು ಎಲ್ಲ ಕರ್ಮಗಳನ್ನೂ ಮಾಡುತ್ತಾನೆ. ಕೆಳಮಟ್ಟದ ಪ್ರಕೃತಿಯಲ್ಲಿ ವ್ಯವಹರಿಸುವವರಿಗೆ, ಆಸೆ, ಅಹಂಕಾರ, ವೈಯಕ್ತಿಕ ಸಂಕಲ್ಪ ಮತ್ತು ಮನಸ್ಸಿನ ಯೋಚನೆ ಇವೆ ಕರ್ಮಗಳನ್ನು ಮಾಡಲು ಮೂಲಕಾರಣಗಳು. ಅಹಂಭಾವವು ನಾಶವಾಗಿ ಯೋಗಿಯು ಬ್ರಹ್ಮನಲ್ಲಿ, ಸರ್ವಾತೀತವಾದ, ಸರ್ವವ್ಯಾಪಿಯಾದ ಪ್ರಜ್ಞೆಯಲ್ಲಿ ಒಂದಾದಾಗ, ಎಲ್ಲ ಕರ್ಮಗಳೂ ಆ ಪ್ರಜ್ಞೆಯಿಂದಲೆ ಸಹಜವಾಗಿ ಹೊರಹೊಮ್ಮುತ್ತವೆ; ಮನಸ್ಸಿನ ಯೋಚನೆಗಳಿಗಿಂತಲೂ ಮೇಲ್ಮಟ್ಟದ ಜ್ಞಾನದ ಪ್ರಕಾಶವು ಆ ಪ್ರಜ್ಞೆಯಿಂದಲೆ ಹೊರಡುತ್ತದೆ; ಇವನ ವೈಯಕ್ತಿಕ ಸಂಕಲ್ಪಕ್ಕಿಂತಲೂ ಬಲವತ್ತರವಾದ ಶಕ್ತಿಯು ಆ ಪ್ರಜ್ಞೆಯಿಂದ ಉದ್ಭವಿಸುತ್ತದೆ. ಈ ಶಕ್ತಿಯೆ ಎಲ್ಲ ಕರ್ಮಗಳನ್ನೂ ಇವನಿಗಾಗಿ ಮಾಡಿ ಅದರ ಫಲವನ್ನು ಹೊಂದಿಸುತ್ತದೆ. ವೈಯಕ್ತಿಕವಾದ ಕರ್ಮವು, ಸ್ವಂತ ಕೆಲಸವು, ಈ ಮಟ್ಟದಲ್ಲಿ ಇಲ್ಲವೆ ಇಲ್ಲ. ಎಲ್ಲವೂ ಬ್ರಹ್ಮನಿಗೆ ಅರ್ಪಿಸಲ್ಪಟ್ಟು ಅವನಿಂದ ಸ್ವೀಕೃತವಾಗಿವೆ. ಆತ್ಮಸಾಕ್ಷಾತ್ಕಾರದ ಸ್ಥಿತಿಯನ್ನು ವರ್ಣಿಸುವಾಗ ಪ್ರತ್ಯೇಕವಾದ ಮತ್ತು ಅಹಂಭಾವಯುಕ್ತವಾದ ಮನಸ್ಸು, ಎಲ್ಲ ಯೋಚನೆಗಳು, ಭಾವನೆಗಳು ಮತ್ತು ಕೆಲಸಗಳಿಗೆ ಪ್ರೇರಣೆಯಾದ ಸಂಕಲ್ಪ, ಇವೆಲ್ಲವೂ ಬ್ರಹ್ಮನಲ್ಲಿ ನಿರ್ವಾಣಹೊಂದಿದಾಗ ಆಗುವ ಪರಿಣಾಮವನ್ನು ವರ್ಣಿಸುವಾಗ, ಗೀತೆಯು ವಿಶ್ವವ್ಯಾಪಕವಾದ ದೃಷ್ಟಿಯಿಂದ ಇದನ್ನು ನಿರೂಪಿಸುತ್ತದೆ. ಇದು ಒಂದು ಹೊಸ ದೃಷ್ಟಿಯೂ ಹೌದು. "ಯೋಗಿಯಾದವನು ಸರ್ವಭೂತಗಳಲ್ಲಿಯೂ ತನ್ನನ್ನೂ ತನ್ನಲ್ಲಿ ಸಮಸ್ತಭೂತಗಳನ್ನೂ ನೋಡುತ್ತಾನೆ. ಇವನು ಸರ್ವತ್ರ ಸಮದೃಷ್ಟಿಯುಳ್ಳವನು." (6—29).

ಅವನು ನೋಡುವುದೆಲ್ಲವೂ ಆತ್ಮನು, ಎಲ್ಲವೂ ತಾನೆಯೆ, ಎಲ್ಲವೂ ಪರಮಾತ್ಮ. ಈ ಯೋಗಿಯು ಬದಲಾವಣೆ ಹೊಂದುವಂತಹ ವಿಕಾರಕ್ಕೆ ಒಳಪಟ್ಟ ಕ್ಷರಪುರುಷನಲ್ಲಿ ಒಂದಾಗುವುದರಿಂದ, ಇಲ್ಲಿಯವರೆಗೆ ಅವನು ಕಷ್ಟಪಟ್ಟು ಸಾಧಿಸಿದ ಯೋಗದ ಫಲ ವೆಲ್ಲ ನಷ್ಟವಾಗುವ ಅಪಾಯವಿಲ್ಲವೆ? ಆತ್ಮನೊಡನೆ ಸಂಪರ್ಕವನ್ನು ಕಳೆದುಕೊಂಡು ಮನಸ್ಸಿನ ಮಟ್ಟಕ್ಕೆ ಇಳಿಯುವ ಸಂಭವವಿಲ್ಲವೆ? ಪರಮಾತ್ಮನಿಂದ ದೂರವಾಗಿ ಪ್ರಾಪಂಚಿಕವ್ಯವಹಾರದಲ್ಲಿ ಮುಳುಗುವ ಸಂಭವವಿಲ್ಲವೆ? ಬ್ರಾಹ್ಮೀಸ್ಥಿತಿಯಿಂದ ಇಳಿದು ಮತ್ತೆ ಕೆಳಮಟ್ಟದ ಪ್ರಕೃತಿಯ ವಶವಾಗಿ ಅಹಂಭಾವಕ್ಕೆ ತುತ್ತಾಗುವ ಅಪಾಯವಿಲ್ಲವೆ? ಹೀಗಾಗುವ ಸಂಭವವಿಲ್ಲವೆಂದು ಗೀತೆಯು ಹೇಳುತ್ತದೆ. “ಯಾರು ನನ್ನನ್ನು ಎಲ್ಲ ಕಡೆಯಲ್ಲಿಯೂ ನೋಡುತ್ತಾನೆಯೊ, ಎಲ್ಲವನ್ನೂ ನನ್ನಲ್ಲಿ ನೋಡುತ್ತಾನೆಯೊ, ಅವನ ಭಾಗಕ್ಕೆ ನಾನು ನಾಶವಾಗುವುದಿಲ್ಲ; ನನ್ನ ಭಾಗಕ್ಕೆ ಅವನೂ ನಾಶವನ್ನು ಹೊಂದುವುದಿಲ್ಲ.” (6—30). ನಿರ್ವಾಣದ ಶಾಂತಿಯು ಅಕ್ಷರಪುರುಷನಲ್ಲಿ ಒಂದಾಗುವುದರ ಮೂಲಕ ಲಭಿಸಿದರೂ ಸಹ ಅದಕ್ಕೆ ಪುರುಷೋತ್ತ ಮನೆ ಆಧಾರನಾಗಿದ್ದಾನೆ. ಈ ಪುರುಷೋತ್ತಮನೂ ಮತ್ತು ಅಕ್ಷರಪುರುಷನೂ ಸಹ ಈ ಸ್ಥೂಲಪ್ರಪಂಚದಲ್ಲಿಯೂ ಕೂಡ ವ್ಯಾಪಿಸಿದ್ದಾರೆ. ಈ ಲೋಕಕ್ಕೆ ಅವರು ಅತೀತ ರೆಂಬುದು ನಿಜ; ಆದರೆ ಅದರಿಂದ ಅವರು ಈ ಲೋಕಕ್ಕೆ ಹೊರಗಾಗುವುದಿಲ್ಲ. ಪುರುಷೋತ್ತಮನ ದೃಷ್ಟಿಯಿಂದ ಎಲ್ಲವನ್ನೂ ಯೋಗಿಯೂ ನೋಡಬೇಕು ಮತ್ತು ಆ ದೃಷ್ಟಿಯಿಂದಲೇ ಕರ್ಮಗಳಲ್ಲಿ ತೊಡಗಬೇಕು. ಯೋಗದ ಫಲವು ಇದೇಯೆ.

ಕರ್ಮಗಳನ್ನು ಏಕೆ ಮಾಡಬೇಕು? ಏಕಾಂತಸ್ಥಳದಲ್ಲಿದ್ದುಕೊಂಡು ಪ್ರಪಂಚ ವನ್ನು ನೋಡುತ್ತ ಅಥವಾ ಬ್ರಹ್ಮನಲ್ಲಿಯೆ ಪ್ರಪಂಚವನ್ನು ನೋಡುತ್ತ ಇರುವುದು ಉತ್ತಮವಲ್ಲವೆ? ಪ್ರಾಪಂಚಿಕ ವ್ಯಾಪಾರಗಳಲ್ಲಿ ತೊಡಗದೆ, ಪ್ರಪಂಚದಲ್ಲಿ ವ್ಯವಹರಿಸದೆ, ಮಗ್ನನಾಗದೆ, ಕರ್ಮಗಳನ್ನು ಮಾಡದೆ, ಸದಾ ಸಮಾಧಿಸ್ಥಿತಿಯಲ್ಲಿಯೆ ಇರಬಹುದಲ್ಲವೆ? ಅತ್ಯಂತ ಮೇಲ್ಮಟ್ಟದ ಈ ಯೋಗಸ್ಥಿತಿಯ ಧರ್ಮವು, ನಿಯಮವು ಇದೆ ಆಗಿರಬೇಕಲ್ಲವೆ? ಖಂಡಿತವಾಗಿಯೂ ಹೀಗಲ್ಲ. ಮುಕ್ತನಾದ ಯೋಗಿಗೆ ಇರುವ ನಿಯಮವು, ಧರ್ಮವು ಇದೊಂದೆ; ಯಾವುದೆಂದರೆ ಯಾವಾಗಲೂ ಪರಮಾತ್ಮನಲ್ಲಿರುವುದು, ಅವನಲ್ಲಿ ಭಕ್ತಿ, ಪ್ರೇಮಗಳನ್ನಿಟ್ಟಿರುವುದು ಮತ್ತು ಎಲ್ಲ ಜೀವಿಗಳಲ್ಲಿಯೂ ಒಂದಾಗಿರುವುದು. ಇದಲ್ಲದೆ ಬೇರಾವ ನಿಯಮವೂ ಅವನಿಗಿಲ್ಲ. ಅವನ ಸ್ವಾತಂತ್ರ್ಯ, ಮುಕ್ತಿಯು ಪರಿಪೂರ್ಣವಾದುದು, ಸ್ವಾಯತ್ತವಾದುದು, ಪರಾಪೇಕ್ಷೆಯಿಲ್ಲ; ಸ್ವಯಂಪರಿಪೂರ್ಣವಾದುದು, ಯಾವ ನಿಯಮ, ಧರ್ಮ

ಅಥವಾ ನಿಯಂತ್ರಣೆಗೂ ಒಳಪಟ್ಟಿಲ್ಲ. ಈಗ ಅವನಿಗೆ ಯಾವ ಯೋಗಮಾರ್ಗದ ಅಭ್ಯಾಸವೂ ಆವಶ್ಯಕವಿಲ್ಲ; ಏಕೆಂದರೆ ಅವನು ಸದಾ ಯೋಗದಲ್ಲಿಯೆ ಇದ್ದಾನೆ. "ಏಕತ್ವವನ್ನು ಸುಸ್ಥಿರವಾಗಿ ಹೊಂದಿ, ಸಮಸ್ತಭೂತಗಳಲ್ಲಿಯೂ ಇರುವ ನನ್ನನ್ನು ಯಾವನು ಸೇವಿಸುತ್ತಾನೆಯೊ, ಆ ಯೋಗಿಯು ಎಲ್ಲೆಲ್ಲಿ ಇದ್ದಾಗ್ಯೂ, ಏನು ಕರ್ಮಗಳನ್ನು ಮಾಡಿದರೂ, ನನ್ನಲ್ಲಿಯೇ ಇರುತ್ತಾನೆ, ವರ್ತಿಸುತ್ತಾನೆ" (೬-೩೧). ನಮಗೆ ಪ್ರಾಪಂಚಿಕ ವಸ್ತುಗಳ ಮೇಲಿರುವ ಆಸಕ್ತಿಯು ಇಂದ್ರಿಯಗಳ ಸುಖಾಪೇಕ್ಷೆಯಿಂದ, ಭಗವಂತನಲ್ಲಿ ಸಂಪೂರ್ಣವಾದ ಭಕ್ತಿಯುಂಟಾದಾಗ ಇದು ಮಾರ್ಪಾಟನ್ನು ಹೊಂದಿ ಆಧ್ಯಾತ್ಮಿಕ ಮಟ್ಟವನ್ನು ಮುಟ್ಟುವುದು. ಆ ಮಟ್ಟದಲ್ಲಿರುವವರಿಗೆ ಪ್ರಾಪಂಚಿಕ ವಿಷಯಗಳಲ್ಲಿ ಆಸಕ್ತಿಯಿರುವುದರಿಂದ ಯಾವ ಅಪಾಯವಾಗಲಿ, ದೋಷವಾಗಲಿ ಇಲ್ಲ. ನಮ್ಮ ನೀಚಪ್ರಕೃತಿಯಿಂದ ವಿಮುಖರಾಗುವುದಕ್ಕೆ ಕೆಲವುವೇಳೆ ಪ್ರಾಪಂಚಿಕ ವಿಷಯಗಳನ್ನೂ ಕುರಿತು ಭಯ ಮತ್ತು ಜಿಗುಪ್ಸೆ ಹೊಂದುವುದು ಆವಶ್ಯಕವಾಗಿರಬಹುದು. ಅಹಂಭಾವವಿಶಿಷ್ಟರಾದ ನಮ್ಮೊಳಗಿರುವ ಭಯ ಮತ್ತು ಜಿಗುಪ್ಸೆಗಳೆ ಹೊರಗಿನ ಪ್ರಪಂಚದಲ್ಲೂ ಪ್ರತಿಬಿಂಬಿತವಾಗಿ ಕಾಣಿಸಿಕೊಳ್ಳುವುವು. ಆದರೆ ಪ್ರಪಂಚದಲ್ಲೆ ಈಶ್ವರನನ್ನು ಕಾಣುವುದರಿಂದ ಯಾವ ಭಯಕ್ಕೂ ಆಸ್ಪದವಿಲ್ಲ. ಎಲ್ಲವನ್ನೂ ಈಶ್ವರನಲ್ಲಿ ಕಾಣುವುದರಿಂದ, ಎಲ್ಲವನ್ನೂ ಈಶ್ವರನನ್ನಾಗಿ ನೋಡುವುದರಿಂದ ಯಾವ ವಿಷಯದಲ್ಲಿಯೂ ದ್ವೇಷವಾಗಲಿ, ಜಿಗುಪ್ಸೆಯಾಗಲಿ ಇರಲು ಅವಕಾಶವಿಲ್ಲ; ಹೀಗೆ ಮಾಡುವುದರಿಂದ ಪ್ರಪಂಚದಲ್ಲಿರುವ ಈಶ್ವರನನ್ನೂ ಈಶ್ವರನಲ್ಲಿರುವ ಪ್ರಪಂಚವನ್ನೂ ಪ್ರೀತಿಸಿದಂತೆ.

ಹೋಗಲಿ, ನೀಚಪ್ರಕೃತಿಗೆ ಸಂಬಂಧಿಸಿದ ಇಂದ್ರಿಯವಿಷಯಗಳಿಗೆ ಬಹಳ ಪ್ರಯತ್ನಪಟ್ಟು ಯೋಗಿಯು ಅತೀತನಾಗಿದ್ದಾನಲ್ಲ, ಈ ವಿಷಯಗಳನ್ನಾದರೂ ವರ್ಜಿಸುತ್ತಾನೆಯೆ? ಇಲ್ಲ. ಆತ್ಮಸಾಕ್ಷಾತ್ಕಾರದಿಂದ ಬರುವ ಸಮದೃಷ್ಟಿಯು ಎಲ್ಲವನ್ನೂ ಒಳಗೊಂಡಿದೆ. "ಎಲೈ ಅರ್ಜುನನೆ, ಯಾರು ಸುಖವನ್ನಾಗಲಿ ದುಃಖವನ್ನಾಗಲಿ ಆತ್ಮಸಾದೃಶ್ಯದಿಂದ ಎಲ್ಲೆಲ್ಲಿಯೂ ಸಮನಾಗಿ ನೋಡುತ್ತಾನೆಯೊ ಅವನೇ ಶ್ರೇಷ್ಠನಾದ ಯೋಗಿಯು" (೬-೩೨). ಹೀಗೆಂದಮಾತ್ರಕ್ಕೆ ಯೋಗಿಯಾದವನು ತನ್ನ ಆನಂದಸ್ಥಿತಿಯನ್ನು ಬಿಟ್ಟು ಮತ್ತೆ ಪ್ರಾಪಂಚಿಕ ದುಃಖವನ್ನು ಇತರರ ದುಃಖವನ್ನು ನೋಡಿಯೂಕೂಡ ಅನುಭವಿಸುತ್ತಾನೆಂದು ಅರ್ಥವಲ್ಲ ತಾನು ದಾಟಿರುವ ಸುಖ-ದುಃಖ, ಜಯಾಪಜಯ ಇತ್ಯಾದಿ ದ್ವಂದ್ವಗಳ ವ್ಯಾಪಾರಗಳನ್ನು ಇತರರಲ್ಲಿ ನೋಡಿದರೂ ಕೂಡ, ಎಲ್ಲರನ್ನೂ ತನ್ನಂತೆಯೆ ಕಾಣುತ್ತಾನೆ; ತನ್ನನ್ನು

ಎಲ್ಲರಲ್ಲಿಯೂ ನೋಡುತ್ತಾನೆ ಮತ್ತು ಎಲ್ಲದರಲ್ಲಿಯೂ ಪರಮಾತ್ಮನನ್ನು ನೋಡುತ್ತಾನೆ, ಈ ದ್ವಂದ್ವಗಳು ಅವನನ್ನು ಅಲ್ಲಾಡಿಸುವುದಿಲ್ಲ, ಭ್ರಾಂತಿಗೊಳಿಸುವುದಿಲ್ಲ. ಅವನು ತನ್ನ ಶಾಂತಿ, ಸಮಸ್ಥಿತಿಗಳನ್ನು ಕಳೆದುಕೊಳ್ಳುವುದಿಲ್ಲ. ಇವುಗಳನ್ನು ನೋಡಿ ಇತರರಿಗೆ ಸಹಾಯಮಾಡಲು ಪ್ರೇರಿತನಾಗುತ್ತಾನೆ. ಸರ್ವಭೂತಗಳ ಹಿತದಲ್ಲಿ ನಿರತನಾಗುತ್ತಾನೆ. ಎಲ್ಲರನ್ನೂ ಶಾಶ್ವತವಾದ ಆನಂದಸ್ಥಿತಿಗೆ ಒಯ್ಯಲು ಯತ್ನಿಸುತ್ತಾನೆ. ಲೋಕವನ್ನು ಪರಮಾತ್ಮನೆಡೆಗೆ ಒಯ್ಯಲು ಯತ್ನಿಸುತ್ತಾನೆ. ತಾನು ಸ್ಥೂಲದೇಹವನ್ನು ಧರಿಸುವವರೆಗೆ ಈ ಲೋಕದಲ್ಲಿ ಈ ವಿಧವಾದ ಜೀವನವನ್ನು ನಡೆಸುತ್ತಾನೆ. ಹೀಗೆ ಪರಮಾತ್ಮನಲ್ಲಿ ಪ್ರೇಮಪಸ್ನಿಟ್ಟಿರುವ ಯೋಗಿಯು ತಾನು ಪರಮಾತ್ಮನಲ್ಲಿದ್ದುಕೊಂಡು, ಅವನಲ್ಲಿಯೆ ಎಲ್ಲವೂ ಇರುವುದರಿಂದ ಸಮಸ್ತ ಜೀವಿಗಳೊಡನೆಯೂ ಒಂದಾಗುತ್ತಾನೆ. ಅಪರಾಪ್ರಕೃತಿಯನ್ನೂ, ತ್ರಿಗುಣಗಳ ಮಾಯಾವ್ಯಾಪಾರವನ್ನೂ ಕ್ಷುಬ್ಧನಾಗದೆ ನೋಡುತ್ತಾನೆ. ಪರಮಾತ್ಮನೊಡನೆ ತಾನು ಹೊಂದಿರುವ ಏಕತ್ವವನ್ನು ಕಳೆದುಕೊಳ್ಳದೆ, ಅಲ್ಲಿಂದ ಜಾರದೆ ಈ ವ್ಯಾಪಾರಗಳನ್ನು ನೋಡುತ್ತಾನೆ. ಆತ್ಮಸಾಕ್ಷಾತ್ಕಾರದಿಂದ ವಿಶಾಲದೃಷ್ಟಿಯುಳ್ಳವನಾಗಿರುತ್ತಾನೆ. ದೈವೀಪ್ರಕೃತಿಯ ಪ್ರಭಾವದಿಂದ ಎಲ್ಲರಿಗೂ ಪ್ರಿಯನಾಗಿಯೂ ಮಹಾಮಹಿಮನಾಗಿಯೂ, ಪ್ರಕಾಶಮಯನಾಗಿಯೂ ಇರುತ್ತಾನೆ. ಇಂತಹವನನ್ನು ಪರಮಯೋಗಿಯೆಂದು ಧಾರಾಳವಾಗಿ ಹೇಳಬಹುದು. ಅವನು ಸೃಷ್ಟಿಯನ್ನು ಗೆದ್ದಿದ್ದಾನೆ.

ಹಿಂದೆ ಅನೇಕವೇಳೆ ಹೇಳಿರುವಂತೆ ಗೀತೆಯು ಭಕ್ತಿಯೆ ಯೋಗದ ಕೊನೆಯ ಹಂತವೆಂದು ಹೇಳುತ್ತದೆ. "ಏಕತ್ವವನ್ನು ಸುಸ್ಥಿರವಾಗಿ ಹೊಂದಿ, ಸಮಸ್ತ ಭೂತಗಳಲ್ಲಿಯೂ ಇರುವ ನನ್ನನ್ನು ಯಾವನು ಸೇವಿಸುತ್ತಾನೆಯೊ, ಆ ಯೋಗಿಯು ಎಲ್ಲಲ್ಲಿದ್ದಾಗ್ಯೂ ನನ್ನಲ್ಲಿಯೆ ಇದ್ದಾನೆ" (6-31) ಇದೇ ಗೀತೆಯ ಉಪದೇಶದ ಸಾರವೆಂದು, ಪರಮೋಪದೇಶವೆಂದು ಹೇಳಬಹುದು. ಮನುಷ್ಯನ ಚಂಚಲವಾದ ಮನಸ್ಸು ಇಷ್ಟು ಕಷ್ಟತರವಾದ ಯೋಗವನ್ನು ಹೇಗೆ ಸಾಧಿಸಬಲ್ಲದೆಂದು ಅರ್ಜುನನು ಪ್ರಶ್ನಿಸಲು, ಅದಕ್ಕೆ ಉತ್ತರಕೊಡುತ್ತಾ ಆರನೆಯ ಅಧ್ಯಾಯದ ಕೊನೆಯಲ್ಲಿ ಶ್ರೀಕೃಷ್ಣನು ಪುನಃ ಮೇಲೆ ಹೇಳಿದ ಉಪದೇಶವನ್ನೆ ಒತ್ತಿಹೇಳುತ್ತಾನೆ. "ಯೋಗಿಯು ತಪಸ್ವಿಗಳಿಗಿಂತಲೂ ದೊಡ್ಡವನು, ಜ್ಞಾನಿಗಿಂತಲೂ ದೊಡ್ಡವನೆಂದು ತಿಳಿಯಲ್ಪಟ್ಟಿದ್ದಾನೆ. ಕರ್ಮಿಗಿಂತಲೂ ಯೋಗಿಯು ದೊಡ್ಡವನು. ಆದುದರಿಂದ ಅರ್ಜುನನೆ, ನೀನು ಯೋಗಿಯಾಗು." (6-46) ಇಂತಹ

ಯೋಗಿಯು ದಿವ್ಯ ಜ್ಞಾನ ಅಥವಾ ಸಿದ್ಧಿಗಳನ್ನು ಪಡೆಯುವುದನ್ನು ಗುರಿಯನ್ನಾಗಿ ಹೊಂದಿಲ್ಲ. ಜ್ಞಾನ, ತಪಸ್ಸು, ಕರ್ಮಗಳು ಇವುಗಳಿಂದ ಅಥವಾ ಬೇರೆ ಸಾಧನಗಳಿಂದ ಪರಮಾತ್ಮನಲ್ಲಿ ಒಂದಾಗುವುದು ಮಾತ್ರ ಇವನ ಗುರಿಯಾಗಿದೆ. ಏತಕ್ಕೆಂದರೆ ಇದರಲ್ಲಿಯೆ ಎಲ್ಲವೂ ಸೇರಿವೆ ಮತ್ತು ಶ್ರೇಷ್ಠವಾದ ಮಟ್ಟಕ್ಕೆ ಎತ್ತಲ್ಪಡುತ್ತವೆ. ಯೋಗಿಗಳ ಭಕ್ತನೆ ಶ್ರೇಷ್ಠನಾದವನು." ಎಲ್ಲ ಯೋಗಿಗಳಲ್ಲಿಯೂ, ಶ್ರದ್ಧಾಪೂರಿತನಾಗಿ ಅಂತರಾತ್ಮವನ್ನು ನನ್ನಲ್ಲಿ ನೆಲಸುವಂತೆ ಮಾಡಿ ಯಾವನು ನನ್ನನ್ನು ಭಜಿಸುತ್ತಾನೆಯೊ, ಅವನೆ ಅತ್ಯುತ್ತಮನಾದ ಯೋಗಿ ಎಂದು ನನ್ನ ಅಭಿಪ್ರಾಯ (6–47). ಮೊದಲನೆಯ ಆರು ಅಧ್ಯಾಯಗಳ ಕೊನೆಯಲ್ಲಿ ಬರುವ ಈ ಶ್ಲೋಕವು ಉಳಿದ ಅಧ್ಯಾಯಗಳಲ್ಲಿ ಬರುವ ಉಪದೇಶವನ್ನು ಬೀಜರೂಪದಲ್ಲಿ ಒಳಗೊಂಡಿದೆ. ಈ ಉಪದೇಶವು ಪೂರ್ಣವಾಗಿ ಎಲ್ಲಿಯೂ ಹೇಳಲ್ಪಟ್ಟಿಲ್ಲ; ಹೇಳಲಾಗುವುದೂ ಇಲ್ಲ. ಇದು ಯಾವಾಗಲೂ ಆಧ್ಯಾತ್ಮಿಕ ಪರಮರಹಸ್ಯವಾಗಿಯೆ ಇರುತ್ತದೆ.



# ಇಪ್ಪತ್ತುನಾಲ್ಕನೆಯ ಪ್ರಕರಣ

## ಕರ್ಮಯೋಗದಸಾರ

ಗೀತೆಯ ಮೊದಲನೆಯ ಆರು ಅಧ್ಯಾಯಗಳಲ್ಲಿ ಹೇಳಿರುವುದು ಗೀತೆಯ ಉಪದೇಶಕ್ಕೆ ಪೀಠಿಕಾರೂಪವಾಗಿರುವುದು. ಅಸ್ಪಷ್ಟವಾಗಿ ಅಲ್ಲಿ ಸೂಚಿಸಲ್ಪಟ್ಟಿರುವ ಉಪದೇಶಗಳನ್ನೆ ಉಳಿದ ಹನ್ನೆರಡು ಅಧ್ಯಾಯಗಳಲ್ಲಿ ಸ್ಪಷ್ಟಪಡಿಸಿದೆ. ಈ ಉಪದೇಶವು ಬಹಳ ಮುಖ್ಯವಾದುದರಿಂದಲೆ ಮುಂದೆ ಇದನ್ನು ವಿವರವಾಗಿ ನಿರೂಪಿಸಿದೆ. ಗೀತೆಯು ಬರವಣಿಗೆಯಲ್ಲಿರುವ ಶ್ರೇಷ್ಠಗ್ರಂಥವಾದುದರಿಂದ ಸಮಗ್ರ ಉಪದೇಶವನ್ನೂ ಮೊದಲಿನಿಂದ ಕೊನೆಯವರೆಗೆ ಒಟ್ಟಿಗೆ ಕೊಡಬೇಕಾಯಿತು. ಹಾಗಿಲ್ಲದೆ ಜೀವಂತನಾದ ಗುರುವು ಸಾಕ್ಷಾತ್ತಾಗಿ ಶಿಷ್ಯನಿಗೆ ಉಪದೇಶ ಮಾಡುವಂತಿದ್ದರೆ ಮೊದಲನೆಯ ಆರು ಅಧ್ಯಾಯಗಳನ್ನು ಉಪದೇಶಿಸಿದ ನಂತರ, ನಿಲ್ಲಿಸಿ ಗುರುವು ಶಿಷ್ಯನಿಗೆ ಪ್ರಾಯಶಃ ಈ ರೀತಿ ಹೇಳುತ್ತಿದ್ದನು. "ಮೊದಲು ನಾನು ಈವರೆಗೆ ಹೇಳಿರುವ ಉಪದೇಶವನ್ನು ಕಾರ್ಯಗತಮಾಡು. ನೀನು ಮನನಮಾಡಿ ಆಚರಣೆಗೆ ತರುವುದು ಈ ಉಪದೇಶದಲ್ಲಿ ಬಹಳವಾಗಿದೆ. ಅಸ್ತಿಭಾರವು ಬಹಳ ವಿಶಾಲವಾದದ್ದು. ಮುಂದೆ ಸಮಸ್ಯೆಗಳು ಉದ್ಭವಿಸಿದರೆ, ಅವು ತಾನಾಗಿ ನಿವಾರಣೆಯಾಗುತ್ತವೆ; ಇಲ್ಲದಿದ್ದರೆ ಆ ಸಮಯದಲ್ಲಿ ನಾನು ತಕ್ಕ ನಿವಾರಣೆಯನ್ನು ಸೂಚಿಸುತ್ತೇನೆ. ಸದ್ಯಕ್ಕೆ ನಾನು ಹೇಳಿರುವುದನ್ನು ಆಚರಿಸು. ಈ ಧ್ಯೇಯವನ್ನಿಟ್ಟುಕೊಂಡು ಸಾಧನೆಮಾಡು." ಆದರೆ ಈ ಆರು ಅಧ್ಯಾಯಗಳಲ್ಲಿ ಹೇಳಿರುವ ವಿಷಯಗಳಲ್ಲಿ ಕೆಲವು ಅಸ್ಪಷ್ಟವಾಗಿವೆ; ಮುಂದಿನ ಅಧ್ಯಾಯಗಳು ಈ ವಿಷಯಗಳ ಮೇಲೆ ಸ್ಪಷ್ಟವಾದ ಬೆಳಕನ್ನು ಬೀರುತ್ತವೆ. ಆದುದರಿಂದ ನಾವು ಮೇಲೆ ಹೇಳಿರುವ ಅಂಶಗಳಲ್ಲಿಯೂ ಕೂಡ ಮುಂದಿನ ಅಧ್ಯಾಯಗಳಲ್ಲಿರುವ ಹೆಚ್ಚು ವಿವರಗಳನ್ನು ನಿರೂಪಿಸಿದ್ದೇವೆ. ಇಂತಹವುಗಳಲ್ಲಿ ಪುರುಷೋತ್ತಮನ ವಿಚಾರವೂ ಒಂದು. ಇದನ್ನು ನಿರೂಪಿಸದಿದ್ದರೆ ಆತ್ಮ, ಕರ್ಮಗಳು, ಕರ್ಮಗಳ ಪ್ರಭು ಮುಂತಾದ ವಿಷಯಗಳು ಅಸ್ಪಷ್ಟವಾಗಿಯೆ ಉಳಿಯುತ್ತಿದ್ದುವು. ಈ ವಿಷಯಗಳನ್ನು ಮೊದಲ ಅಧ್ಯಾಯಗಳಲ್ಲಿ ಗೀತೆಯು ವಿವರವಾಗಿ ಪ್ರತಿಪಾದಿಸಿಲ್ಲ. ಏತಕ್ಕೆಂದರೆ ಈ ಕ್ಲಿಷ್ಟವಾದ ವಿಷಯಗಳನ್ನು ಮುಂಚೆಯೆ ವಿವರಿಸಲು ತೊಡಗಿದ್ದರೆ ಶಿಷ್ಯನ ಮನಸ್ಸಿನಲ್ಲಿ ಬಹಳ ಗಲಿಬಿಲಿಯಾಗುತ್ತಿತ್ತು. ಮೊದಲು ಹೇಳಿರುವ ಉಪದೇಶಗಳೂ ಕೂಡ ಅವನ ಮನಸ್ಸಿಗೆ ಹತ್ತುತ್ತಿರಲಿಲ್ಲ.

ಈ ಆರು ಅಧ್ಯಾಯಗಳ ಉಪದೇಶವನ್ನು ಶ್ರೀಕೃಷ್ಣನಿಲ್ಲದಿದ್ದರೆ ಅರ್ಜುನನು ಈರೀತಿ ಆಕ್ಷೇಪಿಸಬಹುದಾಗಿತ್ತು :—"ವಿಷಯಗಳಲ್ಲಿ ಆಸಕ್ತಿ ಮತ್ತು ಕಾಮಗಳನ್ನು ಬಿಡುವುದು, ಸಮತ್ವ, ಇಂದ್ರಿಯನಿಗ್ರಹ, ಮನಸ್ಸನ್ನು ಶಾಂತವಾಗಿಡುವುದು, ನಿಷ್ಕಾಮಕರ್ಮ, ಯಜ್ಞಾರ್ಥವಾಗಿ ಕರ್ಮಗಳನ್ನು ಮಾಡುವುದು, ಬಾಹ್ಯವೈರಾಗ್ಯಕ್ಕಿಂತ ಆಂತರವಾದ ತ್ಯಾಗದ ಹೆಚ್ಚುಗಾರಿಕೆ, ಈ ವಿಷಯಗಳನ್ನು ಕುರಿತು ನೀನು ಹೇಳಿದ್ದೀಯೆ. ಇದನ್ನು ಅನುಷ್ಠಾನಕ್ಕೆ ತರುವುದು ಬಹಳ ಕಷ್ಟವಾದರೂ ಸಹ ಇವುಗಳನ್ನು ನಾನು ಮನಸ್ಸಿನಲ್ಲಿ ಗ್ರಹಿಸಿದ್ದೇನೆ. ಇದಲ್ಲದೆ ಕರ್ಮನಿರತನಾಗಿದ್ದಾಗ್ಯೂ ತ್ರಿಗುಣಾತೀತನಾಗಬೇಕೆಂದು ಹೇಳಿರುವೆ. ಆದರೆ ಈ ಗುಣಗಳ ವ್ಯಾಪಾರದ ರೀತಿಯನ್ನು ನೀನು ತಿಳಿಸಿಲ್ಲ. ಇದನ್ನು ನಾನು ತಿಳಿಯುವವರೆಗೆ ನಾನು ಹೇಗೆ ಈ ಗುಣಗಳಿಗೆ ವಶನಾಗಿರುವೆನೆಂಬುದನ್ನು ಕಂಡುಕೊಂಡು ಅವುಗಳನ್ನು ಅತಿಕ್ರಮಿಸುವುದು ಸಾಧ್ಯವಾಗುವುದಿಲ್ಲ. ಅಲ್ಲದೆ ಯೋಗದಲ್ಲಿ ಭಕ್ತಿಯು ಬಹಳ ಮುಖ್ಯವಾದುದೆಂದು ಹೇಳಿದ್ದೀಯೆ ; ಆದರೆ ಕರ್ಮ ಮತ್ತು ಜ್ಞಾನಗಳ ವಿಷಯವನ್ನು ಹೆಚ್ಚಾಗಿ ಹೇಳಿದ್ದೀಯೆ ಹೊರತು ಭಕ್ತಿಯ ವಿಚಾರವಾಗಿ ಬಹಳ ಸ್ವಲ್ಪ ಹೇಳಿದ್ದೀಯೆ. ಈ ಶ್ರೇಷ್ಠವಾದ ಭಕ್ತಿಯನ್ನು ಯಾರಿಗೆ ಅರ್ಪಿಸಬೇಕು? ನಿರಾಕಾರನಾದ ಬ್ರಹ್ಮನಿಗಂತೂ ಅಲ್ಲ; ಈಶ್ವರನಾದ ನಿನಗೆ ಇರಬೇಕು. ಜ್ಞಾನವು ಕರ್ಮಕ್ಕಿಂತ ಶ್ರೇಷ್ಠವಾದಂತೆಯೆ, ಅಕ್ಷರ ಪುರುಷನು ಕ್ಷರಕ್ಕಿಂತ ಶ್ರೇಷ್ಠನಷ್ಟೆ. ಭಕ್ತಿಯು ಜ್ಞಾನಕ್ಕಿಂತ ಹೇಗೆ ಶ್ರೇಷ್ಠವೊ ಹಾಗೆ ಅಕ್ಷರಪುರುಷನಿಗಿಂತ ಶ್ರೇಷ್ಠನಾದ ನಿನ್ನ ಸ್ವರೂಪವನ್ನು ವಿವರಿಸು. ಕರ್ಮ, ಜ್ಞಾನ ಮತ್ತು ಭಕ್ತಿಗಳಿಗಿರುವ ಸಂಬಂಧವೇನು? ಈ ಘೋರ ಸಂಗ್ರಾಮದಲ್ಲಿ ನನ್ನ ಸಾರಥಿಯಾಗಿರುವ, ಕರ್ಮ, ಜ್ಞಾನ ಮತ್ತು ಭಕ್ತಿಗಳಿಗೆ ಪ್ರಭುವಾದ ಪರಾತ್ಪರನಾದ ಪುರುಷೋತ್ತಮನಿಗೂ, ಅಕ್ಷರಪುರುಷನಿಗೂ ಮತ್ತು ಕ್ಷರಪುರುಷನಿಗೂ ಇರುವ ಸಂಬಂಧವೇನು?" ಇಂತಹ ಪ್ರಶ್ನೆಗಳಿಗೆ ಸಮಾಧಾನ ಹೇಳುವುದಕ್ಕಾಗಿಯೆ ಗೀತೆಯ ಉಳಿದ ಹನ್ನೆರಡು ಅಧ್ಯಾಯಗಳು ಉಪದೇಶಿಸಲ್ಪಟ್ಟಿವೆ. ನಮಗುಂಟಾಗಬಹುದಾದ ಸಂಶಯಗಳನ್ನು ಸಂಪೂರ್ಣವಾಗಿ ಬಗೆಹರಿಸಬೇಕಾದರೆ ನಾವೂ ಒಡನೆಯೆ ಉಳಿದ ಅಧ್ಯಾಯಗಳಲ್ಲಿರುವ ಉಪದೇಶಗಳನ್ನು ವಿಚಾರಮಾಡಬೇಕಾಗುತ್ತದೆ. ಸಾಧಕನಾದರೊ ಪ್ರಾರಂಭದಲ್ಲಿ ಎಲ್ಲ ವಿಷಯಗಳನ್ನೂ ತಿಳಿದುಕೊಳ್ಳುವ ಗೋಜಿಗೆ ಹೋಗದೆ ಹಂತ ಹಂತವಾಗಿ ಮುಂದುವರಿಯಬೇಕು. ಸಾಧಕನು ಮುಂದುವರಿದಂತೆ ಬಹಳ ತೊಡಕಾದ ಸಮಸ್ಯೆಗಳೂ ಸಹ ಉದ್ಭವಿಸಿ, ಅವನ ಆಧ್ಯಾತ್ಮಿಕ ಅನುಭವದಿಂದ ತಾವೆ ಪರಿಹಾರವಾಗುತ್ತವೆ. ಇಂತಹ ಆಧ್ಯಾ

ತ್ಮಿಕ ಅನುಭವದ ಗತಿಯನ್ನು ಅನುಸರಿಸಿ ಗೀತೆಯು ಮೊದಲಿನ ಆರು ಅಧ್ಯಾಯ ಗಳಲ್ಲಿ ಕರ್ಮ ಮತ್ತು ಜ್ಞಾನಗಳ ವಿಷಯವನ್ನು ಹೇಳಿದೆ. ಇದರೊಂದಿಗೆ ಭಕ್ತಿಯ ವಿಷಯವನ್ನು ಸ್ವಲ್ಪ ಸೂಚಿಸಿ ಪರಿಪೂರ್ಣವಾದ ಜ್ಞಾನವನ್ನು ಹೊಂದಲು ದಾರಿ ಯನ್ನು ತೋರಿಸಿದೆ.

ಯಾವ ಸಮಸ್ಯೆಯನ್ನು ಪರಿಹರಿಸಲು ಗೀತೆಯ ಉಪದೇಶವು ಉದ್ದೇಶಿ ಸಿತೊ ಆ ಸಮಸ್ಯೆಯು ಎಷ್ಟರಮಟ್ಟಿಗೆ ಬಿಡಿಸಲ್ಪಟ್ಟಿದೆಯೆಂಬುದನ್ನು ಈಗ ಪರಿಶೀಲಿ ಸಬೇಕಾಗಿದೆ. ನಾವು ಮೊದಲೆ ಹೇಳಿದಂತೆ ಅರ್ಜುನನ ಮೊದಲಿನ ಸಮಸ್ಯೆಯನ್ನು ಬಗೆಹರಿಸಲು ಸೃಷ್ಟಿಯ ಸ್ವರೂಪವನ್ನು ವಿವರಿಸಬೇಕಾಗಿಲ್ಲ; ಮತ್ತು ಸಾಮಾನ್ಯ ಜೀವನವನ್ನು ಬಿಟ್ಟು ಆಧ್ಯಾತ್ಮಿಕ ಜೀವನವನ್ನು ನಡೆಸು ಎಂಬ ಉಪದೇಶದ ಅವಶ್ಯಕತೆಯು ಇಲ್ಲ. ಲೋಕವ್ಯವಹಾರದ ದೃಷ್ಟಿಯಿಂದಾಗಲಿ, ಧರ್ಮ ಮತ್ತು ನೀತಿಯ ದೃಷ್ಟಿಯಿಂದಾಗಲಿ, ತರ್ಕದೃಷ್ಟಿಯಿಂದಾಗಲಿ ಅಥವಾ ಆದರ್ಶದೃಷ್ಟಿ ಯಿಂದಾಗಲಿ ಅಥವಾ ಇವೆಲ್ಲವೂ ಸೇರಿರುವ ಸಮಗ್ರದೃಷ್ಟಿಯಿಂದಾಗಲಿ ಈ ಸಮಸ್ಯೆಗೆ ಪರಿಹಾರವನ್ನು ಹೇಳಬಹುದಾಗಿತ್ತು. ಈಗಿನ ಕಾಲದ ನಮ್ಮಂತಹವರಾಗಿದ್ದರೆ ಹೀಗೆಯೆ ಮಾಡುತ್ತಿದ್ದರು. ಅವರ ಮನಸ್ಸಿನಲ್ಲಿ ಮೊದಲು ಏಳುವ ಪ್ರಶ್ನೆಯು ಇದೇಯೆ: ತನ್ನ ಶತ್ರುಗಳನ್ನು ಕೊಲ್ಲುವುದರಿಂದ ತನಗೆ ಪಾಪ ಬರುತ್ತದೆಂಬ ಭೀತಿಯಿಂದ ಅರ್ಜುನನು ಯುದ್ಧಮಾಡದೆ ಇರಬೇಕೆ? ಅಥವಾ ಅನ್ಯಾಯ ಮತ್ತು ಅಧರ್ಮಕ್ಕೆ ಎಲ್ಲ ಧರ್ಮನಿಷ್ಠರಿಗೂ ಇರುವ ವಿರೋಧಕ್ಕನುಸಾರವಾಗಿ, ಧರ್ಮದ ಉದ್ಧಾರಕ್ಕಾಗಿ, ಸಮಾಜಹಿತ ಮತ್ತು ರಾಷ್ಟ್ರಹಿತಗಳಿಗಾಗಿ ಯುದ್ಧಮಾಡಬೇಕೆಂಬ ತನ್ನ ಕ್ಷತ್ರಿಯ ಧರ್ಮವನ್ನನುಸರಿಸಬೇಕೆ? ಈ ಸಮಸ್ಯೆಯು ಈಗಿನ ಕಾಲದಲ್ಲಿಯೂ ಈಗಲೂ ಕೇಳಲ್ಪಡುತ್ತದೆ. ಇದಕ್ಕೆ ನಾನಾಬಗೆಯ ಪರಿಹಾರಗಳನ್ನು ಸೂಚಿಸುತ್ತಾರೆ. ಆದರೆ ಇವೆಲ್ಲವೂ ಸಾಮಾನ್ಯ ಮನುಷ್ಯರ ಮನಸ್ಸಿಗೆ ಸಮಂಜಸವಾಗಿ ಕಾಣುವಂತ ಹವು. ನಮ್ಮ ವೈಯಕ್ತಿಕ ಧರ್ಮನಿಷ್ಠೆಗೂ ಸಮಾಜ ಮತ್ತು ರಾಷ್ಟ್ರಗಳಿಗೆ ನಮ್ಮ ಕರ್ತವ್ಯಕ್ಕೂ ನಡುವೆ ಬರುವ ವಿರೋಧವೆಂದು ಪರಿಗಣಿಸಿ ಈ ಸಮಸ್ಯೆಯನ್ನು ಪರಿಹರಿಸಬಹುದು. ಅಥವಾ ಆದರ್ಶದೃಷ್ಟಿಗೂ ವ್ಯಾವಹಾರಿಕದೃಷ್ಟಿಗೂ ಇರುವ ವಿರೋಧವೆಂದು ಇದನ್ನು ಪರಿಗಣಿಸಬಹುದು. ಎಲ್ಲವೂ ಆತ್ಮನೆಂಬ ದೃಷ್ಟಿಗೂ, ಐಹಿಕಪ್ರಪಂಚದಲ್ಲಿ ಧರ್ಮಸ್ಥಾಪನೆಗಾಗಿ ಕೆಲವುವೇಳೆ ಯುದ್ಧಮಾಡುವುದು ಅನಿವಾರ್ಯ ವೆಂಬ ವ್ಯಾವಹಾರಿಕ ದೃಷ್ಟಿಗೂ ಇರುವ ವಿರೋಧವೆಂದು ಪರಿಗಣಿಸಿ ಉತ್ತರ ಕೊಡಬಹುದು. ಇವೆಲ್ಲ ಪರಿಹಾರಗಳೂ ನಮ್ಮ ಮನಸ್ಸನ್ನು ಮತ್ತು ಭಾವಗಳನ್ನು

ಅವಲಂಬಿಸಿವೆ. ಇವು ಆಯಾ ಮನಸ್ಸಿನ ದೃಷ್ಟಿಕೋನಕ್ಕೂ ಸ್ವಭಾವಕ್ಕೂ ಅನುಸಾರವಾಗಿರುತ್ತವೆ ಹೆಚ್ಚೆಂದರೆ ನಮಗೆ ಬರುವ ಸಮಸ್ಯೆಗಳಿಗೆ ನಮಗೆ ಮಾತ್ರ ಸೂಕ್ತವಾದ ಪರಿಹಾರಗಳು. ಸೂಕ್ತವೆಂದರೆ ನಮ್ಮ ಮನಸ್ಸಿನ ಬೆಳವಳಿಕೆ ಮತ್ತು ನೈತಿಕಮಟ್ಟಗಳಿಗೆ ಅನುಗುಣವಾಗಿವೆ. ನಮಗಿರುವ ಜ್ಞಾನದಲ್ಲಿ ನಾವು ಸೂಚಿಸಬಹುದಾದ ಪರಿಹಾರಗಳು ಇಷ್ಟೇಯೆ; ಇದಕ್ಕಿಂತ ಹೆಚ್ಚು ನಮಗೆ ತಿಳಿಯುವುದಿಲ್ಲ. ಇವುಗಳಿಂದ ನಮ್ಮ ಸಮಸ್ಯೆಯ ಅಂತಿಮ ಪರಿಹಾರವಾಗುವುದಿಲ್ಲ. ಇದಕ್ಕೆ ಕಾರಣವು ಹೀಗಿರುವುದು: ಈ ಪರಿಹಾರಗಳಿಗೆಲ್ಲಕ್ಕೂ ಉತ್ಪತ್ತಿಸ್ಥಾನವು ನಮ್ಮ ಮನಸ್ಸು. ಇದಾದರೊ ನಮ್ಮಲ್ಲಿರುವ ನಾನಾ ಸ್ವಭಾವಗಳ ಮತ್ತು ಪ್ರಕೃತಿಗಳ ಮಿಶ್ರಣ. ಇವುಗಳಲ್ಲಿ ಒಂದನ್ನೆ ಅಥವಾ ಕೆಲವನ್ನೆ ಆಧಾರವಾಗಿಟ್ಟುಕೊಂಡು ಸಮಸ್ಯೆಗೆ ಪರಿಹಾರವನ್ನು ರೂಪಿಸುತ್ತದೆ. ನಮ್ಮ ತರ್ಕದೃಷ್ಟಿ, ಧಾರ್ಮಿಕದೃಷ್ಟಿ, ಬದಲಾಗುತ್ತಿರುವ ಅಪೇಕ್ಷೆಗಳು, ಪೂರ್ವವಾಸನೆಗಳು, ಭಾವಗಳು ಮತ್ತು ಅಂತರವಾಗಿ ನಮಗಿರುವ ಕೆಲವು ಒಲುಮೆ, ಅಭಿರುಚಿ ಇವುಗಳಲ್ಲಿ ಒಂದನ್ನು ಅಥವಾ ಕೆಲವನ್ನು ಮಾತ್ರ ದೃಷ್ಟಿಯಲ್ಲಿಟ್ಟುಕೊಂಡು ಪರಿಹಾರವನ್ನು ರೂಪಿಸುತ್ತದೆ. ಇಂತಹ ಪರಿಹಾರಗಳು ಕೇವಲ ತಾತ್ಕಾಲಿಕವೆ ಹೊರತು ಅಂತಿಮವಾದ ಸ್ಥಾಯಿಯಾದ ಮತ್ತು ತೃಪ್ತಿಕರವಾದ ಉತ್ತರವಲ್ಲವೆಂಬುದು ಸ್ಪಷ್ಟ. ಗೀತೋಪದೇಶದ ಪ್ರಾರಂಭದಲ್ಲಿ ಶ್ರೀಕೃಷ್ಣನು ಅರ್ಜುನನಿಗೆ ವಸ್ತುಸ್ಥಿತಿಗೆ ಅನುಸಾರವಾದ ಮತ್ತು ಸುಲಭವಾಗಿ ಆಚರಿಸಬಹುದಾದ ಪರಿಹಾರವನ್ನು ಸೂಚಿಸುತ್ತಾನೆ. ಇದನ್ನು ಅರ್ಜುನನು ಒಪ್ಪುವುದಿಲ್ಲ; ಅವನು ಒಪ್ಪುವನೆಂದು ಶ್ರೀಕೃಷ್ಣನು ನಿರೀಕ್ಷಿಸಿರಲಿಲ್ಲ. ಆದುದರಿಂದ ಶ್ರೀಕೃಷ್ಣನು ಈ ತಾತ್ಕಾಲಿಕವಾದ ದೃಷ್ಟಿಕೋನವನ್ನು ಬಿಟ್ಟು ಬೇರೆ ದೃಷ್ಟಿಕೋನದಿಂದ ಸಮಸ್ಯೆಗೆ ಉತ್ತರ ಕೊಡುತ್ತಾನೆ.

ಗೀತೆಯು ಸೂಚಿಸಿರುವ ಈ ಪರಿಹಾರವೇನೆಂದರೆ ಸಾಮಾನ್ಯಮಟ್ಟದಲ್ಲಿರುವ ನಮ್ಮ ಮನಸ್ಸು, ತರ್ಕಸರಣಿ, ಧರ್ಮ ನಿಯಮಗಳು ಮತ್ತು ಇವುಗಳಿಂದ ಏಳುವ ಸಮಸ್ಯೆಗಳು, ಇವುಗಳನ್ನು ಅತಿಕ್ರಮಿಸಿ, ಮೇಲ್ಮಟ್ಟದ ಪ್ರಜ್ಞೆಯಲ್ಲಿ ಒಂದಾಗಿ, ಆ ಮಟ್ಟಕ್ಕೆ ಸಹಜವಾದ ಧರ್ಮ ಮತ್ತು ದೃಷ್ಟಿಕೋನಗಳಿಂದ ನಾವು ಕೆಲಸ ಮಾಡಬೇಕು. ಈ ಸ್ಥಿತಿಯಲ್ಲಿ ನಮ್ಮ ಕರ್ಮಗಳು ವೈಯಕ್ತಿಕವಾದ ಆಸೆಯಿಂದ ಮತ್ತು ಭಾವಗಳಿಂದ ಪ್ರಚೋದಿತವಾಗಿರುವುದಿಲ್ಲ; ಅವುಗಳಿಗೆ ಅಧೀನವಾಗಿರುವುದಿಲ್ಲ. ದ್ವಂದ್ವಗಳಿರುವುದಿಲ್ಲ. ಕರ್ಮಗಳ ನಿಜವಾದ ಕರ್ತೃ ನಾವಲ್ಲ; ಆದುದರಿಂದ ನಮಗೆ ಪಾಪ ಪುಣ್ಯಗಳು ಸಂಭವಿಸುತ್ತವೆಯೆಂಬ ಭಾವನೆಯೆ ನಮಗಿರುವುದಿಲ್ಲ.

ನಿರಾಕಾರನಾದ, ಶಾಶ್ವತನಾದ ಪರಮಾತ್ಮನು ನಮ್ಮ ಮೂಲಕ ತನ್ನ ದಿವ್ಯ ಸಂಕಲ್ಪವನ್ನು ಪ್ರಪಂಚದಲ್ಲಿ ನೆರವೇರಿಸುತ್ತಾನೆ. ನಮ್ಮ ಪ್ರತ್ಯೇಕತೆಯು ಲಯವಾಗಿ ನಾವು ಸಚ್ಚಿದಾನಂದಸ್ವರೂಪನಾದ ಪರಮಾತ್ಮನಲ್ಲಿ ಹೊಸ ಜನ್ಮ ತಾಳುತ್ತೇವೆ; ಅವನಲ್ಲಿಯೆ ಇರುತ್ತೇವೆ; ಅವನ ಜ್ಞಾನವೆ ನಮ್ಮ ಜ್ಞಾನ; ಅವನ ಶಕ್ತಿಯೆ ನಮ್ಮ ಶಕ್ತಿ ಮತ್ತು ಅವನ ಆನಂದವೆ ನಮ್ಮ ಆನಂದವಾಗುತ್ತದೆ. ನಮಗೆ ವೈಯಕ್ತಿಕವಾದ ಸಂಕಲ್ಪಗಳಾಗಲಿ, ಕರ್ಮಗಳಾಗಲಿ ಇರುವುದಿಲ್ಲ. ನಮಗೆ ಉಳಿಯುವ ಒಂದೆ ಸಮಸ್ಯೆಯೇನೆಂದರೆ ಕರ್ಮಮಾಡಬೇಕೆ ಅಥವಾ ಇಲ್ಲವೆ ಎಂಬುದು. ಕರ್ಮಗಳನ್ನು ಮಾಡಿದರೆ ಪರಮಾತ್ಮನ ಕರ್ಮಗಳನ್ನು ಮಾಡುತ್ತೇವೆ. ಈ ಕರ್ಮಗಳು ನಮ್ಮ ಪ್ರಕೃತಿಯಿಂದ ಪ್ರಚೋದಿಸಲ್ಪಡುವುದಿಲ್ಲ. ಇವುಗಳನ್ನು ಮಾಡಲು ನಾವು ಕೇವಲ ನಿಮಿತ್ತಗಳಾಗಿ, ಸಾಧನಗಳಾಗಿರುತ್ತೇವೆ. ಕರ್ಮಗಳಿಗೆಲ್ಲ ಪ್ರಭುವಾದ ಪರಮಾತ್ಮನ ದಿವ್ಯಸಂಕಲ್ಪವೆ ನಮ್ಮ ಕರ್ಮಗಳೆಲ್ಲವನ್ನೂ ಪ್ರಚೋದಿಸುವ ಶಕ್ತಿ.

ಈ ಸ್ಥಿತಿಯನ್ನು ಹೊಂದುವುದೆ ನಮ್ಮ ಸಮಸ್ಯೆಗೆ ಸರಿಯಾದ ಉತ್ತರವೆಂದು ಗೀತೆಯು ಉಪದೇಶಿಸುತ್ತದೆ. ನಮ್ಮ ನಿಜಸ್ವರೂಪವೆ ಇದಕ್ಕೆ ಆಧಾರವಾಗಿದೆ. ನಮ್ಮ ನಿಜಸ್ವರೂಪಕ್ಕೆ ಅನುಸಾರವಾಗಿ ಜೀವಿಸುವುದೆ ನಮ್ಮ ಜೀವನ ಸಮಸ್ಯೆಗಳಿಗೆ ನಿಜವಾದ ಮತ್ತು ಶಾಶ್ವತವಾದ ಏಕಮಾತ್ರ ಪರಿಹಾರ. ನಮ್ಮ ಇಂದ್ರಿಯ ಮತ್ತು ಮನಸ್ಸುಗಳೂ ಸಹ ನಮ್ಮ ನಿಜಸ್ವರೂಪದ ಅಂಶವಾದರೂ ಇವುಗಳಿಗೆ ಅವಿದ್ಯೆ (ಅಜ್ಞಾನ) ಯು ಆಶ್ರಯವಾಗಿದೆ. ಇವುಗಳಿಂದ ಮಾಡುವ ಕರ್ಮಗಳು ನಾವು ಅವಿದ್ಯೆಯಲ್ಲಿ ಮುಳುಗಿರುವವರೆಗೆ ಸ್ವಾಭಾವಿಕ ಕರ್ಮಗಳಾಗಿರುತ್ತವೆ. ಆದರೆ ನಾವು ಅವಿದ್ಯೆಯಿಂದ ಪಾರಾಗಿ ನಮ್ಮ ನಿಜಸ್ವರೂಪವನ್ನು ಅರಿತಾಗ ಇವು ನಮಗೆ ಸಹಜ ಕರ್ಮಗಳಲ್ಲ. ನಮ್ಮ ನಿಜಸ್ವರೂಪವು ಇಂತಹುದೇಯೆ ಎಂಬುದನ್ನು ನಾವು ನಿಶ್ಚಿತವಾಗಿ ತಿಳಿಯುವುದು ಹೇಗೆ? ಎಲ್ಲಿಯವರೆಗೆ ನಾವು ಕೇವಲ ಮಾನಸಿಕ ಅನುಭವಗಳಿಂದ ತೃಪ್ತರಾಗಿರುತ್ತೇವೆಯೊ ಅಲ್ಲಿಯವರೆಗೆ ಈ ನಿಶ್ಚಯಜ್ಞಾನವು ನಮಗೆ ಉಂಟಾಗುವುದಿಲ್ಲ. ಏತಕ್ಕೆಂದರೆ ಸಾಮಾನ್ಯವಾಗಿ ನಮ್ಮ ಮಾನಸಿಕ ಅನುಭವಗಳು ಕೆಳಗಿನ ಮಟ್ಟದ ಪ್ರಕೃತಿಗೆ ಸಂಬಂಧಿಸಿವೆ; ಅಜ್ಞಾನವನ್ನು ಆಶ್ರಯವನ್ನಾಗಿ ಹೊಂದಿವೆ. ನಮ್ಮ ನಿಜಸ್ವರೂಪವನ್ನು ತಿಳಿಯಬೇಕಾದರೆ ಅನುಭವದಿಂದ ಮಾತ್ರ ಸಾಧ್ಯ. ಯೋಗದಿಂದ ಮನಸ್ಸಿನ ಪ್ರಪಂಚವನ್ನು ಅತಿಕ್ರಮಿಸಿ ಆಧ್ಯಾತ್ಮಿಕ ಅನುಭವವನ್ನು ಪಡೆಯಬೇಕು. ನಮ್ಮ ಮನಸ್ಸಿನ ಪ್ರಪಂಚವನ್ನು ಅತಿಕ್ರಮಿಸಿ ಆಧ್ಯಾತ್ಮಿಕ ಮಟ್ಟವನ್ನು ಸೇರುವುದು, ನಮ್ಮ ಈಗಿನ ಸ್ವಭಾವದಲ್ಲಿರುವ ಅನೇಕ ನ್ಯೂನತೆ

ಗಳಿಂದ ಬಿಡುಗಡೆ ಹೊಂದಿ ನಮ್ಮಲ್ಲಿರುವ ಪರಮಾತ್ಮನಲ್ಲಿ ಒಂದಾಗಿ ಬಾಳುವುದು, ಅದನ್ನೆ ಆಧ್ಯಾತ್ಮಿಕ ಅನುಭವವೆಂದೂ, ಯೋಗವೆಂದೂ ಹೇಳುತ್ತೇವೆ.

ಈ ರೀತಿಯಾಗಿ ನಮ್ಮ ಪ್ರಜ್ಞೆಯು ಮೇಲಕ್ಕೆತ್ತಲ್ಪಡುವುದರಿಂದ ನಮ್ಮ ಮನಸ್ಸಿನ ಮತ್ತು ಜೀವನ ದೃಷ್ಟಿಯಲ್ಲಿ ಸಂಪೂರ್ಣವಾದ ಮಾರ್ಪಾಡಾಗುತ್ತದೆ. ಇದರ ಪರಿಣಾಮವಾಗಿ ನಮ್ಮ ಕರ್ಮಗಳು ಬಾಹ್ಯದೃಷ್ಟಿಗೆ ಸಾಮಾನ್ಯವಾಗಿಯೆ ಕಂಡರೂ ಸಹ ಕರ್ಮಗಳನ್ನು ಮಾಡುವ ಉದ್ದೇಶ ಮತ್ತು ಪ್ರೇರಿಸುವ ಶಕ್ತಿ ಇವೆರಡರಲ್ಲಿಯೂ ಮಹತ್ವಪೂರ್ಣವಾದ ಬದಲಾವಣೆಯಾಗುತ್ತದೆ ಇದೆ ಗೀತೆಯು ಉಪದೇಶಿಸಿರುವ ಕರ್ಮಯೋಗದ ಸಾರ. "ನಿನ್ನ ಜೀವನಕ್ರಮವನ್ನು ಬದಲಾಯಿಸು; ಪರಮಾತ್ಮನಲ್ಲಿ ಹೊಸದಾಗಿ ಜನ್ಮ ತಾಳು; ಈ ಹೊಸ ಜನನದಲ್ಲಿ ನಿನ್ನ ಅಂತರಾತ್ಮನು ಪ್ರೇರಿಸುವ ಕರ್ಮಗಳನ್ನು ಮಾಡು" ಎಂಬುದೆ ಈ ಉಪದೇಶದ ತಿರುಳು. ಇದನ್ನೇ ಈ ರೀತಿ ಹೇಳಬಹುದು: "ಈಗ ನೀನು ಮಾಡಬೇಕಾಗಿರುವ ಕರ್ಮಗಳನ್ನೆ ಪರಮಾತ್ಮನಲ್ಲಿ ಜನ್ಮ ತಾಳುವುದಕ್ಕೆ ಸಾಧನವನ್ನಾಗಿ ಮಾಡಿಕೊ. ಈ ದಿವ್ಯಸ್ಥಿತಿಯನ್ನು ಮುಟ್ಟಿದ ಮೇಲೆಯೂ ಕೂಡ, ಇತರ ಜನರಿಗೆ ದಾರಿತೋರಿಸಲು ಮುಂದೆಯೂ ಈಶ್ವರನಿಗೆ ಸಾಧಕವಾಗಿ ದಿವ್ಯ ಕರ್ಮಗಳನ್ನು ಮಾಡುತ್ತಲೇ ಇರು." ಇಲ್ಲಿ ನಾವು ಎರಡು ವಿಷಯಗಳನ್ನು ಸ್ಪಷ್ಟವಾಗಿ ನಿರೂಪಿಸಬೇಕು ಮತ್ತು ಎಲ್ಲರೂ ಚೆನ್ನಾಗಿ ತಿಳಿದುಕೊಳ್ಳಬೇಕು. ನಮ್ಮ ಪ್ರಜ್ಞೆಯನ್ನು ಮೇಲ್ಮಟ್ಟಕ್ಕೆ ಎತ್ತುವ, ಪರಮಾತ್ಮನಲ್ಲಿ ಹೊಸದಾಗಿ ಜನ್ಮತಾಳುವ ವಿಧಾನ; ಮತ್ತು ನಾವು ಮಾಡಬೇಕಾದ ಕರ್ಮಗಳ ಸ್ವರೂಪ—ಎಂದರೆ ಕರ್ಮಗಳನ್ನು ಯಾವ ಮನೋಭಾವದಿಂದ ಮಾಡಬೇಕೆಂಬುದು. ಈ ಕರ್ಮಗಳ ಹೊರಗಿನ ಸ್ವರೂಪದಲ್ಲಿ ಬದಲಾವಣೆಯಾಗಬೇಕಾಗಿಲ್ಲ; ಆದರೆ ಕರ್ಮಗಳನ್ನು ಮಾಡುವ ಉದ್ದೇಶ ಮಾತ್ರ ಬದಲಾಗುತ್ತದೆ. ವಾಸ್ತವವಾಗಿ ಇವೆರಡೂ ಒಂದೇಯೆ; ಏತಕ್ಕೆಂದರೆ ಒಂದನ್ನು ತಿಳಿದುಕೊಂಡಾಗ ಇನ್ನೊಂದೂ ತಿಳಿಯುತ್ತದೆ. ನಾವು ಕರ್ಮಗಳನ್ನು ಮಾಡುವ ಮನೋಭಾವವು ನಮ್ಮ ಸ್ವಭಾವವನ್ನು ಮತ್ತು ಅದರ ಮಟ್ಟವನ್ನು ಅವಲಂಬಿಸಿದೆ. ನಮ್ಮ ಆಂತರವಾದ ಸ್ವಭಾವವಾದರೊ ನಾವು ಮಾಡುವ ಕರ್ಮಗಳಿಂದ ಮತ್ತು ಅವುಗಳ ಆಧ್ಯಾತ್ಮಿಕ ಪರಿಣಾಮಗಳಿಂದ ಬದಲಾವಣೆ ಹೊಂದುತ್ತಿರುತ್ತದೆ. ನಾವು ಕರ್ಮಗಳನ್ನು ಮಾಡುವ ಮನೋಭಾವದಲ್ಲಿ ವಿಶೇಷವಾದ ಮಾರ್ಪಾಡಾದರೆ ನಮ್ಮ ಸ್ವಭಾವದಲ್ಲಿಯೂ ಮತ್ತು ಅದಕ್ಕೆ ಆಧಾರವಾದ ನಮ್ಮ ಪ್ರಜ್ಞೆಯ ಮಟ್ಟದಲ್ಲಿಯೂ ಮಹತ್ವವಾದ ಬದಲಾವಣೆಯಾಗುತ್ತದೆ. ನಮ್ಮ

ಕರ್ಮಗಳನ್ನು ಪ್ರೇರಿಸುವ ಶಕ್ತಿಯ ಮಟ್ಟವೆ ಬೇರೆಯಾಗುತ್ತದೆ. ಕೆಲವರು ಹೇಳುವಂತೆ ಈ ಲೋಕದ ಜೀವನವೂ ಮತ್ತು ಕರ್ಮಗಳೂ ಕೇವಲ ಮಾಯೆಯಾಗಿದ್ದರೆ, ಆತ್ಮನಿಗೂ ಇಲ್ಲಿಯ ಕರ್ಮಗಳಿಗೂ ಸಂಬಂಧವಿಲ್ಲದಿದ್ದರೆ, ನಾವು ಮಾಡುವ ಕರ್ಮಗಳಿಂದ ನಮ್ಮ ಅಂತರವಾದ ಸ್ವಭಾವವು ಬದಲಾಗಕೂಡದು. ವಾಸ್ತವವಾಗಿ ನಮ್ಮ ಆತ್ಮನ ಬೆಳವಳಿಕೆಯು ನಮ್ಮ ಇಲ್ಲಿಯ ಜೀವನದಿಂದ ಮತ್ತು ಕರ್ಮಗಳಿಂದ ಆಗುತ್ತದೆ. ಎಂದರೆ ಕರ್ಮದ ಬಾಹ್ಯಸ್ವರೂಪದಿಂದಲ್ಲ ; ನಮಗೂ ಪರಮಾತ್ಮನಿಗೂ ಇರುವ ಸಂಬಂಧವು ನಮ್ಮ ಕರ್ಮಗಳನ್ನು ಪ್ರೇರಿಸುವ ಅಂತರವಾದ ಮನೋಭಾವವನ್ನೂ, ಶಕ್ತಿಯನ್ನೂ ಅವಲಂಬಿಸಿದೆ. ಆತ್ಮಸಾಕ್ಷಾತ್ಕಾರಕ್ಕೆ ಕರ್ಮಯೋಗವು ಒಂದು ಸಾಧನವೆಂದು ಹೇಳಲು ಕಾರಣವು ಇದೇಯೆ.

ಯೋಗಾಭ್ಯಾಸವನ್ನು ಮೊದಲುಮಾಡುವಾಗ ಈ ಮುಂದೆ ಹೇಳುವ ತಿಳಿವಳಿಕೆಯೆ ತಳಹದಿಯಂತಿದೆ. ನಮ್ಮ ಜೀವನವು ಬಹುಮಟ್ಟಿಗೆ ಸ್ಥೂಲಶರೀರದ ಮತ್ತು ಪ್ರಾಣಶರೀರದ ವ್ಯಾಪಾರಗಳಿಂದ ತುಂಬಿದೆ. ನಮ್ಮ ಮನಸ್ಸು ಕೆಲಸ ಮಾಡುವಾಗ ಕೊಂಚಮಟ್ಟಿಗೆ ಈ ಎರಡು ಶರೀರಗಳ ಚಟುವಟಿಕೆಗಳಿಗಿಂತ ಮೇಲಿನ ಮಟ್ಟದ ಚಟುವಟಿಕೆಯಿರುತ್ತದೆ. ಆದರೆ ಇದು ನಮ್ಮ ಸಂಪೂರ್ಣವಾದ ಜೀವನವನ್ನು, ಸ್ವರೂಪವನ್ನು ಪ್ರತಿನಿಧಿಸುವುದಿಲ್ಲ. ನಮ್ಮ ಈಗಿನ ಜೀವನವನ್ನೂ ಸಹ ಅದು ಪೂರ್ಣವಾಗಿ ಪ್ರತಿನಿಧಿಸುವುದಿಲ್ಲ. ನಮ್ಮಲ್ಲಿ ಆತ್ಮನು ಗೂಢನಾಗಿದ್ದಾನೆ. ನಮ್ಮ ದೇಹ, ಮನಸ್ಸು ಮುಂತಾದುವು ಅವನ ಬಾಹ್ಯಸ್ವರೂಪ ಅಥವಾ ಅವನ ಚಲನವಲನದ ಒಂದು ಪರಿಣಾಮ. ಅದ್ವೈತಿಗಳು ನಮ್ಮ ದೇಹ ಮತ್ತು ಮನಸ್ಸು ಕೇವಲ ತೋರಿಕೆಯೆಂದು ಹೇಳುತ್ತಾರೆ. ಇದನ್ನು ಒಪ್ಪಿದರೆ ಕರ್ಮಗಳನ್ನು ಮಾಡಬೇಕೆನ್ನುವ ಕರ್ಮಯೋಗದ ಮೂಲಕ್ಕೆ ಧಕ್ಕೆ ಬರುತ್ತದೆ. ಗೀತೆಯು ಹೀಗೆ ಹೇಳುವುದಿಲ್ಲ. ನಮ್ಮ ಪ್ರಕೃತಿಯು (ದೇಹ, ಮನಸ್ಸು) ಆತ್ಮನ ಚಲನವಲನಗಳ ಪರಿಣಾಮವೆಂದು ಗೀತೆಯು ಅಂಗೀಕರಿಸಿರುವಂತೆ ಕಾಣುತ್ತದೆ. ಈ ಸಿದ್ಧಾಂತವನ್ನು ಗೀತೆಯು ಈ ರೀತಿ ನಿರೂಪಿಸುತ್ತದೆ. (ಇದನ್ನು ಬೇರೆ ರೀತಿಯಲ್ಲಿಯೂ ಹೇಳಬಹುದಾಗಿತ್ತು). ಸಾಂಖ್ಯರು ಹೇಳುವ ಪುರುಷ ಮತ್ತು ಪ್ರಕೃತಿ ಎಂಬ ಎರಡು ತತ್ವಗಳನ್ನು ಒಪ್ಪಿಕೊಳ್ಳುತ್ತದೆ. ಪುರುಷನು ಎಲ್ಲದರಲ್ಲಿಯೂ ಅಂತರ್ಯಾಮಿಯಾಗಿದ್ದುಕೊಂಡು, ಎಲ್ಲವನ್ನೂ ತಿಳಿಯುತ್ತಾನೆ ; ಸಮಸ್ತಕ್ಕೂ ಆಧಾರನಾಗಿದ್ದಾನೆ. ಪ್ರಕೃತಿಯು ಎಲ್ಲ ಕರ್ಮಗಳನ್ನೂ ಮಾಡುತ್ತದೆ ಮತ್ತು ಕರ್ಮಗಳನ್ನು ಮಾಡಲು (ದೇಹ, ಮನಸ್ಸು ಮುಂತಾದ) ಕರಣಗಳನ್ನೂ, ವಿಧಾನಗಳನ್ನೂ ಒದಗಿಸುತ್ತದೆ.

ಸಾಂಖ್ಯದಲ್ಲಿ ಹೇಳುವ ನಿರ್ವಿಕಾರನಾದ ಪುರುಷನನ್ನೆ ಗೀತೆಯು ವೇದಾಂತದ ಭಾಷೆಯಲ್ಲಿ ನಿರ್ವಿಕಾರನಾದ, ಕೂಟಸ್ಥನಾದ, ಸರ್ವವ್ಯಾಪಿಯಾದ ಆತ್ಮ ಅಥವಾ ಬ್ರಹ್ಮ ಎಂದು ಕರೆಯುತ್ತದೆ. ವಿಕಾರಕ್ಕೆ ಆಶ್ರಯವಾದ ಪ್ರಕೃತಿಯಲ್ಲಿ ಸಿಲುಕಿ ಕರ್ಮಗಳನ್ನು ಮಾಡುವ ನಮ್ಮ ಆತ್ಮವು ಈ ಬ್ರಹ್ಮಕ್ಕಿಂತ ಬೇರೆಯಾಗಿದೆಯೆಂದು ಹೇಳುತ್ತದೆ. ಈ ಆತ್ಮನು ಅನೇಕವಾಗಿಯೂ, ವಿವಿಧವಾಗಿಯೂ ಇದ್ದು ವ್ಯಕ್ತಿಗಳಲ್ಲಿರುವ ಬದಲಾವಣೆಗಳಿಗೆ ಆಶ್ರಯವಾಗಿದೆ. ಹಾಗಾದರೆ ನಾವು ಮಾಡುವ ಕರ್ಮಗಳಿಗೆ ಆಧಾರವು ಯಾವುದು ?

ಕರ್ಮಗಳಿಗೆ ಆಶ್ರಯವು ಪ್ರಕೃತಿ ; ಎಂದರೆ ಪ್ರಕೃತಿಯ ಮೂರು ಗುಣಗಳ ವ್ಯಾಪಾರಗಳು. ಕರ್ಮಗಳನ್ನು ಮಾಡಲು ಉಪಾಧಿಯು ಯಾವುದು? ಪ್ರಕೃತಿಯ ಶಕ್ತಿಗಳು ನಿರ್ಮಿಸಿರುವ ನಾನಾ ಮಟ್ಟಗಳಲ್ಲಿರುವ ಕರಣಗಳು. ಪ್ರಕೃತಿಯಲ್ಲಿ ಸಿಲುಕಿರುವ ಆತ್ಮನು ವ್ಯವಹರಿಸುವಾಗ ಈ ಕರಣಗಳು ಬುದ್ಧಿ, ಅಹಂಕಾರ, ಮನಸ್ಸು, ಇಂದ್ರಿಯಗಳು ಮತ್ತು ಸ್ಥೂಲವಸ್ತುಗಳು, ಇವನ್ನು ರಚಿಸಿರುವ ಮೂಲವಸ್ತುಗಳಾಗಿ ವ್ಯಕ್ತವಾಗುತ್ತದೆ. ಇವೆಲ್ಲವೂ ಪ್ರಕೃತಿಯ ಯಂತ್ರಗಳಂತೆ. ಆಧುನಿಕ ದೃಷ್ಟಿಯಿಂದ ಹೇಳುವುದಾದರೆ ಇವೆಲ್ಲವೂ ಪ್ರಕೃತಿಯ ಅಂಶಗಳೇಯೆ. ಪ್ರಕೃತಿಯಲ್ಲಿ ಆತ್ಮನು ಮುಳುಗಿ ತನ್ನ ನಿಜಸ್ವರೂಪವನ್ನು ಅರಿಯುವಾಗ—ಎಂದರೆ ವಿಕಾಸ ಹೊಂದುವಾಗ ಆ ಸ್ವರೂಪವು ಮೊದಲು ಸ್ಥೂಲವಸ್ತುಗಳು, ಅನಂತರ ಇಂದ್ರಿಯ ವೇದನೆಗಳು, ಅನಂತರ ಮನಸ್ಸು, ಅನಂತರ ಬುದ್ಧಿ ಮತ್ತು ಕೊನೆಯಲ್ಲಿ ಆತ್ಮಜ್ಞಾನ ರೂಪವಾಗಿ ವ್ಯಕ್ತವಾಗುತ್ತದೆ. ಪ್ರಾರಂಭದಲ್ಲಿ ಬುದ್ಧಿಯು ಪ್ರಕೃತಿವ್ಯಾಪಾರಗಳಲ್ಲಿ ಮಗ್ನವಾಗಿರುತ್ತದೆ. ಕಾಲಕ್ರಮದಲ್ಲಿ ಈ ವ್ಯಾಪಾರಗಳ ನಿಜಸ್ವರೂಪವನ್ನು ಅದು ಗ್ರಹಿಸಬಹುದು ; ಪುರುಷನು ಸಿಲುಕಿಕೊಂಡಿರುವ ಮೂರು ಗುಣಗಳೆ ಪ್ರಕೃತಿ ವ್ಯಾಪಾರಗಳಿಗೆಲ್ಲ ಕಾರಣವೆಂಬುದನ್ನು ಗ್ರಹಿಸಬಹುದು ; ಈ ವ್ಯಾಪಾರಗಳೆ ಬೇರೆ, ಪುರುಷನೆ ಬೇರೆ ಎಂಬ ಜ್ಞಾನವನ್ನು ಪಡೆಯಬಹುದು. ಆಗ ಪುರುಷನು ಪ್ರಕೃತಿಯ ಗುಣಗಳ ಬಂಧನದಿಂದ ಬಿಡುಗಡೆಹೊಂದಿ, ತನಗೆ ಪೂರ್ವದಲ್ಲಿದ್ದ ಸ್ವತಂತ್ರವಾದ ಮತ್ತು ನಿರ್ವಿಕಾರವಾದ ಸ್ಥಿತಿಯನ್ನು ಪುನಃ ಪಡೆಯುತ್ತಾನೆ. ವೇದಾಂತದ ಪರಿಭಾಷೆಯಲ್ಲಿ ಹೇಳುವುದಾದರೆ : ಬುದ್ಧಿಯು ಆತ್ಮನನ್ನು, ಎಂದರೆ ಸದ್ವಸ್ತುವನ್ನು ನೋಡುತ್ತದೆ. ಇದರಿಂದ ಉಂಟಾಗಿರುವ ಪ್ರಕೃತಿ ವ್ಯಾಪಾರಗಳು ಮತ್ತು ಅವುಗಳಿಗೆ ಇರುವ ಉಪಾಧಿಗಳು ಇವೇಯೆ. ತನ್ನ ನಿಜಸ್ವರೂಪವೆಂಬ ಭ್ರಾಂತಿಯನ್ನು ಬಿಡುತ್ತದೆ.

ತಾನೆ ಆತ್ಮನೆಂದು ಸಾಕ್ಷಾತ್ಕರಿಸಿಕೊಂಡು ತನ್ನ ನಿರ್ವಿಕಾರವಾದ ಪೂರ್ವ ಸ್ಥಿತಿಯನ್ನು ಹೊಂದುತ್ತಾನೆ. ಈ ಸ್ಥಿತಿಯಲ್ಲಿದ್ದುಕೊಂಡೆ ಆತ್ಮನು ಸ್ವತಂತ್ರನಾಗಿ, ತನ್ನ ಪ್ರಕೃತಿಗೆ ಪ್ರಭುವಾಗಿ ವ್ಯವಹರಿಸಲು ಸಾಧ್ಯ. ಆಗ ತನ್ನ ವಿಕಾಸವನ್ನು ತಾನೆ ನಿಯಂತ್ರಿಸುತ್ತಾನೆ.

ವೇದಾಂತ ಅಥವಾ ದರ್ಶನವೆಂದರೆ ಒಂದು ಶಾಸ್ತ್ರ ಮಾತ್ರ. ವಸ್ತುಗಳಿಗೆ ಮತ್ತು ನಮ್ಮ ಮನಸ್ಸಿಗೆ ಸಂಬಂಧಪಟ್ಟ ವಿಷಯಗಳನ್ನೂ, ಅವುಗಳಿಗೆ ಇರುವ ಪರಸ್ಪರ ಸಂಬಂಧಗಳನ್ನೂ ನಮ್ಮ ಮನಸ್ಸಿಗೆ ಅರ್ಥವಾಗುವಂತೆ ವಿವರಿಸುತ್ತದೆ. ಮೇಲೆ ಹೇಳಿದ ವೇದಾಂತ ತತ್ವಗಳಲ್ಲಿರುವ ವೈವಿಧ್ಯಕ್ಕೆ ಆಧಾರವಾಗಿರುವ ಮಾನಸಿಕ ವಿಷಯಗಳನ್ನು ಮಾತ್ರ ನಾವು ಗಮನಿಸಿದರೆ ನಮಗೆ ಗೋಚರವಾಗುವುದೇನೆಂದರೆ: ನಾವು ಎರಡು ಬಗೆಯಾಗಿ ಜೀವಿಸಬಹುದು; ಒಂದು ವಿಧದಲ್ಲಿ ಆತ್ಮನು ತನ್ನ ಪ್ರಕೃತಿಯ ವ್ಯಾಪಾರಗಳಲ್ಲಿಯೆ ಮಗ್ನನಾಗಿರುತ್ತಾನೆ; ಮನಸ್ಸು, ಇಂದ್ರಿಯಗಳು ಮುಂತಾದ ತನ್ನ ಉಪಾಧಿಗಳೆ ತಾನೆಂದು ತಿಳಿಯುತ್ತಾ, ತನ್ನ ಇಂದ್ರಿಯ ಮತ್ತು ಮನಸ್ಸುಗಳಿಂದ ಬದ್ಧನಾಗಿರುತ್ತಾನೆ; ದೇಹ ಮತ್ತು ಮನಸ್ಸುಗಳಿಗೆ ವಶನಾಗಿರುತ್ತಾನೆ; ಎಂದರೆ ಪ್ರಕೃತಿಗೆ ಅಧೀನನಾಗಿರುತ್ತಾನೆ. ಇನ್ನೊಂದು ಬಗೆಯ ಜೀವನ ಅಧ್ಯಾತ್ಮಿಕ ಜೀವನ. ಇಲ್ಲಿ ಆತ್ಮನು ದೇಹ, ಮನಸ್ಸು, ಪ್ರಕೃತಿ ಇವುಗಳಿಗೆ ಅತೀತನಾಗಿದ್ದಾನೆ. ಅಹಂಭಾವರಹಿತನೂ, ವಿಭುವೂ, ಸರ್ವವ್ಯಾಪಿಯೂ, ಸ್ವತಂತ್ರನೂ, ಬಂಧರಹಿತನೂ, ಎಲ್ಲವನ್ನೂ ಅತಿಕ್ರಮಿಸಿರುವವನೂ ಆಗಿರುತ್ತಾನೆ. ಅತಿಶಯವಾದ ಸಮತ್ವದಿಂದ ತನ್ನ ಉಪಾಧಿಗಳಿಗೆ ಮತ್ತು ಅವುಗಳ ಕರ್ಮಗಳಿಗೆ ಆಧಾರನಾಗಿದ್ದಾನೆ. ಆದಾಗ್ಯೂ ಕೂಡ ಅನಂತನೂ, ಪೂರ್ಣ ಸ್ವತಂತ್ರನೂ ಆಗಿದ್ದು, ಇವುಗಳಿಗೆ ಅತೀತನಾಗಿದ್ದಾನೆ. ಹೀಗೆ ನಾವು ನಮ್ಮ ದೇಹಗಳು ಮತ್ತು ಪ್ರಕೃತಿಯೆ ನಾವೆಂದು ತಿಳಿದು ಜೀವಿಸಬಹುದು; ಇಲ್ಲವೆ ಆತ್ಮನಲ್ಲಿ ನಿವಸಿಸುತ್ತಾ ಅಧ್ಯಾತ್ಮಿಕ ಜೀವನವನ್ನು ನಡೆಸಬಹುದು. ಹೀಗೆ ಎರಡು ವಿಧವಾದ ಜೀವನಗಳನ್ನು ನಡೆಸಬಹುದೆಂದು ಹೇಳುವುದೆ ಗೀತೆಯ ಕರ್ಮಯೋಗದ ಮೊದಲನೆಯ ವೈಶಿಷ್ಟ್ಯ.

ದೇಹ ಮತ್ತು ಮನಸ್ಸುಗಳ ಬಂಧನದಿಂದ ಆತ್ಮನು ಬಿಡುಗಡೆಹೊಂದುವುದೆ ಗೀತೆಯ ಮುಖ್ಯ ಉಪದೇಶ. ನಮ್ಮ ಜೀವನದಲ್ಲಿ ಮುಖ್ಯವಾದ ಒಂದನೆಯ ಅಂಶವೇನೆಂದರೆ: ನಾವು ಸ್ಥೂಲವಸ್ತುಗಳಿಗೆ ಮತ್ತು ಅವುಗಳಿಂದ ಉಂಟಾಗುವ ಬಾಹ್ಯ ಸ್ಪರ್ಶಗಳಿಗೆ ಅಧೀನರಾಗಿದ್ದೇವೆ. ನಮ್ಮ ಇಂದ್ರಿಯಗಳ ಮೂಲಕ ಇವು ನಮಗೆ ಗೋಚರವಾಗುತ್ತವೆ. ಇಂದ್ರಿಯಗಳ ಮೂಲಕ ಕೆಲಸಮಾಡುತ್ತಿರುವ ನಮ್ಮ ಚೈತ

ನ್ಯವು ಈ ವಿಷಯಗಳೊಡನೆ ಸಂಗವನ್ನು ಹೊಂದುತ್ತದೆ; ಕಾಮವನ್ನು ಬೆಳಸುತ್ತದೆ. ಅವುಗಳಲ್ಲಿ ಆಸಕ್ತವಾಗಿ ಇದರಿಂದ ಸುಖವನ್ನೂ, ತೃಪ್ತಿಯನ್ನೂ ಬಯಸುತ್ತದೆ. ನಮ್ಮ ಮನಸ್ಸಿನಲ್ಲಿ ಉಂಟಾಗುವ ಭಾವನೆಗಳು, ಯೋಚನೆಗಳು, ಪ್ರತಿಕ್ರಿಯೆಗಳು, ವಿಷಯಗಳನ್ನು ಗ್ರಹಿಸುವ, ಯೋಚಿಸುವ ವಿಧಾನಗಳು ಇವೆಲ್ಲಕ್ಕೂ ಇಂದ್ರಿಯ ವ್ಯಾಪಾರಗಳೆ ಆಧಾರವಾಗಿದೆ. ಬುದ್ಧಿಯೂ ಸಹ ಮನಸ್ಸಿನಿಂದ ಸೆಳೆಯಲ್ಪಟ್ಟು ಈ ಇಂದ್ರಿಯ ವ್ಯಾಪಾರಗಳಲ್ಲಿ ಮಗ್ನವಾಗುತ್ತದೆ. ಹೀಗಾದಾಗ ಅಂತರಾತ್ಮನು ಬಾಹ್ಯವಿಷಯಗಳಿಗೆ ವಶನಾಗುತ್ತಾನೆ. ಇಂದ್ರಿಯ ವ್ಯಾಪಾರಗಳು ಮತ್ತು ಅವುಗಳು ನಮ್ಮ ಮನಸ್ಸಿನ ಮೇಲೆ ಉಂಟುಮಾಡುವ ಪರಿಣಾಮಗಳು ಮತ್ತು ಪ್ರತಿಕ್ರಿಯೆಗಳು ಇವುಗಳಲ್ಲಿ ಸಿಲುಕಿಕೊಂಡು ಅವುಗಳಿಂದ ಹೊರಕ್ಕೆ ಹೋಗಲಾಗುವುದಿಲ್ಲ. ಇದಕ್ಕೆ ನಮ್ಮಲ್ಲಿರುವ ಅಹಂಕಾರ ತತ್ವವೆ ಕಾರಣ. ಈ ಅಹಂಕಾರದಿಂದ ಪ್ರೇರಿತವಾದ ಬುದ್ಧಿಯು ನಮ್ಮ ಮನಸ್ಸು, ಇಂದ್ರಿಯ, ದೇಹಗಳ ಮೇಲೆ ಆಗುವ ಪ್ರಕೃತಿಯ ವ್ಯಾಪಾರಗಳನ್ನು ಇತರರ ಮನಸ್ಸು, ದೇಹ, ಇಂದ್ರಿಯಗಳ ಮೇಲೆ ಆಗುವ ವ್ಯಾಪಾರಗಳಿಂದ ಬೇರ್ಪಡಿಸುತ್ತದೆ. ನಮ್ಮ ತಿಳಿವಳಿಕೆಯಲ್ಲಿ ಜೀವನವೆಂದರೆ ಪ್ರಕೃತಿಯು ನಮ್ಮ ಮೇಲೆ ಮಾಡುವ ಪರಿಣಾಮ ಮತ್ತು ಅದಕ್ಕೆ ನಮ್ಮ ಪ್ರತಿಕ್ರಿಯೆಗಳು–ಇಷ್ಟು ತಾನೆ! ಇದಲ್ಲದೆ ಬೇರಾವುದೂ ನಮಗೆ ತಿಳಿಯದು; ಬೇರೆ ಯಾವುದನ್ನೂ ನಾವು ಕಾಣೆವು. ಈ ರೀತಿಯಲ್ಲಿ ನಮ್ಮ ದೇಹ, ಇಂದ್ರಿಯಗಳು, ಮನಸ್ಸು, ಬುದ್ಧಿ ಇವುಗಳ ಮೇಲೆ ಪ್ರಕೃತಿ ವ್ಯಾಪಾರಗಳ ಪರಿಣಾಮಗಳು ಮತ್ತು ಅವುಗಳ ಪ್ರತಿಕ್ರಿಯೆಗಳ ಮೊತ್ತವನ್ನೆ ನಾವು ನಮ್ಮ ಆತ್ಮವೆಂದು ತಿಳಿಯುತ್ತೇವೆ. ನಾನು, ನನ್ನದು ಎಂಬ ಭಾವನೆಯನ್ನು ವಿಶಾಲಗೊಳಿಸಬಹುದು. ನಮ್ಮ ಕುಟುಂಬ, ನಮ್ಮ ಪ್ರಾಂತ್ಯ, ನಮ್ಮ ದೇಶ ಕೊನೆಗೆ ಇಡೀ ಮಾನವವರ್ಗವೆ ನಾವೆಂದು ಭಾವಿಸಿದರೂ ಸಹ ಈ ರೂಪಾಂತರಗಳಲ್ಲೆಲ್ಲ ಅಹಂಭಾವವು ಇದ್ದೇ ಇರುತ್ತದೆ. ನಮ್ಮ ಎಲ್ಲ ಕೆಲಸಗಳಿಗೂ ಅದೆ ಪ್ರೇರಕವಾಗಿರುತ್ತದೆ. ಈ ವಿಶಾಲವಾದ ಕ್ಷೇತ್ರದಲ್ಲಿ ಕೆಲಸ ಮಾಡುವುದರಿಂದ ಅದು ಹೆಚ್ಚು ತೃಪ್ತಿಪಡೆಯುತ್ತದೆ.

ಈ ಎಲ್ಲ ಮಟ್ಟಗಳಲ್ಲಿಯೂ ಕೆಲಸಮಾಡುತ್ತಿರುವುದು ಯಾವುದೆಂದರೆ ಅಹಂಕಾರವಿಶಿಷ್ಟವಾದ, ಪ್ರತ್ಯೇಕವಾದ ವ್ಯಕ್ತಿಯ ಇಚ್ಛೆ, ತನ್ನ ವ್ಯಕ್ತಿತ್ವದ ನಾನಾ ಮುಖಗಳನ್ನು ತೃಪ್ತಿಪಡಿಸಲು ಬಾಹ್ಯಪ್ರಪಂಚದ ಸ್ಪರ್ಶಗಳನ್ನು ಗ್ರಹಿಸಿ ಅನುಭವಿಸುತ್ತದೆ. ಹೀಗೆ ಅನುಭವಗಳು ಬೇಕೆಂಬ ಇಚ್ಛೆಯು ನಮ್ಮಲ್ಲಿರುವ ಪ್ರಕೃತಿಯ ಇಚ್ಛೆ; ನಮ್ಮ ಕೆಲಸಗಳಲ್ಲಿ ಮತ್ತು ಅವುಗಳ ಫಲಗಳಲ್ಲಿ ಆಸೆಯುಳ್ಳ, ಆಸಕ್ತಿಯುಳ್ಳ ಇಚ್ಛೆ, ನಾವೇನೊ ಇದು ನಮ್ಮ ಸ್ವಂತ ಇಚ್ಛೆಯೆಂದು ಹೇಳುತ್ತೇವೆ. ಆದರೆ

ಅಹಂಭಾವದಿಂದ ಕೂಡಿರುವ ನಮ್ಮ ವ್ಯಕ್ತಿತ್ವವು ಪ್ರಕೃತಿಯಿಂದ ಉಂಟಾಗಿರುವುದು ; ಇದು ಸ್ವತಂತ್ರನಾದ ನಮ್ಮ ಆತ್ಮನಲ್ಲ; ಆಗಲೂ ಸಾಧ್ಯವಿಲ್ಲ. ಇವೆಲ್ಲವೂ ಪ್ರಕೃತಿಯ ಗುಣಗಳ ವ್ಯಾಪಾರಗಳು. ತಮೋಗುಣದ ವ್ಯಾಪಾರವಾಗಿದ್ದರೆ ಮನುಷ್ಯನು ಜಡಸ್ವಭಾವದವನೂ, ಸೋಮಾರಿಯೂ ಆಗಿರುತ್ತಾನೆ. ತಾನೇ ಯೋಚನೆಮಾಡದೆ, ಯಾಂತ್ರಿಕವಾಗಿ ತನ್ನ ಕೆಲಸಗಳನ್ನು ಮಾಡುವುದರಲ್ಲಿ ಇಂತಹ ಮನುಷ್ಯನು ತೃಪ್ತನಾಗಿರುತ್ತಾನೆ. ಸ್ವತಂತ್ರನಾಗಿ ತಾನೆ ಯಾವ ಕೆಲಸವನ್ನು ಕೈಗೊಳ್ಳುವ ಸಾಮರ್ಥ್ಯವಿರುವುದಿಲ್ಲ. ಅಥವಾ ಇದು ರಜೋಗುಣದ ವ್ಯಾಪಾರ ವಾಗಿರಬಹುದು. ಅಂತಹವರಿಗೆ ಸುಮ್ಮನಿರಲಾಗುವುದಿಲ್ಲ ; ಕೆಲಸಮಾಡುತ್ತಿರಬೇಕು. ಅವರು ಸದಾ ಪ್ರಕೃತಿವ್ಯಾಪಾರಗಳಲ್ಲಿ ಮಗ್ನರಾಗಿ ಅವು ತಮ್ಮ ಬಯಕೆಗಳನ್ನು ಪೂರೈಸುವಂತೆ ಯತ್ನಿಸುತ್ತಾರೆ. ತಾವು ಪ್ರಕೃತಿಯನ್ನು ಸ್ವಾಧೀನದಲ್ಲಿಟ್ಟುಕೊಂಡಿದ್ದೇವೆಂದು ಅವರು ತಿಳಿದಿದ್ದಾರೆ. ವಾಸ್ತವವಾಗಿ ಪ್ರಕೃತಿಯೆ ಅವರನ್ನು ಅಧೀನ ಮಾಡಿಕೊಂಡಿದೆ. ಇವರು ತಮ್ಮ ಇಚ್ಛೆ, ಬಯಕೆ ಎಂದುಕೊಂಡಿರುವುದು ನಿಜವಾಗಿಯೂ ಪ್ರಕೃತಿಯದು. ಪ್ರಕೃತಿಯ ಇಚ್ಛೆಗೆ ವಶವಾಗಿರುವವರೆಗೆ ಅವರಿಗೆ ನಿಜವಾದ ಸ್ವಾತಂತ್ರ್ಯವಿಲ್ಲ. ಅಥವಾ ಇದು ಸತ್ವಗುಣದ ವ್ಯಾಪಾರವಾಗಿರಬಹುದು. ಅಂತಹ ಮನುಷ್ಯರು ವಿವೇಕಿಗಳು. ಸತ್ಯ, ಶಿವ (ಒಳ್ಳೆಯದು) ಅಥವಾ ಸುಂದರವನ್ನು ಆದರ್ಶವನ್ನಾಗಿಟ್ಟುಕೊಂಡು ಜೀವಿಸಲು ಯತ್ನಿಸುತ್ತಾರೆ. ಆದರೆ ಇವರ ವಿವೇಕವೂ ಸಹ ಪ್ರಕೃತಿಗೆ ಅಧೀನವಾಗಿದೆ. ಈ ಆದರ್ಶಗಳು, ಮಾರ್ಪಾಡು ಹೊಂದುತ್ತಿರುವ ಅವರ ವ್ಯಕ್ತಿತ್ವದ ಬೇರೆ ಬೇರೆ ಮುಖಗಳು. ಇದರಿಂದ ಕೊನೆಯಲ್ಲಿ ಇವರಿಗೆ ಶಾಶ್ವತವಾದ ತತ್ವವಾಗಲಿ, ಆನಂದವಾಗಲಿ ದೊರೆಯುವುದಿಲ್ಲ. ಮೇಲಿಂದ ಮೇಲೆ ಉಂಟಾಗುವ ಬದಲಾವಣೆಗಳ ಚಕ್ರಕ್ಕೆ ಅವರು ಇನ್ನೂ ಸಿಕ್ಕಿಯೆ ಇದ್ದಾರೆ. ತಮ್ಮೊಳಗೆ ಮತ್ತು ಪ್ರಪಂಚದಲ್ಲಿರುವ ಯಾವುದೊ ಒಂದು ಶಕ್ತಿಗೆ ತಮ್ಮ ಅಹಂಭಾವದ ಮೂಲಕ ಅಧೀನರಾಗಿರುತ್ತಾರೆ. ಈ ಶಕ್ತಿಯು ಅವರದಲ್ಲ; ಅವರು ಈ ಶಕ್ತಿಯೊಡನೆ, ಚೈತನ್ಯದೊಡನೆ ಒಂದಾಗಿಲ್ಲ, ಸಮರಸದಿಂದಿಲ್ಲ. ಅವರಿಗೆ ನಿಜವಾದ ಸ್ವಾತಂತ್ರ್ಯವೂ ಒಡೆತನವೂ ಇಲ್ಲ.

ಆದರೆ ಸ್ವಾತಂತ್ರ್ಯವನ್ನು ಪಡೆಯುವುದು ಸಾಧ್ಯ. ಇದನ್ನು ಪಡೆಯ ಬೇಕಾದರೆ ನಮ್ಮ ಇಂದ್ರಿಯಗಳ ಮೇಲೆ ಬಾಹ್ಯಪ್ರಪಂಚದ ವ್ಯಾಪಾರಗಳಿಂದ ದೂರವಾಗಿ ನಾವು ಅಂತರ್ಮುಖರಾಗಬೇಕು ; ಆತ್ಮನ ಕಡೆಗೆ ದೃಷ್ಟಿಯನ್ನಿಡಬೇಕು, ಎಂದರೆ ಸ್ವಾಭಾವಿಕವಾಗಿಯೆ ಬಾಹ್ಯವಿಷಯಗಳ ಕಡೆ ಓಡುತ್ತಿರುವ ಇಂದ್ರಿಯ ಗಳನ್ನು ತಡೆದು ಮನಸ್ಸನ್ನು ಅಂತರ್ಮುಖವಾಗಿ ಮಾಡಬೇಕು. ನಿಜವಾದ

ಆಧ್ಯಾತ್ಮಿಕ ಜೀವನವನ್ನು ನಡೆಸಬೇಕಾದರೆ ನಮ್ಮ ಇಂದ್ರಿಯಗಳನ್ನು ಸಂಪೂರ್ಣವಾಗಿ ನಮ್ಮ ಅಧೀನದಲ್ಲಿಟ್ಟುಕೊಳ್ಳಬೇಕು. ಅವು ಆಸೆಪಡುವ ವಿಷಯಗಳಿಲ್ಲದೆಯೆ ಜೀವಿಸುವ ಸಾಮರ್ಥ್ಯವು ನಮಗಿರಬೇಕು. ಬಾಹ್ಯವಸ್ತುಗಳ ಸ್ಪರ್ಶಗಳಿಂದ ಮನಸ್ಸಿನಲ್ಲಿ ಆಗುವ ವಿಕಾರಗಳಲ್ಲದೆ ಶಾಶ್ವತವಾದ ಆತ್ಮವು ನಮ್ಮಲ್ಲಿದೆಯೆಂಬುದು ನಮಗೆ ಈರೀತಿಯಾಗಿಯೆ ತಿಳಿಯುವುದು ಸಾಧ್ಯ. ಆಳವಾಗಿ ವಿಚಾರಮಾಡಿದರೆ ಈ ಆತ್ಮನು ಸ್ವಯಂಪರಿಪೂರ್ಣನೆಂದೂ, ನಿರ್ವಿಕಾರನೆಂದೂ, ಶಾಂತನೂ, ಮಹಾಮಹಿಮನೂ, ನಿಶ್ಚಲನೂ, ಎಲ್ಲದಕ್ಕೂ ಈಶ್ವರನೆಂದೂ ತಿಳಿಯುತ್ತದೆ. ಇವನು ಪೂರ್ಣವಾದ ಸ್ವಾತಂತ್ರ್ಯವನ್ನು ಹೊಂದಿದ್ದಾನೆ. ವಿಷಯಗಳ ಕಡೆ ಓಡುವ ನಮ್ಮ ಬಾಹ್ಯಸ್ವಭಾವದಿಂದ, ಪ್ರಕೃತಿಯಿಂದ, ಸ್ವಲ್ಪವೂ ವಿಕಾರ ಹೊಂದುವುದಿಲ್ಲ. ನಾವು ಆಸೆಗೆ ವಶರಾಗಿರುವವರೆಗೆ ಈ ಸ್ಥಿತಿಯನ್ನು ಹೊಂದುವುದಕ್ಕಾಗುವುದಿಲ್ಲ. ನಮ್ಮ ಬಾಹ್ಯಜೀವನವು ಮುಖ್ಯವಾಗಿ ಆಸೆಯನ್ನೆ, ಕಾಮತತ್ವವನ್ನೆ ಅವಲಂಬಿಸಿದೆ. ಇದು ಇಂದ್ರಿಯಗಳ ಅನುಭವಗಳಿಂದ ತೃಪ್ತಿಪಡುತ್ತದೆ. ಕಾಮಕ್ರೋಧಾದಿಗಳಿಂದ ಪ್ರೇರಿತವಾದ ಕರ್ಮಗಳಿಂದ ನಮ್ಮಲ್ಲಿರುವ ಆಸೆಗೆ ಸಂಪೂರ್ಣವಾದ ತೃಪ್ತಿಯುಂಟಾಗುತ್ತದೆ. ಆದುದರಿಂದ ನಾವು ಆಸೆಯನ್ನು ತ್ಯಜಿಸಬೇಕು. ಈ ಪ್ರಚೋದಕವು ನಾಶವಾದರೆ, ನಮ್ಮಲ್ಲಿರುವ ಕಾಮಕ್ರೋಧಾದಿ ಭಾವಗಳೂ ಶಾಂತವಾಗುತ್ತವೆ. ಹರ್ಷಶೋಕಗಳು, ಸುಖದುಃಖಗಳು, ಲಾಭನಷ್ಟಗಳು, ಜಯಾಪಜಯಗಳು ಮುಂತಾದ ದ್ವಂದ್ವಗಳೆಲ್ಲವೂ ನಮ್ಮಲ್ಲಿ ಮಾಯವಾಗುತ್ತವೆ. ಪ್ರಶಾಂತವಾದ ಸಮತ್ವಭಾವನೆಯು ನಮ್ಮಲ್ಲಿ ನೆಲೆಸುತ್ತದೆ. ನಾವು ಇನ್ನೂ ಈ ಪ್ರಪಂಚದಲ್ಲಿದ್ದುಕೊಂಡು ಕರ್ಮಗಳನ್ನು ಮಾಡಲೇಬೇಕಾಗಿದೆ. ಫಲಾಪೇಕ್ಷೆಯಿಂದ ಕರ್ಮಗಳನ್ನು ಮಾಡುವುದು ನಮ್ಮ ಸ್ವಭಾವವಾಗಿದೆ. ಈ ಸ್ವಭಾವವನ್ನು ಬಿಟ್ಟು ಫಲಾಪೇಕ್ಷೆಯಿಲ್ಲದೆ ಕರ್ಮಗಳನ್ನು ಮಾಡುವವರೆಗೆ ಕಾಮದಿಂದ ಮತ್ತು ಅದರ ಪರಿಣಾಮಗಳಿಂದ ನಮಗೆ ಬಿಡುಗಡೆಯಿಲ್ಲ. ನಮ್ಮಲ್ಲಿದ್ದುಕೊಂಡು ಕರ್ಮಗಳನ್ನು ಮಾಡುವ ಅಹಂಭಾವವಿಶಿಷ್ಟನಾದ ವ್ಯಕ್ತಿಯ ಸ್ವಭಾವವನ್ನು ಬದಲಾಯಿಸುವುದು ಹೇಗೆ? ಹೇಗೆಂದರೆ, ಅಹಂಭಾವವಿಶಿಷ್ಟನಾದ ವ್ಯಕ್ತಿಗೂ ಕರ್ಮಗಳಿಗೂ ಇರುವ ಸಂಬಂಧವನ್ನು ಕಡಿಯಬೇಕು. ಕರ್ಮಗಳೆಲ್ಲವೂ ತ್ರಿಗುಣಾತ್ಮಕವಾದ ಪ್ರಕೃತಿಯ ಲೀಲೆಯೆಂಬುದನ್ನು ನಮ್ಮ ವಿವೇಕದಿಂದ ತಿಳಿದುಕೊಳ್ಳಬೇಕು. ಈ ಲೀಲೆಯಿಂದ ನಮ್ಮ ಆತ್ಮನನ್ನು ಬೇರ್ಪಡಿಸಬೇಕು. ಆತ್ಮನು ಪ್ರಕೃತಿವ್ಯಾಪಾರಗಳಿಗೆ ಕೇವಲ ಸಾಕ್ಷಿಯಾಗಿದ್ದುಕೊಂಡು, ಕರ್ಮಗಳ ಮಾಡುವಿಕೆಯನ್ನು ಪ್ರಕೃತಿಯ ಹಿಂದೆ ಇರುವ ಶಕ್ತಿಗೆ, ಮಹಾಮಹಿಮನಾದ ಈಶ್ವರನಿಗೆ ಬಿಡಬೇಕು. ಹೀಗೆ ಮಾಡಲು ನಮ್ಮ

ಮನಸ್ಸು ಅವಕಾಶಕೊಡುವುದಿಲ್ಲ. ಅದರ ಸ್ವಭಾವವೇನೆಂದರೆ: ತನ್ನೊಡನೆ ವಿವೇಕವನ್ನೂ, ನಮ್ಮ ಸಂಕಲ್ಪ ಶಕ್ತಿಯನ್ನೂ ಸೆಳೆದುಕೊಂಡು, ಇಂದ್ರಿಯಗಳನ್ನು ಹಿಂಬಾಲಿಸುವುದು. ಆದುದರಿಂದ ನಾವು ಮೊದಲು ಮನಸ್ಸನ್ನು ನಿಶ್ಚಲವನ್ನಾಗಿಯೂ ಶಾಂತವನ್ನಾಗಿಯೂ ಮಾಡುವುದನ್ನು ಕಲಿಯಬೇಕು. ನಮ್ಮ ಮನಸ್ಸು ನಿಶ್ಚಲವೂ ಶಾಂತವೂ ಆದಾಗ, ನಮ್ಮೊಳಗಿರುವ ಆನಂದಮಯನೂ, ನಿಶ್ಚಲನೂ ಮತ್ತು ಪ್ರಶಾಂತನೂ ಆದ ಆತ್ಮನ ಅರಿವು ನಮಗಾಗುತ್ತದೆ. ಬಾಹ್ಯವಸ್ತುಗಳ ಸ್ಪರ್ಶದಿಂದ ಇವನು ಸ್ವಲ್ಪವೂ ವಿಕಾರ ಹೊಂದುವುದಿಲ್ಲ; ಕ್ಷುಬ್ಧನಾಗುವುದಿಲ್ಲ. ತನ್ನೊಳಗೆ ತೃಪ್ತನಾಗಿ ಸ್ವಯಂಪರಿಪೂರ್ಣನಾಗಿರುತ್ತಾನೆ.

ಮನುಷ್ಯನೆಂದರೆ ಈ ಆತ್ಮನೇ. ನಮ್ಮ ಪ್ರತ್ಯೇಕವಾದ ವ್ಯಕ್ತಿತ್ವಗಳಿಗಿರುವ ಮಿತಿ, ಪ್ರತಿಬಂಧಕಗಳು ಆತ್ಮನಿಗಿಲ್ಲ. ಎಲ್ಲ ಜೀವಿಗಳಲ್ಲಿಯೂ ಇರುವವನು ಈ ಒಂದು ಆತ್ಮನೆ. ಸರ್ವವ್ಯಾಪಿಯಾಗಿಯೂ ಎಲ್ಲದರಲ್ಲಿಯೂ ಸಮತ್ವವುಳ್ಳವನೂ ಆಗಿದ್ದಾನೆ. ಅನಂತನಾದ ಆತ್ಮನು ಪರಿಮಿತವಾದ ಈ ಪ್ರಪಂಚದ ಸಮಸ್ತವ್ಯಾಪಾರಗಳಿಗೂ ಆಧಾರನಾಗಿದ್ದಾನೆ; ಆದರೆ ಇದರಿಂದ ಅವನ ಅನಂತತೆಗೆ, ಅಖಂಡತ್ವಕ್ಕೆ ಭಂಗಬಂದಿಲ್ಲ. ನಮ್ಮ ವ್ಯಕ್ತಿತ್ವಗಳಲ್ಲಿ ಮತ್ತು ಪ್ರಕೃತಿಯಲ್ಲಿ ಆಗುವ ಬದಲಾವಣೆಗಳಿಂದ ಇವನಲ್ಲಿ ಯಾವ ಬದಲಾವಣೆಯೂ ಆಗುವುದಿಲ್ಲ. ಆತ್ಮನ ಸಾಕ್ಷಾತ್ಕಾರವಾದಾಗ, ಅವನ ಶಾಂತತೆ ಮತ್ತು ಮೌನಗಳ ಅನುಭವವು ನಮಗಾದಾಗ, ನಾವೂ ಸಹ ಆತ್ಮನಾಗುತ್ತೇವೆ. ಪ್ರಕೃತಿಯಲ್ಲಿ ಮುಳುಗಿರುವ ನಮ್ಮನ್ನು ಮೇಲಕ್ಕೆತ್ತಿ ಆತ್ಮನಲ್ಲಿ ನೆಲೆಗೊಳಿಸಬೇಕು. ಹೀಗೆ ಮಾಡಲು ನಮಗೆ ಸಹಾಯಮಾಡುವುದು ಯಾವುವೆಂದರೆ: ಕಾಮಕ್ರೋಧಗಳೂ ಅಹಂಭಾವವೂ ಇಲ್ಲದಿರುವಿಕೆ, ಶಾಂತಿ ಮತ್ತು ಸಮತ್ವ. ಇವುಗಳನ್ನು ನಮ್ಮಲ್ಲಿ ಬೆಳೆಸಿಕೊಂಡಷ್ಟೂ ನಾವು ಆತ್ಮನಲ್ಲಿ ಹೆಚ್ಚುಹೆಚ್ಚಾಗಿ ಲೀನವಾಗುತ್ತೇವೆ. ನಮ್ಮ ಇಂದ್ರಿಯಗಳೂ ಸಹ ಈ ಶಾಂತಿಯಲ್ಲಿ ಮಗ್ನವಾಗುತ್ತವೆ. ಬಾಹ್ಯವಸ್ತುಗಳ ಸ್ಪರ್ಶಗಳನ್ನು ಅತ್ಯಂತ ಶಾಂತಿಯಿಂದ ಮತ್ತು ಸಮತ್ವದಿಂದ ಗ್ರಹಿಸುತ್ತವೆ. ನಮ್ಮ ಮನಸ್ಸೂ ಸಹ ಪ್ರಶಾಂತವಾಗಿ ಎಲ್ಲ ವ್ಯಾಪಾರಗಳಿಗೂ ಕೇವಲ ಸಾಕ್ಷಿಯಾಗುತ್ತದೆ. ನಿರಾಕಾರವಾದ ನಿರ್ವಿಕಾರವಾದ ಆತ್ಮನಲ್ಲಿ ಅಹಂಭಾವಯುಕ್ತವಾದ ನಮ್ಮ ವ್ಯಕ್ತಿತ್ವವು ಕರಗಿಹೋಗುತ್ತದೆ. ನಾವು ನಮ್ಮಲ್ಲಿ ಏನೇನು ಆಗಿರುತ್ತೇವೆಯೊ ಅದೆಲ್ಲವನ್ನೂ ಈ ಆತ್ಮನಲ್ಲಿ ನೋಡುತ್ತೇವೆ. ಈ ಆತ್ಮನನ್ನು ನಾವು ಎಲ್ಲರಲ್ಲಿಯೂ ಎಲ್ಲಕಡೆಗಳಲ್ಲಿಯೂ ನೋಡುತ್ತೇವೆ. ಸರ್ವಭೂತಗಳಲ್ಲಿಯೂ ಮೂಲವಾದ ಆತ್ಮನಲ್ಲಿ ಒಂದಾಗಿರುವುದರಿಂದ ಸರ್ವಭೂತಗಳಲ್ಲಿಯೂ

ಒಂದಾಗಿರುತ್ತೇವೆ. ಅಹಂಭಾವವಿಲ್ಲದೆ, ನಿಸ್ವಾರ್ಥದೃಷ್ಟಿಯಿಂದ, ಶಾಂತಮನಸ್ಕರಾಗಿ ಕರ್ಮಗಳನ್ನು ಮಾಡುವುದರಿಂದ, ಈ ಕರ್ಮಗಳು ನಮ್ಮನ್ನು ಬಂಧಿಸುವುದಿಲ್ಲ; ಅವು ನಮ್ಮಮೇಲೆ ಪ್ರತಿಕ್ರಿಯೆಯನ್ನು ಉಂಟುಮಾಡುವುದಿಲ್ಲ ಪ್ರಕೃತಿಯೂ ಅದರ ಗುಣಗಳೂ ತಮ್ಮ ಕೆಲಸಗಳನ್ನು ಮಾಡುತ್ತಲೆ ಇರುತ್ತವೆ. ಆದರೆ ಇದರಿಂದ ಆತ್ಮನ ಆನಂದಮಯವಾದ ಮತ್ತು ಶಾಂತವಾದ ಸ್ಥಿತಿಗೆ ಭಂಗಬರುವುದಿಲ್ಲ, ಎಲ್ಲವೂಕೂಡ ಏಕನಾದರೂ ಸರ್ವವೂ ಆದ ಪರಬ್ರಹ್ಮನಲ್ಲಿ ಅರ್ಪಿಸಲ್ಪಡುತ್ತವೆ.

ಇಲ್ಲಿ ಎರಡು ಸಮಸ್ಯೆಗಳು ಉದ್ಭವಿಸುತ್ತವೆ. ಒಂದನೆಯದಾಗಿ, ಶಾಂತನಾದ ಮತ್ತು ನಿರ್ವಿಕಾರನಾದ ಆತ್ಮನಿಗೂ ಪ್ರಕೃತಿವ್ಯಾಪಾರಗಳಿಗೂ ವಿರೋಧವಿರುವಂತೆ ಕಾಣುತ್ತದೆ. ನಿರ್ವಿಕಾರನಾದ ಆತ್ಮನ ಸ್ಥಿತಿಯಲ್ಲಿ ಕರ್ಮಗಳಿರಲು ಹೇಗೆ ಸಾಧ್ಯ? ಆ ಸ್ಥಿತಿಗೆ ಬಂದಮೇಲೆಯೂ ನಾವು ಕರ್ಮಗಳನ್ನು ಮುಂದುವರಿಸುವುದು ಹೇಗೆ ಸಾಧ್ಯ? ನಮ್ಮ ಪ್ರಕೃತಿಯು ಕರ್ಮಗಳನ್ನು ಮಾಡಬೇಕಾದರೆ ಆ ಸಂಕಲ್ಪವು ಎಲ್ಲಿಂದ ಬಂದಿತು? ಸಾಂಖ್ಯದವರು ಹೇಳುವಂತೆ ಈ ಸಂಕಲ್ಪವು ಪ್ರಕೃತಿಯಲ್ಲಿಯೆ ಇದೆಯೆಂದೂ, ಕುತೂಹಲ, ಆಸಕ್ತಿ ಮತ್ತು ಅಹಂಕಾರಗಳ ಮೂಲಕ ತನ್ನ ವ್ಯಾಪಾರಗಳಲ್ಲಿ ಪುರುಷನು ಸಿಲುಕಿಕೊಳ್ಳುವಂತೆ ಪ್ರಕೃತಿಯು ಮಾಡುತ್ತದೆಂದೂ ಹೇಳಬಹುದು. ಈ ಆಸಕ್ತಿ ಮತ್ತು ಅಹಂಕಾರಗಳು ಪುರುಷನಲ್ಲಿ ಮಾಯವಾದರೆ ಅವನನ್ನು ಆಕರ್ಷಿಸಲು ಪ್ರಕೃತಿಗಿರುವ ಸಾಮರ್ಥ್ಯವು ಹೋಗುತ್ತದೆ; ಕರ್ಮಗಳನ್ನು ಪ್ರೇರಿಸುವ ಇಚ್ಛೆ, ಸಂಕಲ್ಪಗಳು ಇಲ್ಲವಾಗುತ್ತವೆ. ಆದರೆ ಈ ಸಿದ್ಧಾಂತವನ್ನು ಗೀತೆಯು ಒಪ್ಪುವುದಿಲ್ಲ. ಏತಕ್ಕೆಂದರೆ ಈ ಸಿದ್ಧಾಂತದ ಪ್ರಕಾರ ಒಂದು ಪುರುಷನ ಸ್ಥಾನದಲ್ಲಿ ಅನೇಕ ಪುರುಷರಿರಬೇಕಾಗುತ್ತದೆ. ಪುರುಷರು ಅನೇಕರೆಂದು ಒಪ್ಪದಿದ್ದರೆ, ಅನೇಕ ಜೀವಿಗಳು ಸಂಸಾರ ಬಂಧನದಲ್ಲಿ ತೊಳಲುತ್ತಿರುವಾಗ ಕೆಲವರು ಮುಕ್ತರಾಗಿ ರುವುದು ಹೇಗೆ ಸಾಧ್ಯವೆಂಬುದನ್ನು ವಿವರಿಸಲಾಗುವುದಿಲ್ಲ. ಪ್ರಕೃತಿಯು ಸ್ವತಂತ್ರ ವಾದ ತತ್ವವಲ್ಲ; ಪ್ರಂಪಚದ ಸೃಷ್ಟಿಗಾಗಿ ಹೊರಮುಖವಾದ ಭಗವಂತನ ಶಕ್ತಿ. ನಿರ್ವಿಕಾರನಾದ ಅಕ್ಷರ ಪುರುಷನೆ ಭಗವಂತನಾದರೆ ಮತ್ತು ಜೀವರೆಲ್ಲರೂ ಅವನ ಚೈತನ್ಯದ ಅಂಶಗಳಾದರೆ, ಆಗ ಜೀವನು ಪುರುಷನಲ್ಲಿ ಐಕ್ಯವಾದಾಗ ಈ ಒಂದು ತತ್ವವನ್ನು ಮತ್ತು ಅದರಲ್ಲಿನ ಪರಮಶಾಂತಿಯನ್ನು ಬಿಟ್ಟು ಉಳಿದ ಪ್ರಪಂಚವೆಲ್ಲವೂ ಲಯವಾಗಬೇಕು. ಅಲ್ಲದೆ ಹೀಗೆ ಅಕ್ಷರ ಪುರುಷನಲ್ಲಿ ಐಕ್ಯ ಹೊಂದಿದ ಮೇಲೆಯೂ ಕೂಡ ನಮಗೆ ತಿಳಿಯದ ಯಾವುದೊ ಒಂದು ರೀತಿಯಲ್ಲಿ ಕರ್ಮಗಳನ್ನು ಮಾಡುತ್ತಿದ್ದರೂ ಸಹ, ಭಗವಂತನು ಎಲ್ಲ ವಿಷಯಗಳಲ್ಲಿಯೂ ಒಂದೆ ಸಮವಾಗಿರು ವುದರಿಂದ ಕರ್ಮಗಳು ಮಾಡಲ್ಪಡಲಿ ಅಥವಾ ಮಾಡಲ್ಪಡದೆ ಇರಲಿ, ಎಲ್ಲವೂ

ಒಂದೇ; ಹಾಗೆ ಕರ್ಮಗಳು ಮಾಡಲ್ಪಟ್ಟಾಗಲೂ, ಅವು ಎಂತಹ ಕರ್ಮಗಳು ಎಂಬುದು ಮುಖ್ಯವಲ್ಲ. ಹೀಗಿರುವಾಗ ಈ ಘೋರವಾದ ಯುದ್ಧವನ್ನು ಮಾಡಬೇಕೆಂಬ ಒತ್ತಾಯವೇಕೆ? ಈ ಯುದ್ಧವೂ, ಯೋಧನೂ, ಸಾರಥಿಯೂ ಏಕೆ?

ಈ ಸಮಸ್ಯೆಗೆ ಗೀತೆಯು ಕೊಡುವ ಉತ್ತರವು ಹೀಗಿದೆ: ಭಗವಂತನಾದ ಪುರುಷೋತ್ತಮನು ಅಕ್ಷರಪುರುಷನಿಗೂ ಅತೀತನಾಗಿದ್ದಾನೆ; ಅವನಿಗಿಂತಲೂ ವ್ಯಾಪಕನು. ಅವನು ಅಕ್ಷರಪುರುಷನೂ ಹೌದು; ಪ್ರಕೃತಿಯ ಕರ್ಮಗಳಿಗೆ ಪ್ರಭುವೂ ಹೌದು. ಅಕ್ಷರಪುರುಷನಿಗೆ ಸಹಜವಾದ ಶಾಂತತೆ, ಸಮತ್ವ ಮತ್ತು ಕರ್ಮ ಇವುಗಳಿಗೂ ಮತ್ತು ವ್ಯಕ್ತಿತ್ವಕ್ಕೂ ಅತೀತವಾದ ದೃಷ್ಟಿಯಿಂದ ಪ್ರಕೃತಿಯ ಕರ್ಮಗಳನ್ನು ಮಾಡಿಸುತ್ತಾನೆ. ನಾವು ವಿಕಾಸಹೊಂದಿ ಈ ಶಾಂತತೆ, ನಿರ್ಲಿಪ್ತತೆ ಮತ್ತು ಸಮತ್ವಗಳನ್ನು ಬೆಳೆಸಿಕೊಂಡರೆ, ಅಂತಹ ಮನುಷ್ಯನು ಪುರುಷೋತ್ತಮನಲ್ಲಿ ಹೆಚ್ಚು ಹೆಚ್ಚಾಗಿ ಒಂದಾಗುತ್ತಾನೆ; ದಿವ್ಯಕರ್ಮಗಳನ್ನು ಮಾಡುವ ಅವನ ಸ್ಥಿತಿಯನ್ನು ಹೆಚ್ಚಾಗಿ ಹೊಂದುತ್ತಾನೆ. ಈ ಸ್ಥಿತಿಯನ್ನು ಹೊಂದಿದಮೇಲೆ ಅವನು ಪ್ರಕೃತಿಯಲ್ಲಿ ಪುರುಷೋತ್ತಮನ ಸಂಕಲ್ಪಕ್ಕೆ ಮತ್ತು ಶಕ್ತಿಗಳಿಗೆ ಉಪಾಧಿಯಾಗುತ್ತಾನೆ. ಸರ್ವಭೂತಗಳಲ್ಲಿಯೂ ನೆಲೆಸುತ್ತಾನೆ; ಪುನಃ ಈ ಪ್ರಪಂಚದಲ್ಲಿ ಮನುಷ್ಯರೂಪದಲ್ಲಿ ಹುಟ್ಟುತ್ತಾನೆ; ಆದರೆ ಎಲ್ಲರ ಹೃದಯದಲ್ಲಿಯೂ ಇರುತ್ತಾನೆ. ಮನುಷ್ಯನಲ್ಲಿ ದಿವ್ಯಜನ್ಮವನ್ನೆತ್ತುವ ಅವತಾರಪುರುಷನಾಗಿ ಕಾಣಿಸಿಕೊಳ್ಳುತ್ತಾನೆ. ಮನುಷ್ಯನು ಪುರುಷೋತ್ತಮನಲ್ಲಿ ಒಂದಾದ ಹಾಗೆ ಈ ದಿವ್ಯ ಜನ್ಮವನ್ನೆತ್ತುವ ಸ್ಥಿತಿಯನ್ನು ಸಮೀಪಿಸುತ್ತಾನೆ. ಕರ್ಮಗಳಿಗೆ ಪ್ರಭುವಾದ ಪುರುಷೋತ್ತಮನಿಗೆ ಅರ್ಪಿಸುವ ಯಜ್ಞವೆಂದು ಭಾವಿಸಿ ಕರ್ಮಗಳನ್ನು ಮಾಡಬೇಕು. ಕ್ರಮಕ್ರಮವಾಗಿ ಆತ್ಮನಲ್ಲಿ ಒಂದಾಗುವುದರ ಮೂಲಕ ಪುರುಷೋತ್ತಮನೂ ನಾವೂ ಒಂದೆ ಎಂಬುದನ್ನು ಸಾಕ್ಷಾತ್ಕಾರಮಾಡಿಕೊಳ್ಳಬೇಕು. ಪ್ರಕೃತಿಯಲ್ಲಿ ವ್ಯಕ್ತವಾಗಿರುವ ಅವನ ಒಂದು ಅಂಶವೆ ನಮ್ಮ ಜೀವಾತ್ಮನೆಂಬುದನ್ನು ಅರಿಯಬೇಕು. ಅವನಲ್ಲಿ ಒಂದಾದರೆ ನಾವು ವಿಶ್ವದಲ್ಲಿರುವ ಸಮಸ್ತ ಭೂತಗಳೊಡನೆಯೂ ಒಂದಾದಂತೆಯೆ. ಲೋಕಸಂಗ್ರಹಕ್ಕಾಗಿ ದಿವ್ಯಕರ್ಮಗಳನ್ನು ಮಾಡುತ್ತೇವೆ; ನಮ್ಮದಾಗಿ ಅಲ್ಲ. ನಮ್ಮ ಮೂಲಕ ಪುರುಷೋತ್ತಮನು ಕರ್ಮಗಳನ್ನು ಮಾಡುತ್ತಾನೆ ಎಂಬುದು ನಮಗೆ ತಿಳಿಯುತ್ತದೆ.

ಈ ಸ್ಥಿತಿಯನ್ನು ನಾವು ಹೊಂದಬೇಕಾದುದೆ ಬಹಳ ಮುಖ್ಯವಾದುದು. ಈ ಸ್ಥಿತಿಯನ್ನು ಹೊಂದಿದೊಡನೆಯೆ ಅರ್ಜುನನ ಮನಸ್ಸಿನಲ್ಲಿ ಮೂಡಿದ ಸಂಶಯಗಳೆಲ್ಲವೂ ಪರಿಹಾರವಾಗುತ್ತವೆ. ವೈಯಕ್ತಿಕವಾಗಿ ನಾವು ಯಾವ ಕರ್ಮವನ್ನು

ಮಾಡಬೇಕೆಂಬ ಪ್ರಶ್ನೆಯೆ ಏಳುವುದಿಲ್ಲ. ಏತಕ್ಕೆಂದರೆ ನಮ್ಮ ಪ್ರತ್ಯೇಕವಾದ ವ್ಯಕ್ತಿತ್ವವೆಂಬುದು ತಾತ್ಕಲಿಕವೆಂದೂ ಅಮುಖ್ಯವೆಂದೂ ನಮಗೆ ಅರಿವಾಗುತ್ತದೆ. ಈ ಪ್ರಪಂಚದಲ್ಲಿ ಪುರುಷೋತ್ತಮನ ಸಂಕಲ್ಪವು ನಮ್ಮ ಮೂಲಕ ಹೇಗೆ ನಡೆಯುವುದೆಂಬುದೆ ಆಗಿನ ಸಮಸ್ಯೆಯಾಗುತ್ತದೆ. ಇದನ್ನು ಪರಿಹರಿಸಬೇಕಾದರೆ, ಪುರುಷೋತ್ತಮನ ನಿಜಸ್ವರೂಪವೇನು, ಪ್ರಕೃತಿಯಲ್ಲಿ ವ್ಯಕ್ತನಾಗುವಾಗ ಅವನ ಸ್ವರೂಪವೇನು, ಪ್ರಕೃತಿಯ ವ್ಯಾಪಾರಗಳು ಯಾವುವು, ಅವು ನಮ್ಮನ್ನು ಎಲ್ಲಿಗೆ ಒಯ್ಯುತ್ತವೆ, ಪ್ರಕೃತಿಯಲ್ಲಿ ವ್ಯಕ್ತವಾಗಿರುವ ಪುರುಷನಿಗೂ ಮತ್ತು ಪುರುಷೋತ್ತಮನಿಗೂ ಇರುವ ಸಂಬಧವೇನು ಎಂಬುದನ್ನು ನಾವು ಚೆನ್ನಾಗಿ ತಿಳಿದುಕೊಳ್ಳಬೇಕು. ಈ ತಿಳಿವಳಿಕೆಗೆ ಜ್ಞಾನ ಮತ್ತು ಭಕ್ತಿಗಳು ತಳಹದಿ.

ಅಧ್ಯೇಷ್ಯತೇ ಚ ಯ ಇಮಂ
ಧರ್ಮ್ಯಂ ಸಂವಾದಮಾವಯೋಃ ।
ಜ್ಞಾನಯಜ್ಞೇನ ತೇನಾಽಹಂ
ಇಷ್ಟಃ ಸ್ಯಾಮಿತಿ ಮೇ ಮತಿಃ ॥೭೦॥

(ಅಧ್ಯಾಯ ೧೮, ಶ್ಲೋಕ ೭೦)

ಯಾವನು ಈ ನಮ್ಮಿಬ್ಬರ ಧರ್ಮಬೋಧಕವಾದ ಸಂವಾದವನ್ನು ಅಧ್ಯಯನ ಮಾಡುತ್ತಾನೆಯೊ ಅವನು ಜ್ಞಾನಯಜ್ಞವನ್ನು ಮಾಡುವುದರಿಂದ ನನಗೆ ಪ್ರಿಯನಾಗುವನು, ಇದೆ ನನ್ನ ಅಭಿಪ್ರಾಯ.

[ ಶ್ರೇಯಾನ್ ದ್ರವ್ಯಮಯಾದ್ಯಜ್ಞಾತ್ ಜ್ಞಾನಯಜ್ಞಃ ಪರಂತಪ ]

(ಅಧ್ಯಾಯ ೪, ಶ್ಲೋಕ ೩೩




Printed by D. Rajarathnam
Sree Panchacharya Electric Press, Sayaji Rao Road, Mysore.

# ಡಾ. ಅಗರಂ ವೆಂಕಟರಾಮ ಪಂಡಿತರ ಪ್ರಕಟನೆಗಳು

---

೧. ಲೋಲಂಬರಾಜಕೃತ ವೈದ್ಯಜೀವನ
(ದೀಪಿಕಾಕನ್ನಡವ್ಯಾಖ್ಯಾನದೊಡನೆ) ೩ನೇ ಮುದ್ರಣ ರೂ. ೨-೦೦

೨. ಆಯುರ್ವೇದ ಬಾಲಬೋಧೆ (ಮುದ್ರಣದಲ್ಲಿದೆ)

೩. ಆಯುರ್ವೇದವೂ ಪಾಶ್ಚಾತ್ಯವಿಜ್ಞಾನವೂ ,, ೦-೩೭

೪. ಆಯುರ್ವೇದ ವಿದ್ಯಾಶಾಲೆಗಳ ಇಂದಿನ ಶೋಚನೀಯ ಪರಿಸ್ಥಿತಿ ,, ೧-೦೦

೫. ಪ್ರಕೃತಿಚಿಕಿತ್ಸೆ (**Drugless Healing**) ,, ೦-೫೦

೬. ಬ್ರಹ್ಮಸೂತ್ರ ವೃಕ್ಷ ,, ೦-೨೫

೭. ಅಶ್ವಿನೀದೇವತೆಗಳು (ಚಿತ್ರ) ಆಯುರ್ವೇದ ಪರಂಪರೆ ,, ೦-೨೫

೮. ಆತ್ಮವಿಚಾರ (ಒಂದನೆ ಭಾಗ) ಪ್ರವೃತ್ತಿಮಾರ್ಗ ,, ೩-೦೦

೯. ಆತ್ಮವಿಚಾರ (ಎರಡನೆಯ ಭಾಗ) ನಿವೃತ್ತಿಮಾರ್ಗ ,, ೩-೦೦

(ಎರಡು ಭಾಗಗಳನ್ನು ಒಟ್ಟಿಗೆ ಕೊಳ್ಳುವವರಿಗೆ ೫ ರೂ.)

ಪ್ರಕಟನೆಗಳು ದೊರೆಯುವ ಸ್ಥಳಗಳು:

೧. **ಕರ್ಣಾಟಕ ಥಿಯಸಾಫಿಕಲ್ ಫೆಡರೇಷನ್,**
ಥಿಯಸಾಫಿಕಲ್ ಸೊಸೈಟಿ, ಬೆಂಗಳೂರು-೪

೨. **ದಿವ್ಯಜ್ಯೋತಿ ಕಾರ್ಯಾಲಯ,**
"ದೇವಪ್ರಸಾದ", ಸೋನಾರ್ ಬೀದಿ, ಮೈಸೂರು-೧